12th Century's
Enlightenment Technic
and Revolution



ಅಂಬಿಗರ ಚೌಡಯ್ಯಗಳ

# ವಚನಾನುಸಂಧಾನ

ಬಸವರಾಜ ಸ್ವಾಮಿ

*12th Century's*
*Enlightenment Technic*
*and Revolution*

ಅಂಬಿಗರ ಚೌಡಯ್ಯಗಳ

# ವಚನಾನುಭಾವ

ಹನ್ನೆರಡನೆ ಶತಮಾನದ ಸ್ವಯಂ ಜ್ಞಾನ ಕ್ರಾಂತಿ ಮತ್ತು ತಂತ್ರಗಾರಿಕೆ

ಲೇಖಕರು:
**ಬಸವರಾಜ ಸ್ವಾಮಿ**

ಪ್ರಕಾಶಕರು
**ಶ್ರೀ ಬಸವ ಸೇವಾ ಪ್ರತಿಷ್ಠಾನ**
ಬಾಲಂಕು ಆಸ್ಪತ್ರೆ ಪಕ್ಕದಲ್ಲಿ, ಮುನ್ನೂರುವಾಡಿ ಶಾಲೆ ಎದುರುಗಡೆ,
ಬಸವನಗರ, ಗಂಜ್‌ರಸ್ತೆ, ರಾಯಚೂರು -584102
ರಾಯಚೂರು - 584 102 ಕರ್ನಾಟಕ

*12th Century's*
*Enlightenment Technic*
*and Revolution*

***Ambigara Choudayyagala Vachananubhava***
*by :* **Basavaraj Swamy**
*Editor, Suddimoola Kannada Daily*
*Siyatalab, Raichur-584102*
*M. 9980553750*

**ಅಂಬಿಗರ ಚೌಡಯ್ಯಗಳ ವಚನಾನುಭಾವ**

ಹಕ್ಕುಗಳು : ಲೇಖಕರವು
ಬೆಲೆ : ರೂ. 100/
ಪ್ರತಿಗಳು : 1000
ಮುದ್ರಣ : 2019
ಕಾಗದ ಬಳಕೆ : 60 ಜಿಎಸ್ಎಂ. ಎನ್ ಎಸ್ ಮ್ಯಾಪಲಿತೋ
ಆಕಾರ : ಡೆಮಿ 1/8

*Page : 330 + viii*
*Price : Rs. 100/-*
*Copies : 1000*
ಮುಖಪುಟ : ಮುರಳೀಧರ . ವಿ. ರಾಠೋಡ್, ಬೆಂಗಳೂರು
ಮುದ್ರಣ : ಶುಭೋದಯ ಪ್ರಿಂಟರ್ಸ್, ಬೆಂಗಳೂರು.

ಪ್ರಕಾಶನ :
**ಶ್ರೀ ಬಸವ ಸೇವಾ ಪ್ರತಿಷ್ಠಾನ**
ಬಾಲಂಕು ಆಸ್ಪತ್ರೆ ಪಕ್ಕದಲ್ಲಿ, ಮುನ್ನೂರುವಾಡಿ ಶಾಲೆ ಎದುರುಗಡೆ,
ಬಸವನಗರ, ಗಂಜ್‌ರಸ್ತೆ, ರಾಯಚೂರು -584102
ರಾಯಚೂರು - 584 102 ಕರ್ನಾಟಕ

## .....ಓದುವ ಮುನ್ನ

ನರ ನಾರಾಯಣನೂ ಹೌದು ; ನರ ನರಕಾಸುರನೂ ಹೌದು. ನರರಿಂದ ತುಂಬಿ, ನರನಿಗಾಗಿ ಬಳಕೆಯಾಗುವ ಈ ಸುಂದರವಾದ ಭೂಮಿ ನರಸಮುದ್ರ ಎನ್ನಿಸಿಕೊಂಡಿದೆ. ಗಿಡ ಮರಗಳಿಂದ ತಗ್ಗು ದಿನ್ನೆಗಳಿಂದ ಹಳ್ಳ ಕೊಳ್ಳಗಳಿಂದ ಪಶು ಪಕ್ಷಿಗಳಿಂದ ಕಾಡು ಬನಗಳಿಂದ ತಂತಾನೆ ಸುಂದರವಾದ ಈ ಭೂಮಿಯನ್ನು ನರ ತನಗೆ ಬೇಕಾದಂತೆ ಬಳಸಿಕೊಂಡು ಸುಂದರಗೊಳಿಸಿದ್ದಾನೆ ! ದೊಡ್ಡ ದೊಡ್ಡ ಮರಗಳನ್ನು ಕಡಿದು, ತನಗೆ ಬೇಕಾದ ಚಿಕ್ಕ ಚಿಕ್ಕ ಮರಗಳನ್ನು ನೆಟ್ಟಿದ್ದಾನೆ. ಫಲವತ್ತಾದ ಜೀವಕಣಗಳ ಮಣ್ಣು ತೆಗೆದು ಸಿಮೆಂಟು ಸವರಿದ್ದಾನೆ. ಪ್ರಕೃತಿಯ ಸೌಂದರ್ಯ ಕೆಡಿಸಿ ವಿಕೃತಿಯ ಸೌಂದರ್ಯಕ್ಕೆ  ಮರುಳಾಗಿದ್ದಾನೆ. ಇದು ನರಸಮುದ್ರ. ಇದೊಂದು ಕೊಳಚೆ. ಈ ಕೊಳಚೆಯಲ್ಲಿ ವಾಸ ಮಾಡುತ್ತ ತನಗರಿಯದಂತೆ ಮನುಷ್ಯ ಪ್ರಕೃತಿ ಸಮಾನವಾದ, ಸಹಜ ತನುವನ್ನೇ ಕೊಳಚೆಯಾಗಿಸಿ ಕೊಂಡಿದ್ದಾನೆ.

ದೇಶವೆಂದರೆ ಮಣ್ಣಲ್ಲ ; ದೇಹಗಳಿಂದ ತುಂಬಿದ ದೇವಾಲಯ ! ಫಲವಿಲ್ಲದ ಮರ ಫಲಭರಿತವಾದ ಮರವನ್ನು ನೋಡಿ  ಅಸೂಯೆ ಪಡುವುದಿಲ್ಲ. ದನ ದನವನ್ನು ನೋಡಿ ಕಾಮದಿಂದ ಹರಿದು ತಿನ್ನುವುದಿಲ್ಲ. ಸಕಲ ಮನೆಗಳಲ್ಲಿರುವ ದನಗಳು ಬೆತ್ತಲೆ ಹೊರಗೆ ಬಂದ ಕೂಡಲೇ ಒಂದಾಗಿ  ಮೇಯಲು ಹೋಗುತ್ತವೆ. ಅವು ಬೆತ್ತಲೆಯಿದ್ದರೂ  ಸಹಜ. ಮನುಷ್ಯ ಬಟ್ಟೆಯುಟ್ಟರೂ ಅಸಹಜ ! ಹರಿದು ತಿನ್ನುವ ಕಣ್ಣುಗಳನ್ನಿಟ್ಟುಕೊಂಡು, ಹೃದಯ ತುಂಬಿದ ಮಾತುಗಳನ್ನಾಡುತ್ತಾನೆ.

ತನುವಿನಲ್ಲುಂಟಾದ ಈ ಕೊಳಚೆ, ತನುವನ್ನೆಲ್ಲ ರಾಡಿ ಮಾಡಿ, ತನುವನ್ನೇ ಸುಡುತ್ತದೆ. ಇಂತಹ ತನುಗಳಿಂದ ತುಂಬಿದ ನರಲೋಕ ನರಕದ ಸಮುದ್ರವೇ ಆಗಿದೆ.

ತನುವಿನಲ್ಲಿ ಅರಿವು ಭರಿತವಾಗಿದ್ದರೂ ನೋಡಲು ಕಲಿತಿಲ್ಲ, ಮುಟ್ಟಲು ಕಲಿತಿಲ್ಲ, ಮೂಸಿಸಲು ಕಲಿತಿಲ್ಲ ;  ರುಚಿಸಲು ಕಲಿತಿಲ್ಲ. ಇದೆಲ್ಲ ತನುವಿನ ಸಹಜ ಧರ್ಮವಾದರೂ ತನಗೆ ಬೇಕಾದ ಸುಳ್ಳು ಧರ್ಮ ಪಾಲಿಸುವ ನೆಪದಲ್ಲಿ, ತನು ತನ್ನ ಅರಿವಿನ ಸಹಜ ಧರ್ಮವನ್ನೇ ಮರೆತು, ತನಗೆ ಬೇಕಾದ ಸುಳ್ಳು ಧರ್ಮವನ್ನು ತನುವಿನಲ್ಲಿ ತುಂಬಿಕೊಂಡಿದೆ. ದೇವಾಲಯವೇ ಆಗಬೇಕಾದ ತನು ತನ್ನನ್ನೆ ನರಕವನ್ನಾಗಿಸಿಕೊಂಡಿದೆ. ನಾನೇಕೆ ಹೀಗೆ ಎಂದು ಆಲೋಚನೆ ಮಾಡಲೂ ಪುರಸೊತ್ತಿಲ್ಲ ಧರ್ಮ ಜಾತಿ-ಮತ ಪಂಥ ಹೆಣ್ಣು ಗಂಡು ಶ್ರೀಮಂತ ಬಡವ ಭಿಕ್ಷುಕ ಗಡಿ ಭಾಷೆ ಪದವಿ ಅಧಿಕಾರ ಪಾಂಡಿತ್ಯ ಎನ್ನುವ ನರಕವನ್ನು ತನಗೆ ತಾನೇ ಮೆತ್ತಿಕೊಂಡಿರುವುದರಿಂದ; ತನುವಿನಲ್ಲಿಯೇ ಸಂಗಮವಾದ ಅರಿವಿನ ಸಹಜತೆ ತನುವಿಗೆ ಬಳಕೆಯಾಗದೆ ತನುವಿನಲ್ಲಿಯೇ ಉಳಿದಿದೆ.

ತನುವಿನ ಈ ಅಜ್ಞಾನದಿಂದ ತನುವಿನ ಲೋಕವೇ ತೇಕುತ್ತಿದೆ ಎಂದು ಚೌಡಯ್ಯ ಶರಣರು ಕನಿಕರ ವ್ಯಕ್ತಪಡಿಸಿದ್ದಾರೆ. ತನು ಪ್ರಕೃತಿಯಂತೆ ಸಹಜ ಧರ್ಮ ಉಳ್ಳದ್ದು . ಪ್ರಕೃತಿ ಸಹಜವಾಗಿದೆ; ತನು ಅಸಹಜವಾಗಿದೆ. ಏಕೆಂದರೆ ತನುವನ್ನು ಮನ ಆವರಿಸಿದೆ; ತನುವಿನಲ್ಲಿ ಅರಿವು ಸಂಗಮವಾಗಿದೆ. ಮನ ಅರಿವಿನೊಂದಿಗೆ ಸಂಗಮವಾಗಿ ತನುವನ್ನು ಬಳಕೆ ಮಾಡುತ್ತ, ಪ್ರಕೃತಿಯೊಂದಿಗೆ ಸಹಜವಾಗಿ ಅರಿವಿನಿಂದ ಬದುಕುವ ಕಲೆ ಮರೆತದ್ದರಿಂದ ತನುವಿನ ಬದುಕು ನರಕವಾಗಿದೆ. ಕೊಳಚೆಯೊಳಗಣ ಚಿಕ್ಕ ಕೊಳಚೆಯಾಗಿದೆ.

**ಉಡುವಿನ ಕಣ್ಣು, ಪಡಿಯ ಅಡಿ, ಕೀಚಕನ ಮುಟ್ಟು,**
**ಘಾತಕನ ಸ್ನೇಹ, ವೇಸಿಯ ಮೋಹದ ಆಸೆ,**
**ಸುಜಾತಿಯಲ್ಲದವನ ಕೊಳುಕೊಡೆ, ನಿರಾಸೆಯಲ್ಲದವನ ಮಾತಿನ ಮಾಲೆ**
**ಅದೇತಕ್ಕೆ ಬಾತೆಯೆಂದನಂಬಿಗ ಚೌಡಯ್ಯ.**

ನೋಡಿದ್ದನ್ನೆಲ್ಲ ಬೇಡುವ ಕಣ್ಣನ್ನು ಕಣ್ಣೆನ್ನಬಹುದೆ ? ಅದು ಕಣ್ಣಲ್ಲ ಉಡುವಿನ ಕಣ್ಣು. ದೃಷ್ಟಿ ನೆಟ್ಟ ವಸ್ತುವನ್ನು ಬೇಡುವ ಕಣ್ಣು. ಕಾಮದ ಕಣ್ಣು. ಬೆಳಕಿನ ಗುಣ ಬೆಳಗುವುದು ಮಾತ್ರ. ಬೆಳಗಿದ ವಸ್ತುವನ್ನು ಬೆಳಕು ಹಿಡಿಯುವುದಿಲ್ಲ; ಬೇಡುವುದಿಲ್ಲ. ಬೆಳಗುತ್ತದೆ. ಹಾಗೆಯೇ ಕಣ್ಣಿನಲ್ಲಿ ಅರಿವಿನ ಬೆಳಕಿದೆ. ಬೆಳಕಿನ ಜೊತೆಗೆ ಅರಿವೂ ಪ್ರಸಾರವಾಗುತ್ತದೆ. ನೋಡಿದ್ದನ್ನೆಲ್ಲ ಬೇಡುವ ಕಣ್ಣಿನಲ್ಲಿ ಅರಿವು ಪ್ರಸಾರವಾಗದೆ ಅಜ್ಞಾನ ಪ್ರಸಾರವಾಗುತ್ತದೆ. ಹೀಗಾಗಿ ನೋಡಿದ್ದನ್ನೆಲ್ಲ ಬೇಡುವ ಕಣ್ಣನ್ನು ಶರಣರು ಕಣ್ಣೆಂದು ಕರೆಯಲಿಲ್ಲ. ಅದನ್ನು ಉಡುವಿನ ಕಣ್ಣು ಎಂದು ಕರೆದರು. ಈ ಕಣ್ಣು ಕಾಣುತ್ತದೆ. ಆದರೆ ವಸ್ತುವಿನ ಸತ್ಯ ಕಣ್ಣಿಗೆ ಕಾಣುವುದಿಲ್ಲ. ಹೀಗಾಗಿ ಕಂಡರೂ ಕೂಡಾ ಕುರುಡುಗಣ್ಣು ಇದು. ಹಗಲು ಕುರುಡು ಕಣ್ಣಿಗೆ ರೋಗವಾಗಿ ಆವರಿಸಿದೆ.

ಅಡಿಯಿಲ್ಲದ ಪಡಿ ಅಳತೆಗೆ ಬಾರದು. ಹಾಗೆಯೇ ಉಡುವಿನ ಕಣ್ಣು ಕೂಡಾ ! ದೃಶ್ಯದ ಸತ್ಯ ಕಣ್ಣಲ್ಲಿಯೇ ಇಟ್ಟು ಸಂಚರಿಸಿದರೆ ಅದನ್ನು ಕಣ್ಣೆನ್ನಲು ಸಾಧ್ಯವೆ ? ನೋಡಿದ್ದೆಲ್ಲ ಬೇಡಿ ಅಂಗವನ್ನು ಮಂಗವನ್ನಾಗಿಸುತ್ತದೆ.

**ಕೀಚಕನ ಮುಟ್ಟು, ಘಾತಕನ ಸ್ನೇಹ, ವೇಸಿಯ ಮೋಹದ ಆಸೆ, ಸುಜಾತಿಯಲ್ಲದವನ ಕೊಳುಕೊಡೆ, ನಿರಾಸೆಯಲ್ಲದವನ ಮಾತಿನ ಮಾಲೆ ಅದೇತಕ್ಕೆ ಬಾತೆ :**

ಕೀಚಕ ದ್ರೌಪದಿಯನ್ನು ಮುಟ್ಟಿ ಸತ್ತ. ಸಂತರು ಜ್ಞಾನಿಗಳು ಮುಟ್ಟಿದರೆ ಸತ್ತವರು ಬದುಕುತ್ತಾರೆ. ಕೀಚಕ ದ್ರೌಪದಿಯನ್ನು ಮುಟ್ಟಿ ತಾನೇ ಸತ್ತ. ಕೀಚಕನ ಮುಟ್ಟುವಿಕೆಯಲ್ಲಿ ಅದೆಂತಹ ಸಾವಿನ ಬಯಕೆ ಅಡಗಿತ್ತು. ಚರ್ಮದಲ್ಲಿ ಸಾವಿಲ್ಲದ ಕೇಡಿಲ್ಲದ ಜ್ಞಾನ ಭರಿತವಾಗಿದೆ ; ಹಾಗೆಯೇ ಮರಣ ಕೂಡಾ ಆವರಿಸಿಕೊಂಡಿದೆ.

ಅಕ್ಕ ಮಹಾದೇವಿಯನ್ನು ಮುಟ್ಟಲು ಬಂದ ಕೌಶಿಕನಿಗೆ ಆಘಾತವೇ ಕಾದಿತ್ತು. ನೀನೊಬ್ಬನೆ ನನ್ನನ್ನು ಮುಟ್ಟಲು ಬಯಸುತ್ತಿಲ್ಲ ; ಬದಲಾಗಿ ಮುಟ್ಟುವ ನೋಡುವ ಆಸೆಯಿಂದ ಜಗತ್ತೇ ತವಕದಲ್ಲಿದೆ. ನೀನೊಬ್ಬನೆ ಯಾಕೆ, ಇಡೀ ಜಗತ್ತೇ ನನ್ನ ಹುಟ್ಟು ಬಟ್ಟೆಯನ್ನು ನೋಡಲಿ ಎಂದು ತೊಟ್ಟ ಬಟ್ಟೆಯನ್ನು ಕಳಚಿದಳು ಅಕ್ಕ !

ಅಕ್ಕನಂತೆ ದ್ರೌಪದಿ ಬಯಸಲಿಲ್ಲ. ದ್ರೌಪದಿಯನ್ನು ಮುಟ್ಟಿದ ತಪ್ಪಿಗಾಗಿ ಕೀಚಕ ಸತ್ತ ! ಕೀಚಕನ ಮುಟ್ಟುವಿಕೆಯಿಂದಾಗಿ ದ್ರೌಪದಿಗೆ ತಳಮಳವಾಯಿತು. ಅಂದರೆ ಚರ್ಮ, ರೋಗ ಗ್ರಸ್ತವಾಗಿದೆ. ಶ್ರೀ ಕೃಷ್ಣನ ಅರಿವಿನ ಔಷಧಿ ಕೀಚಕನಿಗೂ ಬೇಕು ; ದ್ರೌಪದಿಗೂ ಬೇಕು. ಮುಟ್ಟಿದರೆ ತೊಂದರೆಯಾಗುತ್ತದೆ ; ಹಾವು ಹರಿದಾಡುತ್ತದೆ ಎಂದರೆ ಚರ್ಮದಲ್ಲಿ ದೋಷ ವಿದೆಯೆಂದು ಅರ್ಥವಲ್ಲವೆ ? ಎಡಗೈಗೆ ಬಲಗೈ ತಾಕಿದರೆ ತೊಂದರೆಯಿಲ್ಲ. ಕೈಗೆ ಮತ್ತೊಂದು ಕೈ ತಾಕಿದರೆ ತೊಂದರೆಯಾಗುತ್ತದೆ; ಯಾಕೆ ತೊಂದರೆಯಾಗಬೇಕು. ಎರಡೂ ಕೈಗಳಲ್ಲಿರುವ ಪದಾರ್ಥ ಒಂದೇ ಎಂದು ಎರಡೂ ಕೈಗೂ ಹೊಳೆಯುವುದಿಲ್ಲ. ಹೀಗಾಗಿ ಕೀಚಕನು ಮುಟ್ಟಿದ ಚರ್ಮದಿಂದಲೇ ಕೀಚಕ ಸತ್ತ.

ಮನಸ್ಸು, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ಅಂಗದಲ್ಲಿ ಸೃಷ್ಟಿಸಿ

ಸ್ನೇಹ ಮಾಡುವ ಅಂಗವನ್ನೇ ಹಾಳುಗೆಡುವುತ್ತದೆ. ಅಂತಹ ಮನದೊಂದಿಗೆ ಸ್ನೇಹ ಮಾಡಿ ಮುಗ್ಗುಲಾಗುವುದು ಅಂಗಕ್ಕೆ ಬೇಕೆ ? ಅಂಗಕ್ಕೆ ಮತ್ತೊಂದು ಅಂಗ ವೈರಿಯಲ್ಲ ; ಅಂಗವನ್ನು ಆವರಿಸಿದ ಮನವೇ ವೈರಿ ! ಆದರೆ ಮನ ಅಂಗದ ಸ್ನೇಹ ಮಾಡಿದೆ. ಎಚ್ಚರದಿಂದ ಮನದ ಸ್ನೇಹವನ್ನು ಮುರಿದುಕೊಂಡು ಮನವನ್ನು ಮಹಾದೇವನತ್ತ ತಳ್ಳಬೇಕು !

**ಊರೆಲ್ಲಾ ಏರಿದ ಹರಗುಲವ,**
**ನೀರಿನಲ್ಲಿ ದಾರಿಯಕೊಂಡು ಹೋಹವನ ಆರೈಕೆಯಲ್ಲದೆ**
**ಏರಿದವರೆಲ್ಲಕ್ಕೂ ಆರೈಕೆವುಂಟೆ?**
**ಹೇಳುವಾತನ ವಿರಕ್ತಿ , ಕೇಳುವಾತನ ಸದ್ಭಕ್ತಿ**
**ಉಭಯದ ನೆಲೆಯ ಆರಿಂದ ಅರಿಯಬೇಕೆಂದನಂಬಿಗ ಚೌಡಯ್ಯ .**

ತನು ಒಂದು ಸಾಗರ, ಅದರಲ್ಲಿ ವಿಚಾರದ ಹರಗೋಲು ಹಾಕಿ ದಾರಿ ಹುಡುಕಿಕೊಂಡು ದಡ ಸೇರಬೇಕು. ಸಾಗರವೂ ಇದೆ; ಹರಿಗೋಲೂ ಇದೆ. ಅದನ್ನು ದಾಟಿ, ದಡ ಸೇರುವವನೂ ಸೇರಿಸುವವನು ಆರೈಕೆ ಮಾಡುತ್ತಾನೆಯೇ ಹೊರತು, ಕುಳಿತವರೆಲ್ಲರೂ ಮಾಡುತ್ತಾರೆಯೇ. ಅದು ಸಾಧ್ಯವಾಗುವುದಿಲ್ಲ. ಅವರೇನಿದ್ದರೂ ಕುಳಿತು ಪ್ರಯಾಣ ಮಾಡುವವರು. ಅವರಿಗೇನು ಗೊತ್ತು ಹರಗೋಲಿನ ಮಹಿಮೆ.

ತನು ಅದ್ಭುತವಾದ ಶಕ್ತಿ ಉಳ್ಳ ವಿಚಾರ ಸಾಗರ. ಅದರಲ್ಲಿ ಹರಗೋಲು ಹಾಕಿಕೊಂಡು ವಿಹರಿಸಿ ದಾಟಿ ದಡಸೇರುವವನೇ ಸಮರ್ಥ.

ತನುವಿಗೆ ಹೇಳುವ ಶಕ್ತಿಯೂ ಇದೆ; ಕೇಳುವ ಶಕ್ತಿಯೂ ಇದೆ. ಹೇಳುವಾತನು ವಿರಕ್ತಿ ಹೊಂದಿ ಕೇಳುವಾತನು ಸದ್ಭಕ್ತಿ ಹೊಂದಿದ್ದರೆ ಮಾತ್ರ ಎರಡೊಂದಾದ ತನು. ಹೇಳುವ ತನು ಬೇರಲ್ಲ; ಕೇಳುವ ತನು ಬೇರಲ್ಲ. ಎರಡರಲ್ಲೂ ಇದ್ದ ಶಕ್ತಿ ಒಂದೇ; ಭಕ್ತಿ ಒಂದೆ. ವೇದ ಶಾಸ್ತ್ರ ಆಗಮ ಪುರಾಣ ಉಪನಿಷತ್‌ಗಳನ್ನು ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಓದಿ ಹೇಳುವಾಗ ನಾನು ಎಂಬ ಅಹಂಕಾರ ಕರಗಿ ತಾನು ಅವನೇ ಆಗಿ ತನ್ಮಯವಾಗಿ ಹೇಳುವಾಗ ಕೇಳುಗ ಹೇಳುಗನಲ್ಲಿ ಕರಗಿ ಹೇಳುವವನೂ ಕೇಳುವವನೂ ತಾನೇ ಆಗುತ್ತಾನೆ. ಅಂತಹ ಹೇಳುಗ ಹೇಳುಗನಲ್ಲ. ಕೇಳುಗ ಕೇಳುಗನೂ ಅಲ್ಲ. ಇಬ್ಬರೂ ವಿಚಾರ ಸಾಗರದಲ್ಲಿ ಆನಂದದಿಂದ ಹರಿಯುವ ಹರಿಗೋಲಿನ ಆನಂದದ ಸವಿಯನು ಸವಿಯಲು ಬಂದವರು.

ಹೇಳುವಾತ ಗುರುವಲ್ಲ; ಕೇಳುವಾತ ಶಿಷ್ಯನಲ್ಲ, ಹೇಳುವಾತ ಭಕ್ತನಾಗಿ ಭಕ್ತಿಯಿಂದ ಗುರುವಿಗೆ ಹೇಳಿದ ; ಕೇಳುವಾತ ಗುರುವಾಗಿ ಹೇಳುಗನ ಭಕ್ತಿಯನ್ನು ಆನಂದದಿಂದ ಸವಿದ. ಇವರಿಬ್ಬರೂ ತಮ್ಮ ಮಾತು ತಾವೇ ಆನಂದದಿಂದ ಸವಿದರು. ಉಳಿದವರು ಬತ್ತಿ ಹೊಸೆಯುತ್ತ ಕೇಳಿದರು. ಹೇಳುಗ ಕೇಳುಗರಿಬ್ಬರ ಆನಂದದ ಪರಿಚಯ ಇತರ ಕೇಳುಗರಿಗೆ ಇರುವುದಿಲ್ಲ. ಅದನ್ನು ಅರಿಯುವುದೂ ಜಟಿಲ.

ದೇವರು ಮಾನವರಿಂದ ಹುಟ್ಟಿದರು. ಮಾನವರಿಂದಲೇ ಪೂಜೆಗೊಳ್ಳುತ್ತಿದ್ದಾರೆ. ಮಾನವ ನಿರ್ಮಿಸಿದ ದೇವನನ್ನು ಮಾನವನೇ ಪೂಜಿಸಬಹುದೆ ? ಕಲ್ಲಿನಿಂದ, ಲೋಹದಿಂದ ದೇವನನ್ನು ನಿರ್ಮಿಸಿ, ಅದಕ್ಕೆ ಭವ್ಯವಾದ ಮಂದಿರ ಆಲಯಗಳನ್ನು ; ಪ್ರಾರ್ಥಿಸುವುದಕ್ಕಾಗಿ ಚರ್ಚ್ ಮಸೀದಿಗಳನ್ನು ಕಟ್ಟಿ, ಕಟ್ಟಿದ ತನ್ನನ್ನೇ ಮರೆತು ಅವುಗಳಿಗೆ ಭ್ರಮಿತನಾಗುವುದೆ ? ಅಂತಹ ದೇವರುಗಳ ಸತ್ಯ ಕಲ್ಲು ಕಟ್ಟಿಗೆ ಲೋಹ ! ಆದರೂ ಮಸ್ತಕ, ಪಾದ, ಪಾದುಕೆ, ಭುಜ, ಕಿರೀಟಗಳನ್ನು ಕೆತ್ತಿ ಆಲಯದ

ಗೋಪುರಗಳಿಗೆ ಚಿನ್ನದ ಕಲಶಗಳನ್ನಿಟ್ಟು ಭ್ರಮಿಸಿ ಸಂಭ್ರಮಿಸುವ ಮಾನವನ ಭ್ರಮೆಗೆ ಏನೆನ್ನಬೇಕು ? ತಾನೇ ಕೆತ್ತಿ ಪ್ರತಿಷ್ಠಾಪಿಸಿದ ಮೂರ್ತಿಗೆ ಮಸ್ತಕಾಭಿಷೇಕ ಮಾಡಿದರೆ ಅದು ತನಗೆ ವರ ನೀಡಬಲ್ಲುದೆ ಹೇಗೆ ಎಂದು ಪೂಜಿಸುವ ತಾನೇ ನಿರ್ಧರಿಸಬೇಕು.

ಅಂಗವನ್ನು ಮಸ್ತಕ ಪಾದ ಎಂದು ವಿಂಗಡಿಸಿದ್ದೇ ತಪ್ಪಾಗಿದೆ. ಸಕಲ ಅವಯವಗಳಿಂದ ಕೂಡಿದ ಅರಿವಿನ ಪರಿಪೂರ್ಣ ಅಂಗವೇ ಲಿಂಗಾಂಗವಾಗಿದೆ. ಇದನ್ನು ಗಮನಿಸದ ಅಂಗ ಮಸ್ತಕಕ್ಕೆ ಅಭಿಷೇಕ ಮಾಡುವ ನೆಪದಲ್ಲಿ ತನ್ನಂಗವನ್ನೇ ಬೇರ್ಪಡಿಸಿಕೊಂಡಿದೆ.

ಮಸ್ತಕದಲ್ಲಿ ಅಹಂಕಾರ ಭರಿತವಾಗಿದೆ. ಅದನ್ನು ನಷ್ಟ ಮಾಡಿ ಸಕಲ ಲಿಂಗಾಂಗವನ್ನು ಪಾದ ಹೊತ್ತುಕೊಂಡಿದೆ. ಮುಳ್ಳು, ಕಲ್ಲು, ಮಲ, ಮೂತ್ರ, ಕೆಸರು, ಧೂಳು, ಮಣ್ಣು, ಉರಿಬಿಸಿಲನ್ನೂ ಗಮನಿಸದೆ ಪಾದ ಇಡೀ ಲಿಂಗಾಂಗವನ್ನು ಶ್ರದ್ಧೆಯಿಂದ ಭಕ್ತಿಯಿಂದ ಹೊತ್ತುಕೊಂಡಿದೆ. ಕಳಶಪ್ರಾಯವಾದ ದೇವರನ್ನೇ ಹೊತ್ತಿದ್ದೇನೆಂಬ ಭಾವ ಪಾದಕ್ಕೆ ! ನೆತ್ತಿ ತನ್ನನ್ನು ಹೊತ್ತ ಶ್ರೀ ಪಾದವೆಂದು ಪಾದವನ್ನು ಭಾವಿಸುವುದೇ ಇಲ್ಲ. ಪಾದ ಯಾರದಾದರೇನು ? ನೆತ್ತಿ ಯಾರದಾದರೇನು ? ಇವೆರಡೂ ಅಂಗಕ್ಕೆ ಸಂಬಂಧಪಟ್ಟ ಅಮೂಲ್ಯ ವಸ್ತುಗಳೆಂದು ನೆತ್ತಿ ಅರಿಯಬೇಡವೆ ? ಪಾದ ತಟ್ಟಿದರೆ ಸಾಕು ನೆತ್ತಿಯಲ್ಲಿ ಅಗ್ನಿಯ ಜ್ವಾಲೆಗಳೇ ಏಳುತ್ತವೆ. ಹಾವಿನಂತೆ ಬುಸು ಗುಡುತ್ತದೆ. ಅದು ರಾಜನ ಮಸ್ತಕವಾದರೆ ಪಾದ ತಟ್ಟಿದ ಮಸ್ತಕ ನೆಲಕ್ಕುರುಳುತ್ತದೆ !

ಸಕಲ ಆಗಮ ವೇದ ಶಾಸ್ತ್ರ ಪುರಾಣಗಳು, ಶ್ರುತಿ, ಸ್ಮೃತಿಗಳು ಶ್ರೀಪಾದವನ್ನು ಪೂಜಿಸೆಂದು ಸಾರುತ್ತಲಿವೆ. ಅದನ್ನು ಓದುತ್ತ ಓದುತ್ತಾ ಹಾಡುತ್ತಾ ಪುನಃ ಪಾದ ತಟ್ಟಿದರೆ ಅಪಖ್ಯಾತಿಗೆ ಗುರಿಯಾಗುವ ಅಂಗವುಳ್ಳವನನ್ನು ಲಿಂಗಾಂಗವೆಂದು ಗುರುತಿಸಬಹುದೆ? ಅಂಗ ಯಾವುದಾದರೇನು? ಅದಕ್ಕೆ ಮಸ್ತಕವೂ ಇದೆ, ಪಾದಗಳೂ ಇವೆ. ಅಂಗದ ಪಾದಗಳನ್ನು ಶ್ರೀಪಾದಗಳೆಂದು ಸಾರಿವೆ ಶಾಸ್ತ್ರಗಳು. ಕಲ್ಲಿನಿಂದ ಕೆತ್ತಿದ ಮಸ್ತಕಕ್ಕೆ ಅಭಿಷೇಕ ಮಾಡಿದರೆ ಅದು ನೆನೆದು ಒದ್ದೆಯಾಗುವುದೆ ? ಮರೆತರೆ ಬಾಡುವುದೆ? ಹಾಗಾಗುವುದಿಲ್ಲವೆಂದ ಮೇಲೆ ಹುರುಳಿಲ್ಲದ ಕೆಲಸವನ್ನು ತಾನೇಕೆ ಮಾಡುತ್ತಿದ್ದೇನೆ ಎನ್ನುವುದನ್ನು ತಾನೇ ತಿಳಿಯಬೇಡವೆ ?

ಅಂಗಕ್ಕೆ ಅಭಿಷೇಕ ಮಾಡಿದರೆ ಅಂಗದಲ್ಲಿ ಸಂಗಮವಾದ ಲಿಂಗ ಅರಳುತ್ತದೆ. ಪಾದಕ್ಕೆ ಅಭಿಷೇಕ ಮಾಡಿದರೆ ಮಸ್ತಕದಲ್ಲಿದ್ದ ಅಹಂಕಾರ ನಷ್ಟವಾಗುತ್ತದೆ. ಅದು ಗುರುವಿನ ಪಾದ ; ಭಕ್ತ ಶಿಷ್ಯ ಭವಿಯ ಪಾದವೆಂದೆಣಿಸುವಂತಿಲ್ಲ. ಸಕಲ ಪಾದಗಳೆಲ್ಲ ಶ್ರೀಪಾದಗಳೇ ಆಗಿವೆ. ಅಂಗದ ಪಾದಕ್ಕೆ ಮಸ್ತಕ ಬಾಗಿಸಿ ನೋಡಿ, ಆ ಮಸ್ತಕ ಆನಂದದಿಂದ ಅರಳುತ್ತದೆ. ಬಾಗಿದ ಮಸ್ತಕವನ್ನು ಅಪ್ಪಿಕೊಳ್ಳಲು ತಾನೂ ಬಾಗುತ್ತದೆ. ಎರಡೂ ಮಸ್ತಕಗಳಲ್ಲಿದ್ದ ಅಹಂಕಾರ ನಷ್ಟವಾಗಿ ಕ್ಷಣಾರ್ಧದಲ್ಲಿ ಅಂಗಗಳು ಲಿಂಗಾಂಗವಾಗುತ್ತವೆ.

ಶ್ರೀಪಾದಕ್ಕೆ ಅಪಖ್ಯಾತಿಯ ತರುವವನು ಜಂಗಮನೂ ಅಲ್ಲ, ಭಕ್ತನೂ ಅಲ್ಲ, ಒಡೆಯನೂ ಅಲ್ಲ, ಗುರುವೂ ಅಲ್ಲ, ಶಿಷ್ಯನೂ ಅಲ್ಲ.

ತನ್ನ ಎಡೆಯನು ಕಲ್ಲದೇವರ ಗುಡಿಯ ಮುಂದಿಟ್ಟು, ಪುನಹ ಆ ಎಡೆಯನ್ನು ಇಷ್ಟ ಲಿಂಗಕ್ಕೆ ತೋರಿಸಿ, ಕಣ್ಣಿಗೊತ್ತಿಕೊಂಡು ಪ್ರಸಾದವೆಂದು ಸ್ವೀಕರಿಸುವ ಭಕ್ತನು ಭಕ್ತನಲ್ಲ ; ತುಡುಗುಣಿಯ ದನವಿದ್ದಂತೆ. ಅಂತಹ ಆಚಾರದಲ್ಲಿರುವ ನಾಯಿ ಮೂಳ ಹೊಲೆಯರ ಕಂಡಡೆ ನಡುವಿನ ಮೇಲೆ ಒದೆಯೆಂದಾತ ನಮ್ಮ ಅಂಬಿಗರ ಚೌಡಯ್ಯ ಎಂದು ಶರಣರು ತಮ್ಮ 63ನೇ ವಚನದಲ್ಲಿ ಖಾರವಾಗಿ ನುಡಿದಿದ್ದಾರೆ.

ತಿಳಿಯುವವನು ತಾನೇ. ತಿಳಿಯದೇ ಪೂಜಿಸಿ ಆಚರಿಸುವವನು ತಾನೇ. ತನ್ನನ್ನು ಮನ ಆವರಿಸಿ ತಿಳಿಯದಂತೆ ಮಾಡಿದೆ. ಹಾಗೆ ತಿಳಿಯದಂತೆ ಮಾಡಿದ ವಿಷಯ ಕೂಡಾ ತನಗೆ ತಿಳಿದಿದೆ. ತಿಳಿದವನು ತಿಳಿಯದವನನ್ನು ಒದ್ದು ಹೊರ ಹಾಕಬೇಕು. ಅಂದರೆ ತನ್ನ ಅಜ್ಞಾನವನ್ನು ತನ್ನ ಜ್ಞಾನದಿಂದಲೇ ಒದ್ದು ಓಡಿಸಬೇಕೆಂದು ಶರಣರು ಓದುಗರಲ್ಲಿ ತಮ್ಮ ಅಕ್ಕರೆಯ ಅಕ್ಷರಗಳ ಮೂಲಕ ಅರುಹಿದ್ದಾರೆ.

'ತಮಸೋಮಾ ಜ್ಯೋತಿರ್ಗಮಯ' ಇದು ಒಂದು ಮಹಾಸೂತ್ರ. 'ಎಸವಿನ ಗುರು ಹೋಗಿ ಶಿಶುವಧೆಯ ಮಾಡಿದ' ಇದು ಕೂಡಾ ಅಂಬಿಗರ ಚೌಡಯ್ಯಗಳ ಮಹಾಸೂತ್ರ. ಇವೆರಡೂ ಒಂದೇ. ಶಬ್ದ ಮಾತ್ರ ಬೇರೆ ಬೇರೆ. ಕತ್ತಲಿನಿಂದ ಬೆಳಕಿನೆಡೆಗೆ ಪ್ರಯಾಣ ಮಾಡುವುದು. ಆ ಬೆಳಕೇ ತಾನಾಗುವುದು. ಕತ್ತಲು ಬೆಳಕಿನಲ್ಲಿ ಲೀನವಾಗಿ ಬೆಳಕೇ ಆಗುವುದು.

ಏನೂ ತಿಳಿಯದ ಮುನ್ನ ಶಿಶುವಾಗಿದ್ದ; ಆ ಶಿಶುವೇ ಅರಿವಿನೆಡೆಗೆ ಹೋಗಿ ಗುರುವಾದ. ಅಲ್ಲಿಗೆ ಶಿಶುವಧೆಯಾಯಿತು. ಅರಿವನ್ನು ಅರಿಯಬೇಕಾದ ಶಿಶುವೂ ಅಂಗದಲ್ಲಿಯೇ ಸಂಗಮುವಾಗಿದೆ. ಅರಿವೆಂಬ ಗುರುದೇವನೂ ಅಂಗದಲ್ಲಿಯೇ ಸಂಗಮುವಾಗಿದ್ದಾನೆ. ಗುರುವಾದರೂ ಶಿಶುವಿನ ವಧೆ ಮಾಡಿ ಆ ಶಿಶುವನ್ನೇ ಗುರುವಾಗಿಸಿಕೊಳ್ಳಬೇಕು. ಶಿಶುವಾದರೂ ಗುರುದೇವನಲ್ಲಿ ಲೀನವಾಗಿ ಆ ಗುರುದೇವನೇ ತಾನಾಗಬೇಕು. ಎರಡೂ ಒಂದೇ. ಕಾಯದಲ್ಲಿ ಈ ಕಾಯಕ ಘಟಿಸಲೇಬೇಕು. ಅಂದಾಗ ಮಾತ್ರ ಕಾಯವೇ ಜ್ಞಾನಪುಷ್ಪವಾಗಿ ಬ್ರಹ್ಮಕಮಲವಾಗಿ ಅರಳಿ ಅರಿವಿನ ಪರಿಮಳ ಬೀರುತ್ತದೆ.

**ಶಿಶು ಹೋಗಿ ಮರಳಿ ಗುರುವ ಕೊಂದಡೆಯು, ಹೆಸರುಗೊಂಬ ಅಣ್ಣಗಳು ನೀವು ಕೇಳಿರೋ:**

ಈ ಲೋಕದಲ್ಲಿ ಗುರು ಎಂದು ಜಂಬ ಕೊಚ್ಚಿಕೊಳ್ಳುವ ಅಂಗಗಳೂ ಇವೆ. ಶಿಷ್ಯನೆಂದು ಜಂಬಕೊಚ್ಚಿಕೊಳ್ಳುವ ಅಂಗಗಳೂ ಇವೆ. ಇವೆರಡೂ ಅಂಗಕ್ಕೆ ಬಡಿದ ರೋಗಗಳು. ಸಕಲ ಅಂಗಗಳಲ್ಲಿಯೂ ಅರಿವೆಂಬ ಗುರುದೇವನು ಸಂಗಮುವಾಗಿದ್ದಾನೆ. ಹಾಗೆಯೇ ಆ ಅರಿವನ್ನು ತಿಳಿದು ಆ ಅರಿವೇ ತಾನಾಗಬೇಕೆಂಬ ಬಯಕೆಯ ಶಿಶು ಕೂಡಾ ಅಂಗದಲ್ಲಿಯೇ ಇದೆ. ಇವೆರಡೂ ಇಲ್ಲದ ಅಂಗಗಳು ಈ ಲೋಕದಲ್ಲಿಯೇ ಇಲ್ಲ. ಅಂದ ಮೇಲೆ ನಾನು ಗುರುವೆಂಬುದೊಂದು ಅಹಂಕಾರವಲ್ಲವೆ? ನಾನು ಇಂಥವರ ಶಿಷ್ಯನೆಂಬುದು ಕೂಡಾ ಒಂದು ಅಹಂಕಾರವಲ್ಲವೆ?

ವೇದ ಆಗಮ ಉಪನಿಷತ್ತು ಭಗವದ್ಗೀತೆ ಕೈವಲ್ಯ ಮುಂತಾದ ಗ್ರಂಥಗಳಿಂದ ಅರಿವು ತಿಳಿಯಬಹುದು. ಆದರೆ ಅಂಗದಲ್ಲಿಯ ಅರಿವೇ ಪುಸ್ತಕಕ್ಕೆ ಅಕ್ಷರಗಳ ಮೂಲಕ ಪ್ರಸಾರವಾಗಿದೆ. ಪುನಃ ಆ ಅರಿವೇ ಅಂಗದಲ್ಲಿ ಸಂಗ್ರಹವಾದರೆ ಅದು ಅಂಗದ ಆಪತ್ಕಾಲಕ್ಕೆ ಬಳಕೆಯಾಗುವುದಿಲ್ಲ. ನುಡಿಯುವುದಕ್ಕಾಗಿ ಮಾತ್ರ ಬಳಕೆಯಾಗುತ್ತದೆ. ಸಂಗ್ರಹವಾದ ಅರಿವು ಅರಿವನ್ನೇ ಮರೆ ಮಾಡಿ ಅಹಂಕಾರಿಯನ್ನಾಗಿಸುತ್ತದೆ. ಇಂತಹ ಅರಿವು ಸಹಜ ಅರಿವು ಅಲ್ಲವೆಂದು ಗುರುವಿನ ಮೂಲಕ ತಿಳಿದ ಶಿಶು ಆ ಸಹಜ ಅರಿವೇ ತಾನಾಗಿ ತನ್ನಲ್ಲಿಯೇ ಸಂಗ್ರಹವಾದ ಅರಿವೆಂಬ ಗುರುವನ್ನು ಕೊಂದ.

ಅರಿವನ್ನು ತಿಳಿಯಲು ಹೋದ ಶಿಶುವನ್ನು ಗುರುದೇವ ಅರಿವು ಹೇಳುವ ಮೂಲಕ ಶಿಶುವಿನ ವಧೆ ಮಾಡಿದ. ಆ ಶಿಶುವೇ ಸಹಜ ಅರಿವಾಗಿ ಅರಿವು ಹೇಳಲು ಬಂದ ಗುರುದೇವನನ್ನು ಕೊಂದ. ಗುರುದೇವ ಗುರುವೆಂಬ ಅಹಂಕಾರದಿಂದ ಮುಕ್ತನಾದ. ಶಿಶು ಶಿಷ್ಯನೆಂಬ ಅಹಂಕಾರದಿಂದ ಮುಕ್ತನಾಗಿ ಅಂಗದಲ್ಲಿ ಸಂಗಮವಾದ ಆ ಅರಿವೇ ತಾನಾದ.

ಪಂಡಿತ ಶಾಸ್ತ್ರೀ ಆಚಾರ್ಯ ಮೌಲ್ವಿ ಪಾದ್ರಿ ಎಂದು ಹೆಸರಿಟ್ಟುಕೊಂಡು ಮೋಸಕ್ಕೊಳಗಾಗಿ, ಅರಿವೆಂಬ ಲಿಂಗಾಂಗಗಳನ್ನೇ ಮೋಸ ಮಾಡುವ ಅಣ್ಣಗಳಿರಾ ನೀವು ಕೇಳಿರೋ: ಇವರಿಬ್ಬರೂ ಸತ್ತ ಠಾವನು ಒಬ್ಬರೂ ಅರಿಯಲಿಲ್ಲ ಎಂಬ ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ ಚೌಡಯ್ಯ ಶರಣರು.

ಆಹಾ ! ಕಾಯದಲ್ಲಿ ಎಂತಹ ಅದ್ಭುತವಾದ ಜ್ಞಾನವಿದೆ. ಕಾಯದಲ್ಲಿ ಸಂಗಮವಾದ ಜ್ಞಾನ ಕಾಯಕ್ಕೆ ದಕ್ಕುತ್ತಿಲ್ಲವಲ್ಲ ; ಕಾಯದ ಕಾಯಕ ಕಾಯಕ್ಕೆ ಹೊಳೆಯುತ್ತಿಲ್ಲವಲ್ಲ ; ಕಾಯವೇ ಕೈಲಾಸವೆಂಬುದನ್ನು ಕಾಯವೇ ತಿಳಿಯುತ್ತಿಲ್ಲವಲ್ಲ ಎನ್ನುವ ಚಿಂತನ ಈ ಪುಸ್ತಕ ಓದುವ ಕಾಯದಲ್ಲಿ ಹುಟ್ಟಿದರೆ ಸಾಕು ; ಅದನ್ನೇ ಸದ್ಗುರುವಿನ ಸೇವೆ ಎಂದು ಭಾವಿಸುವೆ.

ವಚನಗಳ ಸೂತ್ರವನ್ನು ಅನುಭಾವದ ಮೂಲಕ ಅಕ್ಷರಗಳಲ್ಲಿ ಮೂಡಿಸುವ ಶಕ್ತಿ ಸದ್ಗುರು ವಿದ್ಯಾನಂದ ಶರಣರು, ಅಂಬಿಗರ ಚೌಡಯ್ಯ ಶರಣರು ದಯಪಾಲಿಸಿದ್ದಾರೆ. ಶರಣರ ನುಡಿಗಳಿಗೆ ಅಕ್ಷರ ರೂಪ ಮಾತ್ರ ನೀಡಿದ್ದೇನೆ. ಓದುವ ತನುವು ಸಹಜ ಜ್ಞಾನದತ್ತ ವಾಲಿ ಆ ಮಹಾಜ್ಞಾನದಲ್ಲಿಯೇ ವಿರಮಿಸುವ ಶಕ್ತಿಯನ್ನು ಅಂಬಿಗರ ಚೌಡಯ್ಯ ಶರಣರು ಸಕಲ ಓದುಗರಿಗೂ ಕರುಣಿಸಲಿ ಎಂದು ಪ್ರಾರ್ಥಿಸುವೆ.

**ಶರಣು ಸಮರ್ಪಣೆ :**

ಶರಣ ಶ್ರೀ ಡಾ|| ಶಿವರಾಜ ಪಾಟೀಲರು ಮಾನ್ಯ ಶಾಸಕರು ರಾಯಚೂರು ಕ್ಷೇತ್ರ ಅವರ ಮಾತಾ ಪಿತೃಗಳು ಶರಣ ದಂಪತಿಗಳೂ ಆದಂತಹ ಶರಣೆ ಶ್ರೀಮತಿ ಹಂಪಮ್ಮ ವೀರನಗೌಡ ಸಾನಬಾಳ, ಶರಣ ಶ್ರೀ ವೀರನಗೌಡ ಬಸನಗೌಡ ಸಾನಬಾಳ ಈ ಪುಸ್ತಕದ ಮುದ್ರಣ ಸೇವೆಯನ್ನು ಅತ್ಯಂತ ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಂಡಿದ್ದಾರೆ. ಅವರಿಗೆ ಶರಣರು ಆಯುರಾರೋಗ್ಯವನ್ನು ಕರುಣಿಸಲಿ ಎಂದು ಶರಣ ದಂಪತಿಗಳಿಗೂ ಅವರ ಪುತ್ರ, ಶರಣಶ್ರೀ ಡಾ|| ಶಿವರಾಜ ಪಾಟೀಲ ಅವರಿಗೂ ಶರಣು ಸಮರ್ಪಿಸುವೆ.

**ಬಸವರಾಜ ಸ್ವಾಮಿ**
**ಸಂಪಾದಕ, ಸುದ್ದಿಮೂಲ ಪತ್ರಿಕೆ**
**ರಾಯಚೂರು**

# ಮುದ್ರಣ ಸೇವೆ

( ಸನ್ಮಾನ್ಯ ಶರಣ ಶ್ರೀ ಡಾ॥ಶಿವರಾಜ ಪಾಟೀಲ್, ಶಾಸಕರು
ರಾಯಚೂರು ವಿಧಾನಸಭಾ ಸದಸ್ಯರು, ಇವರ ಮಾತಾ ಪಿತೃಗಳು )

ಶರಣ ದಂಪತಿಗಳಾದ



**ಶರಣೆ ಶ್ರೀಮತಿ ಹಂಪಮ್ಮ ವೀರನಗೌಡ ಸಾನಬಾಳ**
**ಶರಣ ಶ್ರೀ ವೀರನಗೌಡ ಬಸನಗೌಡ ಸಾನಬಾಳ**
ಸಾನಬಾಳ, ತಾ॥ ಲಿಂಗಸೂಗೂರು,
ಜಿ॥ ರಾಯಚೂರು

# ಅಂಬಿಗರ ಚೌಡಯ್ಯಗಳ ವಚನಾನುಭಾವ

1

**ಅಂಗದ ಗುಣವನರತು ಲಿಂಗವನರಿಯಬೇಕೆಂಬರು.**
**ಅಂಗವರತ ಮತ್ತೆ ಲಿಂಗಕ್ಕೆ ಕುರುಹುಂಟೆ ?**
**ಅಂಗವೆ ಲಿಂಗ, ನಿರಂಗವೆ ಸಂಗ.**
**ಈ ಭಾವದ ಅಂಗವನರಿಯಬೇಕೆಂದನಂಬಿಗ ಚೌಡಯ್ಯ.**

ಅಂಗದ ಗುಣವನು ತಿಳಿಯಲು ಹೋದರೆ, ಅಂಗದಲ್ಲಿ ಅರಿವೆಂಬ ಲಿಂಗವಿದೆ. ಆ ಅರಿವೆಂಬ ಲಿಂಗವನ್ನು ತಿಳಿಯುವ ಮನವೂ ಇದೆ. ಅಂಗ ಎಚ್ಚರದಲ್ಲಿದ್ದಾಗ ಇದಕ್ಕೆ ಜಾಗ್ರತ ಎನ್ನುತ್ತಾರೆ. ಮಲಗಿ ನಿದ್ರಿಸುವಾಗ ಸುಷುಪ್ತಿ ಎನ್ನುತ್ತಾರೆ. ಮಲಗಿ ಸ್ವಪ್ನ ಕಾಣುತ್ತಿರುವಾಗ ಸ್ವಪ್ನಾವಸ್ಥೆ ಎನ್ನುತ್ತಾರೆ. ಅಂಗಕ್ಕೆ ಈ ಮೂರು ಅವಸ್ಥೆಗಳು.

ಹಾಗೆಯೇ ಅಂಗಕ್ಕೆ ಸಾತ್ವಿಕ, ರಾಜಸ, ತಾಮಸ ಗುಣಗಳು ಆವರಿಸಿವೆ. ಅಂಗವನ್ನು ತಿಳಿಯಲು ಹೋದಾಗ ಈ ಮೂರು ಅವಸ್ಥೆಗಳು, ಮೂರು ಗುಣಗಳು ಅಂಗದಲ್ಲಿ ಎದ್ದು ಕಾಣುತ್ತವೆ.

ಅಂಗ ಎಚ್ಚರದಲ್ಲಿದ್ದಾಗಲೂ ತನ್ನನ್ನು ಮರೆತಿರುತ್ತದೆ. ಮಲಗಿದಾಗಲೂ ತನ್ನನ್ನು ಮರೆತಿರುತ್ತದೆ. ಸ್ವಪ್ನದಲ್ಲಿಯೂ ತನ್ನನ್ನು ಮರೆತಿರುತ್ತದೆ. ಅಂಗದ ಈ ಮೂರು ಗುಣವನರಿತು ಅದರಾಚೆ ಹೋದಾಗ ಅಂಗದಲ್ಲಿಯೇ ಅರಿವೆಂಬ ಗುರುದೇವನ ದರ್ಶನವಾಗುತ್ತದೆ; ಅದು ಲಿಂಗಾಂಗ ದರ್ಶನ !

ಲಿಂಗಾಂಗವನ್ನು ಅರಿತ ಮೇಲೆ ಅಂಗಕ್ಕೆ ಅಂಗ ಎನ್ನುವಂತಿಲ್ಲ, ಅದು ಹೆಣ್ಣು ಅಥವಾ ಗಂಡಿನ ಪ್ರಾಣದ ಕುರುಹಲ್ಲ ; ಅರಿವಿನ ಕುರುಹು. ಅಂಗವೇ ಲಿಂಗ ; ನಿರಂಗವೇ ಅಂಗದ ಸಂಗ.

ಒಡಲೊಳಗಿದ್ದು ಒಡಲಿಂಗಾಧಾರವಾಗಿ ಒಡಲ ಸೋಂಕದೆ ಒಡಲ ಬೆಳಗುವ ಪರಿಯ ನೋಡಾ. ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಗಿನ ಪರಿಯ ನೋಡಾ ಗುಹೇಶ್ವರಾ ಎಂದು ಪ್ರಭುಗಳು ಹೇಳಿದ್ದಾರೆ. ಅಂಗದೊಳಗೊಂದು ನಿರಂಗ ಅಂಗದ ಸಂಗ ಮಾಡಿದೆ. ಅದು ಅಂಗಕ್ಕೆ ಸೋಂಕಿಲ್ಲ. ಅಂಗವನ್ನು ಬೆಳಗುತ್ತಲಿದೆ. ಹೀಗೆ ಬೆಳಗುವ ನಿರ್ಭಾವದ ಅಂಗವನು ಅರಿಯಬೇಕೆಂದು ಶರಣ ಅಂಬಿಗರ ಚೌಡಯ್ಯ ಹೇಳಿದ್ದಾರೆ.

2

**ಅಂಗದೊಳಗಿಪ್ಪುದು ಲಿಂಗವಲ್ಲ, ಅಂಗದ ಹೊರಗಿಪ್ಪುದು ಲಿಂಗವಲ್ಲ.**
**ಎಲ್ಲ ಅಂಗಂಗಳನೊಳ ಕೊಂಡಿಪ್ಪ ಲಿಂಗ, ಹೋಗುತ್ತ ಬರುತ್ತ ಇಪ್ಪುದಲ್ಲ !**
**ಚಲನೆಯಿಲ್ಲದ ಅಚಲವಪ್ಪ ಲಿಂಗಕ್ಕೆ,**
**ಹೋಯಿತ್ತು ಎಂಬ ಸಂದೇಹವಿಲ್ಲವೆಂದನಂಬಿಗ ಚೌಡಯ್ಯ.**

ಯಾವ ಅಂಗವಾದರೇನು ? ಲಿಂಗವಿಲ್ಲದ ಅಂಗವೇ ಇಲ್ಲ. ಒಮ್ಮೆ ತಿಳಿಯುತ್ತದೆ.

ಮತ್ತೊಮ್ಮೆ ತಿಳಿಯುವುದಿಲ್ಲ. ಒಮ್ಮೆ ಸುಳಿದಂತೆ ಆಗುತ್ತದೆ ; ಮತ್ತೊಮ್ಮೆ ಸುಳಿಯುವುದಿಲ್ಲ. ಅಂಗದ ಮೇಲೆ ಕಟ್ಟಿಕೊಂಡ ಲಿಂಗ ; ಲಿಂಗವಲ್ಲ. ಅದಕ್ಕೆ ಚಲನೆಯಿಲ್ಲ. ಅದು ಒಳಗೆ ಬರುವುದಿಲ್ಲ; ಹೊರಗೆ ಹೋಗುವುದಿಲ್ಲ. ಜಡ.

**ಚಲನೆಯಿಲ್ಲದ ಅಚಲವಪ್ಪ ಲಿಂಗಕ್ಕೆ ಹೋಯಿತ್ತು ಎಂಬ ಸಂದೇಹವಿಲ್ಲ :**

ಜಗದಗಲ ಮುಗಿಲಗಲ ಮಿಗೆಯಗಲವಿದ್ದ ಚಲನೆಯಿಲ್ಲದ ಅಚಲವಪ್ಪ ಲಿಂಗ ಶ್ರೀಮುಖ ಬ್ರಹ್ಮಾಂಡದಿಂದಲೂ ಅತ್ತತ್ತ ; ಅದರ ಶ್ರೀಪಾದ ಪಾತಾಳದಿಂದಲೂ ಅತ್ತತ್ತ ಇರುವ ಲಿಂಗ ಅಂಗದಗಲಕ್ಕೆ ಬಂದು ಚುಳುಕಾಗಿದೆ. ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಲಿಂಗವು ಅಂಗ (ಕರಸ್ಥಲ)ದಲ್ಲಿ ಬಂದು ಚುಳುಕಾಗಿದೆ. ಲಿಂಗ ಹೋಗುವುದೂ ಇಲ್ಲ. ಬರುವುದೂ ಇಲ್ಲ. ತನ್ನ ಲೀಲೆಗಾಗಿ ಸರ್ವಾಂಗಗಳಲ್ಲಿದ್ದು ಲಿಂಗಾಂಗವಾಗಿದೆ. ಅಂತಹ ಲಿಂಗವನ್ನು ತಿಳಿಯದೆ ಹೊರಗೆ ಇದೆ ಒಳಗೆಯಿದೆ ಎಂದು ಹೇಳಬಹುದೆ ? ಸಂದೇಹವಿಲ್ಲದೆ ಸರ್ವಾಂಗದಲ್ಲಿ ಭರಿತವಾಗಿದೆ ಎಂದು ಅಂಬಿಗರ ಚೌಡಯ್ಯ ಶರಣರು ಖಚಿತವಾಗಿ ಘೋಷಿಸಿದ್ದಾರೆ.

3

**ಅಂಗವ ಅಂದ ಮಾಡಿಕೊಂಡು ತಿರುಗುವ**
**ಭಂಗಗೇಡಿಗಳು ನೀವು ಕೇಳಿರೋ,**
**ಅಂಗಕ್ಕೆ ಅಂದವಾವುದೆಂದರೆ:**
**ಗುರುವಿಗೆ ತನುವ ಕೊಟ್ಟಿರುವುದೆ ಚೆಂದ,**
**ಲಿಂಗಕ್ಕೆ ಮನವ ಕೊಟ್ಟಿರುವುದೆ ಚೆಂದ,**
**ಜಂಗಮಕ್ಕೆ ಧನವ ಕೊಟ್ಟಿರುವುದೆ ಚೆಂದ**
**ಅಷ್ಟಾವರಣದಲ್ಲಿ ನಿಬ್ಬೆರಗಿನಿಂದ ಕೂಡಿ**
**ಭಕ್ತಿಯೆಂಬ ಸಮುದ್ರದಲ್ಲಿ ಈಸಾಡುವುದೆ ಚೆಂದ.**
**ಶಿವನ ಪಾದವ ಹೊಂದುವುದೆ ಚೆಂದ.**
**ಈ ಮಾರ್ಗವ ಬಿಟ್ಟು, ಸಂಸಾರವೇ ಅಧಿಕವೆಂದು**
**ತನ್ನ ಹೆಂಡಿರು ಮಕ್ಕಳು ಸಂಪತ್ತು ಇವು ತನಗೆ ಶಾಶ್ವತವೆಂದು ತಿಳಿದು,**
**ಒಂದು ಕಾಸನಾದರೂ ಪರರಿಗೆ ಕೊಡದೆ,**
**ತಾನೇ ತಿಂದು, ನೆಲದಲ್ಲಿ ಮಡಗಿ,**
**ಕಡೆಗೆ ಯಮನ ಕೈಯಲ್ಲಿ ಸಿಲ್ಕಿ**
**ನರಕ ಕೊಂಡದಲ್ಲಿ ಮುಳುಗುವುದೇ ನಿಶ್ಚಯ.**
**ಇಂತಹ ಅಂದಗೇಡಿಗಳ ಮುಖವ ನೋಡಲಾಗದೆಂದಾತ,**
**ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.**

ಅಂಗದಲ್ಲಿ ಲಿಂಗ (ಅರಿ)ವಿದ್ದು ಅದನ್ನು ತಿಳಿಯದೇ ತಿರುಗುವ ಅಂಗಗಳೆಲ್ಲ ಭಂಗಗೇಡಿ ಅಂಗಗಳು. ಅಂಗದಲ್ಲಿ ಅರಿವೆಂಬ ಗುರುವಿದ್ದಾನೆ. ಆತನಿಗೆ ಅಂಗ ಕೊಡುವುದು ಚೆಂದ. ಅಂಗದಲ್ಲಿ ಮನವಿದೆ. ಅದು ಎಲ್ಲೆಂದರಲ್ಲಿ ಅಂಗದೊಂದಿಗೆ ಹರಿದಾಡುತ್ತದೆ. ಇಂತಹ ಮನವನ್ನು ಲಿಂಗಕ್ಕೆ

ಧಾರೆ ಎರೆದು ಕೊಡುವುದೇ ಚೆಂದ.

ಅಂಗದಲ್ಲಿ ಜಂಗಮ ಇದ್ದಾನೆ. ಅಜ್ಞಾನವನ್ನು ತನ್ನ ಖಡ್ಗದಿಂದ ಸೀಳಿ ಅರಿವಿನಿಂದ ನಡೆದು ನುಡಿಯುವ ಮಹಾವೀರನು ಈತ. ಈತನಿಗೆ ಅರಿವೆಂಬ ಸಂಪತ್ತನ್ನು (ಧನ) ಕೊಡುವುದು ಬಲು ಚೆಂದ.

**ಅಷ್ಟಾವರಣದಲ್ಲಿ ನಿಬ್ಬೆರಗಿನಿಂದ ಕೂಡಿ ಭಕ್ತಿಯೆಂಬ ಸಮುದ್ರದಲ್ಲಿ ಈಸಾಡುವುದೇ ಚೆಂದ . ಶಿವನ ಪಾದವ ಹೊಂದುವುದೇ ಚೆಂದ :**

ಗುರು,ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ , ಮಂತ್ರ ಇದು ಅಷ್ಟಾವರಣದ ಪೂಜೆ.

ಗುರು : ಅಂಗದಲ್ಲಿರುವ ಅರಿವೆಂಬ ಗುರುದೇವನ ನುಡಿಯನ್ನು ಆದರದಿಂದ ಆಲಿಸಿ ಪಾಲಿಸುವುದು ಮನದ ಕೆಲಸವಾಗಬೇಕು. ಮನ ನೋಡಿದ್ದನ್ನು ಗುರುದೇವ ನೋಡಬೇಕೆಂದು ಹೇಳುತ್ತಾನೆ. ಕಣ್ಣಿನಲ್ಲಿರುವ ಗುರುದೇವನ ಮಾತು ಕಣ್ಣಿನಲ್ಲಿಯೇ ಆವರಿಸಿರುವ ಮನ ಕೇಳಬೇಕು. ಹೀಗೆ ಸರ್ವಾಂಗದಲ್ಲಿ ಗುರು ದೇವನಿದ್ದಾನೆ. ಕಿವಿ, ಮೂಗು, ನಾಲಿಗೆ, ಚರ್ಮದಲ್ಲಿ ಭರಿತವಾಗಿ ಜ್ಞಾನದ ಪಾಠ ಮಾಡುತ್ತಾನೆ.

ಲಿಂಗ : ಸರ್ವಾಂಗವೆಲ್ಲ ಲಿಂಗವೇ ಆಗಿದೆ. ಇದನ್ನು ಗುರುದೇವ ಸೂಚಿಸುತ್ತಾನೆ. ಸೂಚಿಸುವ ಗುರುವನ್ನು ಸದ್ಗುರುವೆಂದು ಕರೆಯುತ್ತಾರೆ. ಅಂಗದಲ್ಲಿ ಮನ ಆವರಿಸಿರುವುದರಿಂದ ಕಣ್ಣು ಕಂಡರೂ ಅವು ಕುರುಡುಗಣ್ಣು. ನೋಡಿದರೆ, ಕೇಳಿದರೆ, ಮುಟ್ಟಿದರೆ, ಮೂಸಿಸಿದರೆ, ರುಚಿಸಿದರೆ ಅಂಗಕ್ಕೆ ಸಂಕಟ ಇಲ್ಲ ಸುಖವಾಗುತ್ತದೆ. ರೂಪು, ಶಬ್ದ, ಸ್ಪರ್ಶ, ವಾಸನೆ, ರುಚಿಯ ಸತ್ಯ ತಿಳಿಯುವುದಿಲ್ಲ. ಮನದ ಅಜ್ಞಾನದ ಪೊರೆಯನ್ನು ಕಳಚಿಕೊಳ್ಳುವುದು ಹೇಗೆ ಎಂದು ಸದ್ಗುರುನಾಥ ಬೋಧಿಸುತ್ತಾನೆ. ಸರ್ವಾಂಗದಲ್ಲಿ ಲಿಂಗ ಹೇಗೆ ಭರಿತವಾಗಿದೆ ಎನ್ನುವುದನ್ನು ಹೇಳಿಕೊಡುತ್ತಾನೆ.

ಜಂಗಮ : ಸರ್ವಾಂಗದಲ್ಲಿ ಹೇಗೆ ಮನವಿದೆಯೋ ಹಾಗೆಯೇ ಜಂಗಮನೂ ಇದ್ದಾನೆ. ಮನ ಅಂಗವನ್ನು ಜೂಜಿನ ಮನೆಗೆ, ವೇಶ್ಯಾ ಗೃಹಕ್ಕೆ, ಕ್ಲಬ್ಬಿಗೆ, ಕಳವು, ಲಂಚಕ್ಕೆ ಕರೆದೊಯ್ದರೆ, ಜಂಗಮ ಅದನ್ನು ಖಡ್ಗದಿಂದ ಭೇದಿಸಿ ಗುರುವಿನತ್ತ ಸೆಳೆಯುತ್ತಾನೆ. ಅರಿವಿನ ದರ್ಶನ ಮಾಡಿಸುತ್ತಾನೆ.

ಪಾದೋದಕ : ಜ್ಞಾನ ಬಲದಿಂದ ಭರಿತವಾದ ಕೊಡವೇ ಅಂಗ. ಜಲಬಿಂದು ತಾಯಿ ಗರ್ಭ ಪ್ರವೇಶ ಮಾಡಿ, ರಕ್ತ , ಮಾಂಸ, ಮೂಳೆ, ಮಜ್ಜಾ, ಮೇದಸ್ಸು, ಚರ್ಮದ ಕವಚದೊಂದಿಗೆ ಜ್ಞಾನದ ತನುವಾಗಿ ಹೊರ ಬಂದಿದೆ. ನೋಡುವ, ಕೇಳುವ, ಮೂಸಿಸುವ , ಸ್ಪರ್ಶಿಸುವ, ರುಚಿಸುವ ಜ್ಞಾನವನ್ನು ಉದಕ ತನುವಿನ ಗರ್ಭದಲ್ಲಿಯೇ ಪಡೆದಿದೆ.

ಪ್ರಸಾದ : ಶಬ್ದ ರೂಪ ರುಚಿ ಸ್ಪರ್ಶ ವಾಸನೆ ತನುವಿಗೆ ಪ್ರಸಾದವಾಗಬೇಕು. ಜ್ಞಾನ ಶಿಕ್ಷಣ ಪಡೆಯದಿದ್ದರೆ ಇದು ಸಾಧ್ಯವಾಗುವುದಿಲ್ಲ. ಕೈಕೇಯಿಯ ಎರಡು ಶಬ್ದಗಳು ಶ್ರೀರಾಮನನ್ನು ವನವಾಸಕ್ಕೆ ಅಟ್ಟಿದವು. ಸುಖಕ್ಕಾಗಿ ನುಡಿದ ಕೈಕೇಯಿಗೂ ಸಮಾಧಾನ ತರಲಿಲ್ಲ. ದ್ರೌಪದಿಯ ಒಂದು ಶಬ್ದದಿಂದ ಹದಿನೆಂಟು ಅಕ್ಷೋಹಿಣಿ ಸೈನ್ಯ ಸತ್ತು ಹೋಯಿತು. ಮಹಾಭಾರತ ಸೃಷ್ಟಿಯಾಯಿತು. ಶಬ್ದ ತನುವಿಗೆ ಪ್ರಸಾದವಾಗಲಿಲ್ಲ. ಇದನ್ನು ಗುರು ವಿವರಿಸುತ್ತಾನೆ. ಅಂಗದಲ್ಲಿದ್ದ ಲಿಂಗ ಶಕ್ತಿ ಮನಕ್ಕೆ ಪರಿಚಯವಾದರೆ ಮನವೇ ಮಹಾದೇವನಾಗುತ್ತದೆ.

ವಿಭೂತಿ : ಅಂಗಕ್ಕೆ ಅರಿವಾದರೆ ಅಂಗವದು ವಿಭೂತಿ. ಅರಿವಾಗದಿದ್ದರೆ ಸೆಗಣಿ. ಸೆಗಣಿ ಒಣಗಿದರೆ ಕುರುಳಾಗುತ್ತದೆ. ಸುಟ್ಟರೆ ವಿಭೂತಿಯಾಗುತ್ತದೆ. ವಿಭೂತಿಯಲ್ಲಿ ಸೆಗಣಿಯಿಲ್ಲ. ಸೆಗಣಿಯಲ್ಲಿ ವಿಭೂತಿಯಿದೆ. ಒಣಗಿ ಕುರುಳಾಗಬೇಕು. ಕುರುಳಿನಲ್ಲಿ ಅಗ್ನಿಯೂ ಇದೆ; ಅದಕ್ಕೆ ತಾಗಿ ಉರಿದು ಭಸ್ಮವಾಗಬೇಕು. ಅಜ್ಞಾನದ ಅಂಗ ವಿಭೂತಿ ಯಾಗಲು ಶುದ್ಧವಾಗಬೇಕು.

ರುದ್ರಾಕ್ಷಿ : ಅಂಗದ ಕಣಕಣದಲ್ಲಿಯೂ ಅರಿವಿನ ಕಣ್ಣಿದೆ. ಅದು ಮನಕ್ಕೆ ಪರಿಚಯವಾಗಬೇಕು.

ಮಂತ್ರ : ಆಷ್ಟಾವರ್ಣದ ಜ್ಞಾನವನ್ನು ಪಡೆಯಲು ಮನ ಅಂಗದೊಂದಿಗೆ ಸನ್ನದ್ಧವಾಗಬೇಕು. ಹಗಲಿರುಳೆನ್ನದೆ ಮನ ಜ್ಞಾನಕ್ಕಾಗಿ ಹಪಹಪಿಸಬೇಕು. ಆ ಜ್ಞಾನದ ಸುಖದಲ್ಲಿ ಮೈಮರೆತು ಓಲಾಡಬೇಕು. '' ಅಷ್ಟ ವಿಧಾರ್ಚನೆ ಷೋಡಶೋಪಚಾರವ ಅಂದಂದಿನ ಕೃತ್ಯವ ಅಂದಂದಿಗೆ ಮಾಡಿ ಆನು ಶುದ್ಧನಯ್ಯಾ '' ಎಂದಿದ್ದಾರೆ ಬಸವಣ್ಣನವರು.

ಶಿವನ ಪಾದವ ಹೊಂದುವುದೆ ಚೆಂದ : ಶಿವನ ಪಾದವೆಂದರೆ ಅರಿವೆಂಬ ಗುರುವಿನ ಪಾದ. ಅರಿವೇ ಗುರು. ಆ ಗುರುದೇವನೇ ಮಹಾದೇವ. ಆ ಮಹಾದೇವನೇ ಸದಾಶಿವ. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮ. ಅಂಗದಲ್ಲಿ ಭರಿತವಾಗಿರುವ ಅರಿವಿನಪಾದ ಹೊಂದುವುದೇ ಶಿವನ ಪಾದ. ಇದು ಬಲುಚೆಂದ. ಈ ಮಾರ್ಗ ಹೆಂಡಿರು ಮಕ್ಕಳು ಕೂಡಿಯೇ ಆಚರಿಸಬೇಕು. ಇದು ಅರಿವಿನ ಮಾರ್ಗ. ಇದು ಬಿಟ್ಟು ಹೆಂಡಿರು ಮಕ್ಕಳು ಸಂಪತ್ತೆಂದು ತಾನೇ ತಿಂದು, ನೆಲದಲ್ಲಿ ಹುಗಿದು, ತಾನು ಯಾರೆಂದು ತಿಳಿಯದೆ ಯಮನ ಕೈಯಲ್ಲಿ ಸಿಕ್ಕು ಬದುಕಿದ್ದಾಗಲೇ ನರಕ ಕೊಂಡದಲ್ಲಿ ಮುಳುಗೇಳುವುದು ನಿಶ್ಚಿತ. ಇಂತಹ ಅಂದಗೇಡಿಗಳ ಮುಖವನ್ನು ಅಂಗದೊಳಗಿದ್ದೂ ನೋಡ ಲಾರನಯ್ಯಾನಮ್ಮ ಅಂಬಿಗರ ಚೌಡಯ್ಯ ನಿಜಶರಣನು

**4**

**ಅಂದ ಭಂದವ ಬಿಟ್ಟು, ಮಂಡೆ ಬೋಳಾದ ಮತ್ತೆ**
**ಅಂಗಕ್ಕೆ ಭಂದ ಅಲಂಕಾರವುಂಟೆ ?**
**ತಮ್ಮಂಗದ ಸಂಗವನರಿಯದೆ ಲಿಂಗಸಂಗಿ ಎಂಬ**
**ಭಂಡರನೇನೆಂಬೆನೆಂದನಂಬಿಗ ಚೌಡಯ್ಯ.**

ಅರಿವೆ ಅಂಗಕ್ಕೆ ಭಂದ. ಅದು ಅಭರಣವೂ ಕೂಡಾ. ಅಜ್ಞಾನದಿಂದ ಬೋಳಾದ ಅಂಗಕ್ಕೆ ಮತ್ತೆ ಮಂಡೆ ಬೋಳಿಸಿ ಅಲಂಕಾರ ಮಾಡುವುದು ಶೋಭೆಯೆ ?

ಅಂಗದ ಸಂಗಕ್ಕೆಂದು ಅರಿವು ಸದಾ ಸಿದ್ಧವಾಗಿದೆ. ಅದು ಸರ್ವಾಂಗದಲ್ಲಿ ಸಂಬಂಧ ಬೆಳೆಸಿ ಲಿಂಗಾಂಗವಾಗಿದೆ. ಇಂತಹ ಅರಿವಿನ ಲಿಂಗದ ಅಂಗಕ್ಕೆ ಲಿಂಗಸಂಗಿ, ಲಿಂಗಾಯತ, ಲಿಂಗವಂತ, ಲಿಂಗಧಾರಿ ಎಂಬ ಹೆಸರಿನಿಂದ ಕರೆಯಬಹುದೆ ?

ಜಗದಲ್ಲಿರುವ ಅಂಗಗಳೆಲ್ಲ ಅರಿವು ಧರಿಸಿದ ಲಿಂಗಾಂಗಗಳೆ ಆಗಿರುವಾಗ ಅದನು ನೋಡದ ಅಜ್ಞಾನದ ಭಂಡರನು ಏನೆಂದು ಕರೆಯಬೇಕು ? ಅಂಗದ ಜ್ಞಾನವನು ಅಂಗಕ್ಕೆ ಆವರಿಸಿದ ಮನ ಬಳಕೆ ಮಾಡದಿದ್ದರೆ ಆ ಮರ್ಕಟ ಭಂಡ ಮನವನು ಏನೆಂದು ಕರೆಯಬೇಕು.ಅಜ್ಞಾನದ ಮಡುವಿನಲ್ಲಿ ಬಿದ್ದು ಈಜಿ ದಡ ಸೇರದ ಮನ. ಈಜಲು ಬಾರದ ಭಂಡ ಮನ.

5

**ಅಂದಾದಿಬಿಂದುವಿನೊಳೊಂದಿದ ಹುಟ್ಟು,**
**ಆ ಹುಟ್ಟನೆ ಹಿಡಿದು ಅಂದ ಚೆಂದದಲ್ಲಿ ತೊಳಸಿ ಆಡುತ್ತೈದಾರೆ ಜಗವೆಲ್ಲಾ!**
**ಅಂದಗೆಟ್ಟವರೆಲ್ಲಾ ಬಂದೇರಿ ಹರುಗೋಲ,**
**ಒಂದೆ ಹುಟ್ಟಿನಲ್ಲಿಳುಹುವೆನೆಂದಾತನಂಬಿಗ ಚೌಡಯ್ಯ.**

ಬಯಲು ಬಯಲನೇ ಬಿತ್ತಿ, ಬಯಲು ಬಯಲನೇ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ಬಯಲು ಜೀವನ ಬಯಲು ಭಾವನೆ ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ಗುಹೇಶ್ವರಾ ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು.

ಬಯಲ ಬಿಂದುವೇ ಜಲಜನಕ ಹಾಗೂ ಆಮ್ಲಜನಕದ ಬಿಂದುಗಳನ್ನು ಕೂಡಿಸಿ, ಅದರಲ್ಲಿ ತಾನು ಭರಿತವಾಗಿ ಜೀವ ಜಲಬಿಂದುವನ್ನಾಗಿಸಿ, ಗರ್ಭಹೊಕ್ಕು ಅರಿವಿನ ಕಾಯವಾಗಿ ಜನ್ಮ ತಳೆದಿದೆ. ಆ ಹುಟ್ಟನ್ನೆ ಹಿಡಿದ ಕಾಯ ರಾಜನಾಗಿ ರಾಣಿಯಾಗಿ ಪ್ರಧಾನಿ ಸೇನಾಧಿಪತಿ ಸೈನಿಕನಾಗಿ ಪ್ರಜೆಯಾಗಿ ಗುರುವಾಗಿ ಶಿಷ್ಯನಾಗಿ, ಕಳ್ಳ ಬಂದಿಕಾರ ಚೌಂಡಾಲನಾಗಿ, ಹೆಣ್ಣಾಗಿ ಗಂಡಾಗಿ ದಾನಿಯಾಗಿ ಭಿಕ್ಷುಕನಾಗಿ ಧನಿಕನಾಗಿ ಬಡವನಾಗಿ ಆ ಹುಟ್ಟನೇ ಹಿಡಿದು ಅಂದ ಚೆಂದದಲ್ಲಿ ತೊಳಸಿ ಆಡುತ್ತಿದೆ ಜಗವೆಲ್ಲಾ!

ಒಮ್ಮೆ ಸುಖಿಸಿ, ಮತ್ತೊಮ್ಮೆ ದುಃಖ ಸಾಗರದಲ್ಲಿ ಮುಳುಗಿ ಏಳುತ್ತಾ ಬೀಳುತ್ತಾ, ಬಂದ ಕಾಯಕವನ್ನು ಅರಿಯದೆ, ಬದುಕುವ ಕಾಯಕವನ್ನು ಅರಸುತ್ತಾ ಕಾಯ ಒಮ್ಮೆ ಇಲ್ಲವಾಗುತ್ತದೆ.

ಕಾಯ ಕೈಲಾಸವಾಗುವುದನ್ನೇ ಮರೆತಿದೆ. ತಾನು ಬಯಲ ಬೀಜದಿಂದ ಬಂದ ಬಯಲವೃಕ್ಷವೆನ್ನುವುದನ್ನೇ ಮರೆತಿದೆ. ಬಯಲು ಏನನ್ನೂ ಹಿಡಿದಿಲ್ಲ. ಬಯಲೇ ಎಲ್ಲವನ್ನೂ ಸೃಷ್ಟಿ ಮಾಡಿದೆ. ಸೃಷ್ಟಿ ಮಾಡಿದ ಸಕಲ ವಸ್ತುಗಳನ್ನು ಅಂದರೆ ಭೂಮಿ ಜಲ ಅಗ್ನಿ ವಾಯು ಆಕಾಶ ಕಾಯಗಳನ್ನು ಕೂಡಾ ಬಯಲು ತನ್ನ ಗರ್ಭದಲ್ಲಿಟ್ಟುಕೊಂಡು ಪೋಷಣೆ ಮಾಡುತ್ತಲಿದೆ.

ಬಯಲ ಬೀಜದಿಂದ ಜನ್ಮ ತಳೆದ ಬಯಲ ವೃಕ್ಷವನ್ನೇ ಕಾಯವೆಂದು ಕರೆಯಲಾಗಿದೆ. ಇದು ಮರುಜವಣಿಯ ಫಲ ಬಿಡುವ ಮಹಾವೃಕ್ಷ. ಈ ವೃಕ್ಷವನ್ನು ಬುದ್ಧ ಬೋಧೀ ವೃಕ್ಷವೆಂದು ಕರೆದ. ಶರಣರು ಈ ಕಾಯವನ್ನು ಬೇರಿಲ್ಲದ ಮರವೆಂದರು. ಕಾಯವೇ ಕೈಲಾಸವೆಂದು ಕರೆದರು. ಕೈಲಾಸದಿಂದ ಬಂದ ಕಾಯ ಬಂದ ಜಾಗವನ್ನೇ ಮರೆತು ಸುಖ ದುಃಖಗಳಿಂದ ಬಳಲುತ್ತಲಿದೆ. ಸುಖ ಸುಖವಲ್ಲ, ದುಃಖ ದುಃಖವಲ್ಲ, ಸುಖ ದುಃಖಗಳನ್ನು ಅರಿವಿನಿಂದ ಕೊಡವಿಕೊಂಡು ಕೈಲಾಸಕ್ಕೆ ಹೋಗುವ ಕಾಯಕದಲ್ಲಿ ತೊಡಗಿದರೆ ಸಾಕು ಬಂದ ದಾರಿ ಅನುಭವಕ್ಕೆ ಬರುತ್ತದೆ.

ಬಂದ ದಾರಿಗೆ ಸುಂಕವಿಲ್ಲವೆಂದು ಅಂದಗೆಟ್ಟ ಕಾಯಗಳು ಬಂದು ಅರಿವಿನ ಹರುಗೋಲಲ್ಲಿ ಕುಳಿತರೆ ಸಾಕು ಒಂದೇ ಹುಟ್ಟಿನಲ್ಲಿ ಕಾಯವನ್ನು ಕೈಲಾಸದಲ್ಲಿ ಇಳುಹುವೆನು ಎಂದು ಅಂಬಿಗರ ಚೌಡಯ್ಯ ಸ್ಪಷ್ಟವಾಗಿ ನುಡಿದಿದ್ದಾರೆ.

6

**ಅಂಬಿಗ ಅಂಬಿಗ ಎಂದು ಕುಂದ ನುಡಿಯದಿರು,**
**ನಂಬಿದರೆ ಒಂದೇ ಹುಟ್ಟಲಿ**
**ಕಡೆಯ ಹಾಯಿಸುವನಂಬಿಗರ ಚೌಡಯ್ಯ**

ಅಂಬಿಗನೆಂದರೆ ಸಾಮಾನ್ಯನೆ ? ಈಜಲು ಬಾರದ ಅಜ್ಞಾನಿ ಅಂಗಗಳನ್ನು ಅರಿವಿನ ದೋಣಿಯಲ್ಲಿ ಕೂಡಿಸಿಕೊಂಡು ನಿರಾಯಾಸವಾಗಿ ಪಾರು ಮಾಡಿ ದಡ ಮುಟ್ಟಿಸುವ ಮಹಾಜ್ಞಾನಿ ! ಅರಿವಿನ ಯೋಧ ! ಎಂದೆಂದೂ ಕುಂದುಂಟು ಮಾಡದವನನ್ನು ನಂಬದಿದ್ದರೆ ಹೇಗೆ ? ಅರಿವಿನ ನವನಿಧಿಯನ್ನು ಅರಿಯದೆ ದೂರ ಮಾಡುವುದೆ ?

ಕುಂದ : ಕುಬೇರನ ನವನಿಧಿಗಳಲ್ಲಿ ಒಂದು. ಕುಂದ , ನೀಲ, ಮುಕುಂದ, ಕಚ್ಛಪ, ಮಹಾಪದ್ಮ, ಪದ್ಮ, ಶಂಕ, ಮಕರ, ವರ. ಅಂಬಿಗ ನವನಿಧಿಗಳ ಕುಬೇರ, ಮಲ್ಲಿಗೆಯ ಹೂವಿನಂತೆ ಸದಾ ಅರಿವಿನ ಪರಿಮಳ ಬೀರುವ ಮಹಾಜ್ಞಾನಿ ! ಇಂತಹ ಅಂಬಿಗನನ್ನು ಕುಂದನೆಂದು ಅರಿಯದೆ ಅಂಬಿಗ ಅಂಬಿಗ ಎಂದು ನುಡಿಯುವುದೆ ?

ಅಂಗವು ನವನಿಧಿಗಳ ಅರಿವಿನ ಮಹಾಲಿಂಗ ! ಎರಡು ಕಣ್ಣುಗಳು, ಮೂಗಿನ ಎರಡು ಹೊರಳೆಗಳು, ಎರಡು ಕಿವಿಗಳು, ನುಡಿಮುತ್ತ ಚೆಲ್ಲುವ ಬಾಯಿ,ಅರಿವಿನ ತನುವಿಗೆ ಜನ್ಮ ನೀಡುವ ಜನನಾಂಗ, ಉಂಡ ಪ್ರಸಾದವನು ಗರಗರನೆ ತಿರುಗಿಸಿ ಮತ್ತೊಂದು ಜೀವಕ್ಕೆ ಅಮೃತ ಚೆಲ್ಲುವ ಗುದದ್ವಾರ ಇವು ಕುಬೇರನ ನವನಿಧಿಯಲ್ಲದೆ ಮತ್ತೇನು ?

ಸತ್ಯ ನೋಟದ ಪರಮಾನಂದ ಸವಿಯುವ ಕಂಗಳು ಅರಿವಿನ ಬ್ರಹ್ಮನುಡಿಯ ನಾಲಿಸುವ ಕಿವಿಗಳು. ಅರಿವಿನ ಪರಿಮಳವನು ಆಸ್ವಾದಿಸುವ ಮೂಗು ನೋಡಿದುದನ್ನು, ಕೇಳಿದುದನ್ನು, ಮೂಸಿಸಿ ಆನಂದದಿಂದ ನುಡಿಯುವ ಬಾಯಿ. ಇಂತಹ ನವರತ್ನಗಳುಳ್ಳ ಮನ ಅರಿಯದೆ ಅಂಬಿಗ ಅಂಬಿಗ ಎಂದು ಅಜ್ಞಾನದಿಂದ ನುಡಿಯುತ್ತದೆ.

**ನಂಬಿ ನುಡಿದರೆ ಓ ಎನ್ನನೇ ಶಿವನು ? ಒಂದೆ ಹುಟ್ಟಲಿ ಕಡೆಯ ಹಾಯಿಸುವನು ಅಂಬಿಗರ ಚೌಡಯ್ಯ :**

ನಿಜಶರಣ ಅಂಬಿಗರ ಚೌಡಯ್ಯನವರು ಮಹಾಜ್ಞಾನಿಗಳು. ಪಂಡಿತನಾದವನು ಶಬ್ದಗಳನ್ನು ಲೀಲಾಜಾಲವಾಗಿ ಬಳಸಿ ತನುವಿನ ಮನ ರಂಜಿಸಬಹುದು. ಆದರೆ ಶರಣರು ಹಾಗಲ್ಲ; ಅವರನ್ನು ನಂಬಿದರೆ ಒಂದೇ ಹುಟ್ಟಲಿ ಮನವೆಂಬ ಮರ್ಕಟವನು ಸಾಯಿಸಿ ಕಡೆಯ ಹಾಯಿಸುವರು.

ತನು ಅರಿವಿನ ಮಹಾದೋಣಿ. ನಿಜಶರಣ ಅಂಬಿಗರ ಚೌಡಯ್ಯನೇ ಅದರ ಚಾಲಕ. ಈತ ಬುದ್ಧನೂ ಹೌದು. ಮಹಾವೀರನೂ ಹೌದು. ತನ್ನನ್ನು ಅಜ್ಞಾನದಿಂದ ಪಾರು ಮಾಡುವ ಅಂಬಿಗನೆಂದು ಮನ ಅರಿತರೆ ಒಂದೇ ಹುಟ್ಟಲಿ ಕಡೆಯ ಹಾದು ಮಹಾದೇವನಾಗುವುದು.

7

**ಅಂಬಿಗನು ಜಗದೊಳಗೆ ಇಂಬಿಲೋಲಾಡುವನು ;**
**ತುಂಬಿದ ಸಾಗರದೊಳಗೆ ನೋಡಯ್ಯ.**
**ನಿಂದ ದೋಣಿಯನೇರಿದಂದಿನ ಹುಟ್ಟ**
**ಕಂಡವರಂದವನರಿದಾತ ತೊಳಸುತ್ತಿದ್ದನು.**
**ಛಂದಗೆಟ್ಟವರೆಲ್ಲಾ ಬಂದೇರಿ ದೋಣಿಯನು**
**ಶಿವನೊಂದೆ ಠಾವಿಗೊಯ್ದಿಳುಹುವೆನೆಂದನಂಬಿಗ ಚೌಡಯ್ಯ .**

ತಿಳಿದರೆ ಜಗವೆಲ್ಲ ಸುಂದರ. ಮನಕ್ಕೆ ತಿಳಿಯದಿದ್ದರೆ ಜಗವೆಲ್ಲಾ ಅಜ್ಞಾನದ ಸಾಗರ. ಅದನ್ನು ದಾಟುವುದು ಅಷ್ಟು ಸುಲಭವಲ್ಲ. ಅಜ್ಞಾನ ಸಾಗರವನ್ನು ಪಾರು ಮಾಡುವ ಅಂಬಿಗನು ಅಂಗದ ಕಣ ಕಣದಲ್ಲಿ ತನ್ಮಯವಾಗಿ ಬೆರೆತಿದ್ದಾನೆ. ಅಂಗವನ್ನು ಆವರಿಸಿದ ಮನ, ಅವನನ್ನು ತಿಳಿದರೆ ಸಾಕು ಅಂಗದೊಂದಿಗೆ ದೋಣಿ ಮಾಡಿ, ತುಂಬಿದ ಸಾಗರದೊಳಗೆ ಇಂಬಿನಲಿ ಓಲಾಡುತ್ತಾ ಸುಂದರವಾಗಿ ವಿಹರಿಸುವನು.

ಛಂದಗೆಟ್ಟ ಅಂಗಗಳು ದೋಣಿಗೆ ಬಂದೇರಿದರೆ ಅದರ ಹುಟ್ಟ ತೊಳ ತೊಳದು ಶಿವನ ಠಾವಿಗೆ ಒಯ್ದು ಇಳುಹುವನು. ಶಿವನೆನ್ನುವವನು ಬೇರಿಲ್ಲ. ಶಿವನ ದಾರಿಯೂ ಬೇರಿಲ್ಲ. ಅರಿವು ಅಂಗದಲ್ಲಿ ತನ್ಮಯವಾಗಿದೆ. ಮನ ಅಂಗವನ್ನು ಆವರಿಸಿದೆ.

ಅರಿವೆ ಗುರು. ಗುರುದೇವನೆ ಮಹಾದೇವನು. ಮಹಾದೇವನೆ ಸದಾಶಿವನು. ಸದಾಶಿವನೇ ಸಾಕ್ಷಾತ್ ಪರಬ್ರಹ್ಮನು. ಮನ, ಅರಿವೆಂಬ ಗುರುದೇವನಿಂದ ಭ್ರಮೆ ಬಿಡಿಸಿಕೊಂಡರೆ ಅದೇ ಬ್ರಹ್ಮನಾಗುವುದು. ಆ ಗುರುದೇವನಿಂದಲೇ ಶಿವನ ಠಾವನು ಅರಿಯುವುದು.

'' ಮಡಕೆಯ ಮಾಡುವಡೆ ಮಣ್ಣೆ ಮೊದಲು ; ತೊಡುಗೆಯ ಮಾಡುವಡೆ ಹೊನ್ನೆ ಮೊದಲು ; ಶಿವಪಥವನು ಅರಿವಡೆ ಗುರುಪಥವೆ ಮೊದಲು,ಕೂಡಲ ಸಂಗಮದೇವಾ ''

ಮಣ್ಣಿನಿಂದ ಮಡಕೆ ಹೂಜಿ ಮುಚ್ಚಳ ಪೊಡಗ ಹರವಿಯನ್ನು ಮಾಡಬಹುದು. ಶಿವ ಪಾರ್ವತಿ ಗಣೇಶ ಗೌರಿದೇವಿಯನ್ನು , ಕ್ರಿಸ್ತ ಬುದ್ಧ ಬಸವಣ್ಣ ಅಂಬೇಡ್ಕರರನ್ನೂ ಮಾಡಬಹುದು. ಮಣ್ಣು ನೋಡಿದ ಕಣ್ಣಿಗೆ ಯಾವ ರೋಗವಿಲ್ಲ. ಮೂರ್ತಿ ನೋಡಿದರೆ ದೇವರು ಎನ್ನುವ ರೋಗ , ಜಗಳ,ಯುದ್ಧ ! ನನ್ನ ದೇವರು ಅವನ ದೇವರು ಎನ್ನುವ ಕಲಹ.

ಮಣ್ಣು ಎಷ್ಟೊಂದು ಸುಂದರ ; ಸಹಜ ! ಹಿಂದು ಮುಸಲ್ಮಾನ ಕ್ರೈಸ್ತನು ಕೂಡಾ ಯಾವ ರೋಗವಿಲ್ಲದಂತೆ ಮಣ್ಣು ನೋಡುತ್ತಾನೆ. ಕಲಾವಿದ ಮಣ್ಣಿನಿಂದ ಮಾಡಿದ ಮೂರ್ತಿ ನೋಡಿದರೆ ಕಣ್ಣಿಗೆ ರೋಗ ಬರುತ್ತದೆ ಎಂದರೆ ಅದು ಯಾರ ದೋಷ ? ಮಣ್ಣಿನ ದೋಷವೋ, ಕಲಾವಿದನ ದೋಷವೋ, ಮೂರ್ತಿಯ ದೋಷವೋ, ಕಣ್ಣಿನ ದೋಷವೋ? ಈ ರೋಗ ಹಚ್ಚಿಕೊಂಡ ಛಂದಗೇಡಿ ಕಣ್ಣುಗಳನ್ನು ಯಾರು ಪಾರು ಮಾಡಬೇಕು ? ಮಣ್ಣು ನೋಡಿ ಸುಮ್ಮನಾಗುವ ಸುಂದರವಾದ ಕಣ್ಣು ಕಣ್ಣಿನಲ್ಲಿಯೇ ಇದೆ. ಮಣ್ಣಿನಿಂದಲೇ ಮಾಡಿದ ಮೂರ್ತಿ ನೋಡಿ ದೇವರೆಂದು ಭ್ರಮಿಸುವ ಕಣ್ಣು ಕಣ್ಣಿನಲ್ಲಿಯೇ ಇದೆ.

ಮೂರ್ತಿಯೊಳಗೂ ಮಣ್ಣು ನೋಡಿದ ಕಣ್ಣು; ಅದು ಮಹಾಜ್ಞಾನದ ಕಣ್ಣು, ಅಂಬಿಗನ ಕಣ್ಣು, ಜಗದೊಳಗೆ ಇಂಬಿನಲಿ ಓಲಾಡುವ ಕಣ್ಣು ! ಅಜ್ಞಾನದ ಸಾಗರದಲ್ಲಿ ಜ್ಞಾನ ದೋಣಿಯನೇರಿ, ಇಂಬಿನಲಿ ಓಲಾಡುತ್ತ , ಶಿವನ ಠಾವಿಗೆ ಒಯ್ದು ಇಳುಹುವ ಕಣ್ಣು.

ಶಿವನ ಠಾವು ಎಂದರೆ ಅರಿವಿನ ಹಾಳೆ ; ರಜತ ಪರದೆ ! ಅದರ ಮೇಲೆ ಎಷ್ಟೊಂದು ಚಿತ್ರಗಳು ಬಂದು ಹೋದರೂ ಅದು ಪುನಃ ಬೆಳ್ಳಗೆ ಕಾಣುತ್ತದೆ. ಯುದ್ಧ, ರಕ್ತಪಾತ, ಭೋರ್ಗರೆವ ಮಳೆ, ಕತ್ತಿಯ ಹಿರಿತ, ಬಾಂಬುಗಳ ದಾಳಿ, ಬೆಂಕಿ ಕೆನ್ನಾಲಿಗೆಗಳು-ರಜತ ಪರದೆಯ ಮೇಲೆ ಕಂಡರೂ ಒಂಚೂರೂ ಕಲೆಯಿಲ್ಲ. ಕತ್ತಿಯಿಂದ ಹರಿಯುವುದಿಲ್ಲ; ನೀರಿನಿಂದ ತೋಯುವುದಿಲ್ಲ ; ಬೆಂಕಿಯಿಂದ ಸುಡುವುದಿಲ್ಲ. ಇಂತಹ ಶಿವ ಜಗದ ಕಣ್ಣುಗಳಲೆಲ್ಲ ಭರಿತನಾಗಿದ್ದಾನೆ. ಛಂದಗೆಟ್ಟವರೆಲ್ಲ ಬಂದು ದೋಣಿಯನು ಏರಿದರೆ ಶಿವನ ಠಾವಿಗೆ ಒಯ್ದು ಇಳುಹುವೆನು ಎಂದಿದ್ದಾರೆ ನಿಜ ಶರಣ ಚೌಡಯ್ಯ .

8

**ಅಂಬಿನ ಹಿಳಿಕಿನಲ್ಲಿ ಕಟ್ಟಿದ ವಿಹಂಗನ ಗರಿಯಂತೆ,**
**ತಾಗುವ ಮೊನೆಗಾಧಾರವಾಗಿ ದೂರ ಎಯಿದುವುದಕೆ**
**ಸಾಗಿಸುವ ಗುಣ ತಾನಾಗಿ.**
**ಕ್ರೀ ಅರಿವಿನ ಭೇದದ ನೆರಿಗೆಯ ಕಾಬನ್ನಕ್ಕ,**
**ಅರಿವು ಕುರುಹು ಎರಡು ಬೇಕೆಂದನಂಬಿಗ ಚೌಡಯ್ಯ .**

ಬಾಣದ ಹಿಂದೆ ಕಟ್ಟಿದ ಗರಿ, ತಾಗುವ ಮೊನೆಗೆ ಆಧಾರವಾಗಿ ಬಹು ದೂರದ ಎತ್ತರಕ್ಕೆ ಹಾರುವ ಗುಣ ಹೊಂದಿದೆ. ಬಾಣಕ್ಕೆ ಗರಿ ಆಧಾರ. ಅರಿವು ಮತ್ತು ಕ್ರಿಯೆಯ ಭೇದವನು ಅಂಗದ ನೆರಿಗೆಯಲ್ಲಿಯೇ ಕಾಣಬೇಕಾಗಿದೆ. ಅರಿವು ತಿಳಿಯಲು ಕುರುಹು ಬೇಕು.

ಅಂಗವೆಂಬ ಮಹಾಲಿಂಗವೇ ಅರಿವಿನ ಕುರುಹು. ಅಂಗದ ಮೇಲೆ ಧರಿಸಿದ ಕುರುಹು ಮಹಾಲಿಂಗವನು ಅರಿಯದು. ಅಂಗದ ಕಣಕಣದಲ್ಲಿ ಸಂಗಮವಾದ ಅರಿವೆಂಬ ಮಹಾಜ್ಞಾನವನು ಅಂಗವೆಂಬ ಕುರುಹಿನಿಂದಲೇ ತಿಳಿಯಬೇಕು. ಹಕ್ಕಿ ಆಕಾಶಕ್ಕೆ ನೆಗೆಯಲು ಗರಿ ಬೇಕೆಬೇಕು. ಹಕ್ಕಿಗೆ ಗರಿ ಆಧಾರ, ಬಾಣಕ್ಕೆ ಹಕ್ಕಿಯ ಗರಿ ಆಧಾರ. ಅರಿವು ತಿಳಿಯಲು ಕುರುಹು ಆಧಾರ.

ಅರಿವಿಲ್ಲದೆ ಕುರುಹಿಲ್ಲ; ಕುರುಹಿಲ್ಲದೆ ಅರಿವಿಲ್ಲ. ಅರಿವು ಕುರುಹು ಎರಡು ಬೇಕೆಂದ ನಂಬಿಗ ಚೌಡಯ್ಯ .

9

**ಅಖಂಡಪರಿಪೂರ್ಣ ನುಡಿಗೆಡೆಯಿಲ್ಲದ, ಎಡೆಗೆ ಕಡೆಯಿಲ್ಲದ,**
**ಏಕೋಭರಿತ ಲಿಂಗವು ತಾನಾಗಿದ್ದ ಬಳಿಕ,**
**ಮತ್ತೆ ಲಿಂಗವು ಹೋಯಿತ್ತು , ಇದ್ದಿತ್ತೆಂದಾಡಿಕೊಂಡ**
**ಸೂತಕದ ಯೋಗಿಭ್ರಮಿತರ ಮಾತ ಕೇಳಲಾಗದು,**
**ಅದಂತಿರಲಿ, ಅದು ಎಂತಿದ್ದುದಂತೆ,**
**ಅದಕ್ಕೆ ಕ್ರೀಯಿಲ್ಲ, ನಿಃಕ್ರಿಯೆ ಒಡಲು ಆಯಿತ್ತಾಗಿ.**
**ಅದನಂತಿಂತೆಂದು ದೂಷಿಸಿ ನುಡಿವ ಅನಾಚಾರಿಗಳಿಗೆ**
**ಲಿಂಗವೆಲ್ಲಿಯದೊ ? ನಿಜವೆಲ್ಲಿಯದೊ ?**
**ಅವರು ಲಿಂಗಕ್ಕೆ ದೂರ,**
**ಅವರು ತಮ್ಮ ತಾವರಿಯದೆ ಕೆಟ್ಟರೆಂದಾತನಂಬಿಗ ಚೌಡಯ್ಯ .**

ಅಖಂಡ ಪರಿಪೂರ್ಣ ನುಡಿಗೆ ಎಡೆಗೊಡದ, ಎಡೆಗೆ ಕಡೆಯಿಲ್ಲದಂತೆ, ಏಕೋ ಭರಿತ ಅಖಂಡ ಲಿಂಗವು ತಾನಾಗಿದ್ದ ಬಳಿಕ ಮತ್ತೆ ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಹೋಯಿತ್ತು, ಇದ್ದಿತ್ತು ಎಂದು ಸೂತಕದ ಮಾತು ಆಡಿಕೊಳ್ಳುವ ಭ್ರಮಿತರ ಮಾತ ಕೇಳಲಾಗದು.

ಕ್ರಿಯೆ ಇಲ್ಲದ ಲಿಂಗ. ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗಕ್ಕೆ ಒಡಲೇ ನೀಕ್ರಿಯೆ ಆಗಿತ್ತು . ಒಡಲೊಳಗಿದ್ದು, ಒಡಲಿಂಗೆ ಆಧಾರವಾಗಿ, ಒಡಲ ಸೋಂಕದೆ ಒಡಲು ಬೆಳಗುವ

ಲಿಂಗವನ್ನು ಅಂತಿಂತೆಂದು ದೂಷಿಸಿ ನುಡಿವ ಅನಾಚಾರಿಗೆ ಅರಿವಿನ ಮಹಾಲಿಂಗವೆಲ್ಲಿಯದೊ ? ನಿಜವನು ಅರಿಯದವರಿಗೆ ಲಿಂಗ ಬಲು ದೂರ.

ಅಂಗದ ಮೇಲೆ ಧರಿಸಿಕೊಂಡ ಲಿಂಗವೆಂದರೆ ಪಾಷಾಣವೆಂದು ತಿಳಿಯರು ; ಅಂಗದಲ್ಲಿಯೇ ಸಂಗಮವಾದ ಅಖಂಡ ಪರಿಪೂರ್ಣ, ನುಡಿಗೆ ಎಡೆಗೊಡದಂತೆ ನುಡಿಯಿಲ್ಲದ ನುಡಿಯಿಂದ ನುಡಿದು ಹೇಳುವ ಲಿಂಗವನು ತಿಳಿಯರು. ಎರೆದರೆ ನೆನೆಯದ ಮರೆತರೆ ಬಾಡದ ಲಿಂಗವನು ಪೂಜಿಸಿದರೆ ಫಲವಿಲ್ಲ. ಎರೆದರೆ ನೆನೆಯುವ ಮರೆತರೆ ಬಾಡುವ ಮಹಾಲಿಂಗದ ಅಂಗವನ್ನು ಅರಿಯದಿದ್ದ ಅಂಗವದು ರಕ್ಕಸ ಅಂಗ. ಅದು ತನ್ನ ತಾನರಿಯದೆ ಕೆಟ್ಟ ಅಂಗವೆಂದಾತನು ಅಂಬಿಗ ಚೌಡಯ್ಯ .

**10**

**ಅಗ್ನಿ ದಿಟವೆಂದಡೆ ತಾ ಹುಸಿ, ಕಾಷ್ಠವಿಲ್ಲದೆ.**
**ಕಾಷ್ಠದಲ್ಲಿ ಅಡಗಿ ಸುಡದಿಪ್ಪ ಭೇದವನರಿತಡೆ,**
**ಪ್ರಾಣಲಿಂಗಿಯೆಂದೆಂಬೆನೆಂದನಂಬಿಗ ಚೌಡಯ್ಯ .**

ವಿಜ್ಞಾನಿ ಭೌತಿಕ ವಸ್ತು ತಿಳಿಯುವ ಸೂತ್ರ ನೀಡಿದರೆ, ಜ್ಞಾನಿ ತನ್ನನ್ನು ತಿಳಿಯುವ ಸೂತ್ರ ನೀಡುತ್ತಾನೆ. ಒಂದು ವಸ್ತುವನ್ನು ಭೇದಿಸಲು ವಿಜ್ಞಾನಿ ಆಯುಷ್ಯ ಕಳೆಯುತ್ತಾನೆ. ಆಗ ಒಂದು ವಸ್ತುವಿನ ಪರಿಚಯವಾಗುತ್ತದೆ. ಅದರ ಸೂತ್ರ ಬರೆದಿಡುತ್ತಾನೆ.

ಜ್ಞಾನಿಗೆ ತನ್ನನ್ನು ತಿಳಿಯುವ ತವಕ. ಎಲ್ಲ ವಸ್ತುಗಳು ತನ್ನಿಂದ ತಿಳಿಸಿಕೊಳ್ಳುತ್ತವೆ. ಅದಕ್ಕಾಗಿ ಭೌತಿಕ ವಸ್ತುವನ್ನು ತಿಳಿಯಲು ಹೋಗುವುದಿಲ್ಲ. ತನ್ನನ್ನು ತಿಳಿಯುತ್ತಾನೆ. ಆಗ ಎಲ್ಲ ವಸ್ತುಗಳು ತನ್ನ ಅರಿವಿಗೆ ಬರುತ್ತವೆ. ಅವುಗಳನ್ನು ಕ್ಷಣಾರ್ಧದಲ್ಲಿ ಭೇದಿಸುತ್ತಾನೆ.

ಅಂಬಿಗರ ಚೌಡಯ್ಯನವರು ಮಹಾಜ್ಞಾನಿ. ಅಗ್ನಿಯನ್ನು ಹೆಸರಿಸಿ ಅದು ಕಟ್ಟಿಗೆಯಲ್ಲಿ ಅಡಗಿದ ಭೇದವನು ಬಿಡಿಸಿದ್ದಾರೆ. ಸುಡದಂತೆ ಕಟ್ಟಿಗೆಯಲ್ಲಿ ಅಡಗಿದ ಸುಳಿವನ್ನು ನೀಡಿದ್ದಾರೆ.

ಅಗ್ನಿ ನೋಡಲು ತೋರುವುದಿಲ್ಲ. ಕಟ್ಟಿಗೆಯೊಂದಿಗೆ ಬೆರೆತ ಅಗ್ನಿ ಘರ್ಷಿಸಿದಾಗ ಸುಡುವುದರ ಮೂಲಕ ತೋರುವುದು. ಅಗ್ನಿ ಜಲಜನಕದೊಂದಿಗೆ ನೀರಲಿ ಬೆರೆತು ಮರಕ್ಕೆ ಪೋಷಣೆ ನೀಡಿತು. ಮೈತುಂಬ ಹಸಿರಾಗಿ ಕಣ್ಮನ ಸೆಳೆಯಿತು. ಹೂವಾಗಿ, ಕಾಯಾಗಿ, ಹಣ್ಣಾಗಿ ಸರ್ವಜೀವ ಕುಲಕ್ಕೂ ಹಿತವಾಯಿತು. ಬೀಜದಲಿ ಹುದುಗಿ ಸಸಿ ಯಾಗಿ ಪುನಃ ಮರವಾಗಲು ಕಾರಣವಾಯಿತು.

ಮರದಲ್ಲಿ ಸುಡದಂತೆ ಅಡಗಿದ ಅಗ್ನಿ ಮನುಷ್ಯನನ್ನು ಸುಡುವಂತೆ ಮಾಡುತ್ತದೆ. ದೇಹದ ನರನಾಡಿಗಳು ಬಿರಿಯುವಂತೆ ಮಾಡುತ್ತದೆ. ಮಾತಿನಲಿ ಅಡಗಿ ಮಾತು ಬಡಿದಾಗ ಅರಳುವಂತೆ ಕೆರಳುವಂತೆ ಮಾಡುತ್ತದೆ.

ಅಗ್ನಿ ಮರದಲ್ಲಿ, ಕಾಷ್ಠದಲ್ಲಿ, ಹೂವಿನಲ್ಲಿ, ಹಣ್ಣಿನಲ್ಲಿ ಅಡಗಿ ಹಿತವನ್ನುಂಟು ಮಾಡಿದೆ. ಅದರಂತೆ ದೇಹದಲ್ಲಿ ಅಡಗಿದ ಭೇದವನು ಸಹಜವಾಗಿ ಅರಿಯಲು ಬಾರದಿದ್ದರೆ, ಮಾತು ತನುವನ್ನು ಸುಡದೆ ಬಿಡುವುದಿಲ್ಲ.

ಅಂಗದಲ್ಲಿ ಅಡಗಿದ ಪ್ರಾಣ, ಅಂಗ-ಪ್ರಾಣದಲ್ಲಿ ಅಡಗಿದ ಅರಿವನ್ನು (ಲಿಂಗ) ಭೇದಿಸಲು ಅರಿಯದಿದ್ದೊಡೆ ಮಾತು ಅರಿವಾಗುವುದಿಲ್ಲ. ಮಾತು ಜ್ಞಾನವಾಗುವುದಿಲ್ಲ. ಬದಲಾಗಿ ಮಾತು

ಪ್ರಳಯವಾಗುತ್ತದೆ . ಮಾತಿನಿಂದ ರಕ್ತದ ಕಾಲುವೆ ಹರಿಯುತ್ತದೆ. ಮಾತಿನಿಂದ ಯುದ್ಧಗಳಾಗುತ್ತವೆ. ಒಮ್ಮೆ ಆಡಿದ ಮಾತು ತನುವನ್ನು ಅರಳಿಸುತ್ತದೆ. ಮತ್ತೊಮ್ಮೆ ಅದೇ ಮಾತು ಕೆರಳಿಸುತ್ತದೆ. ಪ್ರಾಣಕ್ಕೆ ಪ್ರಾಣಲಿಂಗಿಯಾಗಬೇಕಾದ ಮಾತು ಪ್ರಾಣಕ್ಕೆ ಕುತ್ತಾಗುತ್ತದೆ. ಕಾಯದಿಂದ ಬಂದ ಮಾತು ಕಾಯಕ್ಕೆ ಕುತ್ತು ! ಕಾಷ್ಠದಿಂದ ಹೊರ ಬಂದ ಅಗ್ನಿಯಿಂದ ಕಾಷ್ಠಕ್ಕೆ ಕುತ್ತು ! ಮಾತೇ ಭ್ರಮೆ, ತಿಳಿದರೆ ಮಾತೇ ಬ್ರಹ್ಮ,! ಮಾತು ಸುಡದಿಪ್ಪ ಭೇದವನರಿತಾಗ ಮಾತ್ರ .

11

**ಅಜಾತನನೊಲಿಸದೊಡೆ ಅದೇತರ ಮಂತ್ರ, ಅದೇತರ ಆಗಮ ಹೇಳಿರೋ ,**
**ಆಚಾರ್ಯ ಕೊಟ್ಟ ಸಲಾಕಿ ಯಾತರಲ್ಲಿ ನಚ್ಚುವಿರಿ ?**
**ಅದಾವ ಮುಖದಲ್ಲಿ ಲಿಂಗ ಬಂದಿಪ್ಪುದು ?**
**ರೂಪಿಲ್ಲದಾತ ನಿಮ್ಮ ಮಾತಿಂಗೆ ಬಂದಡೆ,**
**ಅದೇತರ ಮಾತೆಂದನಂಬಿಗ ಚೌಡಯ್ಯ .**

ಅಂಗವೆಂಬುದು ಅರಿವಿನ ಲಿಂಗ. ಅದಕ್ಕೆ ಹುಟ್ಟು ಸಾವುಗಳಿಲ್ಲ . ಹುಟ್ಟೇ ಇಲ್ಲದಾತ ಹುಟ್ಟಿನೊಂದಿಗೆ ತನ್ನ ಲೀಲೆಯನು ಮೆರೆಯಲು ಹೊರಬಂದು ಲಿಂಗಾಂಗದೊಂದಿಗೆ ಸಂಗಮವಾಗಿದ್ದಾನೆ. ಆಗಮ ಉಪನಿಷತ್ತುಗಳನ್ನು, ಭಗವದ್ಗೀತೆ ಬೈಬಲ್‌ಗಳನ್ನು ಅಂಗದ ಮೂಲಕ ಹೊರಚೆಲ್ಲಿ ಬೆಳಕಿನ ಕೋಲ್ಮಿಂಚಿನೊಂದಿಗೆ ಅಂಗದಲ್ಲಿಯೇ ಹುಡುಕಲು ಸುಳುಹು ಕೊಟ್ಟಿದ್ದಾನೆ. ಇಂತಹ ಅಜಾತನೆ ಅಂಗದ ನೆರವಿಗಿದ್ದಾಗ ಅದೇತರ ಮಂತ್ರ , ಅದೇತರ ಆಗಮ ?

ಆಚಾರ್ಯ ವೇಷದ ಅಂಗ ಮತ್ತೊಂದು ಅಂಗಕ್ಕೆ ವೇಷದ ಬಟ್ಟೆ, ಬೆತ್ತವನು ಕೊಟ್ಟು ಅರಿವನ್ನು ಹುಡುಕಲು ಹೇಳಬಹುದೆ ? ಸರ್ವಾಂಗವೇ ಅರಿವಿನ ಲಿಂಗಾಂಗವಾಗಿರುವಾಗ ಅದಾವ ಮುಖದಲ್ಲಿ ಲಿಂಗ ಕಾಣುವುದು ? ಪೂಜಿಸುವ ಲಿಂಗ ಲಿಂಗವೆ ? ಅದು ಎರೆದರೆ ನೆನೆಯುವುದಿಲ್ಲ, ಮರೆತರೆ ಬಾಡುವುದಿಲ್ಲ. ಮನ ಅರಿವಿನಲ್ಲಿ ಲೀನವಾಗಿ ಲಿಂಗದಲ್ಲಿ ಸಂಗಮವಾದುದೇ ಲಿಂಗ. ಇದು ಎರೆದರೆ ನೆನೆಯುತ್ತದೆ ; ಮರೆತರೆ ಬಾಡುತ್ತದೆ. ಅರಿವಿನಿಂದ ನೋಡುತ್ತದೆ. ಅರಿವಿನಿಂದ ಕೇಳುತ್ತದೆ. ಅರಿವಿನಿಂದ ಮೂಸಿಸಿ, ರುಚಿಸಿ, ಸ್ಪರ್ಶಿಸುತ್ತದೆ. ಈ ಐದೂ ಗುಣಗಳನ್ನು ಅರಿವಿನಿಂದ ಕಳೆದುಕೊಂಡು ನಿರ್ಗುಣಿಯಾದ ಅಂಗವೇ ಲಿಂಗ !

ಕಣ್ಣಿನ ಮೂಲಕ ಅರಿವಿನ ದೃಶ್ಯವಾಗಿ ಬಂದಿದೆ. ಕಿವಿಯ ಮೂಲಕ ಅರಿವಿನ ಶಬ್ದವಾಗಿ ಬಂದಿದೆ. ಮೂಗಿನ ಮೂಲಕ ಅರಿವಿನ ಪರಿಮಳವಾಗಿ ಬಂದಿದೆ. ಚರ್ಮದ ಮೂಲಕ ಅರಿವಿನ ಸ್ಪರ್ಶವಾಗಿ ಬಂದಿದೆ. ನಾಲಗೆಯ ಮೂಲಕ ಅರಿವಿನ ರುಚಿಯಾಗಿ ಬಂದಿದೆ. ಈ ಐದೂ ಮುಖದಿಂದ ಬಂದ ಲಿಂಗವೆಂಬ ಅರಿವು ಒಂದಂಗದಿಂದ ಮಾತ್ರ ಬಂದದ್ದಲ್ಲವೆ ? ಇದು ರೂಪಿಲ್ಲದ್ದು ರೂಪಿಗೂ ಮಾತಿಗೂ ಬಂದಿದೆ.

ರೂಪಿಲ್ಲದಾತ ರೂಪಿನೊಂದಿಗೆ ಮಾತಲ್ಲದ ಮಾತನಾಡಲು ಬಂದಡೆ, ಅದೇತರ ಮಂತ್ರ , ಅದೇತರ ಚಿತ್ತ , ಯಾತರಲ್ಲಿ ನಚ್ಚುವಿರಿ ನೀವು ?

ಕಣ್ಣ ನಿರೂಪದ ಅರಿವಿನ ಬೆಳಕು ರೂಪದ ಮೇಲೆ ಬಿದ್ದರೆ ಅದು ರೂಪಲ್ಲ , ನಿರೂಪು ! ಸೂರ್ಯನ ಬೆಳಕು ಎಲ್ಲೆಡೆ ಚೆಲ್ಲುತ್ತದೆ. ಸಕಲ ವಸ್ತುಗಳನ್ನು ಬೆಳಗುತ್ತದೆ. ಯಾವ ವಸ್ತುವನ್ನು ಕೂಡಾ

ಬೆಳಕು ನನಗೆ ಬೇಕೆಂದು ಬಾಚಿ ಕೊಳ್ಳುವುದಿಲ್ಲ. ತನಗೆ ಬೇಕೆಂದು ಬೆಳಗುವುದಿಲ್ಲ, ಬೇಡವೆಂದು ಬೆಳಗದೇ ಇರುವುದಿಲ್ಲ, ವಸ್ತುಗಳನ್ನು ಬೆಳಗುವುದು ಬೆಳಕಿನ ಸೂರ್ಯಗ್ರಹದ ಕೆಲಸ ; ಅದು ಜಡ !

ನಿರೂಪದ ಕಣ್ಣು ಹಾಗಲ್ಲ. ಸೂರ್ಯ ಬೆಳಗಿದ ವಸ್ತುಗಳನ್ನು ಅರಿವಿನ ಸತ್ಯದಿಂದ ಬೆಳಗುತ್ತದೆ. ಉದಾ: ಹೇಮದ ಮೇಲೆ ಬಿದ್ದ ಅರಿವಿನ ಬೆಳಕು ಲೋಹದ ಬಣ್ಣ ನೋಡಿ ಆನಂದ ಪಡುತ್ತದೆ. ಹೂವಿನ ಸೌಂದರ್ಯ ಅದರ ಪರಿಮಳವನ್ನು ಆಸ್ವಾದಿಸುತ್ತದೆ . ಲೋಹ ಮುಟ್ಟುವುದಿಲ್ಲ, ಹೂ ಕೀಳುವುದಿಲ್ಲ !

ಜಲಬಿಂದು ಗಟ್ಟಿಯಾಗಿ ಮಣ್ಣಾಯಿತು, ಲೋಹವಾಯಿತು, ಹಲವಾರು ಬಣ್ಣಗಳಿಂದ ಥಳಥಳನೆ ಹೊಳೆಯಿತು. ಜಲಹರಿದು ಸಸಿಯಾಗಿ, ಹೂ ಅರಳಿತು; ಸುಗಂಧದ ಪರಿಮಳ ಹರಡಿತು, ಜಲಬಿಂದು ನೋಡಲು ಕಾಣುತ್ತದೆ. ಸ್ಪರ್ಶಕ್ಕೆ ನಿಲುಕುತ್ತದೆ. ಆದರೆ ಜಲಬಿಂದು ಕೂಡಾ ಜಲಬಿಂದುವಲ್ಲ. ಜಲಜನಕ, ಆಮ್ಲಜನಕ ಬೆರೆತು ಜಲವಾಯಿತು. ಜಲಜನಕ ಆಮ್ಲಜನಕಗಳೆರಡೂ ಕಾಣುವುದಿಲ್ಲ. ಇವೆರಡರ ವಾಸ ಬಯಲಲ್ಲಿ. ಬಯಲು ತನಗೆ ಬೇಕಾದಾಗ ಇವೆರಡನ್ನೂ ಹಿಡಿದು ಬಂಧಿಸಿ, ಅದರಲ್ಲಿ ತಾನು ಬೆರೆತು ಜಲಬಿಂದುವಾಗುತ್ತದೆ. ಸಸಿಯ ಬೀಜದಲ್ಲಿ ಹೊಕ್ಕು ಹೂವಾಗಿ ಅರಳುತ್ತದೆ. ಅಂಗದ ಗರ್ಭದಲ್ಲಿ ಹೊಕ್ಕು ಅರಿವಿನ ಲಿಂಗಾಂಗವಾಗಿ ಅರಳುತ್ತದೆ.

ಪ್ರಾಣಿ ಪಶು ಪಕ್ಷಿ ಜಲಚರ ಉರಗ ಗಿಡ ಮರ ಬಳ್ಳಿ ಸಸ್ಯವರ್ಗಗಳಿಗೆ ಬಯಲ ಬೀಜವೇ ಮೂಲ. ''ಬಯಲು ಬಯಲನೆ ಬಿತ್ತಿ ,ಬಯಲು ಬಯಲನೇ ಬೆಳೆದು ಬಯಲು ಬಯಲಾಗಿ ಬಯಲಾಯಿತ್ತಯ್ಯಾ, ಬಯಲು ಜೀವನ ಬಯಲು ಭಾವನೆ, ಬಯಲು ಬಯಲಾಗಿ ಬಯಲಾಯಿತ್ತಯ್ಯಾ, ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರ '' ಇದು ಅಲ್ಲಮಪ್ರಭುಗಳ ಅರಿವಿನ ಸೂತ್ರ , ಇದನ್ನು ಅರಿವಿನಿಂದ ನಂಬಿದ ಅಂಬಿಗರ ಚೌಡಯ್ಯ ಶರಣರು ರೂಪಿಲ್ಲದಾತ ನಿಮ್ಮ ಮಾತಿಂಗೆ ಬಂದಡೆ, ಅದೇತರ ಮಾತೆಂದನಂಬಿಗ ಚೌಡಯ್ಯ ಎಂದಿದ್ದಾರೆ.

ತನುವಿನಿಂದ ಹೊರ ಬರುವ ಪ್ರತಿಯೊಂದು ಮಾತು ಕೂಡಾ ಬಯಲ ಬೀಜದ ಪ್ರಸಾದ. ಅದರಲ್ಲಿ ಅರಿವಿದೆ. ತನುವನ್ನು ಆವರಿಸಿದ ಕತ್ತಲೆಂಬ ಮನ, ಮಾತು ಸ್ವೀಕರಿಸುವುದರಿಂದ ತನುವನ್ನು ಸುಖ ದುಃಖಗಳಿಗೆ ಈಡು ಮಾಡುತ್ತದೆ. ಮಾತಿನಲ್ಲಿ ಅರಳಿಸುವ ಕೆರಳಿಸುವ ಶಕ್ತಿಯಿಲ್ಲ ; ಕೇವಲ ಅರಿವಿದೆ. ಅದನ್ನು ತನು ಮಾತ್ರ ತಿಳಿಯಬಲ್ಲದು. ಆದರೆ ಅರಿವು ತನುವಿನಲ್ಲಿಯೇ ತನ್ಮಯವಾಗಿ,ತನುವನ್ನು ಆವರಿಸಿದ ಮನ ಮಾತು ಸ್ವೀಕರಿಸಿ, ಅರಿವಿನ ತನುವಿಗೆ ಸುಖ ದುಃಖಗಳ ರಸಾಯನ ಲೇಪಿಸುತ್ತದೆ.

ಉದಾ ಃ ಕತ್ತೆ ಎನ್ನುವ ಮಾತು ಅರಿವಿನಿಂದ ತುಂಬಿದೆ. ಅದು ಕತ್ತೆಯಲ್ಲ. ಜಲ ಬಿಂದು ಗರ್ಭ ಹೊಕ್ಕು ಹೊರಬಂದ ಪ್ರಾಣಿಯನ್ನು ತನು ಗುರುತಿಸುವುದಕ್ಕಾಗಿ ಕತ್ತೆ ಎಂದು ನಾಮಕರಣ ಮಾಡಿದೆ. ಕತ್ತೆ ಕತ್ತೆಯಲ್ಲ. ತನು ಕತ್ತೆ ಎಂದು ಕರೆದರೆ ರಕ್ತ ಕುದಿಯುತ್ತದೆ. ಕಣ್ಣು ಕೆಂಡ ಕಾರುತ್ತವೆ. ರೋಮ ರೋಮಗಳಲ್ಲಿ ದ್ವೇಷದ ಕಿಡಿ ಚಿಮ್ಮಿ ಧ್ವನಿ ಗದ್ಗದಿತವಾಗುತ್ತದೆ. ಒಂದು ದೇಶದ ರಾಜ ಮತ್ತೊಂದು ದೇಶದ ರಾಜನಿಗೆ ಕತ್ತೆ ಎಂದರೆ ಎರಡೂ ದೇಶದ ಜನರ ರುಂಡಗಳು ಉರುಳಿ ಬೀಳುತ್ತವೆ. ರಕ್ತದ ಕಾಲುವೆ ಹರಿಯುತ್ತದೆ. ಸು-ಶಬ್ದವೂ, ಕು-ಶಬ್ದವೂ ಶಬ್ದದಲ್ಲಿ ಅಡಗಿದೆ ಎಂದು ಮನಕ್ಕೆ ತಿಳಿಯುವುದಿಲ್ಲ.

ರೂಪಿಲ್ಲದ ಅರಿವಿನ ಜಲಬಿಂದು ಗರ್ಭದಲ್ಲಿ ಹೊಕ್ಕು, ತನು ಜನ್ಮ ತಳೆದಿದೆ. ತನುವಿನ ಕಣಕಣದಲ್ಲಿ ಅರಿವು ತನ್ಮಯವಾಗಿದೆ.

**ರೂಪಿಲ್ಲದಾತ ನಿಮ್ಮ ಮಾತಿಂಗೆ ಬಂದಡೆ ಅದೇತರ ಮಾತೆಂದನಂಬಿಗ ಚೌಡಯ್ಯ** : ಕತ್ತೆ ಎಂದರೆ ಕತ್ತೆಯೂ ಕತ್ತೆಯಲ್ಲ ; ಶಬ್ದ ಕೇಳಿದ ತನು ಕೂಡಾ ಕತ್ತೆಯಲ್ಲ. ಕತ್ತೆಗೂ ತನುವಿಗೂ ಜನ್ಮ ನೀಡಿದ ಜಲಬಿಂದುವೊಂದೆ. ಇವೆರಡೂ ಅಜಾತನ ಬಯಲಬಿಂದುವಿನಿಂದ ಜನ್ಮ ಪಡೆದಿವೆ. ತನುವಿಗೆ ತಿಳಿದು ಆನಂದ ಪಡುವ ಶಕ್ತಿ ಇದೆ. ಕತ್ತೆಗೆ ಇಲ್ಲ. ಆದರೂ ಕತ್ತೆಗೆ ಕತ್ತೆ ಎಂದರೆ ಸಿಟ್ಟು ಬರುವುದಿಲ್ಲ, ಒದೆಯುವುದಿಲ್ಲ, ಕಡಿಯುವುದಿಲ್ಲ. ಕತ್ತೆಯೂ ಕತ್ತೆಯಲ್ಲ ; ತನುವೂ ಕತ್ತೆಯಲ್ಲ. ಇವೆರಡೂ ರೂಪಿಲ್ಲದ ಅಜಾತನ ಕುಡಿಗಳು. ಹೀಗೆಂದು ತಿಳಿಯುವ ಅರಿವಿನ ಸತ್ಯ ತನುವಿನಲ್ಲಿ ಮಾತ್ರ ತನ್ಮಯವಾಗಿದೆ. ತನುವನ್ನು ಮನ ಆವರಿಸಿದ್ದರಿಂದ ತನುವಿಗೆ ಸಂಕಟ. ಮನ ಅರಿವನ್ನು ಆರಾಧಿಸಿದರೆ ಸಾಕು ಅದು ಅಂಬಿಗನಾಗಿ ಘನಮನವಾಗಿ ಸಾಗರದಂತಿರುವ ಅಜ್ಞಾನದ ಸಂಕಟದಿಂದ ತನುವನ್ನು ಪಾರು ಮಾಡುವುದು.

**12**

**ಅಡವಿಯ ತೊಪ್ಪಲ ತರತರ ತಂದು ತಿಂದು**
**ಒಡಲ ದಂಡಿಸಿಕೊಂಡು,**
**ಪಡೆ, ಗವಿಯೊಳಗೆ ತಪಸ್ಸಿದ್ದೇವೆಯೆಂದು**
**ಕಡು ಹೆಮ್ಮೆಯಲ್ಲಿ ನುಡಿವ ಅಣ್ಣಗಳು ನೀವು ಕೇಳಿರೋ.**
**ಷಡುರಸಂಗಳು ಹುಟ್ಟಿದವು ಶಿವನ ಕರುಣರಸದಲ್ಲಿ,**
**ಆ ರುಚಿಗಳ ಸುಖಮಂ ಪಡೆವುದಕ್ಕೆ**
**ಹೊನ್ನು ಹೆಣ್ಣು ಮಣ್ಣೆಂಬ ತ್ರಿವಿಧ ಪದಾರ್ಥವ ಹಿಡಿದ ಭಕ್ತನ ಮನೆಯಲ್ಲಿ**
**ಗುರುಲಿಂಗಜಂಗಮಕ್ಕೆ ನೀಡಿ ಮಾಡುವ**
**ಭಕ್ತಿ ಪದಾರ್ಥವಾದ ಷಡುರುಚಿಯ ಕೊಂಬುದಕ್ಕೆ**
**ನಿಮ್ಮಲ್ಲಿಯೆ ಷಡ್ವಿಧಲಿಂಗಂಗಳುಂಟು.**
**ಅವ ನೋಡಿ ಎಚ್ಚತ್ತು ಸವಿಸವಿದರ್ಪಿಸಬಲ್ಲಡೆ ಮಹಾಮಹಿಮ,**
**ತಾನೇನ ಮಾಡಲು ಜಡನಲ್ಲ, ಅಜಡನು ತಾನೆಂದಾತನಂಬಿಗರ ಚೌಡಯ್ಯ .**

ಒಡಲೊಳಗಿದ್ದು ಒಡಲ ಸೋಂಕದೆ ಒಡಲ ಬೆಳಗುವ ಒಡಲೊಡೆಯ, ಒಡಲ ದಂಡಿಸಿಕೊಂಡು ಅಡವಿಯ ತೊಪ್ಪಲ ತಿಂದರೆ ಒಲಿಯುವವನಲ್ಲ. ಗವಿಯೊಳಗೆ ಕುಳಿತು ತಪಸ್ಸು ಮಾಡಿದರೂ ಒಲಿಯುವವನಲ್ಲ. ಅಂಗದಲ್ಲಿ ಹುಟ್ಟುವ ಅರಿಷಡ್ವರ್ಗಂಗಳ ಹಿಂದೆಯೇ ಅರಿವಿನ ಷಡ್‌ರಸಗಳೂ ಭರಿತವಾಗಿವೆ.

ಅಂಗದಲ್ಲಿಯೇ ಸಂಗಮವಾದ ಗುರುಲಿಂಗ ಜಂಗಮರು ಹೊನ್ನು ಹೆಣ್ಣು ಮಣ್ಣೆಂಬ ಜಗಕ್ಕಿಕ್ಕಿದ ವಿಧಿಯನ್ನು ನುಂಗಬಲ್ಲ ಸಮರ್ಥರು. ಅಂಗವನ್ನು ಆವರಿಸಿದ ಮನ, ಹೊನ್ನು , ಹೆಣ್ಣು ಮಣ್ಣೆಂಬ ತ್ರಿವಿಧ ಪದಾರ್ಥವನು ಗುರು ಲಿಂಗ ಜಂಗಮಕ್ಕೆ ನೀಡಿದರೆ ಪ್ರಸಾದದಂತೆ ಸ್ವೀಕರಿಸುವರು ಷಡ್‌ರಸದ ಅರಿವಿನ ರುಚಿಯನು ಅಂಗಕ್ಕೆ ನೀಡುವರು. ಅಂಗ ಜಡವಲ್ಲ; ಅದು ಅಜಡ

ಲಿಂಗಾಂಗವೆಂದು ನಂಬಿಗೆಯ ಅಂಬಿನಿಂದ ಹೊಡೆದು ಜಗಕ್ಕೆ ಸಿದ್ಧಪಡಿಸುವರು.

**13**

**ಅಡವಿಯ ಹೊಗಿಸಿತ್ತು , ಹುಡುಕುನೀರಲದ್ದಿತ್ತು,**
**ಜಡಗಟ್ಟಿ ಭಸ್ಮವ ತೊಡೆಸಿತ್ತು , ಉಡೆವುಚ್ಚುಗೊಳಿಸಿತ್ತು ,**
**ಹಿಡಿದೊತ್ತಿ ಕೇಶವ ಕೀಳಿಸಿತ್ತು , ಪಡಿಪುಚ್ಚಗೊಳಿಸಿತ್ತು ಊರೊಳಗೆಲ್ಲ.**
**ಈ ಬೆಡಗಿನ ಮಾಯೆಯ**
**ಬಡಿಹಾರಿ ಸಮಯಿಗಳ ನುಡಿಗೆ**
**ನಾಚುವೆನೆಂದನಂಬಿಗ ಚೌಡಯ್ಯ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಪತ್ತನ್ನು ಅಂಗ ಪಡೆಯುವುದಕ್ಕಾಗಿ ಅಂಗವನ್ನು ಆವರಿಸಿದ ಮನವೆಂಬ ಮಾಯೆ ತಾನಿದ್ದ ಅಂಗವನ್ನೇ ಮಂಗವನ್ನಾಗಿಸಿದೆ. ಜಡೆಬಿಟ್ಟು ಕಾಶಾಯ ಹೊದ್ದು ಅಡವಿಯನ್ನು ಹೊಗಿಸಿ ಜಪತಪಗಳನ್ನು ಮಾಡಲು ಹಚ್ಚಿದೆ. ಜಡೆಗಟ್ಟಿ ಭಸ್ಮವನ್ನು ಲೇಪಿಸಿಕೊಂಡಿದೆ. ಮಂಡೆಯನ್ನು ಬೋಳಿಸಿ ಕೌಪೀನ ಹೊದ್ದು ಸನ್ಯಾಸಿಯನ್ನಾಗಿಸಿದೆ.

ಗುರುವಾಗಿಸಿದೆ, ಗುರುವಿಗೆ ಶಿಷ್ಯನನ್ನಾಗಿಸಿದೆ. ಆಶ್ರಯ ಮಠ ಮಂದಿರಗಳನ್ನು ನಿರ್ಮಿಸಿ ಚರ್ಚ್ ಮಸೀದಿಗಳನ್ನು ನಿರ್ಮಿಸಿ ಅಲ್ಲಿಯೇ ಹೋಗಿ ಪ್ರಾರ್ಥಿಸಲು ಹಚ್ಚಿದೆ. ಹಿಂದು ಮುಸಲ್ಮಾನ ಕ್ರೈಸ್ತ ಬೌದ್ಧ ಧರ್ಮಿಯನ್ನಾಗಿಸಿ, ಕಾಯವನ್ನೇ ಆವರಿಸಿದ ಮಾಯೆ ಕಾಯವನ್ನೇ ಯಾಮಾರಿಸಿದೆ.

ಕಾಯ ಹೆಣ್ಣು ಅಲ್ಲ, ಗಂಡೂ ಅಲ್ಲ. ಆದರೂ ಹೆಣ್ಣು ಗಂಡೆಂಬ ಪಾಪ ಪುಣ್ಯಬೆಂಬ ಅಜ್ಞಾನ ಹೇರಿಕೊಂಡು ಕಾಯದಲ್ಲಿಯೇ ಸಂಗಮವಾದ ಜ್ಞಾನದಿಂದ ಕಾಯವೇ ವಂಚನೆಗೆ ಒಳಗಾಗಿದೆ.

ಕಾಯವನ್ನು ಆವರಿಸಿದ ಬೆಡಗಿನ ಮಾಯೆಯನ್ನು ಕಳೆಯಲು ಯಾರಿಗೂ ಸಾಧ್ಯವಿಲ್ಲ. ಕಾಯದಲ್ಲಿಯೇ ಸಂಗಮವಾದ ಅರಿವಿನ ಸಂಪತ್ತನ್ನು ಅನ್ಯ ಕಾಯದಿಂದ ಪಡೆಯುವಂತಿಲ್ಲ. ಕಾಯದಲ್ಲಿ ಸಂಗಮವಾದ ಅರಿವಿನ ಸಂಪತ್ತನ್ನು ಕಾಯವನ್ನು ಆವರಿಸಿದ ಮನವೆಂಬ ಮಾಯೆಯಿಂದಲೇ ಪಡೆದು ನಿರ್ಮಾಯಿಯಾಗಬೇಕು.

ಜಪತಪಗಳಿಗೆ ಯಜ್ಞ ಯಾಗ ಹೋಮಗಳಿಗೆ ಮಾಯೆ ಕರಗುವುದಿಲ್ಲ. ಕಾಯವನ್ನು ಆವರಿಸಿದ ಮಾಯೆಗೆ, ಕಾಯದಲ್ಲಿಯೇ ಸಂಗಮವಾದ ಅರಿವಿನ ರುಚಿ ಗೊತ್ತಾಗಬೇಕು. ಆಗ ಕಾಯವೇ ಕೈಲಾಸವಾಗುವುದು.

**14**

**ಅಡವಿಯೊಳಗರಸುವಡೆ ಸಿಡಿಗಂಟಿ ತಾನಲ್ಲ.**
**ಮಡುವಿನೊಳಗರಸುವಡೆ ಮತ್ಸ್ಯ ಮಂಡೂಕನಲ್ಲ.**
**ತಪಂಬಡುವಡೆ ವೇಷಕ್ಕೆ ವೇಳೆಯಿಲ್ಲ.**
**ಒಡಲ ದಂಡಿಸುವಡೆ ಕೊಡುವ ಸಾಲಿಗನಲ್ಲ.**
**ಅಷ್ಟ ತನುವಿನೊಳಗಡೆ ಹುದುಗಿರ್ಪ ಲಿಂಗವ**
**ನಿಲುಕಿ ನೋಡಿಯೆ ಕಂಡ ನಂಬಿಗರ ಚೌಡಯ್ಯ .**

ಮುಕ್ತಿ ಮೋಕ್ಷ ಸ್ವರ್ಗ ಪ್ರಾಪ್ತಿಗಾಗಿ ಮನುಷ್ಯ ನಾನಾ ವಿಧದ ಆಚರಣೆಗಳನ್ನು ಸೃಷ್ಟಿಸಿಕೊಂಡಿದ್ದಾನೆ. ಸಂಕಟಗಳನ್ನು ಒಡ್ಡಿಕೊಂಡಿದ್ದಾನೆ. ಜೊತೆಗೆ ಮುಕ್ತಿ ಪ್ರಾಪ್ತಿಗಾಗಿ ಬೋಧಿಸುವ ವ್ಯವಹಾರಿಕ ಗುರುಗಳೂ ಸೃಷ್ಟಿಯಾಗಿದ್ದಾರೆ. ಧ್ಯಾನ ಧಾರಣ-ಯೋಗ ಮುಂತಾದ ಕ್ರಿಯೆಗಳ ಮೂಲಕ, ಜಪ-ತಪ ಅನುಷ್ಠಾನ ಮುಂತಾದ ಸಾಧನೆಗಳ ಮೂಲಕ ಮುಕ್ತಿ ಪಡೆಯಬಹುದೆಂದು ಹೇಳಿ ಹಣ-ಆಭರಣ-ಭೂಮಿ ಕಬಳಿಸುವ ವ್ಯವಹಾರಕ್ಕೇನೂ ಈ ನೆಲದಲ್ಲಿ ಕಮ್ಮಿಯಿಲ್ಲದಷ್ಟು ಗುರುವರ್ಗದ ಜನ ಸಿಕ್ಕುತ್ತಾರೆ.

**ಅಡವಿಯೊಳಗರಸುವಡೆ ಸಿಡಿಗಂಟಿ ತಾನಲ್ಲ :**

ತಾನು ಯಾವುದಾದರೂ ವಸ್ತುಗಳಿಂದ ಬಂಧಿಸಲ್ಪಟ್ಟಿದ್ದರೆ ಅವುಗಳಿಂದ ಮುಕ್ತಿ ಪಡೆಯಬಹುದು. ಇಲ್ಲದ ಮುಕ್ತಿ ಮೋಕ್ಷಕ್ಕಾಗಿ ಅಡವಿಯೊಳಗೆ ಘೋರಾರಣ್ಯದಲ್ಲಿ ಹುಡುಕುವುದೇ? ಹಾಗೆ ಹುಡುಕಲು ತಾನೇನೂ ಸಿಡಿಗಂಟಿಯೇ?

**ಮಡುವಿನೊಳಗರಸುವಡೆ ಮತ್ಸ್ಯ ಮಂಡೂಕನಲ್ಲ :**

ಮುಕ್ತಿ ಮೋಕ್ಷಕ್ಕಾಗಿ ಹರಿಯುವ ನದಿ, ಕೆರೆ ಕುಂಟೆ ಮಡುವಿನಲ್ಲಿ ಹುಡುಕಲು ತಾನೇನು ಮೀನು ಕಪ್ಪೆಯೆ?

**ತಪಂಬಡುವಡೆ ವೇಷಕ್ಕೆ ವೇಳೆಯಿಲ್ಲ :**

ಜಪ-ತಪ ಮಾಡಿ ವೇಷ ಹಾಕಿಕೊಂಡು ವ್ಯರ್ಥ ತನುವಿನ ಸಮಯ ಕಳಿಯುವುದು ತರವಲ್ಲ. ಕಳೆದ ವೇಳೆ ವ್ಯಕ್ತವಾಗುವುದಲ್ಲದೇ ಮತ್ತೇನು ದೊರೆಯುವುದೂ ಇಲ್ಲ. ತನುವಿನ ವೇಷ ಧರಿಸಿದ ಅರಿವು ತನುವಿನಲ್ಲಿಯೇ ಮರೆಯಾಗಿದೆ.

**ಒಡಲ ದಂಡಿಸುವಡೆ ಕೊಡುವ ಸಾಲಿಗನಲ್ಲ:**

ಮುಕ್ತಿ ಮೋಕ್ಷಕ್ಕಾಗಿ ಒಂಟಿ ಕಾಲ ಮೇಲೆ ತಪ ಮಾಡಿ ದೀಡನಮಸ್ಕಾರ, ಪ್ರದಕ್ಷಿಣೆ ಹಾಕಿ, ಅನುಷ್ಠಾನ ಜಪ-ತಪ ಉಪವಾಸ ಮಾಡಿ, ವರ ಪಡೆಯಲು ಅವನೇನು ಸಾಲಿಗನೇ? ನಿನ್ನ ಮುಂದೆ ಬಂದು ಪ್ರತ್ಯಕ್ಷನಾಗಿ ವರ ಕೊಡಲು?

**ಅಷ್ಟ ತನುವಿನೊಳಗಡೆ ಹುದುಗಿರ್ಪ ಲಿಂಗವ ನಿಲುಕಿ ನೋಡಿಯೆ ಕಂಡ ನಂಬಿಗರ ಚೌಡಯ್ಯ :**

ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಸೂರ್ಯ, ಚಂದ್ರ, ಜೀವಾತ್ಮ ಎನ್ನುವ ಎಂಟು ವಸ್ತುಗಳಿಂದಾದ ತನುವಿನಲ್ಲಿ ತನ್ಮಯವಾಗಿ ಅಡಗಿದ್ದ ಅರಿವೆ ಆ ಲಿಂಗ. ಅಷ್ಟ ತನುವನ್ನು ಸ್ಥೂಲ, ಸೂಕ್ಷ್ಮ, ಕಾರಣ, ನಿರ್ಮಲ, ಆನಂದ, ಚಿನ್ಮಯ, ಚಿದ್ರೂಪ, ಶುದ್ಧ ಎಂದು ವಿಗಡಿಸಬಹುದು.

ಸ್ಥೂಲ ತನು : ಭೂಮಿ ನೀರು ತತ್ವ ಪ್ರಧಾನವಾದುದು.

ಸೂಕ್ಷ್ಮ ತನು : ಬೆಂಕಿ ಗಾಳಿ ತತ್ವ ಪ್ರಧಾನವಾದುದು.

ಕಾರಣ ತನು : ಆಕಾಶ ತತ್ವ ಪ್ರಧಾನವಾದು.

ನಿರ್ಮಲ ತನು : ಪಂಚ ಕಾರ್ಮೇಂದ್ರಿಯಗಳಿಂದ ಕೂಡಿದೆ.

ಆನಂದ ತನು : ಪಂಚ ವಿಷಯಗಳಿಂದ ಕೂಡಿದೆ.

ಚಿನ್ಮಯ ತನು : ಪಂಚ ಜ್ಞಾನೇಂದ್ರಿಯಗಳಿಂದ ಕೂಡಿದೆ.

ಚಿದ್ರೂಪ ತನು : ಪಂಚ ಪ್ರಾಣವಾಯುಗಳಿಂದ ಕೂಡಿದೆ.

ಶುದ್ಧ ತನು : ಪಂಚ ಕರಣಗಳಿಂದ ಕೂಡಿದೆ.

ಹೀಗೆ ತನುವನ್ನು ಸೀಳುತ್ತ ಹೊಂದತ್ತೆಲ್ಲಾ ನೂರಾ ಒಂದು ಸ್ಥಲಗಳಾಗಿ ತನುವಿನ ಪಾಂಡಿತ್ಯವೇ

ಪ್ರದರ್ಶನವಾಗುತ್ತದೆ ಹೊರತು, ತನು ಮತ್ತು ತನುವಿನಲ್ಲಿ ತನ್ಮಯವಾದ ಅರಿವು ದೂರವಾಗುತ್ತದೆ. ಪಾಂಡಿತ್ಯ-ಆಚಾರ-ವೇಷ ಭೂಷಣ ಪೀಠ ಪದವಿಗಳಿಗೆ ದಾರಿ ಮಾಡಿ ವ್ಯವಹಾರಕ್ಕೆ ಕಾರಣವಾಗುತ್ತದೆ.

ವೇಷ ಹಾಕಿದ ಗುರುವು ಅಣು ಬಾಂಬಿಗಿಂತಲೂ ಸೂಕ್ಷ್ಮ.

ವೇಷ ಹಾಕಿದ ಗುರುವಿನ ತನುವಿನಲ್ಲಿ ಅರಿವಿನ ಗುರು ದೂರವಾಗುತ್ತಾನೆ. ಅರಿವಿಗೆ ಹೋಗುವ ಶಾಸ್ತ್ರವೇ ಪ್ರಧಾನವಾಗುತ್ತದೆ. ಅದು ತನಗೆ ತಿಳಿಯದ ವ್ಯವಹಾರಕ್ಕೆ ನಿಲ್ಲುತ್ತಾನೆ. ಶಾಸ್ತ್ರ ಬೋಧಿಸುತ್ತಾ ಹಣ ಭೂಮಿ-ದ್ರವ್ಯ ವಾಹನ ಪಡೆದು ಅವುಗಳ ವಿಸ್ತಾರವೇ ಅವನ ಆನಂದವಾಗುತ್ತದೆ.ಮುಕ್ತಿಗಾಗಿ ತನ್ನನ್ನು ಕೇಳಲು ಬಂದ ಇತರರನ್ನು ಜಪ-ತಪ-ಜ್ಞಾನ-ಅನುಷ್ಠಾನ, ಪುಣ್ಯ ಕ್ಷೇತ್ರಗಳ ದರ್ಶನ, ಮಠ-ಮಂದಿರ ನಿರ್ಮಾಣ ತೇರು-ರಥ ಕಳಸ ಮೂರ್ತಿ ಪ್ರತಿಷ್ಠಾಪನೆ ಮುಂತಾದ ಕ್ರಿಯೆಗಳಲ್ಲಿ ತೊಡಗಿಸಿ ತಾನು ವ್ಯವಹಾರಿಕ ಲಾಭ ಪಡೆಯುತ್ತಾನೆ. ತಾನೂ ಮೋಸ ಹೋಗುತ್ತಾನೆ. ಇತರರನ್ನು ದಾರಿ ತಪ್ಪಿಸುತ್ತಾನೆ.

ತನುವಿನಲ್ಲಿ ತನ್ಮಯವಾದ ಅರಿವನ್ನು ತಾನೇ ನೋಡಿ ಆ ಅರಿವೇ ತಾನಾಗಬೇಕಲ್ಲವೇ ಇತರರಿಂದ ಎರವಲು ಪಡೆಯಲು ಆಗುವುದಿಲ್ಲ. ಅಡವಿಯೊಳಗೆ, ಮಡುವಿನಲ್ಲಿ, ತಪ ಮಾಡಿ, ಒಡಲು ದಂಡಿಸಿ ಅರಿವು ಪಡೆಯಲು ಸಾಧ್ಯವಿಲ್ಲ.

ತನುವು ತಾನೇ, ತನುವಿನಲ್ಲಿ ತನ್ಮಯವಾದ ಅಂಬಿಗನು ತಾನೆ. ತನುವು ಹರಿಗೋಲು-ಅರಿವು ಅಂಬಿಗ. ಆ ಅರಿವೇ ತಾನಾದಾಗ ಅಜ್ಞಾನವೇ ಇಲ್ಲ. ಆಚರಣೆಗಳು ಇಲ್ಲ. ಎಲ್ಲವೂ ಆನಂದವೇ ಎಲ್ಲವೂ ಸುಖಮಯವೇ ಎಲ್ಲವೂ ಶಿವಮಯವೇ ಎಲ್ಲರೂ ತನ್ನಂತೆಯೇ. ಅದನ್ನು ತನುವಿನಲ್ಲಿ ಅನುಭವಿಸಿಯೇ ಕಾಣಬೇಕು ಎನ್ನುವ ಸೂತ್ರ ವಿವರಿಸಿದ್ದಾರೆ ಚೌಡಯ್ಯ ಶರಣರು.

**15**

**ಅಡ್ಡಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿಗಳನೇನೆಂಬೆನಯ್ಯ.**
**ಏನೇನೂ ಅರಿಯದ ಎಡ್ಡ ಮಾನವರಿಗೆ ಉಪದೇಶವ ಮಾಡುವ**
**ಗೊಡ್ಡ ಮಾನವನ ಮುಖವ ತೋರದಿರಯ್ಯಾ .**
**ಅದೇನು ಕಾರಣವೆಂದಡೆ:**
**ಆ ಮೂಢಜೀವಿಯ ಪ್ರಪಂಚವ ಕಳೆಯಲಿಲ್ಲ.**
**ಅವನ ಪಂಚೇಂದ್ರಿಯಂಗಳು, ಸಪ್ತ ವ್ಯಸನಂಗಳು, ಅಷ್ಟಮದಂಗಳೆಂಬ**
**ಖೊಟ್ಟಿ ಗುಣಂಗಳ ಬಿಡಿಸಲಿಲ್ಲ.**
**ಸೂತಕ ಪಾತಕಂಗಳ ಕೆಡಿಸಿ, ಮೂರು ಮಲಂಗಳ ಬಿಡಿಸಿ**
**ಮುಕ್ತಿಪಥವನರುಹಲಿಲ್ಲ.**
**ಮಹಾಶೂನ್ಯ ನಿರಾಳ ನಿರಂಜನಲಿಂಗವ**
**ಕರ-ಮನ-ಭಾವ ಸರ್ವಾಂಗದಲ್ಲಿ ತುಂಬಿ ನಿತ್ಯನೆಂದೆನಿಸಲಿಲ್ಲ.**
**ಇದನರಿಯದ ವ್ಯರ್ಥಕಾಯರುಗಳ ಗುರುವೆಂದಡೆ ಪ್ರಮಥರು ಮೆಚ್ಚುವರೆ?**
**ಇಂತಪ್ಪ ಗುರು ಶಿಷ್ಯರೀರ್ವರು ಅಜ್ಞಾನಿಗಳು.**
**ಅವರು ಇಹಲೋಕ ಪರಲೋಕಕ್ಕೆ ಹೊರಗೆಂದಾತನಂಬಿಗ ಚೌಡಯ್ಯ .**

ಪ್ರತಿ ದೇಹದಲ್ಲಿ ಅರಿವಿದೆ. ಆ ಅರಿವೆ ಗುರುದೇವನು. ಅಂತಹ ಗುರುದೇವನಿಗೆ ಗುರುವಾಗಲು ಬರುತ್ತದೆಯೇ? ಅಂತಹ ಗುರುದೇವನನ್ನು ಶಿಷ್ಯನಾಗಿಸಿಕೊಳ್ಳಲು ಬರುತ್ತದೆಯೇ?

ದೇಹವನ್ನು ಆವರಿಸಿದ ಮನವನ್ನು ಶಿಷ್ಯನಾಗಿಸಿಕೊಂಡು, ದೇಹದಲ್ಲಿ ಸಂಗಮವಾದ ಅರಿವನ್ನು ಗುರುವಾಗಿಸಿಕೊಂಡ ನಿಪುಣನನ್ನು ಮಾತ್ರ; ಸೂಚಿಸುವ ಗುರುದೇವನೆಂದು ಕರೆಯಬಹುದು. ಆತ ದೇಹವನ್ನು ಆವರಿಸಿದ ಮನವನ್ನು ಪಳಗಿಸುವ ಕಲೆಯನ್ನು ಹೇಳಿಕೊಡುತ್ತಾನೆ. ಹಾಗೆಯೇ ದೇಹದಲ್ಲಿಯೇ ಸಂಗಮವಾದ ಅರಿವನ್ನೇ ಗುರುದೇವನನ್ನಾಗಿಸಿಕೊಂಡು, ಆ ಗುರುದೇವನಿಗೆ ಶಿಷ್ಯ ಹೇಗೆ ಗುಲಾಮನಾಗಬೇಕೆಂಬುದನ್ನು ತೋರಿಸಿಕೊಡುತ್ತಾನೆ.

ಆಗ ದೇಹದಲ್ಲಿ ಅರಿವೆಂಬ ಗುರುದೇವ ಮುಂದಾಗುತ್ತಾನೆ. ಶಿಷ್ಯ ಆ ಗುರುದೇವನ ಸಂಜ್ಞೆಯನ್ನು ಸ್ವೀಕರಿಸುತ್ತಾ ಆ ಗುರುದೇವನಲ್ಲಿಯೇ ಲೀನವಾಗುತ್ತಾನೆ. ನೈಪುಣ್ಯತೆ ಹೊಂದಿದ ಗುರುದೇವನಿಗೆ ಗುರುವನ್ನಾಗಿಸಲು ಬರುತ್ತದೆಯೇ ಹೊರತು, ಶಿಷ್ಯನನ್ನಾಗಿ ಮಾಡಿಕೊಳ್ಳಲು ಬರುವುದಿಲ್ಲ.

ತಾನು ಬದುಕುವುದಕ್ಕಾಗಿ ಕಷಾಯ ಹೊದ್ದು, ಊರೂರು ಅಲೆದು, ತನ್ನಂತೆಯೇ ಇರುವ ಮನುಷ್ಯನನ್ನು ಮರಳು ಮಾಡಿ, ತಾನು ಗುರುವಾಗಿ, ಆತನನ್ನು ಶಿಷ್ಯನನ್ನಾಗಿಸಿಕೊಂಡು ಹಣ ವಸ್ತ್ರ ಪಡೆದು ಮೋಸ ಮಾಡುತ್ತಾನೆ. ತಾನು ಕೂಡ ತನಗರಿಯದಂತೆ ಮೋಸಕ್ಕೆ ಒಳಗಾಗುತ್ತಾನೆ ಏಕೆಂದರೆ, ಗುರುವೆಂದು ಹೇಳಿಕೊಳ್ಳುವ ವ್ಯಕ್ತಿ ಗುರುವೆಂದರೆ ಯಾರೆಂದು ಅರಿವಿಲ್ಲ. ಶಿಷ್ಯನೆಂದರೆ ಯಾರೆಂದು ಅರಿತಿಲ್ಲ. ಆದರೂ ಗುರುವಾಗಿದ್ದಾನೆ. ಇಂತಹ ಗುರುದೇವನನ್ನು ಅಂಬಿಗರ ಚೌಡಯ್ಯನವರು ಅಡ್ಡ ಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿ ಎಂದು ಕರೆದಿದ್ದಾರೆ.

ತಾನು ಯಾವ ನೈಪುಣ್ಯತೆಯನ್ನು ಹೊಂದದೆ, ಏನೇನೂ ಅರಿಯದೇ, ಏನೇನೂ ಅರಿಯದವನಿಗೆ ಉಪದೇಶ ಮಾಡುತ್ತಾನೆ. ಇಂತಹ ಗೊಡ್ಡು ಮಾನವನ ಮುಖವ ತೋರದಿರಯ್ಯ ಎಂದು ಅರಿವೆಂಬ ಗುರುದೇವನನ್ನು ಬೇಡಿಕೊಂಡಿದ್ದಾರೆ.

ಶಿಷ್ಯನಾಗಿಸಿಕೊಂಡ ಗುರುದೇವ ಶಿಷ್ಯನ ಸಪ್ತವ್ಯಸನಗಳನ್ನು ಬಿಡಿಸಲಿಲ್ಲ. ಅಷ್ಟ ಮದಗಳನ್ನು ಬಿಡಿಸಲಿಲ್ಲ. ಅವನ ಪಂಚೇಂದ್ರಿಯಂಗಳ ದುರ್ಗುಣಗಳು ತೊಲಗಲಿಲ್ಲ. ಶಬ್ದ ಸ್ಪರ್ಶ ದೃಶ್ಯ ವಾಸನ ರುಚಿ ಸೂತಕ-ಪಾತಕಗಳನ್ನು ಬಿಡಿಸಲಿಲ್ಲ. ಮುಕ್ತಿಯ ಪಥವನ್ನು ಅರುಹಲಿಲ್ಲ. ಏಕೆಂದರೆ ಗುರುದೇವನೆಂದು ಬದುಕುವುದಕ್ಕಾಗಿ ವೇಷ ಹಾಕಿದ್ದಾನೆ. ವೇಷದ ಗುರುದೇವ ವೇಶಿಗೆ ಸಮ.

ಗುರುದೇವನ ವೇಷ ಹಾಕಿಕೊಂಡವನು ಗುರುವೆಂದರೆ ತನ್ನ ಅರಿವೇ ತನಗೆ ಗುರುವೆಂದು ಅರಿಯದ ಅಜ್ಞಾನಿ. ಅರಿವೇ ಗುರುವಾಗಲು ಅರಿಯದ ಅಜ್ಞಾನಿ. ಭಗವದ್ಗೀತೆ ಬೈಬಲ್ ಕುರಾನ್‌ಗಳ ಎರಡೆರಡು ಮಾತನಾಡಿದರೆ ಗುರುವಾಗಲಾರ. ರಂಜಕನಾಗಬಹುದು, ರಂಜಿಸಬಹುದು. ನಿರಂಜನನೇ ತಾನಾಗಲಾರ.

ತಾನು ನಿರಂಜನನಾಗದವನು ನಿರಂಜನನನ್ನಾಗಿಸಲು ಸಾಧ್ಯವೆ?. ಇದನ್ನರಿಯದ ವ್ಯರ್ಥ ಕಾಯವುಳ್ಳವರನ್ನು ಗುರುವೆಂದಡೆ ಪ್ರಮಥರು ಮೆಚ್ಚುವರೇ? ಇಂತಹ ಗುರು ಶಿಷ್ಯರಿಬ್ಬರು ಅಜ್ಞಾನಿಗಳು. ಅವರು ಇಹಲೋಕ ಪರಲೋಕಕ್ಕೆ ಹೊರಗೆಂದತಾನಂಬಿಗ ಚೌಡಯ್ಯ:

ಇಹಲೋಕ ಪರಲೋಕವೆಂದರೆ ಮರ್ತ್ಯಲೋಕ ದೇವಲೋಕವೆಂದಲ್ಲ. ದೇಹದಲ್ಲಿಯೇ ಅರಿವಿನ ಲೋಕ ಒಂದಿದೆ. ಮರೆವಿನ ಲೋಕ ಒಂದಿದೆ. ಮರೆವಿನ ಲೋಕವೆಂದರೆ ಏನೆಂದು ಅರಿಯದ ದೇಹ ! ಅರಿವಿನ ಲೋಕವೆಂದರೆ ಏನೆಂದು ಅರಿಯದ ದೇಹ! ದೇಹದಲ್ಲಿ ಅರಿವಿನ ಸಂಪತ್ತಿದ್ದರೂ ಆ ಅರಿವಿನ ಸಂಪತ್ತನ್ನು ಪಡೆಯದ ವ್ಯರ್ಥ ದೇಹ. ದೇಹವನ್ನು ಮನವೆಂಬ ಮರೆವು ಆವರಿಸಿದ್ದರೂ

ಆ ಮರೆವನ್ನು ಮರೆವೆಂದು ತಿಳಿಯದ ಅಜ್ಞಾನಿ ದೇಹ .ಅರಿವು ಮರೆವುಗಳಿಗೆ ಹೊರಗಾಗಿ ವ್ಯರ್ಥವಾಗಿ ಉಸಿರಾಡುತ್ತಾ ಅಜ್ಞಾನದಿಂದ ಬದುಕಿದ ದೇಹ.

**16**

**ಅತ್ಯಾಹಾರವನುಂಡು ಹೊತ್ತುಗಳೆದು**
**ಹೋಕಿನ ಮಾತನಾಡುತ್ತ**
**ಚಿತ್ತ ಬಂದ ಪರಿಯಲ್ಲಿ ವ್ಯವಹರಿಸಿಕೊಳ್ಳುತ್ತ ,**
**ಮತ್ತೆ ಶಿವನ ನೆನೆದೆನೆಂದಡೆ ಶಿವನ ವರ ಎತ್ತಲೆಂದರಿಯದೆಂದಾತ,**
**ನಮ್ಮಂಬಿಗರ ಚೌಡಯ್ಯ .**

ಶಿಷ್ಯನ ಮನೆಗೆ ಬಂದು ಅತಿ ಆಹಾರವನು ಉಂಡು ವ್ಯರ್ಥ ಮಾತುಗಳನು ಆಡುತ್ತ ಚಿತ್ತ ಹರಿದ ಪರಿಯಲ್ಲಿ ವ್ಯವಹರಿಸುವ ಗುರುಗಳನ್ನು ಉದ್ದೇಶಿಸಿ ಚೌಡಯ್ಯ ಶರಣರು ನಿಷ್ಠುರವಾಗಿ ಬಿರುನುಡಿಗಳನ್ನು ನುಡಿದಿದ್ದಾರೆ. ಏಕೆಂದರೆ ಏನೂ ಅರಿಯದೆ ಗುರುವಾದಾತ ತನ್ನನ್ನು ತಾನು ಮೋಸ ಮಾಡಿಕೊಳ್ಳುವುದಲ್ಲದೆ ಶಿಷ್ಯರನ್ನೂ ಮೋಸ ಮಾಡುವ ಭ್ರಷ್ಟನಾಗಿದ್ದಾನೆ.

ಶಿವನ ಕುರಿತು ಶಾಸ್ತ್ರ ಪುರಾಣ ಕತೆಗಳನ್ನು ಹೇಳುವ ಗುರುವಿಗೆ ಶಿವನೆಂದರೆ ಯಾರು ? ಆತ ಎಲ್ಲಿದ್ದಾನೆ ? ಆತನನ್ನು ಒಲಿಸಿಕೊಳ್ಳುವ ಬಗೆ ಹೇಗೆ ? ಎನ್ನುವ ತಂತ್ರಜ್ಞಾನ ಗೊತ್ತಿರುವುದಿಲ್ಲ.ಆದರೂ ಶಿಷ್ಯನಿಗೆ ಶಿವನನ್ನು ನೆನೆಯಲು ಹೇಳುತ್ತಾನೆ. ಶಿವನ ಕತೆ ಹೇಳುತ್ತಾನೆ. ಕಂಠಮಟ್ಟ ಉಂಡು ವ್ಯರ್ಥವಾಗಿ ಮಾತನಾಡಿ ತನ್ನ ಮಾತಿನ ಮೋಡಿಯಿಂದ ಶಿಷ್ಯಂದಿರನ್ನು ತನ್ನ ಬುಟ್ಟಿಗೆ ಹಾಕಿಕೊಂಡು ಐಷಾರಾಮಿ ಯಾಗಿ ಬದುಕುತ್ತಾನೆ. ಶಿವನ ಬಗ್ಗೆ ತಿಳಿದುಕೊಳ್ಳಬೇಕೆಂಬ ಹಂಬಲ ಇಲ್ಲದವನು ಬಾಯಿಗೆ ಬಂದಂತೆ ಮಾತನಾಡಿ ಬದುಕು ಸಾಗಿಸುತ್ತಾನೆ. ಇವನನ್ನು ಶಿಷ್ಯರೂ ಅನುಕರಿಸುತ್ತಾರೆ.

ಪ್ರತಿ ತನುವಿನಲ್ಲಿ ತನ್ಮಯವಾದ ಅರಿವೇ ಗುರು. ಆ ಗುರುದೇವನೇ ಮಹಾದೇವ. ಆ ಮಹಾದೇವನೆ ಸದಾಶಿವ. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮ. ಹೀಗಿರುವಾಗ ಶಿವನನ್ನು ನೆನೆದರೆ ಶಿವ ಒಲಿದಾನೆಯೆ ? ಶಿವನೆಂದರೆ ಯಾರೆಂದು ಅರಿಯದ ಗುರು ಶಿವನ ಬಗ್ಗೆ ಏನು ಹೇಳುತ್ತಾನೆ ? ಬರೀ ವ್ಯರ್ಥ ಮಾತುಗಳು !

ತನುವನ್ನು ಆವರಿಸಿದ ಮನ ಭ್ರಮೆಗೆ ಒಳಪಟ್ಟು ಸುಳ್ಳು ಗುರುವಿನ ಮಾತು ಕೇಳುತ್ತದೆ ; ಪೂಜಿಸುತ್ತದೆ. ಶಿವನನ್ನು ಒಲಿಸಿಕೊಂಡ ಗುರುವಾದರೆ ಶಿಷ್ಯನಿಗೆ ಗುರುವಾಗದೆ, ಶಿಷ್ಯನನ್ನು ಆವರಿಸಿದ ಮನದ ಭ್ರಮೆಯನ್ನು ಬಿಡಿಸುತ್ತಾನೆ. ಆ ಮನಕ್ಕೆ ತನುವಿನಲ್ಲಿಯೇ ತನ್ಮಯವಾದ ಗುರುವಿನ ದರ್ಶನ ಮಾಡಿಸುತ್ತಾನೆ. ಮಹಾದೇವನ ದರ್ಶನ ಮಾಡಿಸುತ್ತಾನೆ. ಆ ಮನದಿಂದಲೇ ಸದಾಶಿವನ ದರುಶನ ಮಾಡಿಸುತ್ತಾನೆ.ಆಗ ಸಕಲ ಭ್ರಮೆಗಳನ್ನು ಕಳೆದುಕೊಂಡ ಮನ ಪರಬ್ರಹ್ಮವೇ ತಾನಾಗುತ್ತದೆ. ಮಾನವ ಮಹಾದೇವನಾಗುತ್ತಾನೆ. ತನು ಶಿವಮಯವಾಗುತ್ತದೆ. ಈ ತಂತ್ರಜ್ಞಾನ ಹೊಂದಿದ ತನುವಿಗೆ ಜಗತ್ತಿನ ಸಕಲ ತನುಗಳೂ ಶಿವಮಯವಾಗಿ ಕಾಣುತ್ತವೆ.

17

**ಅದ್ವೈತವ ನುಡಿದು**
**ಅಬದ್ಧ ಅಂಗಕ್ಕಾಗಿ ಬದ್ಧರ ಬಾಗಿಲಲ್ಲಿ ಹೊದ್ದುಕೊಂಬರಲ್ಲಾ ಎಂದು**
**ಮತ್ತೆ ಅದ್ವೈತಕ್ಕೆ ಕದ್ದೆಹತನವೆ?**
**ಇಂತೀ ಅಬದ್ಧರ ಕಂಡು ಮುನ್ನವೆ ಹೊದ್ದಬೇಡ,**
**ಎಂದನಂಬಿಗ ಚೌಡಯ್ಯ .**

ತನುವಿನ ಕಣ ಕಣದಲ್ಲಿ ಬ್ರಹ್ಮಜ್ಞಾನ ಸಂಗಮವಾಗಿದೆ. ತನುವನ್ನು ಆವರಿಸಿದ ಮನದ ಭ್ರಮೆ ಕಳೆದುಕೊಂಡು, ಆ ಮನದಿಂದಲೇ ಬ್ರಹ್ಮನತ್ತ ಪಯಣಿಸಿ ತಾನೇ ಆ ಬ್ರಹ್ಮನಾಗಬೇಕು. ಆಗ 'ಅಹಂ ಬ್ರಹ್ಮಾಸ್ಮಿ' ಎನ್ನಲು ಸಕಲ ತನುಗಳಿಗೂ ಬರುತ್ತದೆ.

ಮನ ಸ್ವತಹ ತಾನು ಬ್ರಹ್ಮನಾಗದೆ, ಬ್ರಹ್ಮನಾಗುವ ಅದ್ವೈತ ತತ್ತ್ವವ ನುಡಿಯುತ್ತ ಇಂದು ಇದ್ದು ನಾಳೆ ಇಲ್ಲದ ಅಂಗದ ಸುಖಕ್ಕಾಗಿ ಅಂಗಗಳ (ಶಿಷ್ಯರ) ಬಾಗಿಲ ಕಾಯ್ದು ಮತ್ತೆ ಅದ್ವೈತಕ್ಕೆ ಜಾರುವ ಭ್ರಷ್ಟ ಅಬದ್ಧ ಗುರುಗಳ ಕಂಡು ಅವರನ್ನು ಹೊದ್ದಬೇಡ.ಅವರಿಂದ ದೂರ ಸರಿ ಎಲೆ ಮನವೆ. ಅವರನ್ನು ಗುರುವಾಗಿಸಿಕೊಳ್ಳಬೇಡ.ಅವರಿಗೆ ನೀನು ಶಿಷ್ಯನಾಗಬೇಡ ಎಂದು ಚೌಡಯ್ಯ ಶರಣರು ಮನಕ್ಕೆ ಎಚ್ಚರಿಸಿದ್ದಾರೆ.

18

**ಅನಾದಿಪರಶಿವನಿಂದ ಸಾಕಾರಲೀಲೆಯ ಧರಿಸಿ, ಮರ್ತ್ಯಕ್ಕವತರಿಸಿ,**
**ಶ್ರೀಗುರುಲಿಂಗಜಂಗಮದಿಂದ ವೇದ-ಮಂತ್ರ-ಕ್ರಿಯಾದೀಕ್ಷೆಯ ಪಡೆದು,**
**ಲಿಂಗಾಂಗ ಸಮರಸಾನಂದವನರಿದು,**
**ತನ್ನ ಸ್ವಸ್ವರೂಪು ನಿಲುಕಡೆಯ ತಿಳಿದು,**
**ಸತ್ಯ-ಸದಾಚಾರ-ಸನ್ಮಾರ್ಗದ ಗೊತ್ತನರಿದು,**
**ಪಂಚಸೂತಕಪಾತಕ,ಆರುವೈರಿ, ಅಷ್ಟಮದಂಗಳಡಿಮೆಟ್ಟಿ,**
**ಆಚರಿಸುವ ಭಕ್ತಗಣಂಗಳು**
**ಇಂತಿಷ್ಟು ಸತ್ತುಚಿತ್ತಾನಂದನಿತ್ಯಪರಿಪೂರ್ಣ ಅವಿರಳಾನಂದ**
**ನಿಜಾಚರಣೆಯನರಿಯದ**
**ಗುರುವಾಗಲಿ, ಲಿಂಗವಾಗಲಿ, ಜಂಗಮವಾಗಲಿ,**
**ಶರಣನಾಗಲಿ, ಭಕ್ತನಾಗಲಿ, ಪ್ರಸಾದಿಯಾಗಲಿ,**
**ಅವರಿಂದ ಪಾದೋದಕ ಪ್ರಸಾದವ ಕೊಂಡರೆ**
**ಯಮದಂಡಣೆಗೊಳಗು ನೋಡಾ,**
**ಅಂತ್ಯದಲ್ಲಿ ರೌರವ, ಎಂದಾತನಂಬಿಗರ ಚೌಡಯ್ಯ .**

ಭೂಮಿಯ ಮೇಲೆ ಜನ್ಮ ತಳೆದ ತನುಗಳೆಲ್ಲ ಸಾಕ್ಷಾತ್ ಪರಶಿವನ ಸಾಕಾರ ಲೀಲೆಗಳುಳ್ಳವುಗಳೇ ಆಗಿವೆ.ಆದರೆ ಆ ತನುಗಳಿಗೆ ನಾನು ಹೀಗೆ ಎಂದು ಮಾಹಿತಿ

ಇರುವುದಿಲ್ಲ. ಶ್ರೀಗುರು ಲಿಂಗ ಜಂಗಮ ದಿಂದ ದೀಕ್ಷೆಯ ಪಡೆದು ತನ್ನ ತನುವಿನ ಕಣಕಣದಲ್ಲಿರುವ ಸ್ವಸ್ವರೂಪು ಜ್ಞಾನವನು ಪಡೆದು,ಸತ್ಯ-ಸದಾಚಾರ-ಸನ್ಮಾರ್ಗದ ಗೊತ್ತನು ಅರಿದು, ಪಂಚ ಜ್ಞಾನೇಂದ್ರಿ ಯಗಳಿಗೆ ಆವರಿಸಿದ ಪಂಚ ಸೂತಕ ಪಾತಕಗಳನು, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ತಾನೇ ಮೆಟ್ಟಿ, ಅಗೋಚರದ ಆಚಾರದಲ್ಲಿ ಸದಾ ನಿರತನಾದ ಭಕ್ತನೇ ಮಹಾ ಜ್ಞಾನಿ. ಆತನೇ ಶಿವಶರಣ !

ಇಂತಹ ಭಕ್ತನು, ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ ಅವಿರಳಾನಂದವನು, ನಿಜಾಚರಣೆ ಯನು ಅರಿಯದ ವೇಷ ಧರಿಸಿದ ಗುರುವಾಗಲಿ,ಲಿಂಗವಾಗಲಿ, ಜಂಗಮವಾಗಲಿ,ಶರಣ ನಾಗಲಿ, ಭಕ್ತನಾಗಲಿ,ಪ್ರಸಾದಿಯಾಗಲಿ, ಅಂತವರಿಂದ ಪಾದೋದಕ ಪ್ರಸಾದವನು ತೆಗೆದು ಕೊಂಡರೆ ಯಮದಂಡನೆಗೆ ಒಳಗಾಗುವನು. ಅಂತ್ಯದಲ್ಲಿ ರೌರವ ನರಕ ಅನುಭವಿಸುವನು ಎಂದು ನಿಜ ಭಕ್ತರನ್ನು ಅಂಬಿಗರ ಚೌಡಯ್ಯ ಶರಣರು ಎಚ್ಚರಿಸಿದ್ದಾರೆ.

**19**

**ಅಯ್ಯಾ ! ಅಂಗಾಚಾರವುಳ್ಳ ಶಕ್ತಿ-ಭಕ್ತ-ಜಂಗಮದ ಗೃಹದಲ್ಲಿ**
**ಲಿಂಗಾಚಾರವುಳ್ಳ ಶಿವಭಕ್ತಿ-ಶಿವಭಕ್ತ-ಶಿವಜಂಗಮವು ಜಿಹ್ವಾಲಂಪಟಕ್ಕಿಚ್ಛೈಸಿ**
**ಅವರ ಗೃಹದಲ್ಲಿ ಲಿಂಗಾರ್ಚನೆ -ಲಿಂಗಾರ್ಪಣವ ಮಾಡಲಾಗದು.**
**ಇದ ಮೀರಿ ಅಂಗಭೋಗಿಗಳ ಸಮಪಾಕ, ಸಮಭಾಜನ, ಸಮಪಂಕ್ತಿ ,**
**ಶಿವಮಂತ್ರ , ಶಿವಪ್ರಸಾದ, ಶಿವಾನುಭವಗೋಷ್ಠಿಯ ಮಾಡಿದಡೆ**
**ಬಸವ ಮೊದಲಾದ ಸಮಸ್ತ ಗಣಸಾಕ್ಷಿಯಾಗಿ**
**ಶಿವಲೋಕ, ಶಾಂಭವ ಲೋಕ, ರುದ್ರಲೋಕ, ದೇವಲೋಕ, ಮರ್ತ್ಯಲೋಕ**
**ಮೊದಲಾದ ಸಮಸ್ತ ಲೋಕಪಾವನಾರ್ಥ ಮಹಾಗಣಂಗಳ ಸಮಯಾಚಾರಕ್ಕೆ**
**ಹೊರಗೆಂದಾತನಂಬಿಗರ ಚೌಡಯ್ಯನು.**

ಅಂಗಕ್ಕೆ ಲಿಂಗ ಭಸ್ಮ ರುದ್ರಾಕ್ಷಿ ಧರಿಸಿ, ಶಕ್ತಿಯನ್ನು ಪ್ರದರ್ಶಿಸುವ ಭಕ್ತ ಜಂಗಮದಂತೆ ಮೆರೆಯುವವರ ಮನೆಯಲ್ಲಿ ಲಿಂಗಾಚಾರವುಳ್ಳ ಶಿವಭಕ್ತಿ-ಶಿವಭಕ್ತ-ಶಿವ ಜಂಗಮವು ನಾಲಿಗೆಯ ರುಚಿಗಾಗಿ ಲಿಂಗಾರ್ಚನೆ ಮಾಡಲಾಗದು. ಇದು ನಿಯಮವೆಂದು ತಾನೇ ತನ್ನ ಮೇಲೆ ಹೇರಿಕೊಳ್ಳಬೇಕು.

ಅಂಗಾಚಾರ ಗೋಚರದ ಆಚಾರ. ಅದೇನಿದ್ದರೂ ಪ್ರದರ್ಶನಕ್ಕೆ ಯೋಗ್ಯ ; ಆಚರಿಸಿ ಸುಖಿ ಸುವುದಕ್ಕಲ್ಲ. ಲಿಂಗಾಚಾರ ಅಗೋಚರದ ಆಚಾರ. ಕಂಗಳ ಮೂಲಕ ನೋಡಿ ತನುವಿನಲ್ಲಿ ಹಾದರ ಏರ್ಪಡದಂತೆ ಸುಖಿಸುವ ಆಚಾರ. ಕಾಣುವ ಅಜ್ಞಾನವನ್ನು ಕೊಂದು ಕಾಣಬಾರದ ಲಿಂಗವನ್ನೇ ನೋಡುವ ಆಚಾರ. ಸ್ಪರ್ಶಿಸುವ ಚರ್ಮದಲ್ಲಿ,ರುಚಿಸುವ ನಾಲಿಗೆಯಲ್ಲಿ, ಕೇಳುವ ಕಿವಿಯಲ್ಲಿ,ಮೂಸಿಸುವ ಮೂಗಿನಲ್ಲಿ ಅಜ್ಞಾನದ ರಸಾಯನ ಹುಟ್ಟದಂತೆ ಆನಂದದಿಂದ ಲಿಂಗ ಪ್ರಸಾದ ಮಾಡುವ ಅಗೋಚರ ಆಚಾರ. ಇದು ಲಿಂಗಾಚಾರ ! ಈ ಆಚಾರ ಯಾರಿಗೂ ಕಂಡು ಬರುವುದಿಲ್ಲ.

ಅಂಗಾಚಾರ ಅಜ್ಞಾನದ ಸುಖವಾದರೆ ; ಲಿಂಗಾಚಾರ ಮಹಾಜ್ಞಾನದ ಸುಖ ! ಅಂಗ

ಲಿಂಗ ಒಂದಾಗಿ ಲಿಂಗಾಂಗದ ಸಾಮರಸ್ಯವನು ಸುಖಿಸುವ ಸುಖದ ಸುಖ. ಈ ಸುಖವನು ಸುಖಿಸುವವನು ಮಾತ್ರ ಬಲ್ಲ. ಅಂಗ ಸುಖವನ್ನು ಭೋಗಿಸುವ ಸುಳ್ಳು ಭಕ್ತ-ಜಂಗಮನಿಗೆ ಇದು ಸಾಧ್ಯವಾಗದ ಸುಖ. ಇಂತಹ ಅಂಗಾಚಾರವುಳ್ಳವನ ಮನೆಯಲ್ಲಿ ಸದಾ ಲಿಂಗಾಚಾರ ದಲ್ಲಿ ನಿರತವಾದ ಭಕ್ತ-ಜಂಮನು ಶಿವಾನುಭವಗೋಷ್ಠಿಯ ಮಾಡಿದಡೆ ಸಕಲ ಲೋಕ ಪಾವನಕ್ಕಾಗಿ ಮಾಡುವ ಸಮಯಾಚಾರದಿಂದ ಹೊರಗು ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**20**

ಅಯ್ಯಾ ! ಅಚ್ಚ ಪ್ರಸಾದಿ, ನಿಚ್ಚ ಪ್ರಸಾದಿ,
ಸಮಯ ಪ್ರಸಾದಿಗಳೆಂದು ಒಪ್ಪವಿಟ್ಟು ನಿಚ್ಚ ನಿಚ್ಚ ನುಡಿವ ಅಣ್ಣಗಳಿರ !
ನೀವು ಅಚ್ಚ ಪ್ರಸಾದ, ನಿಚ್ಚ ಪ್ರಸಾದ
ಸಮಯಪ್ರಸಾದವಾದ ವಿಚಾರವ ಹೇಳಿರಣ್ಣ !
ಅರಿಯದಿದ್ದಡೆ ಕೇಳಿರಣ್ಣ !
ಸಮಸ್ತ ಪದಾರ್ಥವ ಗುರುಲಿಂಗಜಂಗಮದಿಂದ ಪವಿತ್ರವ ಮಾಡಿ
ಅವರವರ ಪದಾರ್ಥವ ಅವರವರಿಗೆ ವಂಚಿಸದೆ
ನಿರ್ವಂಚಕತ್ವದಿಂದ ಸಮರ್ಪಿಸುವದೆ ತ್ರಿವಿಧಪ್ರಸಾದಸ್ವರೂಪು ನೋಡ!
ಕ್ರಿಯಾಮುಖದಲ್ಲಿ ಇಷ್ಟ ಲಿಂಗಕ್ಕೆ ಸಮರ್ಪಿಸುವ
ಪೃಥ್ವಿ ಸಂಬಂಧವಾದ, ಅಷ್ಟತನುಗಳಿಂದುದಯವಾದ,
ಗಂಧ ರಸ ರೂಪು ಸ್ಪರ್ಶನ ಶಬ್ದ ಮೊದಲಾದ ಸಮಸ್ತ ಪದಾರ್ಥಂಗಳ
ಆ ಕ್ರಿಯಾ ಗುರು ಲಿಂಗ ಜಂಗಮಕ್ಕೆ ಸಮರ್ಪಿಸಿ,
ಅವರೊಕ್ಕುಮಿಕ್ಕ ರೂಪುರುಚಿತೃಪ್ತಿ ಪ್ರಸಾದವ ಭೋಗಿಸುವಾತನೆ
ತ್ರಿವಿಧ ಪ್ರಸಾದಿ ನೋಡ!
ಜ್ಞಾನಮುಖದಲ್ಲಿ ಪ್ರಾಣಲಿಂಗಕ್ಕೆ ಸಮರ್ಪಿಸುವ ಮನಸಂಬಂಧವಾದ ಸ್ತ್ರೀಯಳೆಂಬ
ರೂಪುರುಚಿತೃಪ್ತಿ ಮೊದಲಾದ ಪದಾರ್ಥಂಗಳ
ಸತ್ಕ್ರಿಯಾ ಗುರುಲಿಂಗ ಜಂಗಮವನೆ ಜ್ಞಾನ ಗುರುಲಿಂಗಜಂಗಮವೆಂದು ಭಾವಿಸಿ
ತನ್ನ ವಿವಾಹ ಸಮಯದಲ್ಲಿ ಗುರುಲಿಂಗಜಂಗಮಕ್ಕೆ ಭಕ್ತಗಣಸಾಕ್ಷಿಯಾಗಿ
ತನ್ನ ಕೂಟದ ಶಕ್ತಿಯ ಗುರುಲಿಂಗಜಂಗಮಕ್ಕೆ ಕೊಡುವ ಭಕ್ತಿ ಮೊದಲಾಗಿ,
ಆ ಶಕ್ತಿಯರ ಅಂತರಂಗದಲ್ಲಿ ಬೆಳಗುವ ಪರಂಜ್ಯೋತಿರ್ಲಿಂಗವ ಬಹಿಷ್ಕರಿಸಿ,
ಸದ್ಗುರು ಮುಖದಿಂ ಹಸ್ತಮಸ್ತಕ ಸಂಯೋಗವ ಮಾಡಿಸಿ,
ಆ ಲಿಂಗಾಂಗಕ್ಕೆ ಪಾಣಿಗ್ರಹಣವ ಮಾಡಿಸಿ, ಮಂತ್ರದೀಕ್ಷೆಯ ಬೋಧಿಸಿ,
ಪಾದೋದಕ ಪ್ರಸಾದವ ಕೊಡಿಸಿ,
ಸದಾಚಾರ-ಸದ್ಭಕ್ತಿ-ಸತ್ಕ್ರಿಯಾ-ಸಮ್ಯಜ್ಞಾನವ ಬೋಧಿಸಿ,
ಶಕ್ತಿಭಾರವಳಿದು ಕ್ರಿಯಾಶಕ್ತಿಯರೆಂದು ಭಾವಿಸಿ,
ಪ್ರಥಮದಲ್ಲಿ ಗುರುಲಿಂಗಜಂಗಮಕ್ಕೆ ಆ ಕ್ರಿಯಾಶಕ್ತಿಯಭಕ್ತಗಣಸಾಕ್ಷಿಯಾಗಿ
ಪ್ರಮಾಣದಿಂದ ಕಂಕಣವ ಕಟ್ಟಿ,

ಶರಣಾರ್ಥಿಯೆಂದು ಒಪ್ಪದಿಂದ ಒಪ್ಪಿಸಿ,
ಅದರಿಂ ಮೇಲೆ, ಆ ಗುರುಲಿಂಗಜಂಗಮದ ಕರುಣವ ಹಡೆದು,
ಆ ಕ್ರಿಯಾಶಕ್ತಿಯ ಭಕ್ತಗಣ ಮಧ್ಯದಲ್ಲಿ ಕೂಡಿ, ಸೆರಗ ಹಿಡಿದು
ಗಣಪದಕ್ಕೆ ಶರಣೆಂದು ವಂದಿಸಿ,
ಅವರ ಕರುಣವ ಹಾರೈಸಿ ನಿಜಭಕ್ತಿಜ್ಞಾನ ವೈರಾಗ್ಯವ ಬೆಸಗೊಂಡು
ಸಚ್ಚಿದಾನಂದ ಲಿಂಗನಿಷ್ಠಾ ಪರತ್ವದಿಂದ ಗುರುಲಿಂಗಜಂಗಮಶಕ್ತಿ ಮೊದಲಾಗಿ
ಗುರುಭಕ್ತಿಯಿಂದ ಆಚರಿಸುವರೆ ತ್ರಿವಿಧ ಪ್ರಸಾದಿಗಳು ನೋಡ !
ಮಹಾಜ್ಞಾನ ಮುಖದಲ್ಲಿ ಭಾವಲಿಂಗಕ್ಕೆ ಸಮರ್ಪಿಸುವ
ಧನ ಸಂಬಂಧವಾದ ದ್ರವ್ಯವನ್ನು
ಆ ಕ್ರಿಯಾಜ್ಞಾನಯುಕ್ತವಾದ ಗುರುಲಿಂಗಜಂಗಮವನೆ
ಮಹಾಜ್ಞಾನ ಗುರುಲಿಂಗಜಂಗಮವೆಂದು ಭಾವಿಸಿ,
ತಾ ಧರಿಸುವಂಥ ವಸ್ತ್ರಾಭರಣಕ್ಕೆ ಮೊದಲಾಗಿ
ಪ್ರತಿ ಪದಾರ್ಥವ ವಿಚಾರಮುಖದಲ್ಲಿ ಪಾತ್ರಾ ಪಾತ್ರವ ತಿಳಿದು ಸಮರ್ಪಿಸಿ.
ನಿಜನೈಷ್ಠೆಯಿಂದ ಪರದ್ರವ್ಯವ ತಂದು ಗುರುಲಿಂಗ ಜಂಗಮವ ಒಡಗೂಡಿ
ಋಣಭಾರಕ್ಕೊಳಗಾಗದೆ ನಡೆ ನುಡಿ ಒಂದಾಗಿ ಆಚರಿಸುವರೆ
ತ್ರಿವಿಧ ಪ್ರಸಾದಿಗಳು ನೋಡ !
ಈ ವಿಚಾರವ ಸದ್ಗುರುಮುಖದಿಂದ ಬೆಸಗೊಂಡು ಆಚರಿಸುವರೆ
ಅಚ್ಚ ಪ್ರಸಾದಿ, ನಿಚ್ಚ ಪ್ರಸಾದಿ, ಸಮಯಪ್ರಸಾದಿ ನೋಡ!
ಈ ವಿಚಾರವನರಿಯದೆ, ಶ್ರುತಿ-ಗುರು-ಸ್ವಾನುಭಾವವ ತಿಳಿಯದೆ,
ವಾಚಾಳಕತ್ವದಿಂದ ನುಡಿದು,
ತಾವು ಗುರುಲಿಂಗಜಂಗಮ ಪ್ರಸಾದಿಗಳೆಂಬ ಮೂಳರ ಬಾಯಮೇಲೆ
ಗಣಂಗಳು ಮೆಟ್ಟಿದ ಚಮ್ಮಾವಿಗೆಯ ತೆಗೆದುಕೊಂಡು
ಪಟಪಟನೆ ಹೊಡೆಯೆಂದಾತ ನಂಬಿಗರ ಚೌಡಯ್ಯನು
ನೋಡ, ಸಂಗನ ಬಸವೇಶ್ವರ.

ಅಂಬಿಗರ ಚೌಡಯ್ಯ ಶರಣರು ತಮ್ಮ ಈ ವಚನದಲ್ಲಿ ಅಚ್ಚ ಪ್ರಸಾದಿ, ನಿಚ್ಚ ಪ್ರಸಾದಿ, ಸಮಯ ಪ್ರಸಾದಿ ಎಂಬ ಮೂರು ಪ್ರಸಾದ ನಿಯಮಗಳನ್ನು ಮನನಷ್ಟ ಮಾಡಿಕೊಂಡು ತನುವಿನ ಮೂಲಕ ಆನಂದದಿಂದ ಹೇಗೆ ಪಾಲಿಸಬಹುದು ಎಂಬ ಸೂತ್ರವನ್ನು ಓದುಗರಿಗೆ ಸರಳವಾಗಿ ನೀಡಿದ್ದಾರೆ.

ತನುವಿಗೆ ಬಡಿದ ರಸ ರೂಪು ಸ್ಪರ್ಶ ಶಬ್ದ ಮೊದಲಾದ ಸಮಸ್ತ ಪದಾರ್ಥಗಳನ್ನು ಗುರುವಿಗೆ ಲಿಂಗಕ್ಕೆ ಜಂಗಮಕ್ಕೆ ಹೇಗೆ ಸಮರ್ಪಿಸಬೇಕು ? ಅವರು ಉಂಡು ಉಳಿದುದನು ತೃಪ್ತಿಯಿಂದ ಸಹಜವಾಗಿ ಹೇಗೆ ಸ್ವೀಕರಿಸಬೇಕೆಂಬ ಮಹಾಸೂತ್ರವನ್ನು ವಿವರಿಸಿದ್ದಾರೆ ಚೌಡಯ್ಯ ಶರಣರು.

ಗಂಧ ರಸ ರೂಪು ಸ್ಪರ್ಶ ಶಬ್ದಗಳನ್ನು ಸರಳವಾಗಿ ಸಹಜವಾಗಿ ಭೋಗಿಸಿ ಸ್ವೀಕರಿಸುವಾತ ಪ್ರಸಾದಿ ಎಂದು ಕರೆದಿದ್ದಾರೆ.

ಇದು ಸಾಮಾನ್ಯ ಮಾತಲ್ಲ. ಸಕಲ ತನುಗಳಿಗೂ ಈ ಮಾತು ನಿಲುಕುವಂಥದ್ದಲ್ಲ. ಶರಣರ ಸಂಗ ಮಾಡಿದ ತನುವಿಗೆ ಮಾತ್ರ ಎಟಕುವಂಥ ಮಾತು.

ಗಂಧದ ಪರಿಮಳವನ್ನು ಮೂಗು ಆನಂದದಿಂದ ಪ್ರಸಾದ ಮಾಡಿಕೊಳ್ಳಬಹುದು ಅದನ್ನು ಗುರುಲಿಂಗಜಂಗಮರಿಗೂ ಅರ್ಪಿಸಬಹುದು ಆದರೆ ದುರ್ಗಂಧವನ್ನು ಆನಂದದಿಂದ ಸಹಜವಾಗಿ ಪ್ರಸಾದ ಮಾಡಿಕೊಳ್ಳುವ ಬಗೆ ಮೂಗಿಗೆ ಗೊತ್ತಿಲ್ಲ.ಸುಗಂಧ ಪರಿಮಳ ಮೂಗಿಗೆ ಪ್ರಸಾದವಾಯಿತು ದುರ್ಗಂಧ ಮೂಗಿಗೆ ಪರಿಮಳವಾಗಲಿಲ್ಲ, ಪ್ರಸಾದವೂ ಆಗಲಿಲ್ಲವೆಂದರೆ ಅವನು ಪ್ರಸಾದಿಯಲ್ಲ.

ಅರಳಿದ ಮಲ್ಲಿಗೆ ಸುಗಂಧವಾದರೆ, ಕೊಳೆತ ಮಲ್ಲಿಗೆ ದುರ್ಗಂಧ ! ಸುಗಂಧದಿಂದಲೇ ದುರ್ಗಂಧದ ಜನನ. ಮೂಗಿಗೆ ಒಂದು ಪ್ರಸಾದ ಮತ್ತೊಂದು ದುರ್ಗಂಧವಾದರೆ ಅದು ಅಚ್ಚ ಪ್ರಸಾದಿಯಲ್ಲ.ಮೂಗಿನ ಸೂತ್ರ ಮೂಗಿಗೆ ತಿಳಿದಿಲ್ಲವೆಂದೇ ಅರ್ಥ. ಇದರ ಪರಿಚಯವೂ ಮೂಗಿನಲ್ಲಿಯೇ ಇದೆ ಇದರ ಅಜ್ಞಾನವೂ ಮೂಗಿನಲ್ಲಿಯೇ ಇದೆ. ಮೂಗು ಶಾಂತವಾಗಿ ಸುಗಂಧ ಮತ್ತು ದುರ್ಗಂಧಗಳೆರಡನ್ನೂ ಕಳೆದು ಪ್ರಸಾದ ಮಾಡಿಕೊಳ್ಳಬೇಕು. ಈ ಸೂತ್ರ ಮೂಗಿನಲ್ಲಿಯೇ ಇದೆ. ಅದನ್ನು ಮೂಗೇ ಪಡೆಯಬೇಕು.

ಸುಗಂಧವನ್ನು ಆನಂದದಿಂದ ಹೀರುವ ಮೂಗು ಮೂಗಲ್ಲ ; ದುರ್ಗಂಧವನ್ನು ಮೂಸಿಸಿ ಮುಚ್ಚಿಕೊಳ್ಳುವ ಮೂಗೂ ಮೂಗಲ್ಲ. ಸುಗಂಧವನ್ನು ದುರ್ಗಂಧವನ್ನು ಪವಿತ್ರ ಮಾಡಿ ನಿರ್ವ ಂಚಕತ್ವದಿಂದ ಜಂಗ(ಅರಿವು)ಮನಿಗೆ ಅರ್ಪಿಸಿ ಸಹಜವಾಗಿ ಸ್ವೀಕರಿಸುವುದೇ ಅಚ್ಚ ಪ್ರಸಾದ, ನಿಚ್ಚ ಪ್ರಸಾದ, ಸಮಯ ಪ್ರಸಾದವು !

ದ್ರಾಕ್ಷಾ ಫಲದ ವಾಸನೆ ಮೂಗಿಗೆ ಪರಿಮಳ ಬೀರಿದರೆ ಅದು ಕೊಳೆತ ಮೇಲೆ ದುರ್ಗಂಧ ಬೀರುತ್ತದೆ. ಒಂದು ಬೇಕು ಮತ್ತೊಂದು ಬೇಡವೆನ್ನುವುದು ಮೂಗಿನ ಅಜ್ಞಾನ. ಸುಗಂಧ ದುರ್ಗಂಧಗಳೆರಡೂ ಸಹಜವಾಗಿ ಮೂಗಿಗೆ ಪ್ರಸಾದವಾಗುವುದೇ ಜ್ಞಾನ !

ಕೊಳೆತ ದ್ರಾಕ್ಷಿಯಿಂದ ತಯಾರಿಸಿದ ಬ್ರಾಂದಿ ರಸದ ವಾಸನೆ ಒಂದು ಮೂಗಿಗೆ ಪರಿಮಳ ಬೀರಿದರೆ ಮತ್ತೊಂದು ಮೂಗಿಗೆ ದುರ್ಗಂಧ ಬೀರುತ್ತದೆ. ತನು ಹೆಣ್ಣಾದರೇನು ? ಗಂಡಾದರೇನು ಮೂಗಿನ ಕ್ರಿಯೆ ಮಾತ್ರ ಒಂದಲ್ಲವೆ ? ಜಾತಿ ಮತ ಪಂಥ ಭಾಷೆಗಳು ಮೂಗಿಗೆ ತಿಳಿಯುವುದಿಲ್ಲ. ಸುಗಂಧ ದುರ್ಗಂಧ ಎನ್ನುವುದು ಮಾತ್ರ ತಿಳಿಯುತ್ತದೆ. ಇದು ಕೂಡಾ ಅಜ್ಞಾನವೆಂದು ಮೂಗಿಗೆ ತಿಳಿಯುವುದಿಲ್ಲ; ಮೂಗಿನಲ್ಲಿಯೇ ಇರುವ ಮೂಗಿನ ಮೂಗಿಗೆ ಮಾತ್ರ ತಿಳಿಯದೇ ಇರುವುದಿಲ್ಲ.

ಮೂಗಿನಲ್ಲಿಯೇ ಇರುವ ಮೂಗಿನ ಮೂಗೇ ಅರಿವಿನ ಮೂಗು ! ಆ ಮೂಗು ಸುಗಂಧ ದುರ್ಗಂಧಗಳನ್ನು ನಷ್ಟ ಮಾಡಿ ಗಂಧದಲ್ಲಿ ಬೆರೆತ ಅರಿವಿನ ಪರಿಮಳವನ್ನು ಮಾತ್ರ ಆನಂದದಿಂದ ಹೀರುತ್ತದೆ. ಈ ಮೂಗಿಗೆ ಶರಣರು ಜಂಗಮ ಮೂಗೆಂದು ಕರೆದರು. ಸುಗಂಧ ದುರ್ಗಂಧವೆಂಬ ಎರಡು ವಾಸನೆ ಅಜ್ಞಾನಿ ಮನಕ್ಕೆ ಪರಿಚಯ.ಇದು ಮೂಗನ್ನು ಆವರಿಸಿದೆ. ಮೂಗಿ ನಲ್ಲಿ ಅರಿವು ಸಂಗಮವಾಗಿದೆ. ಇಂತಹ ಅರಿವಿಗೆ ಸುಗಂಧ ದುರ್ಗಂಧಗಳನ್ನು ಅರ್ಪಿಸಲು ಮನಕ್ಕೆ ಸಾಧ್ಯವೆ ಹೇಗೆ ಎಂಬುದನ್ನು ಮನವೆ ಆಲೋಚಿಸಬೇಕು.

ದ್ರಾಕ್ಷಾ ಫಲ ಮನಕ್ಕೆ ಬಲು ಇಷ್ಟ ! ಕೊಳೆತ ದ್ರಾಕ್ಷಾರಸವೂ ಮನಕ್ಕೆ ಬಲು ಇಷ್ಟ ! ದ್ರಾಕ್ಷಾ ಫಲವನ್ನು ತಿಂದ ಮನ ತನುವಿಗೆ ಸಾತ್ವಿಕ ವೇಷ ಹಾಕುತ್ತದೆ. ಕೊಳೆತ ದ್ರಾಕ್ಷಾ ರಸವನ್ನು

ಕುಡಿದ ಮನ ತನುವಿಗೆ ತಾಮಸ ವೇಷ ಧರಿಸಿಕೊಳ್ಳುತ್ತದೆ. ಸಮಾಜದಲ್ಲಿ ಸಾತ್ವಿಕ ತನುವಿಗೆ ಗೌರವ ; ತಾಮಸ ತನುವಿಗೆ ಅಗೌರವ. ತನುಗಳೆರಡೂ ಒಂದೇ ಅವುಗಳಿಗೆ ಆವರಿಸಿದ ಮನ ಕೂಡಾ ಒಂದೇ , ಎರಡೂ ತನುಗಳಿಗಿರುವ ಮೂಗು ಕೂಡಾ ಒಂದೇ. ಆದರೂ ಒಂದಕ್ಕೆ ಗೌರವ ; ಮತ್ತೊಂದಕ್ಕೆ ಅಗೌರವ ! ಇದು ಮನದ ಕೆಲಸವೆಂದು ಮನಕ್ಕೆ ಗೊತ್ತಿರಬೇಕು. ತನುವಿನಲ್ಲಿ ತನ್ಮಯವಾದ ಅರಿವಿನ ಶಿಕ್ಷಣವನ್ನು ಮನವೇ ಕಲಿತು ಘನಮನವಾಗಬೇಕು. ಇದು ಬಲು ಜಟಿಲ ! ದ್ರಾಕ್ಷಾ ಫಲ ತಿಂದು ಸ್ವಾಮಿಯ ವೇಷ ಧರಿಸುತ್ತದೆ. ಕೊಳೆತ ದ್ರಾಕ್ಷಾ ರಸ ಕುಡಿದು ಅಜ್ಞಾನದಿಂದ ತೂರಾಡುತ್ತದೆ. ಸ್ವಾಮಿಯ ವೇಷ ಧರಿಸಿದರೇನು, ಕುಡಿದು ತೂರಾಡಿದರೇನು ಇವೆರಡೂ ಅಜ್ಞಾನ ತನುಗಳೆಂದು ಅದಕ್ಕೆ ಮನವೇ ಕಾರಣವೆಂದು ಮನಕ್ಕೆ ತಿಳಿಯು ವುದಿಲ್ಲ. ಏಕೆಂದರೆ ಸಕಲ ತನುಗಳನ್ನು ಮನ ಆವರಿಸಿದೆ. ಜ್ಞಾನ ತನುವಿನಲ್ಲಿಯೇ ತನ್ಮಯ ವಾಗಿದೆ ; ಉತ್ತರ ದಕ್ಷಿಣದಂತೆ ! ಒಂದನ್ನೊಂದು ಸಂಧಿಸಿ ಸಂಗಮವಾಗುವುದು ಬಲು ಜಟಿಲ.

ವಿಚಾರವನರಿಯದೆ,ಸ್ವಾನುಭಾವವ ತಿಳಿಯದೆ, ಗುರು ಲಿಂಗ ಜಂಗಮಪ್ರಸಾದಿಗಳೆಂಬ ವಾಚಾಳಿತನದಿಂದ ನುಡಿಯುವ ಮೂಳರ ಬಾಯಮೇಲೆ ಗಣಂಗಳು ಮೆಟ್ಟಿದ ಚಮ್ಮಾವುಗೆಯ ತೆಗೆದುಕೊಂಡು ಪಟಪಟನೆ ಹೊಡೆಯೆಂದಾತನು ಅಂಬಿಗರ ಚೌಡಯ್ಯನು ನೋಡಾ ಸಂಗನಬಸವೇಶ್ವರಾ :

ದ್ರಾಕ್ಷಿ ಉತ್ತಮ. ಕೊಳೆತ ದ್ರಾಕ್ಷಾರಸ ಅಧಮ ಹೇಗೆ ? ಸ್ವಾನುಭವದಿಂದ ಯೋಚಿಸಲು ಹೋದರೆ ದ್ರಾಕ್ಷಾ ಸಸಿಗೆ ಹರಿದದ್ದು ಜಲ. ಸಸಿ ಜಲದಿಂದ ಆವೃತ್ತವಾಗಿದೆ. ಅದರ ಎಲೆ ,ಹೂ, ಫಲಗಳು ಜಲದಿಂದಲೇ ಆವೃತ್ತಗೊಂಡಿವೆ. ಸಸಿಯು ಬೇರು,ಕಾಂಡ,ರೆಂಬೆ,ಕೊಂಬೆ,ಎಲೆ, ಚಿಗುರು,ಎಸಳು ಹೂ,ಕಾಯಿ,ಹಣ್ಣು ಬೇರೆ ಬೇರೆ ರುಚಿ ಮತ್ತು ವಾಸನೆಗಳಿಂದ ಕೂಡಿದೆ. ಸಸಿಗೆ ಹರಿದ ಜಲಕ್ಕೆ ಮಾತ್ರ ವಾಸನೆಯಿಲ್ಲ,ಬಣ್ಣವಿಲ್ಲ,ರುಚಿ ಇಲ್ಲ, ತನ್ನ ಮಟ್ಟ ತಾನು ಕಾಯ್ದು ಕೊಳ್ಳುತ್ತದೆ. ಈ ನಾಲ್ಕು ಗುಣಗಳು ಜಲಕ್ಕಿದ್ದರೆ ಜಲಭರಿತ ಪದಾರ್ಥಗಳಲ್ಲಿ ಈ ನಾಲ್ಕು ಗುಣಗಳು ಇಲ್ಲವಾಗಿವೆ. ವಾಸನೆ ರಸ ರುಚಿ ಗಂಧಾದಿ ಗುಣಗಳು ಸೃಷ್ಟಿಯಾಗಿವೆ !

ದ್ರಾಕ್ಷಾ ಸಸಿಯಲ್ಲಿ ಭರಿತವಾದ ಜಲ ಸತ್ಯವೋ, ವಾಸನೆ ರಸ ರುಚಿ ಗಂಧಾದಿಗಳು ಸತ್ಯವೋ ? ಸ್ವಾನುಭವದಿಂದ ಅರಿತಾಗ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಜಂಗಮ ಜಾಗೃತನಾಗುತ್ತಾನೆ. ತನುವನ್ನು ಆವರಿಸಿದ ಮನವೆಂಬ ಅಜ್ಞಾನಿಗೆ ಅರಿವಿನ ಪಾದರಕ್ಷೆಯಿಂದ ಪಟಪಟನೆ ಹೊಡೆಯುತ್ತಾನೆ. ಅಜ್ಞಾನದ ಸಾಗರವನ್ನು ಜ್ಞಾನದಿಂದ ದಾಟಿ ಜಾಣ ಅಂಬಿಗನಾಗುತ್ತಾನೆ ಎಂದು ಮಹಾಜ್ಞಾನಿ ಬಸವೇಶ್ವರನಿಗೆ ಮಹಾಜ್ಞಾನಿ ಅಂಬಿಗರ ಚೌಡಯ್ಯ ವಿವರಿಸಿದ್ದಾರೆ.

ಬಸವಣ್ಣ ಸಚಿವನಾದರೇನು ? ಚೌಡಯ್ಯ ಅಂಬಿಗನಾದರೇನು ? ತನುಗಳೆರಡೂ ಒಂದೇ ; ತನ್ಮಯವಾದ ಅರಿವು ಒಂದೇ. ಆವರಿಸಿದ ಮನ ಒಂದೇ. ಮನದಿಂದಲೇ ಸ್ವಾನುಭವಕ್ಕೆ ಹೋಗಿ ಅರಿವನ್ನು ಅರಿತು ಆ ಅರಿವನ್ನೇ ಆಚರಿಸಿ ಕ್ರಿಯೆಗೆ ತಂದ ಮಹಾನುಭಾವ ಮನವೇ ಘನಮನ. ತನುವೇ ಮಹಾಜ್ಞಾನಿ ತನು. ಆ ತನುವಿನಿಂದ ನೋಡಿದ ನೋಟವೆಲ್ಲ ಲಿಂಗಮಯ. ಕೇಳಿದ ಶಬ್ದವೆಲ್ಲ ಲಿಂಗಮಯ. ರುಚಿಸಿದ ಪದಾರ್ಥವೆಲ್ಲ ಲಿಂಗಮಯ. ಸ್ಪರ್ಶಿಸಿದ ಸ್ಪರ್ಶವೆಲ್ಲ ಲಿಂಗಮಯ.ಮೂಸಿಸಿದ ಸುಗಂಧ ದುರ್ಗಂಧವೆಲ್ಲ ಲಿಂಗಮಯವಾಗಿ ಲಿಂಗಕ್ಕೆ

ಅರ್ಪಿತವಾಗುತ್ತದೆ.

**21**

**ಅಯ್ಯಾ ಆಚಾರವುಳ್ಳ ಕಾಂಚೀ ಪಟ್ಟಣದಲ್ಲಿ**
**ಒಂದು ಗಂಡುಕತ್ತೆಯು ಸತ್ತು ಬಿದ್ದಿರಲು,**
**ಕತ್ತೆಯಂ ಕೈಲಾಸದ ಪಾಲು ಮಾಡಬೇಕೆಂದಿದ್ದರಯ್ಯಾ ,**
**ಯಾರ್ಯಾರು ಎಂದರೆ :**
**ಶೆಟ್ಟಿಗಾದರಿ, ಪೃಥ್ವಿಶೆಟ್ಟಿ, ಕೋರಿಶೆಟ್ಟಿ,ಬಳೇಶೆಟ್ಟಿ,**
**ನಾಡನಾಲಗೆ, (ಮಿಂಡ)ಗುದ್ದಲಿ,ಬಡವ,ಬೋವಿಯಂತಪ್ಪ**
**ಎಂಟು ಕಟ್ಟೆಯವರು ಕೂಡಿಕೊಂಡು**
**ಆ ಕತ್ತೆಯಂ ಮಂಚದ ಮೇಲೆ ಇಟ್ಟುಕೊಂಡು**
**ಕಮ್ಮೆಣ್ಣೆ, ಕಸ್ತೂರಿ, ಗಂಧ, ಪುನುಗು, ಜವ್ವಾಜಿ,**
**ಬುಕ್ಕ, ಹಿಟ್ಟು, ಊದಿನಕಡ್ಡಿ-ಇಂತಪ್ಪ ಅಷ್ಟ ಗಂಧದಿಂದ**
**ಮೇಳ ಭಜಂತ್ರಿಯಿಂದ ಒಯ್ದು,**
**ನರಿಪಾಲು ಮಾಡಿ ಬಂದರಯ್ಯಾ .**
**ಛೇ, ಛೇ ಎಂದು ಕಣ್ಣಯ್ಯಗಳ ಎಡದ ಪಾದರಕ್ಷೆಯಂ ತೆಗೆದುಕೊಂಡು**
**ಅವರ ಮುದ್ದು ಮುಖದ ಮೇಲೆ**
**ಕುಟ್ಟಿದಾತನೆ ನಮ್ಮ ಅಂಬಿಗರ ಚೌಡಯ್ಯನೆಂಬೊ ಶಿವಶರಣನು.**

ದೇಹವನ್ನೇ ದೇಶ ಪಟ್ಟಣ ಪುರ ಎಂದು ಕರೆದರು ಶಿವಶರಣರು. ದೇಶವೆಂದರೆ (space) ಬಯಲು. ಹೀಗಾಗಿ ದೇಹದಲ್ಲಿ ದೇಶವಿದೆ. ಉಪ-ದೇಶ. ದೇಶವೇ ದೇಹ. ದೇಹದಲ್ಲಿ ಬಯ ಲು ಇದೆ ಎಂದು ಹೇಳುವುದನ್ನೇ ಉಪ-ದೇಶ ಎಂದರು. ಉಪದೇಶ ಎಂದರೆ ಗುರು ಶಿಷ್ಯನಿಗೆ ಬೋಧಿಸುವುದು ಅಲ್ಲ. ಆದರೆ '' ಉಪ-ದೇಶ '' ಶಬ್ದವನ್ನು ಜಗತ್ತು ಹಾಗೆ ತಿಳಿದುಕೊಂಡಿದೆ.

ದೇಹವನ್ನು ಅಗೋಚರದ ಆಚಾರವುಳ್ಳ ಕಾಂಚೀಪಟ್ಟಣ ಎಂದು ಅಂಬಿಗರ ಚೌಡಯ್ಯ ಶರಣರು ಕರೆದಿದ್ದಾರೆ. ದೇಹದಲ್ಲಿ ದೇಶವಿದೆ. ದೇಶ ಬಯಲಿನಿಂದ ಭರಿತವಾಗಿದೆ. ಹೀಗೆ ಒಳಹೊರಗೆನ್ನದೆ ಬಯಲಿನಿಂದ ಭರಿತವಾದ ದೇಹವೇ ಕಾಂಚೀಪಟ್ಟಣ. ಇಂತಹ ಕಾಂಚೀ ಪಟ್ಟಣವೆಂಬ ದೇಹ ಹೆಣ್ಣೂ ಅಲ್ಲ ; ಗಂಡೂ ಅಲ್ಲ. ಹಾಗೆ ಅರಿವಿನಿಂದ ನೋಡಿದರೆ ಸಕಲ ದೇಹದೊಳಗೆ ಗಂಡರ ಗಂಡನೆಂಬ ಗಂಡು ವಾಸವಾಗಿದ್ದಾನೆ. ಈತ ಕೈಲಾಸ ಪತಿಯೂ ಹೌದು. ಈತ ವಾಸವಾದ ದೇವಾಲಯವೇ ಕೈಲಾಸವಾಗಿದೆ. ಆದರೆ ಇದನ್ನು ತಿಳಿಯದ ಮನವೆಂಬ ಹೆಣ್ಣು ಕೈಲಾಸದಂತಿರುವ ಕೈಲಾಸವನ್ನೇ ಕೈಲಾಸದ ಪಾಲು ಮಾಡಬೇಕೆಂದಿದ್ದಾಳೆ. ಈಕೆ ಒಬ್ಬಂಟಿಗಳಲ್ಲ, ಈಕೆಯೊಂದಿಗೆ ಎಂಟು ಜನ ಬಂಟಣಿಗರೂ ಕೂಡಿಕೊಂಡಿದ್ದಾರೆ.

ಮನವೆಂಬ ಮಹಾಸತಿಯ ಬಂಟಣಿಗರಿವರು. ಈಕೆಯೊಂದಿಗೆ ಈಕೆಯ ಸಹೋದರರೂ ಸೇರಿ ಈಕೆಯಿದ್ದ ಮನೆಯನ್ನೇ ಹಾಳುಗೆಡವಿದ್ದಾರೆ. ದೇಹವೆಂಬ ದೇವಾಲಯವನ್ನೇ ನಾಯಿ ನರಿ

ಪಾಲು ಮಾಡಿ ಗಂಡುಗತ್ತೆಯನ್ನಾಗಿಸಿದ್ದಾರೆ.

ಅಷ್ಟ ಮದಗಳೆಂಬ ಈ ಜನಕ್ಕೆ ತಾವು ವಾಸಿಸುವ ಜಗವಿದು ; ಕೈಲಾಸವಿದು ; ಕೈಲಾಸ ಪತಿಯೇ ವಾಸಿಸುವ ಈ ಸ್ಥಾನವನ್ನು ಕೈಲಾಸದಂತಿಡಬೇಕೆಂಬ ಕಬುರು ಇಲ್ಲದ ಕಬುರು ಗೇಡಿಗಳಿವರು. ದೇಹವೆಂಬ ದೇವಾಲಯಕ್ಕೆ ಕಮ್ಮಣ್ಣೆ,ಕಸ್ತೂರಿ,ಗಂಧ,ಪುನುಗು,ಜಿವ್ವಾಜಿ, ಬುಕ್ಕ,ಹಿಟ್ಟು ಮೆತ್ತಿ ,ಊದಿನಕಡ್ಡಿ ಬೆಳಗಿ ಪೂಜಿಸುತ್ತಾರೆ.ಪೂಜೆಗೊಳಗಾದ ದೇಹ,ಪೂಜಿಸಲ್ಪಡುವ ದೇಹ ಒಂದೇ ; ಇವೆರಡೂ ಕೈಲಾಸಗಳೇ ಎಂದು ತಿಳಿಯದ ಮದವೇರಿದ ಮದ್ದಾನೆಗಳಿವರು.

ದೇಹವಿದ್ದಾಗಲೇ ದೇಹದಲ್ಲಿಯೇ ಹುಟ್ಟಿ, ದೇಹವನ್ನೇ ನರಿಪಾಲು ಮಾಡುವ ರಕ್ಕಸರಿವರು.ಕಣ್ಣಿದ್ದು ಕಣ್ಣು ಕಾಣದ ಕುರುಡರಿವರು. ಇಂತಹವರ ಮುದ್ದು ಮುಖದ ಮೇಲೆ ಎಡ ಪಾದರಕ್ಷೆಯಿಂದ ಹೊಡೆಯೆಂದಾತ ನಮ್ಮ ಅಂಬಿಗರ ಚೌಡಯ್ಯನೆಂಬೊ ಶಿವಶರಣನು.

**22**

**ಅಯ್ಯಾ, ನಾವು ಪರಮ ವಿರಕ್ತರು,**
**ಪಟ್ಟದ ಅಯ್ಯನವರು, ಚರಮೂರ್ತಿಗಳು, ಪರದೇಶಿಗಳು ಎಂದು**
**ಶಂಖ ಗಿಳಿಲು ದಂಡಾಗ್ರ ಎಂಬ ಬಿರುದು ಪಿಡಿದು,**
**ಕಾವಿ ಕಾಷಾಯಾಂಬರವ ಹೊತ್ತು ,**
**ಸರ್ವ ಕಾರ್ಯದಲ್ಲಿ ಶ್ರೇಷ್ಠರೆಂದು ಗರ್ವದಲ್ಲಿ ಕೊಬ್ಬಿ,**
**ಕಾಮನಾಟದಲ್ಲಿ ಕಲಕಿ, ಮನಸ್ಸಿನಲ್ಲಿ ದುರ್ಗಣವನ್ನಿಟ್ಟುಕೊಂಡು,**
**ಮಾತಿನಲ್ಲಿ ನೀತಿಯ ಸೇರಿಸುತ್ತ ಕಪಟದಲ್ಲಿ ಚರಿಸುವಂತಹ**
**ತೊನ್ನ ಹೊಲೆಮಾದಿಗರ ಸಂಗ ಮಾಡಲಾಗದು,**
**ಅವರ ಪ್ರಸಂಗವ ಕೇಳಲಾಗದು.**
**ಅದೇನು ಕಾರಣವೆಂದಡೆ :**
**ಗುರುಲಿಂಗಜಂಗಮವಾದ ಬಳಿಕ**
**ಅಷ್ಟಾವರಣದಲ್ಲಿ ನಿಷ್ಠಾ ಪರವಾಗಿರಬೇಕು.**
**ಪರಧನ ಪರಸತಿಯರ ಹಿಡಿಯೆನೆಂಬ ನೇಮದಲ್ಲಿ ಬಲ್ಲಿದರಾಗಿರಬೇಕು.**
**ಶಿವಭಕ್ತರಾದವರ ಭವವ ಗೆಲಿಸಿ ಮೋಕ್ಷವ ಹೊಂದಿಸಬೇಕು.**
**ಶಿವಲಾಂಛನವ ಹೊತ್ತ ಬಳಿಕ ಶಿವನಂತಿರಬೇಕು.**
**ಬರಿದೆ, ನಾನು ಮಾಹೇಶ್ವರನೆಂದು, ನಾನು ಶಿವಭಕ್ತನೆಂದು**
**ತನ್ನ ಹೃನ್ಮಂದಿರದಲ್ಲಿ ನೆಲೆಸಿದ ಚಿನ್ಮಯಜಂಗಮಲಿಂಗಕ್ಕೆ**
**ತನು-ಮನ-ಧನವೆಂಬ ತ್ರಿವಿಧಪದಾರ್ಥವನರ್ಪಿಸಿ,**
**ತ್ರಿವಿಧ ಪ್ರಸಾದವ ಗರ್ಭೀಕರಿಸಿಕೊಂಡು, ಪ್ರಸನ್ನ ಪ್ರಸಾದವ ಸ್ವೀಕರಿಸಿ**
**ಪರತತ್ವ ಪ್ರಸಾದದಲ್ಲಿ ತಾನು ತಾನಾಗಲರಿಯದೆ**
**ಉಚ್ಚಂಗಿದುರ್ಗಿಗೆ ಬಿಟ್ಟ ಪೋತರಾಜನಂತೆ**
**ಮೂರು ಮೂರು ಜಡೆಗಳ ಬಿಟ್ಟು,**
**ಆಡಿನೊಳಗಿರುವ ಹಿರಿಯ ಹೋತಿನಂತೆ**

ಮೊಳ ಮೊಳ ಗಡ್ಡವ ಬಿಟ್ಟು,
ಡೊಂಬ ಜಾತಿಗಾರನಂತೆ ವೇಷವ ತೊಟ್ಟು,
ಮೀಸೆಯ ಬೋಳಿಸಿಕೊಂಡು,ಕೈಪವ ಧರಿಸಿ,
ಸಂಸ್ಕೃತ ಗೀರ್ವಾಣ ಭಾಷೆಯ ಕಲಿತು,
ಕಾಕ ಕುಟಿಲ ಕುಹಕದ ಗಾಳಿಪೂಜೆಯಿಂದ ಬಂದ
ಸುಡಗಾಡು ಸಿದ್ದಯ್ಯಗಳಂತೆ,
ಗಿಡಮೂಲಿಕೆಗಳು ತಂತ್ರ ಮಂತ್ರ ಯಂತ್ರದ ಭಾಷೆಗಳ ಕಲಿತುಕೊಂಡು
ಪುರಜನರ ಮೆಚ್ಚಿಸಬೇಕೆಂದು,
ಅಯ್ಯಾ, ನಾವು ಕೆರೆ ಭಾವಿಯನಗೆಸಬೇಕೆಂದು,
ಮಠ ಗುಡಿಯ ಕಟ್ಟಿಸಬೇಕೆಂದು,
ಮಾನ್ಯದಲ್ಲಿ ಬಿಲ್ವಗಿಡಗಳ ಹಚ್ಚಬೇಕೆಂದು,
ಮದುವೆ ಅಯ್ಯಾಚಾರವ ಮಾಡಬೇಕೆಂದು,
ಅನ್ನಕ್ಷೇತ್ರ ಅರವಟ್ಟಿಗೆಯ ಇಡಿಸಬೇಕೆಂದು,
ಪುರಾಣಗಳ ಹಚ್ಚಿಸಬೇಕೆಂದು,
ಇಂತಪ್ಪ ದುರಾಸೆಯ ಮುಂದುಗೊಂಡು ನಾನಾ ದೇಶವ ತಿರುಗಿ,
ಅರಸರ ಮದದಂತೆ ಗರ್ವದಂತೆ ಹೆಚ್ಚಿ,
ಹೇಸಿ ಹೊಲೆಮಾದಿಗರ ಕಾಡಿ ಬೇಡಿ,
ಹುಸಿಯನೆ ಬೊಗಳಿ ಒಬ್ಬನ ಒಲವ ಮಾಡಿಕೊಂಡು,
ವ್ಯಾಪಾರ ಮರ್ಯಾದೆಯಲ್ಲಿ ಪೇಟೆಯಲ್ಲಿ ಕುಳಿತು
ಅನಂತ ಮಾತುಗಳನ್ನಾಡುತ್ತ, ಸೆಟ್ಟಿ ಮುಂತಾದ ಅನಂತ
ಕಳ್ಳ ಹಾದರಗಿತ್ತಿಯ ಮಕ್ಕಳ ಮಾತಿನಿಂದೊಲಿಸಿ,
ಅವರು ಕೊಟ್ಟಡೆ ಹೊಗಳಿ, ಕೊಡದಿರ್ದಡೆ ಬೊಗಳಿ,
ಆ ಭ್ರಷ್ಟ ಹೊಲೆ ಮಾದಿಗರು ಕೊಟ್ಟ ದ್ರವ್ಯಗಳ ತೆಗೆದುಕೊಂಡು ಬಂದು
ಕಡೆಗೆ ಚೋರರು ಒಯ್ದರೆಂದು ಮಠದೊಳಗೆ ಮಡಗಿಕೊಂಡು
ಪರಸ್ತ್ರೀಯರ ಹಡಕಿ ಯೋನಿಯೊಳಗೆ ಇಂದ್ರಿಯ ಬಿಟ್ಟು,
ಕಾಮಕ್ರೋಧದಲ್ಲಿ ಮುಳುಗಿ ಮತಿಗೆಟ್ಟು,
ಶಿವಪಥಕ್ಕೆ ದೂರಾಗಿ ದುರಾಚಾರವ ಆಚರಿಸಿ,
ನಡೆ ನುಡಿಗಳ ಹೊರತಾಗಿ, ವ್ಯರ್ಥ ಹೊತ್ತುಗಳೆದು,
ಸತ್ತು ಹೋಗುವ ಜಡದೇಹಿ ಕಡುಪಾತಕ ಕತ್ತೆ ಹಡಿಕರಿಗೆ
ಪರಮ ನಿರಂಜನ ಜಂಗಮಲಿಂಗದೇವರೆಂದು ಕರೆತಂದು,
ಪಾದತೀರ್ಥ ಪ್ರಸಾದವ ತೆಗೆದುಕೊಂಬುವರಿಗೆ
ಇಪ್ಪತ್ತೊಂದು ಯುಗಪರಿಯಂತರ ನರಕಕೊಂಡದಲ್ಲಿಕ್ಕುವ.
ಇಂತಪ್ಪ ಜಂಗಮವನು ಪೂಜೆ ಮಾಡುವಂತಹ ಶಿವಭಕ್ತನ
ಉಭಯತರ ಮೂಗ ಸೀಳಿ ಮೆಣಸಿನ ಹಿಟ್ಟು ತುಪ್ಪವ ತುಂಬಿ,

**ಪಡಿಹಾರಿ (ಉತ್ತಣ್ಣ)ಗಳೆಡದ ಪಾದುಕೆಯಿಂದ ಪಡಪಡನೆ ಹೊಡಿ**
**ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.**

ಅಂಬಿಗರ ಚೌಡಯ್ಯಗಳ ಈ ವಚನ ವಿರಕ್ತ ಗುರುವರ್ಗವನ್ನು ಗಮನದಲ್ಲಿಟ್ಟುಕೊಂಡು ಸೂತ್ರವನ್ನು ಹೆಣೆದಿದ್ದಾರೆ. ವಿರಕ್ತ ಹಾಗೂ ಗುರುಸ್ಥಲದ ಗುರುಗಳು ಈ ವಚನವನ್ನು ಸರಿಯಾಗಿ ಗಮನಿಸಿದರೆ ಸಾಕು ಆಯಾ ವಿರಕ್ತ ತನುಗಳನ್ನು ಸುತ್ತಿಕೊಂಡ ಮನ ನಾಚಿ ನೀರಾಗುತ್ತದೆ. ಬ್ರಹ್ಮ ಸೂತ್ರ ಕಂಡುಕೊಂಡು ಮನ ತನ್ನ ಭ್ರಮೆ ಕಳೆದುಕೊಂಡು ಜ್ಞಾನಿಯಾಗುತ್ತದೆ.

ಶ್ರೀ ಮ.ನಿ.ಪ್ರ . ಎಂದರೆ ಶ್ರೀಮನ್ನಿಂರಂಜನ ಪ್ರಣವ ಸ್ವರೂಪಿ, ರಂಜನೆಯೇ ಇಲ್ಲದ ಮಹಾ ಜ್ಞಾನಿ. ಆದರೆ ಮನ ತನುವಿಗೆ ವೇಷ ಹಾಕಿ, ಆ ವೇಷಕ್ಕೆ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಎಂದು ನಾಮಕರಣ ಮಾಡಿಕೊಂಡಿದೆ. ಹಾಗೆಯೆ ಷಟಸ್ಥಲ ಬ್ರಹ್ಮಸ್ವರೂಪಿ ಎಂದು ಗುರುಸ್ಥಲಕ್ಕೆ ನಾಮಕರಣ ಮಾಡಿದೆ. ಇವೆರಡೂ ಆಗುವುದು ಮನಕ್ಕೆ ಬಲು ಜಟಿಲ. ಮನ ತನುವಿಗೆ ಆಯಾ ಹೆಸರನಿಟ್ಟು ಕಾವಿ ಕಾಷಾಯಾಂಬರವ ತೊಡಿಸಿ, ನಾವು ಪರಮ ವಿರಕ್ತರು, ಪಟ್ಟದ ಅಯ್ಯನವರು, ಚರಮೂರ್ತಿಗಳು, ಪರದೇಶಿಗಳು ಎಂದು ಶಂಖ ಗಿಳಿಲು ದಂಡಾಗ್ರ ಎಂಬ ಬಿರುದು ಹೊತ್ತು ಸರ್ವ ಕಾರ್ಯದಲ್ಲಿ ಶ್ರೇಷ್ಠರೆಂದು ಗರ್ವದಿಂದ ಆಯಾ ತನುಗಳು ಕೊಬ್ಬಿವೆ.

ಕಾಮನಾಟದಲ್ಲಿ ಸಿಲುಕಿ, ಮನದಲ್ಲಿ ದುರ್ಗುಣಗಳನ್ನು ಇಟ್ಟುಕೊಂಡು ಮಾತಿನಲ್ಲಿ ವಚನಗಳ ನೀತಿಯನ್ನು ಬೊಗಳುತ್ತ ಸುತ್ತಾಡುವ ತೊನ್ನ ಹೊಲೆ ಮಾದಿಗರಿವರು ಎಂದು ಚೌಡಯ್ಯ ಶರಣರು ನಿಷ್ಠುರವಾಗಿ ನಿಂದಿಸಿದ್ದಾರೆ. ಅವರ ಈ ನಿಂದೆ ಆಯಾ ತನುಗಳನ್ನು ಹೊತ್ತ ಮನಕ್ಕೆ ಹೊರತು ತನುಗಳಿಗಲ್ಲ ಏಕೆಂದರೆ ಅಂಗವದು ಲಿಂಗಯ್ಯನ ಸಂಪತ್ತು .

ಗುರುಲಿಂಗ ಜಂಗಮವಾದ ಬಳಿಕ ಅಷ್ಟಾವರಣದಲ್ಲಿ ನಿಷ್ಟಾಪರವಾಗಿರಬೇಕು. ಪರಧನ ಪರಸತಿಯರ ಹಿಡಿಯೆನೆಂಬ ನೇಮದಲ್ಲಿ ಬಲ್ಲಿದರಾಗಿರಬೇಕು. ಶಿವಭಕ್ತರಾದವರ ಭವವ ಗೆಲಿಸಿ ಮೋಕ್ಷವ ಹೊಂದಿಸಬೇಕು. ಶಿವ ಲಾಂಛನವ ಹೊತ್ತ ಬಳಿಕ ಶಿವನಂತಿರಬೇಕು :

ಅಂಗದಲ್ಲಿಯೇ ಲಿಂಗ ಸಂಗಮವಾಗಿದೆ.ಅಂಗವನ್ನು ಮನ ಆವರಿಸಿದೆ. ಮನವೇ ಭಕ್ತನಾಗಿ ಅಂಗದಲ್ಲಿ ಸಂಗಮವಾದ ಅರಿವಿನ ಸಂಪತ್ತನ್ನು ಬಾಚಿಕೊಳ್ಳಬೇಕು. ಆಗ ಅದು ಪರಮ ವಿರಕ್ತರ ಅಂಗವಾಗುತ್ತದೆ. ಅಂಗದ ಸಂಪತ್ತು ಲಿಂಗಕ್ಕೆ ದೊರೆತು ಪ್ರತಿ ಅಂಗಕ್ಕೆ ಅರಿವಿನ ಲಿಂಗಯ್ಯನ ವೃತ್ತಾಂತವನ್ನು ತಿಳಿಸಲು ಬರುತ್ತದೆ.

ಅಂಗದಲ್ಲಿ ಸಂಗಮವಾದ ಸಂಪತ್ತು ಅಂಗವೇ ಪಡೆದು; ಆಯಾ ಅಂಗದಲ್ಲಿ ಸಂಪತ್ತು ಸಂಗಮವಾಗಿದೆ ಎಂದು ಸೂಚಿಸುವ ಅಂಗವೇ ಗುರುವಿನ ಅಂಗ. ಇದನ್ನು ಬಿಟ್ಟು ಮಠ ಕಟ್ಟುವುದು, ಶಾಲಾ ಕಾಲೇಜುಗಳನ್ನು ನಿರ್ಮಿಸುವುದು,ಲಕ್ಷದೀಪ, ಉಚಿತ ಸಾಮೂಹಿಕ ವಿವಾಹಗಳನ್ನು ನಿರ್ಮಿಸಿ ಅನ್ನ ಸಂತರ್ಪಣೆ ಮಾಡುವ ಅಂಗ ಅರಿವಿನ ಅಂಗವಲ್ಲ. ಅದು ಗುರುವಿನ ಅಂಗವೂ ಅಲ್ಲ. ಆ ಅಂಗಕ್ಕೆ ಪರಧನ ಪರಸತಿಯರ ಚಿಂತೆಯೇ ಹೊರತು ಮತ್ತೊಂದಿಲ್ಲ.

ಪರಧನ ಪರಸತಿಯ ಸೂತ್ರ ಬಲ್ಲ ಅಂಗಗಳೆಂದರೆ ಅವು ಲಿಂಗಾಂಗ ಮಾತ್ರ . ಅಂಗದಲ್ಲಿಯೇ ಸಂಗಮವಾದ ಅರಿವಿಗೆ ಶರಣು ಹೋದ ಶರಣಾಂಗಗಳು ಮಾತ್ರ . ಅರಿವಿನ ಲಾಂಛನ ಧರಿಸಿದ ವಿರಕ್ತರಲ್ಲ, ಗುರುವರ್ಗವೂ ಅಲ್ಲ. ಈ ಅಂಗಗಳು ಶಿವಭಕ್ತರಿಗೆ ದಾರಿ ತೋರಿಸುವ ಅಂಗಗಳಲ್ಲ. ಅವರ ಧನಕ್ಕೆ ಮರುಳಾದ ಅಂಗಗಳು. ಅವರ ರೂಪಕ್ಕೆ ಮರುಳಾದ ಅಂಗಗಳು.

ಪರಧನವೆಂದರೆ ಹಣವೆಂದು ಅರ್ಥೈಸುವುದಲ್ಲ. ಪರಧನ -ಸ್ವಧನ ;ಪರಜ್ಞಾನ-ಸ್ವಜ್ಞಾನ. ಪರಜ್ಞಾನವೆಂದರೆ ಭಗವದ್ಗೀತೆ, ಬೈಬಲ್, ಕುರಾನ್, ಶರಣ ಸಂತರ, ಬಸವಾದಿ ಪ್ರಮಥರ ಜ್ಞಾನವೆಂದು ಅರ್ಥೈಸಬಹುದು. ಅದು ಪುಸ್ತಕದಲ್ಲಿ ದಾಖಲಿಸಿ, ಪುಸ್ತಕದಲ್ಲಿ ಸಂಗ್ರಹವಾದ ಜ್ಞಾನ. ಈ ಜ್ಞಾನ ಪರರಿಗೆ ಉಪದೇಶ ಮಾಡಲು ಬರುತ್ತದೆಯೇ ಹೊರತು ತನ್ನನ್ನು ತಾನು ಸುಧಾರಿಸಿಕೊಳ್ಳಲು ಬರುವುದಿಲ್ಲ. ತನ್ನನ್ನು ತಾನು ಸುಧಾರಿಸಿಕೊಳ್ಳುವ ಜ್ಞಾನ ತನುವಿನಲ್ಲಿಯೇ ಇದೆ. ಹಾಗೆ ತನುವಿನಲ್ಲಿರುವ ಜ್ಞಾನವನ್ನೇ ಪಡೆದು ಆ ಜ್ಞಾನವನ್ನೇ ಬಳಸಿ ಸಂತರಾದರು. ಮಹಾಜ್ಞಾನಿಗಳಾದರು. ತನುವಿನ ಜ್ಞಾನ ತನುವೇ ಹೇಗೆ ಪಡೆದುಕೊಳ್ಳಬೇಕೆಂದು ಪುಸ್ತಕದಲ್ಲಿ ದಾಖಲಿಸಿದರು. ಆ ಜ್ಞಾನ ತನುವಿನ ಜ್ಞಾನಕ್ಕೆ ಹೋಗುವ ಸೂತ್ರವೇ ಹೊರತು ಮತ್ತೇನೂ ಅಲ್ಲ. ಅದು ಏಣಿ. ಹತ್ತಬೇಕು. ಹೊತ್ತುಕೊಂಡು ಹೋಗಿ ವ್ಯವಹಾರಕ್ಕೆ ಬಳಸುವುದಕ್ಕೆ ಅಲ್ಲ. ಅದನ್ನು ಭಕ್ತರಿಗೆ ಮಾರಿ ಹಣ ಪಡೆದು ಮಠ ಕಟ್ಟುವುದೂ ಅಲ್ಲ.

ಭಕ್ತ ತನಗೆ ಸಮಾಧಾನವಿಲ್ಲವೆಂದು ಗುರುವಿನಲ್ಲಿ ಬೇಡಲು ಬರುತ್ತಾನೆ. ತನುವಿನಲ್ಲಿಯೇ ಸಮಾಧಾನವಿದೆ ಎಂದು ಸೂಚಿಸಬಹುದು.ಆದರೆ ಬೇಡಲು ಬಂದವನಿಂದ ಬೇಡುವುದೇ ? ಪರಧನ ದೋಚಿ ಪರರಿಗೆ ಮಾರುವುದೆ ? ಪರ ಜ್ಞಾನ ಮಾರಿ ಧನ ಸಂಪಾದಿಸುವವನು ಗುರು ಹೇಗಾದಾನು? ಅವನನ್ನು ಎಡಪಾದರಕ್ಷೆಯಿಂದ ಹೊಡೆಯಬೇಕೆಂದು ಚೌಡಯ್ಯ ಶರಣರು ಸಲಹೆ ಮಾಡಿದ್ದಾರೆ.

ಗುರುವಾದವನು ಸ್ವಧನ ಸಂಪಾದಿಸಬೇಕು. ಅದು ಆತನ ಅಂಗದಲ್ಲಿಯೇ ಸಂಗಮವಾಗಿದೆ. ಹಾಗೆಯೇ ಶಿಷ್ಯನಿಗೆ ಸ್ವಧನ ಸಂಪಾದಿಸಿಕೊಳ್ಳಲು ಸೂಚಿಸಬೇಕು. ಅದು ಕೂಡಾ ಶಿಷ್ಯನ ಅಂಗದಲ್ಲಿಯೇ ಇದೆ. ಜ್ಞಾನ ವೆಂಬುದು ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಸರ್ವಾಂಗ ದಲ್ಲಿ ಭರಿತವಾಗಿದೆ. ಅದನ್ನು ಪಡೆದ ಗುರುವಿಗೆ ಮಾತ್ರ ಸೂಚಿಸಲು ಬರುತ್ತದೆಯೇ ಹೊರತು ಅನ್ಯರಿಗೆ ಲಭ್ಯವಾಗುವುದಿಲ್ಲ.

ಪರಸತಿ-ಸ್ವಸತಿ : ದೇಹ ಜ್ಞಾನದ ಒಂದು ಉಪಕರಣವೇ ಹೊರತು ಅದು ಹೆಣ್ಣಲ್ಲ ; ಗಂಡೂ ಅಲ್ಲ. ಪುರಾತನರು ಜ್ಞಾನಕ್ಕೆ ಗಂಡು ಎಂದು ಕರೆದರು. ಅದನ್ನು ತಿಳಿದು ಆ ಜ್ಞಾನದಲ್ಲಿ ಒಂದಾಗುವ ಮನಕ್ಕೆ ಹೆಣ್ಣು ಎಂದು ಕರೆದರು. ಇಂತಹ ಹೆಣ್ಣನ್ನು ಶರಣರು ಸ್ವಸತಿ ಅಥವಾ ಸತಿ ಎಂದು ಕರೆದರು. ಸತಿ-ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ ಎಂದು ಸೂತ್ರ ರಚಿಸಿದರು.

ದೇಹವೆಂಬ ಉಪಕರಣದಲ್ಲಿ ಜ್ಞಾನವೆಂಬ ಗಂಡೂ ಇದೆ ; ಮನವೆಂಬ ಹೆಣ್ಣೂ ಇದೆ. ಹೀಗೆ ಸತಿ ಮತ್ತು ಪತಿಗಳೀರ್ವರೂ ದೇಹವೆಂಬ ಮನೆಯಲ್ಲಿ ಮನೆ ಮಾಡಿಕೊಂಡಿದ್ದಾರೆ. ಹೀಗೆ ತನ್ನ ಗಂಡನಿಗೆ ಸತಿಯಾದ ಹೆಣ್ಣು ಪರಸತಿಯನ್ನು ನೋಡುವುದೆಂದರೇನು ? ತಾನು ಪರ ಸತಿಯೆಂದು ನೋಡುವ ದೇಹ ಆ ದೇಹದ ಪತಿಗೆ ಸಂಬಂಧಿಸಿದ ಸತಿಯಾಗಿದ್ದಾಳೆ.

ಉಘೆ ಚಾಂಗು ಭಲಾ ಎಂದು ಹೇಳುವ ಶಬ್ದ ಸವೆಯಿತ್ತು . ಹೀಗೆ ಪೂಜಿಸುವ ಭಕ್ತರುಗಳಿಗೆ ಲಿಂಗಯ್ಯ ಒಲಿಯಲಿಲ್ಲವೆಂದ ಮೇಲೆ ಎನಗಿನ್ನೆಂತೊ ?

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ಒಲಿಸಿಕೊಳ್ಳಲು ಜಗದ ಭಕ್ತರುಗಳು ಹೀಗೆಲ್ಲ ಪೂಜಿಸಿದರೂ ಒಲಿಯಲಿಲ್ಲವೆಂದ ಮೇಲೆ ಎನಗಿನ್ನೆಂತೊ ?

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯ, ಅಂಗವನ್ನು ಆವರಿಸಿದ ಮನವೆಂಬ ಭಕ್ತನು

ಅಂಗದಲ್ಲಿಯೇ ಇರುವ ಲಿಂಗಯ್ಯನಿಗೆ ಶರಣು ಹೋದರೆ ಮಾತ್ರ ಒಲಿಯುವನು. ತನ್ನಂತೆ ಮಾಡಿಕೊಳ್ಳುವನು. ಇಂತಹ ಶರಣರು ಮಹಾಮನೆಯಲ್ಲಿ ಅಂದರೆ ಅರಿವೆಂಬ ಲಿಂಗಯ್ಯನಿದ್ದ ಮನೆಯೇ ಮಹಾಮನೆ. ಈ ಮನೆಯಲ್ಲಿ ಲಿಂಗಾರ್ಚನೆಗೆಂದು ಕುಳಿತಿರುವಾಗ ಅವರ ಪಾದರಕ್ಷೆಯ ಕಾಯ್ದುಕೊಂಡಿರ್ದೆನೆಂದು ಅಂಬಿಗರ ಚೌಡಯ್ಯ ಹೇಳುತ್ತಾ ಓದುಗರಿಗೆ ಅರಿವಿನ ಸುಳುವುಳ್ಳ ಸೂತ್ರವನ್ನು ಕರುಣಿಸಿದ್ದಾರೆ.

**23**

**ಅಯ್ಯಾ ! ಪಾಷಾಣಕ್ಕೆ ಗಿರಿ ಸವೆದವು.**
**ಪತ್ರೆಗೆ ತರು ಸವೆದವು.**
**ಸಪ್ತ ಸಾಗರಂಗಳು ಮಜ್ಜನಕ್ಕೆ ಸವೆದವು.**
**ಅಗ್ನಿ ಧೂಪಕ್ಕೆ ಸವೆಯಿತ್ತು .**
**ವಾಯು ಕಂಪಿತಕ್ಕೆ ಸವೆಯಿತ್ತು .**
**ಉಫೆ! ಚಾಂಗು ಭಲಾ ! ಎಂಬ ಶಬ್ದ ಸವೆಯಿತ್ತು . ಎನ್ನಗಿನ್ನೆಂತೊ,**
**ಉಮೇಶನ ಶರಣರು ಮಹಾ ಮನೆಯಲ್ಲಿ ಶಿವಲಿಂಗಾರ್ಚನೆಗೆ ಕುಳ್ಳಿರ್ದ್ದಡೆ**
**ನಾನವರ ಪಾದರಕ್ಷೆಯ ಕಾಯ್ದುಕೊಂಡಿದ್ದೇನೆದನಂಬಿಗರ ಚೌಡಯ್ಯ .**

ಕೈಯಲ್ಲಿ ಹಿಡಿದು ಪೂಜಿಸುವ ಲಿಂಗವದು ಲಿಂಗವಲ್ಲ. ಅದು ಪಾಷಾಣ ! ಲಿಂಗ ಮಾಡಿ ಮಾಡಿ ಕೊರಳಲ್ಲಿ ಕಟ್ಟಿಕೊಂಡು, ಆಲಯದಲ್ಲಿ ಪ್ರತಿಷ್ಠಾಪಿಸಿ ಗಿರಿಗಳೆಲ್ಲ ಸವೆದು ಹೋದವು. ಅವುಗಳನ್ನು ಪೂಜಿಸಲು ತಂದ ಪತ್ರಿಗಳಿಂದಾಗಿ ಗಿಡಮರಗಳೆಲ್ಲ ಬಾಡಿ ಹೋದವು. ಲಿಂಗಯ್ಯನಿಗೆ ಮಜ್ಜನಕ್ಕೆರೆಯುವುದಕ್ಕಾಗಿ ತಂದ ಸಾಗರಗಳೆಲ್ಲ ಬತ್ತಿ ಹೋದವು. ಲಿಂಗಯ್ಯನ ಧೂಪಕ್ಕೆಂದು ಬಳಸೀ ಬಳಸೀ ಅಗ್ನಿ ಸವೆಯಿತು. ಪರಿಮಳದ ಕಂಪಿಗಾಗಿ ವಾಯು ಸವೆಯಿತು.

ಉಫೆ ಚಾಂಗು ಭಲಾ ಎಂದು ಹೇಳುವ ಶಬ್ದ ಸವೆಯಿತ್ತು . ಹೀಗೆ ಪೂಜಿಸುವ ಭಕ್ತರುಗಳಿಗೆ ಲಿಂಗಯ್ಯ ಒಲಿಯಲಿಲ್ಲವೆಂದ ಮೇಲೆ ಎನಗಿನ್ನೆಂತೊ ?

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ಒಲಿಸಿಕೊಳ್ಳಲು ಜಗದ ಭಕ್ತರುಗಳು ಹೀಗೆಲ್ಲ ಪೂಜಿಸಿದರೂ ಒಲಿಯಲಿಲ್ಲವೆಂದ ಮೇಲೆ ಎನಗಿನ್ನೇಂತೊ ?

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯ , ಅಂಗವನ್ನು ಆವರಿಸಿದ ಮನವೆಂಬ ಭಕ್ತನು ಅಂಗದಲ್ಲಿಯೇ ಇರುವ ಲಿಂಗಯ್ಯನಿಗೆ ಶರಣು ಹೋದರೆ ಮಾತ್ರ ಒಲಿಯುವನು. ತನ್ನಂತೆ ಮಾಡಿಕೊಳ್ಳುವನು. ಇಂತಹ ಶರಣರು ಮಹಾಮನೆಯಲ್ಲಿ ಅಂದರೆ ಅರಿವೆಂಬ ಲಿಂಗಯ್ಯ ನಿದ್ದ ಮನೆಯೇ ಮಹಾಮನೆ. ಈ ಮನೆಯಲ್ಲಿ ಲಿಂಗಾರ್ಚನೆಗೆಂದು ಕುಳಿತಿರುವಾಗ ಅವರ ಪಾದರಕ್ಷೆಯ ಕಾಯ್ದುಕೊಂಡಿರ್ದೆನೆಂದು ಅಂಬಿಗರ ಚೌಡಯ್ಯ ಹೇಳುತ್ತಾ ಓದುಗರಿಗೆ ಅರಿವಿನ ಸುಳುವುಳ್ಳ ಸೂತ್ರವನ್ನು ಕರುಣಿಸಿದ್ದಾರೆ.

**24**

**ಅಯ್ಯಾ ! ಶ್ರೀಗುರುಲಿಂಗ ಜಂಗಮದ ವೇಧಾಮಂತ್ರ ಕ್ರಿಯಾದೀಕ್ಷೆಗೆ**

**ಹೊರಗಾದ ಭುವನದ ಶೈವದೈವದಾರ್ಚನೆ ಪೂಜೆಯ ಮಾಡಿ,**
**ಅದರುಚ್ಛಿಷ್ಠವ ಭುಂಜಿಸುವದಂಗಾಚಾರ.**
**ಅದನುಳಿದು ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಸ್ವರೂಪವಾದ**
**ಅನಾದಿಗುರುಲಿಂಗಜಂಗಮದ ಅರ್ಚನೆ ಪೂಜೆಯ ಮಾಡಿ**
**ಕಿಂಕರ್ವಾಣದಿಂದ ಅವರ ಒಕ್ಕುಮಿಕ್ಕ ಪ್ರಸಾದವ ಹಾರೈಸುವುದೆ ಲಿಂಗಾಚಾರ.**
**ಈ ಭೇದವ ತಿಳಿದು ಪಂಚಾಚಾರ ಆಚರಣೆಗೆ ತಂದು,**
**ಸಪ್ತಾಚಾರವ ಸಂಬಂಧವಿಟ್ಟು,**
**ಅಷ್ಟಾವರಣದ ಕಲೆನೆಲೆಗಳ ಒಳಗು-ಹೊರಗು ಎನ್ನದೆ,**
**ಸದ್ಗುರು ಮುಖದಿಂದ ಆಚರಣೆ-ಸಂಬಂಧವ ತಿಳಿದು,**
**ಸದ್ಭಕ್ತಿ-ಸಮ್ಯಜ್ಞಾನ-ವೈರಾಗ್ಯ-ಷಟಸ್ಥಲ ಮಾರ್ಗವ ಹಿಡಿದು,**
**ನಿಜಾಚರಣೆಯಲ್ಲಿ ಆಚರಿಸುವರೆ ಶಿವಶಕ್ತಿ, ಶಿವಭಕ್ತ, ಶಿವಜಂಗಮವಲ್ಲದೆ**
**ಉಳಿದ ವೇಷಧಾರಿಗಳೆಲ್ಲ ಎನ್ನೊಡೆಯ ಪ್ರಮಥ ಗಣಾಚಾರಕ್ಕೆ**
**ಹೊರಗೆಂದಾತನಂಬಿಗರಚೌಡಯ್ಯನು.**

ಆಚಾರಗಳಲ್ಲಿ ಎರಡು ವಿಧ. ಒಂದು ಗೋಚರದ ಆಚಾರ ; ಮತ್ತೊಂದು ಅಗೋಚರದ ಆಚಾರ. ಗೋಚರದ ಆಚಾರವೇ ಅಂಗಾಚಾರ. ಗುರುಲಿಂಗ ಜಂಗಮವನ್ನು ಹೊರಗೆ ಪೂಜಿಸಿ ತೊಳೆದು ಅದನ್ನು ತೀರ್ಥವೆಂದು ಭುಂಜಿಸುವುದು. ಇಂತಹ ಪೂಜೆಯನ್ನು ಚೌಡಯ್ಯ ಶರಣರು ''ಭುವನದ ಶೈವದೈವದಾರ್ಚನೆ ಮಾಡಿ ಅದರ ಉಚ್ಛಿಷ್ಠವ ಭುಂಜಿಸುವುದೇ ಅಂಗಾಚಾರ ''ಎಂದು ಹೇಳಿದ್ದಾರೆ.

ಇದರ ಹೊರತಾಗಿ ಶುದ್ಧ ಸಿದ್ಧ ಪ್ರಸಿದ್ಧ ಸ್ವರೂಪವಾದ ಪೂಜೆಯ ಮಾಡಿ ಕಿಂಕರನಾಗಿ ಅವರ ಒಕ್ಕು ಮಿಕ್ಕ ಪ್ರಸಾದವ ಹಾರೈಸುವುದೇ ಲಿಂಗಾಚಾರ. ಅಂಗಾಚಾರ ಮತ್ತು ಲಿಂಗಾಚಾರದ ಭೇದವ ತಿಳಿದು ಪಂಚಾಚಾರವನ್ನು ಆಚರಣೆಗೆ ತರಬೇಕು.

ಗುರು ಲಿಂಗ ಜಂಗಮ ಪೂಜೆ ಮಾಡುವುದು , ಪಾದೋದಕ ಸ್ವೀಕರಿಸುವುದು ಸಕಲರಿಗೆ ಗೋಚರಕ್ಕೆ ಬರುತ್ತದೆ. ಹೀಗೆ ಪೂಜಿಸುವ ಅಂಗವನ್ನು ಸಕಲ ಲೋಕ, ಆಚಾರವುಳ್ಳ ಭಕ್ತನೆಂದು ಗೌರವಿಸುತ್ತದೆ. ಹೀಗೆ ಲೋಕ ಗೌರವಿಸುವ ಅಂಗವನ್ನು ಅಂಬಿಗರ ಚೌಡಯ್ಯ ಶರಣರು '' ಗುರುಲಿಂಗ ಜಂಗಮವನ್ನು ಪೂಜಿಸಿ ಅದರ ಉಚ್ಛಿಷ್ಠ ಸ್ವೀಕರಿಸುವ ಅಂಗ ''ಎಂದು ತುಚ್ಛೀಕರಿಸಿ ನುಡಿದಿದ್ದಾರೆ.

ಅನಾದಿ ಗುರು ಲಿಂಗ ಜಂಗಮವನ್ನು ಪಂಚಾಚಾರದಿಂದ ಪೂಜಿಸುವ ಅಂಗವನ್ನು ಶಿವ ಶಕ್ತಿ , ಶಿವಭಕ್ತ ,ಶಿವ ಜಂಗಮನೆಂದು ಕರೆದಿದ್ದಾರೆ. ಗೋಚರದ ಆಚಾರಿಗಳೆಲ್ಲ ವೇಷಧಾರಿಗಳು ! ಎನ್ನೊಡೆಯ ಪ್ರಮಥ ಗಣಾಚಾರಕ್ಕೆ ಹೊರಗು ! ಅವರು ಲೋಕಕ್ಕೆ ಮಾತ್ರ ಶಿವಭಕ್ತರು ಜ್ಞಾನಿಗಳಿಗೆ ಅಲ್ಲ ಎಂದು ಸ್ಪಷ್ಟವಾಗಿ ನುಡಿದಿದ್ದಾರೆ.

ಕಲ್ಲನ್ನೇ ಲಿಂಗ ಮಾಡಿಕೊಂಡು ನಿತ್ಯ ನಿತ್ಯ ಅದರ ಉಚ್ಛಿಷ್ಠ ಕುಡಿಯುವವನು ಹೇಗೆ ನಿಜ ಭಕ್ತನಾದಾನು ? ಭಕ್ತನೆಂದರೆ ಅಗೋಚರದ ಆಚಾರವುಳ್ಳಾತ. ಪಂಚಾಚಾರವನ್ನು ಅರಿತಾತ.

ನೋಡುವ ಕಣ್ಣಿನಿಂದಲೇ; ತನ್ನಂಗವನ್ನು ನೋಡುವ ಇತರ ಅಂಗವನ್ನು ಕೂಡಾ

ಲಿಂಗವೆಂದು ಪೂಜಿಸಬೇಕು. ಹಾಗೆ ಪೂಜಿಸುವಾಗ ನೋಡಲ್ಪಡುವ ಅಂಗ ನೋಡುವ ಸರ್ವ ಅಂಗಕ್ಕೆ ಪ್ರಸಾದವಾಗಬೇಕು. ಅಂದರೆ ನೋಡುವಾಗ ಅಂಗ ಗಂಡೆಂದು ಹೆಣ್ಣೆಂದು ನೋಡಬಾರದು. ಹಾಗೆ ನೋಡಿದರೆ ಅಂಗದಲ್ಲಿ ಭೋಗದ ಆಸಕ್ತಿ ಹುಟ್ಟುತ್ತದೆ. ಆಗ ಅಂಗ ನೋಡುತ್ತ ನೋಡುತ್ತ ಭೋಗದಲ್ಲಿ ಮಗ್ನವಾಗುತ್ತದೆ. ಹಾದರಕ್ಕೆ ಒಳಗಾಗುತ್ತದೆ. ಮಾತು ಮಾತ್ರ ಅಕ್ಕ ತಂಗಿ ಅಣ್ಣ ತಮ್ಮ ಎಂದು ಬೊಗಳುತ್ತದೆ.

ಬೆಳಿಗ್ಗೆ ಗುರು ಲಿಂಗ ಜಂಗಮವನ್ನು ಪೂಜಿಸಿ ಪಾದೋದಕ ಸ್ವೀಕರಿಸಿದ ಅಂಗ ಗೋಚರದ ಆಚಾರ ಮಾಡಿ, ಭಕ್ತ ಎಂದು ಕರೆಯಿಸಿಕೊಳ್ಳಲು ಮಾತ್ರ ಸಾಧ್ಯವಾಯಿತು. ತನಗೆ ತಾನೇ ನಿಜ ಭಕ್ತನಾಗಲು ಸಾಧ್ಯವಾಗಲಿಲ್ಲ. ನೋಡುವ ಕಣ್ಣು, ಕೇಳುವ ಕಿವಿ, ಸ್ಪರ್ಶಿಸುವ ಚರ್ಮ, ಮೂಸಿಸುವ ಮೂಗು, ರುಚಿಸುವ ನಾಲಿಗೆ ಭೋಗದ ಹಾದರಕ್ಕೆ ಜಾರಿದವು.ಬೆಳಗಿನ ಪೂಜೆಯ ಫಲ ಅಂಗಕ್ಕೆ ಸಿಕ್ಕಲಿಲ್ಲ. ಅದು ಶೈವದೈವದಾರ್ಚನೆ ಮಾಡಿತೇ ಹೊರತು ಸ್ವತಹ ವೀರನಾಗಲಿಲ್ಲ ; ವೀರ ಶೈವನಾಗಲಿಲ್ಲ.

ಹೊರಗೆ ಗುರುವೆಂದು ಪೂಜಿಸಿದರೆ ಆತ ಗುರುವಲ್ಲ.ಹೊರಗಿನ ಲಿಂಗ ಲಿಂಗವಲ್ಲ. ಹೊರಗಿನ ಜಂಗಮವೂ ಜಂಗಮವಲ್ಲ. ಇವೆಲ್ಲ ಗೋಚರಕ್ಕೆ ಬರುವ ಪೂಜೆಗಳು. ನೋಡಿ ಮುಟ್ಟಿ ಮೂಸಿಸಿ ರುಚಿಸಿ ಕೇಳಿಯೂ ಹಾದರಕ್ಕೊಳಗಾಗದೆ ಪೂಜಿಸುವ ಪೂಜೆಯೇ ಅಗೋಚರದ ಪೂಜೆ. ಇದು ನಿಜ ಪೂಜೆ ; ಲಿಂಗಾಚಾರದ ಪೂಜೆ ; ಪಂಚಾಚಾರದ ಪೂಜೆ. ಇಂತಹ ಪೂಜೆ ಮಾಡುವಾತನೇ ಶಿವಶಕ್ತಿ ,ಶಿವಭಕ್ತ , ಶಿವ ಜಂಗಮ !

ಅಗೋಚರದ ಆಚಾರದ ಭಕ್ತ ಸದ್ಗುರು ಮುಖದಿಂದ ತಿಳಿದು ಪಂಚಾಚಾರವನ್ನು ಆಚರಣೆಗೆ ತರುತ್ತಾನೆ. ಸಪ್ತವ್ಯಸನಗಳನ್ನು ಅಷ್ಟಮದಗಳನ್ನು, ಅರಿಷಡ್ವರ್ಗಗಳನ್ನು ದೂರೀಕರಿಸಿಕೊಳ್ಳುತ್ತಾನೆ. ಈತನ ಪೂಜೆಯೇ ಬೇರೆ. ಅನಾದಿ ಗುರುಲಿಂಗ ಜಂಗಮರನ್ನು ಪೂಜಿಸುತ್ತಾನೆ.

ಪಂಚೇಂದ್ರಿಯಗಳಲ್ಲಿ ಸಂಗಮವಾದ ಜ್ಞಾನಿಯೇ ಗುರು. ಅಲ್ಲಿಯೇ ಲಿಂಗವಿದೆ ; ಜಂಗಮನೂ ಇದ್ದಾನೆ. ಈ ಗುರು ಲಿಂಗ ಜಂಗಮರು ತೋರುವವರಲ್ಲ ; ನಿಜಕಣ್ಣಿನಿಂದ ನೋಡುವ ಭಕ್ತನಿಗೆ ತೋರದೆ ಇರುವವರೂ ಅಲ್ಲ. ನೋಡುವ ಕಣ್ಣಿನಲ್ಲಿ ಇರುವ ಗುರು ಲಿಂಗ ಜಂಗಮರನ್ನು ಅರ್ಚಿಸಿ ಪೂಜಿಸುವ ಬಗೆಯನ್ನು ಸದ್ಗುರು ಮುಖದಿಂದಲೇ ತಿಳಿಯಬೇಕು.

ನೋಡುವ ಕಣ್ಣಿನಲ್ಲಿ ಅರಿವಿನ ಜ್ಞಾನದ ಬೆಳಕಿದೆ. ಅಜ್ಞಾನದ ಕಷ್ಮಲ ಕತ್ತಲೂ ಇದೆ. ಇವೆರಡನ್ನೂ ಸಾಕ್ಷಿಯಾಗಿ ಬಳಕೆ ಮಾಡುವ ಕಣ್ಣು ಕೂಡಾ ಕಣ್ಣಿನಲ್ಲಿಯೇ ಇದೆ. ಈ ಕಣ್ಣೇ ಭಕ್ತ . ಭಕ್ತ ಯಾವ ಕಣ್ಣನ್ನು ಬಳಕೆ ಮಾಡುತ್ತಾನೋ ಅವನು ಹಾಗೆ ಇರುತ್ತಾನೆ. ಗೋಚರದ ಭಕ್ತನಾಗಬೇಕೋ ಅಗೋಚರದ ಭಕ್ತನಾಗಬೇಕೋ ? ಆಯ್ಕೆ ಮಾತ್ರ ಭಕ್ತನದ್ದೇ ಆಗಿದೆ. ಏಕೆಂದರೆ ಕಣ್ಣೂ ತನ್ನದೇ ನೋಡುವವನೂ ತಾನೇ ಆಗಿದ್ದಾನೆ.

ಅರಿತು ನೋಡಿದರೆ ಕಣ್ಣು ಹೆಣ್ಣೂ ಅಲ್ಲ; ಗಂಡೂ ಅಲ್ಲ. ಚರ್ಮ ಮೂಗು ನಾಲಿಗೆ ಕಿವಿ ಇವು ಕೂಡಾ ಹೆಣ್ಣೂ ಅಲ್ಲ ; ಗಂಡೂ ಅಲ್ಲ. ನೋಡಿದರೆ ಹೆಣ್ಣಾಗಿ ಕಂಡು ; ಚರ್ಮ ಮೂಗು ನಾಲಗೆ ಕಿವಿ ಹಾಗೂ ಸರ್ವಾಂಗದಲ್ಲಿ ಭೋಗದ ಆಸಕ್ತಿ ಕೆರಳಿ ತನು ಹಾಧರದ ಗಂಡಾಗಿ ಆರೋಪಿಸಿಕೊಂಡು ಭೋಗಕ್ಕೆ ಸಿದ್ಧವಾಗುತ್ತದೆ. ಅಂದ ಮೇಲೆ ತಾನು ಪೂಜಿಸಿದ ಪೂಜೆ ಸುಳ್ಳಾಯಿತಲ್ಲವೆ ? ತನು ಹಾಕಿದ ಭಕ್ತನ ವೇಷ ಸುಳ್ಳಾಗಲಿಲ್ಲವೆ ? ಕಣ್ಣಲ್ಲಿಯೇ ಇರುವ ಅನಾದಿ

ಅರಿವಿನ ಗುರು ಬಳಕೆಗೆ ಬಾರದೆ ಹಾಗೇ ಉಳಿಯಲಿಲ್ಲವೆ ? ಇದು ವೇಷ ಧರಿಸಿದ ಭಕ್ತನಿಗೆ ತಿಳಿಯಬೇಡವೆ ? ಗುರು ಲಿಂಗ ಜಂಗಮ ಭಕ್ತನ ವೇಷ ಧರಿಸಿಯೂ ಅಂಗಕ್ಕೆ ಹಾದರದ ಬಯಕೆ ಉಂಟಾಗುತ್ತದೆ ಅಂದ ಮೇಲೆ ಅದು ಗೋಚರದ ಆಚಾರವಾಗಲಿಲ್ಲವೆ ?

ವೇಷ ನೋಡಿದರೆ ಗುರು ಲಿಂಗ ಜಂಗಮ ಭಕ್ತ. ಒಳಗೆ ಮಾತ್ರ ಹಾದರಿಗ. ಇದು ಭಕ್ತನಿಗೆ ಬೇಕೆ ? ನಿಜಭಕ್ತಿ, ವೇಷದ ಭಕ್ತನ ಮೇಲೆ ಮುನಿಯುವುದಿಲ್ಲವೆ ? ಇವರಿಬ್ಬರೂ ಒಂದೇ ಜಾಗದಲ್ಲಿ ಇಲ್ಲವೆ ? ಕಣ್ಣಿದ್ದೂ ಕಾಣದ ಕುರುಡು ಭಕ್ತನೂ ಕಣ್ಣಲ್ಲಿಯೇ ಇದ್ದಾನೆ. ಸಕಲವನ್ನೂ ಗುರು ಲಿಂಗ ಜಂಗಮರೆಂದು ಕಾಣುವ ಅಗೋಚರದ ಆಚಾರದ ನಿಜಭಕ್ತನೂ ಕಣ್ಣಲ್ಲಿಯೇ ಇದ್ದಾನೆ.

ಕಣ್ಣು ನೋಡಿ ಕಣ್ಣನ್ನೇ ತಿಳಿಯಬೇಕಾದ ಕೆಲಸ ಬಹಳವಿದೆ. ಆದರೂ ಹೊರಗಿನ ಸಕಲವನ್ನೂ ತಿಳಿಯುವ ಹಂಬಲ ಕುರುಡು ಕಣ್ಣಿಗೆ ! ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಬ್ರಹ್ಮಾಂಡವೇ ಅಡಗಿದೆ. ಇದೇ ಪಂಚಾಚಾರ ; ಅಗೋಚರದ ಲಿಂಗಾಚಾರ. ಇದನ್ನು ಸದ್ಗುರುವಿನಿಂದಲೇ ತಿಳಿಯಬೇಕೆಂದು ಅಂಬಿಗರ ಚೌಡಯ್ಯ ಆದೇಶ ಹೊರಡಿಸಿದ್ದಾರೆ. ಪಾಲಿಸಿದವ ಗೆಲ್ಲುತ್ತಾನೆ ; ಪಾಲಿಸದವ ಇದ್ದೂ ಸೋಲುತ್ತಾನೆ.

**25**

**ಅರಳೆಯ ಮರನು ವಿಷ್ಣುಕಾಂತಿ ಬನ್ನಿ ಮುತ್ತಕ ತೊಳಚಿ**
**ಹರಿ ಹರಿಯೆಂದು ಹೊಡವಡುವಿರಿ.**
**ಎಲ್ಲಿ ಭೋ ! ಎಲ್ಲಿ ಭೋ !**
**ನಿಮ್ಮ ನಿಮ್ಮ ಹೊಡವಡುವ ದೈವಗಳೆಲ್ಲಾ ಗಿಡುಮರನಾಗಿ ಹೋದವಲ್ಲಾ !**
**ನಿಮ್ಮ ನಡೆಯೆಲ್ಲಾ ಅನಾಚಾರ, ನುಡಿಯೆಲ್ಲಾ ಶಿವದ್ರೋಹ !**
**ಇವದಿರ ಗಡಣ ಬೇಡೆಂದನಂಬಿಗ ಚೌಡಯ್ಯ.**

ಪ್ರಪಂಚದಲ್ಲಿ ಮನುಷ್ಯರಿಗಿರುವ ಅರಿವು ಇನ್ನಾವ ಪ್ರಾಣಿ ಪಶು ಪಕ್ಷಿಗಳಿಗಿಲ್ಲ. ಮನುಷ್ಯ ಜ್ಞಾನಿ ಎಂದು ಮನುಷ್ಯರಿಂದಲೇ ಕರೆಯಿಸಿಕೊಂಡಿದ್ದಾನೆ. ಹಾಗೆಯೇ ಜ್ಞಾನ ಬಳಕೆ ಮಾಡಿಕೊಳ್ಳದ ಮನುಷ್ಯ ಮನುಷ್ಯರಿಂದಲೇ ಅಜ್ಞಾನಿ ಎಂದು ಕರೆಯಿಸಿಕೊಂಡಿದ್ದಾನೆ.

ಮನುಷ್ಯ ಹುಟ್ಟಿದಂದಿನಿಂದಲೇ ಜ್ಞಾನಿ. ಆತನಿಗೆ ಮತ್ತೊಬ್ಬ ಮನುಷ್ಯನಿಂದ ಪಾಠ ಮಾಡಿಸಿಕೊಳ್ಳುವ ಅವಶ್ಯಕತೆಯಿಲ್ಲ. ಆ ವ್ಯವಸ್ಥೆ ಅಂಗದಲ್ಲಿಯೇ ಸಂಗಮವಾಗಿದೆ. ಅದನ್ನು ಸಮಾಧಾನದಿಂದ ಮನುಷ್ಯನಾದಾತ ಗಮನಿಸಬೇಕು. ತನ್ನನ್ನು ತಾನೇ ಆಲಿಸಬೇಕು.ಆಗ ತನ್ನಿಂದಲೇ ತನಗೆ ಪಾಠ ಕೇಳುವ ಸೌಲಭ್ಯ ದೊರೆಯುತ್ತದೆ. ಹಾಗೆ ಕೇಳಿ ಆ ಜ್ಞಾನವನ್ನು ಬಳಸಿಕೊಂಡು ನಡೆದುಕೊಳ್ಳುವ ಭಾಗ್ಯವೂ ದೊರೆಯುತ್ತದೆ. ಬರಬರುತ್ತ ಹಾಗೇ ಜ್ಞಾನಿಯಾಗಿ ಮಹಾಜ್ಞಾನಿಯಾಗಿ ಉಳಿದುಕೊಳ್ಳುವ ಭಾಗ್ಯವೂ ದೊರೆಯುತ್ತದೆ.

ಮನುಷ್ಯ ತನ್ನಲ್ಲಿಯೇ ಸಂಗಮವಾದ ಜ್ಞಾನವನ್ನು ಮನದಿಂದ ಬಳಕೆ ಮಾಡುವ ಕಲೆಯನ್ನು ಹೊಂದಿದ್ದಾನೆ. ಮನಸ್ಸು ಒಂದು ದೇಹ ; ಇದನ್ನು ಸೂಕ್ಷ್ಮದೇಹ ಎಂದು ಕರೆಯಲಾಗಿದೆ. ಜ್ಞಾನ ಕೂಡ ಒಂದು ದೇಹ ; ಇದನ್ನು ಕಾರಣ ದೇಹ ಎಂದು ಕರೆಯಲಾಗಿದೆ. ದೇಹವೂ ಒಂದು ದೇಹ ; ಇದನ್ನು ಸ್ಥೂಲದೇಹ ಎಂದು ಕರೆಯಲಾಗಿದೆ.

ಸೂಕ್ಷ್ಮದೇಹದಲ್ಲಿ ಜ್ಞಾನವಿಲ್ಲ. ಪುಸ್ತಕದಿಂದ, ಹಲವಾರು ದೇಹಗಳಿಂದ ಬಂದ ಜ್ಞಾನ ಸೂಕ್ಷ್ಮ ದೇಹದಲ್ಲಿ ಸಂಗ್ರಹವಾಗಿದೆ. ಹೀಗಾಗಿ ಸೂಕ್ಷ್ಮ ದೇಹವೆಂಬ ಮನಸ್ಸು ತನಗೆ ಹೊಳೆದದ್ದನ್ನು , ಇತರರಿಂದ ಕೇಳಿದ್ದನ್ನು, ತಾನು ಓದಿ ತಿಳಿದಿದ್ದನ್ನು , ತಾನು ಮುಟ್ಟಿ, ರುಚಿಸಿ, ಮೂಸಿಸಿ ತಿಳಿದಿದ್ದನ್ನು, ತಾನು ನೋಡಿ ತಿಳಿದಿದ್ದನ್ನು ತನ್ನ ಸುಖಕ್ಕಾಗಿ ಸ್ಥೂಲದೇಹವನ್ನೇ ಉಪಕರಣ ಮಾಡಿಕೊಂಡು ಭೋಗಿಸುತ್ತದೆ. ಇಂತಹ ಮನವನ್ನು ಅಂಗದಲ್ಲಿಯೇ ಸಂಗಮವಾದ ಜ್ಞಾನ ದೇಹ ಒಪ್ಪುವುದಿಲ್ಲ. ಅಂದರೆ ದೇಹದಲ್ಲಿಯೇ ಇದ್ದ ಜ್ಞಾನ, ದೇಹವನ್ನು ಆವರಿಸಿದ ಅಜ್ಞಾನವನ್ನು ಒಪ್ಪುವುದಿಲ್ಲ. ಎತ್ತು ಏರಿಗೆ ಎಳೆದರೆ ಕೋಣ ಕೆರೆಗೆ ಎಳೆಯುತ್ತದೆ.

ಅರಳೆ, ವಿಷ್ಣುಕಾಂತಿ, ಬನ್ನಿ, ಮುತ್ತಕ ಮುಂತಾದ ಮರಗಳನ್ನು ಸುತ್ತಿದರೆ ತನುವಿಗೆ ಒಳಿತಾಗುತ್ತದೆ ಎಂದು ಮನ ಮತ್ತೊಬ್ಬರಿಂದ ಕೇಳಿ, ಅದನ್ನು ತನುವಿನ ಮೂಲಕ ಆಚರಣೆಗೆ ತರುತ್ತದೆ. ತನುವಿನಲ್ಲಿಯೇ ಇದ್ದ ಜ್ಞಾನ ಮನದ ಅಜ್ಞಾನಿ ನಡತೆಯನ್ನು ಒಪ್ಪುವುದಿಲ್ಲ. ಮನ ಹೇಳಿದಂತೆ ತನು ಕೇಳುತ್ತದೆ. ತನುವಿನಲ್ಲಿದ್ದ ಜ್ಞಾನ ತನುವನ್ನು ಹಿಂಬಾಲಿಸುತ್ತದೆ. ಮನ ತನುವನ್ನು ಮರ ಸುತ್ತಿಸುತ್ತದೆ. ಜ್ಞಾನ ನಸು ನಗುತ್ತ ತನುವಿನೊಂದಿಗೆ ಹಿಂಬಾಲಿಸುತ್ತದೆ. ಜ್ಞಾನ ನಗುವುದು ಮನಕ್ಕೆ ಹೊಳೆಯುವುದಿಲ್ಲ. ಮನ ಮರ ಸುತ್ತುವುದೂ ಬಿಡುವುದಿಲ್ಲ.

ಮರದಲ್ಲಿ ದೈವವಿದೆಯೆಂದು ಮನ ಹೇಳುತ್ತದೆ. ನಾನೇ ದೈವವೆಂದು ಜ್ಞಾನ ಹೇಳುತ್ತದೆ. ಜ್ಞಾನದ ಮಾತು ಮನ ಪಾಲಿಸುವುದಿಲ್ಲ. ಮರ ಸುತ್ತುವುದೂ ಬಿಡುವುದಿಲ್ಲ. ಹೀಗೆ ಕಾಲ ಸರಿಯುತ್ತದೆ. ದೇಹಕ್ಕೆ ಮುಪ್ಪು ಆವರಿಸುತ್ತದೆ. ದೇಹದಲ್ಲಿಯೇ ಇದ್ದ ದೇವನ ದರ್ಶನ ಮನಕ್ಕೆ ಆಗುವುದಿಲ್ಲ.ಆ ದೇವನಿಗಾಗಿ ಒಣಗುವ ಮರನ, ಬತ್ತುವ ಜಲನ ಪೂಜಿಸುವುದನ್ನು ಮನ ಬಿಡುವುದೇ ಇಲ್ಲ.

ತನು ಜ್ಞಾನದ ಸಂಪತ್ತು ; ಗುರುದೇವ ಮಹಾದೇವ ಸದಾಶಿವನ ಆಸ್ತಿ . ಪರ ಬ್ರಹ್ಮನ ಸೊತ್ತು . ಇಂತಹ ತನುವನ್ನು ಮನವೆಂಬ ಭ್ರಮೆ ಆವರಿಸಿದೆ. ಮನಕ್ಕಾದರೂ ದೇವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಹಂಬಲವಿದೆ. ದೇವ ಮರದಲ್ಲಿದ್ದಾನೆಂದು ತಿಳಿದು ದೇವನೊಂದಿಗೆ ಮರ ಸುತ್ತುತ್ತದೆ. ಇದನ್ನೇ ಆಚಾರ ಮಾಡಿಕೊಂಡಿದೆ. ಮನದ ನಡೆಯೇ ಒಂದು ; ಅದರ ನುಡಿಯೇ ಮತ್ತೊಂದು.

ಅಕ್ಕ, ತಂಗಿ,ಅಣ್ಣ,ತಮ್ಮ ಎಂದು ನುಡಿಯುತ್ತದೆ ; ನುಡಿದಂತೆ ನಡೆಯದೆ ಆ ತನುವಿನೊಂದಿಗೆ ಮನದಲ್ಲಿ ಹಾದರ ಮಾಡುತ್ತದೆ. ಭೋಗಕ್ಕೆ ಜಾರುತ್ತದೆ. ಮನದ ನಡೆಯೆಲ್ಲಾ ಅನಾಚಾರ ; ನುಡಿಯೆಲ್ಲಾ ಶಿವದ್ರೋಹ !

**ಇವದಿರ ಗಡಣ ಬೇಡೆಂದನಂಬಿಗ ಚೌಡಯ್ಯ :**

ಚೌಡಯ್ಯ ಶರಣರು ತಮ್ಮ ವಚನದ ಮೂಲಕ ಓದುಗರಿಗೆ ಅದ್ಭುತವಾದ ಅರಿವಿನ ಸೂತ್ರವನ್ನೇ ದಯಪಾಲಿಸಿದ್ದಾರೆ. ಎಲ್ಲಿ ನೋಡಿದರಲ್ಲಿ ಮನವುಳ್ಳ ತನುಗಳೇ ಕಾಣುತ್ತಲಿವೆ. ಆ ತನುಗಳ ನಡೆಯೊಂದು ಪರಿ, ನುಡಿಯೊಂದು ಪರಿ. ತನುವಿನೊಳಗೆ ತನ್ಮಯವಾದ ದೇವನ ಪರಿಚಯವಿಲ್ಲದ ಮನದ ತನುಗಳ ಸಂಗ ನನಗೆ ಬೇಡ ತಂದೆ. ನಿನ್ನನ್ನು ಹೊರಗೆ ಪೂಜಿಸುತ್ತ ನಿನಗೇ ದ್ರೋಹ ಮಾಡುತ್ತಿರುವ ತನುಗಳವು. ಅವುಗಳ ಸಂಗ ಬೇಡ ನನಗೆ. ನನ್ನೊಳಗೇ ಇದ್ದು ನನ್ನನ್ನು ಸಲಹುವ ನಿನ್ನ ಸಂಗ ಸಾಕು ನನಗೆ. ನನ್ನೊಳಗೆ ಇದ್ದು ನನ್ನನ್ನು ಕಾಯುವ ದೇವ ನೀನೇ ಆಗಿರುವೆ, ನಿನಗೆ ಭಕ್ತ ನಾನು.

ತನು ನಿನ್ನದು, ಮನ ನಿನ್ನದು, ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ನಿನ್ನದು, ನಿನ್ನ ಮುಖಾಂತರ ನೋಡಿದೆ, ಕೇಳಿದೆ,ಮೂಸಿಸಿದೆ, ರುಚಿಸಿದೆ, ಮುಟ್ಟಿದೆ. ಸಕಲ ದರಲ್ಲಿಯೂ ಅರಿವೆಂಬ ಗುರುವೇ ಆದ ನೀನೇ ಇರುವಿ. ನಿನ್ನ ಸಂಗ ಸಾಕು ನನಗೆ !

**26**

**ಅರಿದಿಹೆನೆಂಬನ್ನ ಬರ ಅಗಸ ನೀರಡಸಿ ಸತ್ತಂತಾಯಿತ್ತು.**
**ಕಟ್ಟೋಗರವ ಹೊತ್ತು ಉಂಡೆಹೆ ಉಂಡೆಹೆನೆಂದು**
**ಅಪ್ಯಾಯನವಡಸಿ ಸತ್ತಂತಾಯಿತ್ತು.**
**ಅರಿದಿಹೆನೆಂದು ಕೇಳಿಹೇಳಿಹೆನೆಂಬನ್ನ ಬರ**
**ಆತನು ಶಿಲೆಯ ರೇಖೆಯೆ? ಬಯಲ ಬ್ರಹ್ಮವೆ ?**
**ತಾನಳಿವುದಕ್ಕೆ ಮುನ್ನವೆ ಅರಿದು ಕೂಡಬೇಕೆಂದನಂಬಿಗ ಚೌಡಯ್ಯ.**

ಅಂಬಿಗರ ಚೌಡಯ್ಯ ಶರಣರ ಅದ್ಭುತ ಸೂತ್ರವಿದು ; ಪರಮ ರಹಸ್ಯವಿದು. ಅರಿವಿನ ಪರಮ ರಹಸ್ಯವನ್ನು ಬಚ್ಚಿಟ್ಟುಕೊಂಡು ತನುವಾಗಿ ಹೊರಬಂದಿದೆ. ಆದರೆ ಅರಿವನ್ನು ಮತ್ತೊಂದು ವಸ್ತುವಿನಿಂದ ಅರಿಯಬೇಕೆಂದು ಮನ ಬೊಗಳುತ್ತದೆ. ನೀರಲ್ಲಿರುವ ಅಗಸ ನೀರಡಿಸಿದಂತೆ ಆಗಿದೆ ಮನದ ಪಾಡು. ತನುವಿನ ತುಂಬಾ ಅರಿವು ಭರಿತವಾಗಿದೆ. ಮನ ತನುವನ್ನೇ ಆವರಿಸಿದೆ. ಆದರೂ ತನುವಿನಲ್ಲಿರುವ ಅರಿವಿನ ಅಮೃತ ಮನ ಸವಿಯುತ್ತಿಲ್ಲ. ಪುಸ್ತಕಗಳ ಪುರಾಣಕ್ಕೆ ಮೊರೆ ಹೋಗಿದೆ. ಭಗವದ್ಗೀತೆ, ಬೈಬಲ್, ಕುರಾನ್‌ಗಳಿಗೆ ಮೊರೆ ಹೋಗಿದೆ.

ಭಗವದ್ಗೀತೆ, ಬೈಬಲ್,ಕುರಾನ್ ಮುಂತಾದ ಜ್ಞಾನ ಗ್ರಂಥಗಳಿಗೆ ಜನ್ಮಕೊಟ್ಟಿದ್ದು ತನುವೇ ಆಗಿದೆ. ತನುವಿನಿಂದ ಹೊರ ಬಂದದ್ದನ್ನು ತನು ಬುಂಜಿಸಿದರೆ; ತನು ಸದೃಢವಾಗಿ ಇರಬಲ್ಲುದೆ ? ಸಕಲ ಪುಸ್ತಕಗಳೂ ತನುವಿನ ಎಂಜಲು. ತನುವಿನ ಮೀಸಲ ಜ್ಞಾನ ತನುವಿನಲ್ಲಿಯೇ ಇದೆ. ತನುವನ್ನು ಆವರಿಸಿದ ಮನ ಅರಿವಿನಿಂದ ಆಲೋಚನೆ ಮಾಡಬೇಕು. ತನುವಿನಲ್ಲಿಯೇ ತನ್ಮಯವಾದ ಅರಿವಿನ ಅಮೃತವನ್ನು ಮನ ಸ್ವೀಕರಿಸಿ ಘನಮನವಾಗಬೇಕು.

ಹಸಿವಾದರೆ ಹೊಟ್ಟೆಗೆ ಕಟ್ಟಿದ ಬುತ್ತಿಯಿಂದ ಅದಕ್ಕೆ ತೃಪ್ತಿಯಾಗದು. ಅದನ್ನು ಉಂಡೇ ಸವಿಯಬೇಕು. ಉಂಡ ಅನ್ನವೇ ಅಂಗಕ್ಕೆ ರಕ್ತವಾಗುತ್ತದೆ. ರಸಾಯನವಾಗುತ್ತದೆ. ಅರಿವಿನ ಅಮೃತವೂ ಆಗುತ್ತದೆ. 'ಅನ್ನಮ್ ಬ್ರಹ್ಮ ' ಎಂದು ಹೇಳುವುದಿಲ್ಲವೆ ? ಹಾಗೆ ಉಂಡ ಅನ್ನವೇ ಬ್ರಹ್ಮವಾಗುತ್ತದೆ. ಅನ್ನ ಹೊಟ್ಟೆಗೆ ಕಟ್ಟಿಕೊಂಡರೆ ಹಸಿವು ನೀಗುವುದಿಲ್ಲ. ಅಗಸ ನೀರಲ್ಲಿಯೇ ಇದ್ದು ನೀರ ಬಯಸಿದರೆ ದಾಹ ಇಂಗುವುದಿಲ್ಲ.

ನಾನು ಬ್ರಹ್ಮ, ನಾನು ಅರಿವನ್ನು ಅರಿತಿದ್ದೇನೆ ಎಂದು ಬಹಿರಂಗವಾಗಿ ಹೇಳಿದರೆ ಆತ ಬ್ರಹ್ಮನಾಗುತ್ತಾನೆಯೇ ? ಅದು ಸಾಧ್ಯವಲ್ಲದ ಮಾತು. ಫಲ ಕೊಡುವ ಮರ ನಾನು ಫಲ ಕೊಡುತ್ತೇನೆ ಎಂದಂತಾಗುತ್ತದೆ. ಫಲ ಕೊಡುವುದು ಮರದ ಸಹಜ ಗುಣ.ಅದು ಕೊಡುತ್ತದೆ. ಹೇಳುವುದಿಲ್ಲ. ತನು ಕೂಡಾ ಹಾಗೆಯೇ. ಅದು ಅರಿವಿನಿಂದ ಭರಿತವಾಗಿದೆ. ಸಹಜ ಅರಿವು ತನುವಿನಲ್ಲಿ ತನ್ಮಯವಾಗಿದೆ. ತನುವನ್ನು ಆವರಿಸಿದ ಮನ ಅರಿವನ್ನು ಪುಸ್ತಕದಲ್ಲಿ ಹುಡುಕದೆ ತನುವಿನಲ್ಲಿಯೇ ಹುಡುಕಬೇಕು.

ಅರಿವು ಕಣ್ಣಿನಲ್ಲಿ ಭರಿತವಾಗಿದೆ ; ಅದನ್ನು ನೋಡಿ ತಿಳಿಯಬೇಕು. ಕಿವಿಯಲ್ಲಿ ಭರಿತ ವಾಗಿದೆ ; ಮನ ಅದನ್ನು ಕೇಳಿ ತಿಳಿಯಬೇಕು. ಮೂಗಿನಲ್ಲಿ ಭರಿತವಾಗಿದೆ ಅದನ್ನು ಮನ ಮೂಸಿಸಿ ಅರಿಯಬೇಕು. ನಾಲಿಗೆಯಲ್ಲಿ ಭರಿತವಾಗಿದೆ ಮನ ಅದನ್ನು ರುಚಿಸಿ ಅರಿಯಬೇಕು. ಚರ್ಮದಲ್ಲಿ ಅರಿವು ಭರಿತವಾಗಿದೆ ; ಮನ ಅದನ್ನು ಮುಟ್ಟಿ ಅರಿಯಬೇಕು. ಇದನ್ನು ಬಿಟ್ಟು ಮನ ಅರಿತಿದ್ದೇನೆ ಎಂದು ಹೇಳುತ್ತದೆ ; ಓದುತ್ತದೆ ; ಸಂಗ್ರಹ ಮಾಡಿಕೊಳ್ಳುತ್ತದೆ ; ಅದನ್ನೇ ರೆಕಾರ್ಡ್ ಮಾಡಿಕೊಂಡು ಟೇಪ್‌ನಂತೆ ಹೊರ ಚೆಲ್ಲುತ್ತದೆ. ಅದು ಇತರರಿಗೆ ಆನಂದವಾಗಬಹುದು ; ತನಗೆ ಆಗುವುದಿಲ್ಲ. ಏಕೆಂದರೆ ಸಂಗ್ರಹ ಮಾಡಿಕೊಂಡು ಆಡಿದ ಮಾತು ತನ್ನದಲ್ಲವೆಂದು ತನಗೇ ಚುಚ್ಚುತ್ತದೆ. ಹೀಗೆ ಚುಚ್ಚುವ ವಸ್ತುವಾದರೂ ಯಾವುದು ಎಂದು ಮನ ಅರಿಯಬೇಕು.ಅದೇ ಸಚ್ಚಿದಾನಂದ, ಪರಬ್ರಹ್ಮ ಎಂದು ತನ್ನಾಳಕ್ಕೆ ತಾನೇ ಹೋಗಿ ತಿಳಿಯಬೇಕು. ತಿಳಿದು ಆ ವಸ್ತುವೇ ತಾನಾಗಬೇಕು.

**ತಾನಳಿವುದಕ್ಕೆ ಮುನ್ನವೆ ಅರಿದು ಕೂಡಬೇಕೆಂದನಂಬಿಗ ಚೌಡಯ್ಯ :**

ಅಂಗಕ್ಕೆ ಅಳಿವುಂಟು. ಅದು ಹುಟ್ಟಿದ ಮೇಲೆ ಹತ್ತೋ ಇಪ್ಪತ್ತೋ ಐವತ್ತೋ ನೂರು ವರ್ಷಗಳವರೆಗೆ ಇದ್ದು ಇಲ್ಲವಾಗುತ್ತದೆ. ಇಲ್ಲದ ಜಾಗದಿಂದ ಬಂದು ಇಲ್ಲದ ಜಾಗಕ್ಕೆ ಹೋಗುತ್ತದೆ. ಜಲ ಶಾಖದಿಂದ ಕರಗಿ ಬಯಲಲ್ಲಿ ಸೇರಿದಂತೆ. ಪುನಃ ಜಲವಾಗಿ ಇಳೆಗೆ ಬಂದಂತೆ ! ಎಲ್ಲಿಂದ ಬಂತೋ ಅಲ್ಲಿಗೆ ಹೋಯಿತು. ತಿಳಿದರೆ ಬಲು ಸಂಭ್ರಮ. ತಿಳಿಯದಿದ್ದರೆ ಬಲು ದುಃಖ.

ಅಂಗ ಅಳಿವುದಕ್ಕೆ ಮುನ್ನವೇ ಅಂಗದಲ್ಲಿಯೇ ಸಂಗಮವಾದ ಅರಿವನ್ನು ಮನದ ಮೂಲಕ ಅರಿತು ಅಂಗದಲ್ಲಿಯೇ ಕೂಡಬೇಕು. ಇದು ಅಂಬಿಗರ ಚೌಡಯ್ಯಗಳ ಬಲು ರಹಸ್ಯಮಯವಾದ ಸೂತ್ರ !

27

**ಅರಿಯದ ಗುರು ಅರಿಯದ ಶಿಷ್ಯಂಗೆ**
**ಅನುಗ್ರಹವ ಮಾಡಿದಡೇನಪ್ಪುದೆಲವೊ.**
**ಅಂಧಕನ ಕೈಯನಂಧಕ ಹಿಡಿದಡೆ ಮುಂದನಾರು ಕಾಬರು ಹೇಳಲೆ ಮರುಳೆ.**
**ತೊರೆಯಲದ್ದವನನೀಸಲರಿಯದವ**
**ತೆಗೆವ ತೆರನಂತೆಂದನಂಬಿಗ ಚೌಡಯ್ಯ.**

ಏನೂ ಅರಿಯದವನು ಗುರುವಿನ ವೇಷ ಧರಿಸಿ ಏನೂ ಅರಿಯದ ಶಿಷ್ಯನಿಗೆ ಬೋಧಿಸಿದರೆ ಕುರುಡನ ಕೈಯನು ಕುರುಡನು ಹಿಡಿದು ದಾರಿ ಸವೆಸಿದಂತೆ. ಇವರಿಬ್ಬರೂ ಅರಿವಿನ ಪರಮಸುಖವನು ಹೊಂದಲಾರರು.

ನೀರಲ್ಲಿ ಮುಳುಗಿದವನನ್ನು ದಡದಲ್ಲಿದ್ದ ಈಸು ಬಾರದವನು ನೀರಲ್ಲಿ ಹಾರಿ ದಡ ಸೇರಿಸಬಹುದೆ ? ಹಾಗೆಯೇ ಲೋಕದ ಬಹುತೇಕ ಗುರು ಶಿಷ್ಯರ ವ್ಯವಹಾರ.

ಪ್ರತಿ ಅಂಗದಲ್ಲಿಯೂ ಅರಿವು ಸಂಗಮವಾಗಿದೆ.ಆ ಅರಿವೇ ಗುರು ! ಅದನ್ನು ತಿಳಿಯುವ ಮನವೇ ಶಿಷ್ಯ ! ಅಂಗದಲ್ಲಿರುವ ಅರಿವೆಂಬ ಗುರುದೇವನಿಗೆ ವೇಷ ಧರಿಸಿದವನು ಗುರುವಾಗ ಬಹುದೆ ? ಗುರುದೇವನಿಗೆ ಮತ್ತೊಬ್ಬ ಗುರು ಬೋಧಿಸಬಹುದೆ ? ಅನುಗ್ರಹ

ಮಾಡಬಹುದೆ ? ಗುರು ವೇಷ ಧರಿಸಿದವನು ಅರಿತರೆ ತನಗೆ ತಾನೇ ಛೀ ಎಂದುಕೊಂಡು ಗುರುವೇಷ ಕಳಚಿ ನಾಚಿ ನೀರಾಗುತ್ತಾನೆ. ಆಹಾ ಅರಿವಿನ ಪರಮ ಸುಖಕ್ಕಾಗಿ ಬಂದ ತನು ಗುರುವಾಗಿದೆಯಲ್ಲಾ ; ಶಿಷ್ಯನಾಗಿದೆಯೆಲ್ಲಾ ಇದೆಂತಹ ಮನದ ವ್ಯವಹಾರ ? ಈ ವ್ಯವಹಾರಕ್ಕೆ ಧಿಕ್ಕಾರವಿರಲಿ ಎಂದು ಪೀಠ ತ್ಯಜಿಸಿ ಅರಿವಿನ ಮಾರ್ಗ ಹಿಡಿಯುತ್ತದೆ ಮನ.

ಅಂಗ ಅರಿವಿನ ಪೀಠವಾಗಿದೆ. ಬ್ರಹ್ಮ ಪೀಠವೂ ಆಗಿದೆ. ಶ್ರೀಮನ್ನಿರಂಜನ ಪ್ರಣವ ಸ್ವರೂಪಿಯೂ ಆಗಿದೆ, ಷಟಸ್ಥಲ ಬ್ರಹ್ಮ ಸ್ವರೂಪಿಯೂ ಆಗಿದೆ. ವೇಷ ಧರಿಸಿದ ಗುರುವಾದರೇನು ? ವೇಷ ಧರಿಸದೆ ಇರುವ ಶಿಷ್ಯನಾದರೇನು ? ಇವೆರಡೂ ಅಂಗಗಳಲ್ಲವೆ ? ಅಂಗಕ್ಕೆ ವೇಷ ಹಾಕಿದರೆ ಅದು ಗುರುವಾಗುತ್ತದೆಯೆ ? ವೇಷ ಧರಿಸದಿದ್ದರೆ ಅದು ಶಿಷ್ಯನಾಗುತ್ತದೆಯೆ? ಸಕಲ ಗ್ರಂಥಗಳನ್ನು ಪಠಿಸಿದರೇನು ? ಅದು ಅರಿವನು ಅರಿಯದ ಕುರುಡು ಅಂಗ. ಕುರುಡ ಮತ್ತೊಬ್ಬ ಕುರುಡನಿಗೆ ದಾರಿ ತೋರಿಸಲು ಸಾಧ್ಯವೆ ? ದಾರಿ ಸಾಗುವುದಾದರೂ ಹೇಗೆ ? ಇವರಿಬ್ಬರೂ ಅರಿವನು ಅರಿಯದವರು. ಅರಿವೆಂದರೇನೆಂದು ತಿಳಿಯದವರು.ಅರಿವನರಿತ ಅರುಹಿರಿಯರನು ಅರಿಯುವ ಕಲೆಯನು ತಿಳಿಯದವರು. ಹಗಲು ಕುರುಡರು. ಕುರುಡರಲ್ಲಿಗೆ ಕುರುಡರು ಹೋಗಿ ದಾರಿ ತೋರೆಂದು ಬೇಡಿಕೊಂಡಂತೆ !

**28**

**ಅರಿವನರಿದಲ್ಲಿ ತಾನೆನ್ನದೆ ಇದಿರೆನ್ನದೆ,**
**ಮತ್ತೇನುವ ಉಳಿದುವ ಸಂಪಾದಿಸದೆ,**
**ಅರುಣನ ಕಿರಣದಲ್ಲಿ ಅರತ ಸಾರದಂತೆ, ಕಾದ ಹಂಚಿನಲ್ಲಿ ನೀರ ಬಿಟ್ಟಂತೆ.**
**ಬಧಿರನ ಕಾವ್ಯದಂತೆ, ಚದುರನ ಒಳುಪಿನಂತೆ**
**ತಲೆದೋರದೆ ನಿಂದಾತನ ಅಡಿಗೆರಗುವೆನೆಂದನಂಬಿಗ ಚೌಡಯ್ಯ.**

ಹೂ ಬಿಟ್ಟ ಮರ ನಾನು ಹೂ ಬಿಟ್ಟಿದ್ದೇನೆ ಎಂದು ಹೇಗೆ ಹೇಳುವುದಿಲ್ಲವೊ ಹಾಗೆಯೆ ಅರಿವನು ಅರಿತು ಆ ಅರಿವೇ ತಾನಾದ ಪರಮ ಗುರುದೇವನು ನಾನು ಅರಿತಿದ್ದೇನೆ ಎಂದು ಹೇಳುವುದಿಲ್ಲ. ಆತ ಅರಿತೆನೆಂದು ಅರಿವಿನ ಯಾವ ವೇಷವನ್ನು ಧರಿಸುವುದಿಲ್ಲ. ಮಠ, ಪೀಠ ಆಶ್ರಮಗಳು ಆತನಿಗೆ ಬೇಕಿಲ್ಲ. ಆತ ವಿರಾಟ ಸ್ವರೂಪಿ. ಆತನ ಗರ್ಭದಲ್ಲಿಯೇ ಸಕಲ ಸಂಪತ್ತುಗಳು ಅಡಗಿರುವಾಗ ಆತನಿಗೆ ಲೋಕದ ಸಂಪತ್ತಿನ ಅವಶ್ಯಕತೆಯೇ ಇರುವುದಿಲ್ಲ.

ಅರಿವನು ಅರಿತ ಮಹಾ ಮಹಿಮನು; ಕೋಟಿ ಸೂರ್ಯರನ್ನು ಬೆಳಗುವ ಸೂರ್ಯನಾತ. ಸಕಲರನ್ನು ತನ್ನಂತೆಯೇ ನೋಡುತ್ತಾನೆ. ಸಕಲರಿಗೂ ತಾನಾರೆಂದು ತಿಳಿಯುವುದಿಲ್ಲ. ತಿಳಿಯದಿದ್ದರೇನಂತೆ ಒಡಲ ಬೆಳಗುವ ಬೆಳಕು ಸಕಲರಲ್ಲಿಯೂ ಇದೆ. ಅವರವರ ಒಡಲ ಬೆಳಕು ಆಯಾ ಒಡಲುಗಳಿಗೆ ಕಂಡಿಲ್ಲವಷ್ಟೆ. ಬೆಳಕು ಕಂಡ ಒಡಲು ಆ ಬೆಳಕನು ಸಕಲ ಒಡಲುಗಳಲ್ಲಿಯೂ ಕಾಣುತ್ತದೆ. ಹೀಗಾಗಿ ತಾನೂ ಬೆಳಗುತ್ತದೆ ; ಸಕಲ ಒಡಲುಗಳು ಬೆಳಗುವುದನ್ನು ತನಗೆ ಕಂಡು ಬರುತ್ತದೆ.

ಅರಿವನು ಅರಿವ ಅರಿವು ಸಕಲ ತನುಗಳಲ್ಲಿಯೂ ಭರಿತವಾಗಿದೆ. ಅರಿವಿನತ್ತ ಬಯಕೆಯಾದ ಮನಗಳೆಲ್ಲ ಘನಮನಗಳಾಗುತ್ತವೆ. ನೀರಲ್ಲಿದ್ದು ನೀರ ಮುಟ್ಟಿಸಿಕೊಳ್ಳದ ತಾವರೆಯಂತಾಗುತ್ತವೆ.

29

**ಅರಿವಿನ ಪಥವನರಿಯದಿರ್ದಡೆ,**
**ಮುಂದೆ ಹೆರರಿಗೆ ದೀಕ್ಷೆಯ ಮಾಡಲೇಕೆ ?**
**ತೊರೆಯಲದ್ದವನ ನೀಸಲರಿಯದವ**
**ತೆಗೆಯ ಹೋದಂತಾಯಿತ್ತೆಂದನಂಬಿಗ ಚೌಡಯ್ಯ .**

ಮನಸ್ಸು ಜಗತ್ತಿನ ಎಲ್ಲಾ ವಿಷಯಗಳನ್ನು ತಿಳಿಯುತ್ತದೆ. ತಿಳಿಯಲು ಬಯಕೆ ಮಾಡುತ್ತದೆ. ಆದರೆ ಅರಿವು ಮಾತ್ರ ತಿಳಿಯುವುದಿಲ್ಲ. ಸಂತೋಷ ಇರುವುದು ಅಲ್ಲಿಯೇ. ಅದನ್ನು ಮಾತ್ರ ಬಿಟ್ಟು ಏನೆಲ್ಲಾ ಹಗಲಿರುಳೆನ್ನದೆ ತಿಳಿಯುತ್ತದೆ. ಸಪ್ತ ಸಾಗರಗಳನ್ನು ಈಜಬಲ್ಲ. ಆಕಾಶದೆತ್ತರಕ್ಕೆ ಹಾರಬಲ್ಲ. ಪಾತಾಳವನ್ನು ಕೊರೆದು ಹೊಸ ಲೋಕವನ್ನು ಸೃಷ್ಟಿಸಬಲ್ಲ. ಇಡೀ ಪ್ರಪಂಚಕ್ಕೆ ಒಡೆಯನಾಗಬಲ್ಲ. ಆದರೆ ಅರಿವಿನ ಪಥವನ್ನು ಮಾತ್ರ ಅರಿಯುವುದಿಲ್ಲ. ಇನ್ನು ಅರಿವಿಗೆ ಹೋಗಿ ಆ ಅರಿವಿನ ಆನಂದ ಪಡುವುದು ಬಹುದೂರವೇ ಉಳಿಯಿತು.

ಅರಿವಿನ ಪಥವನ್ನು ಅರಿಯದೆ ಅರಿವೇ ತಾನೆಂದು ಗುರುವಿನ ವೇಷವನ್ನು ಧರಿಸಿ ತನ್ನಂತೆಯೇ ಇರುವವರನ್ನು ಶಿಷ್ಯರನ್ನಾಗಿಸಿಕೊಂಡು ದೀಕ್ಷೆ ಕೊಡುತ್ತಾನೆ. ಅವರು ನೀಡುವ ಕಾಣಿಕೆಯನ್ನು ಸ್ವೀಕರಿಸಿ ಸುಖಿಸುತ್ತಾನೆ. ತಾನು ಗುರುವಾದೆನೆಂದು ಗರ್ವದಿಂದ ಮೆರೆಯುತ್ತಾನೆ.

ಅಂಗ ಅರಿವಿನ ಮನೆ. ಈ ಮನೆಯ ಕಣ ಕಣದಲ್ಲಿ ಅರಿವೇ ಭರಿತ ವಾಗಿರಬೇಕಿತ್ತು . ಆದರೆ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು, ಸಪ್ತ ವ್ಯಸನಗಳು, ಅಷ್ಟ ಮದಗಳು ತುಂಬಿವೆ. ಅಂಗದಲ್ಲಿರುವ ಅರಿವಿನಿಂದ ಮಾತ್ರ ಇವುಗಳನ್ನು ಭಸ್ಮ ಮಾಡಲು ಬರುತ್ತದೆ. ಹಾಗೆಂದು ಅಂಗಕ್ಕೆ ತಿಳಿಯದೇ ಹೋಗುತ್ತದೆ. ಹುಟ್ಟಿದಂದಿನಿಂದ ಸಾಯುವವರೆಗೆ ಹುಟ್ಟುತ್ತ ಸಾಯುತ್ತ ಬದುಕಿ ಒಮ್ಮೆ ಇಲ್ಲವಾಗುತ್ತದೆ.

ಅಂಗದಲ್ಲಿರುವ ಅರಿವು ಅರಿತ ಅಂಗ ಅದು ಬರೀ ಅಂಗವಲ್ಲ. ಅಂತಹ ಅರಿವನು ಅರಿತ ಅಂಗವನ್ನು ಶರಣರು ಲಿಂಗಾಂಗವೆಂದು ಕರೆದರು. ಶ್ರೀಕೃಷ್ಣ ಅರಿವನರಿತ ಅಂಗವನ್ನು ವಿರಾಟಸ್ವರೂಪ ಎಂದು ಕರೆದ. ಆದರೂ ಹಾಗೆ ಕರೆದ ಅಂಗವನ್ನು ಉಳಿದ ಅಂಗಗಳು ಪೂಜಿಸಿದವೇ ಹೊರತು ತಾನೇ ವಿರಾಟಸ್ವರೂಪನಾಗಬೇಕು ; ತಾನೇ ಲಿಂಗಾಂಗವಾಗಬೇಕೆಂದು ಬಯಕೆ ಮಾಡುವುದೇ ಇಲ್ಲ. ಇಷ್ಟೆಲ್ಲ ಅರಿವಿನ ಪಥವನ್ನು ಅರಿಯುವ ಸೂತ್ರ ಹಾಗೂ ರಹಸ್ಯಮಯವಾದ ಶಿಕ್ಷಣವಿದ್ದರೂ ಮನಸ್ಸು ಆ ಶಿಕ್ಷಣ ಕಲಿಯುವ ಗೋಜಿಗೆ ಹೋಗುವುದೇ ಇಲ್ಲ. ಅರಿವನು ಅರಿಯದವ ಅರಿದೆನೆಂದು ಅರಿಯದವನಿಗೆ ದೀಕ್ಷೆ ಮಾಡಿದರೆ ಬಂದ ಭಾಗ್ಯವಾದರೂ ಏನೆಂದು ಗುರುವರ್ಗ ತಿಳಿಯುವುದೇ ಇಲ್ಲ. ಹಾಗೆಯೇ ಅರಿವನು ಅರಿತವರನ್ನು ಅರಿಯುವ ಕಲೆ ಕೂಡಾ ಅರಿಯಬೇಕಾದವನಲ್ಲಿ ಇಲ್ಲದೆ ಇರುವುದು ದುರ್ಭಾಗ್ಯವೇ ಸರಿ. ಇನ್ನು ಅರಿವನು ಅರಿಯುವುದು ಮನುಷ್ಯನಿಗೆ ದೂರ ಉಳಿಯಿತು.

ಅರಿತವನು ಅರಿತಿದ್ದೇನೆ ಎನ್ನುವುದಿಲ್ಲ. ಅರಿವೇ ಹಾಗೆ ! ಅರಿಯಬಾರದ ಅರಿವನು ಅರಿತ ಮೇಲೆ ಅರಿಯಬೇಕಾದುದು ಏನಿದೆ ? ಉಳಿದವರು ಅರಿತಿಲ್ಲವಲ್ಲ ಎಂಬ ದುಃಖವೂ ಅರಿತವನಿಗೆ ಉಂಟಾಗುವುದಿಲ್ಲ. ಏಕೆಂದರೆ ಶ್ರೀಮಂತನಾದವನು ಹಣವಿದ್ದೂ ಊಟ ಸರಿಯಾಗಿ ಮಾಡುತ್ತಿಲ್ಲವೆಂದ ಮೇಲೆ ಅವನ ಮೇಲೆ ಯಾರು ಕನಿಕರಿಸುತ್ತಾರೆ ? ಹಾಗೆಯೇ ಅರಿತವನು

ಕೂಡಾ ಅರಿಯದವನನ್ನು ನೋಡಿ ಸಂತೋಷ ಪಡುತ್ತಾನೆ. ಅರಿವಿದೆ ಆದರೂ ಅರಿಯುತ್ತಿಲ್ಲ. ಅದು ಅವನ ಕರ್ಮ. ಅರಿಯದವನ ಪ್ರಾರಬ್ಧ! ಯಾರು ಏನು ಮಾಡಿಯಾರು ಎಂದು ಅರಿತವ ಸುಮ್ಮನಾಗುತ್ತಾನೆ.

ತಾನು ಅರಿತಿಲ್ಲ. ಆದರೂ ಅರಿಯದವರಿಗೆ ಅರಿತಿದ್ದೇನೆ ಎಂದು ದೀಕ್ಷೆ ಕೊಡುತ್ತಾನೆ. ಅರಿಯದವನು ಅರಿಯದವನಿಗೆ ಅರಿವು ಹೀಗಿದೆ ಎಂದು ಸುಳ್ಳು ಹೇಳುತ್ತಾ ಮೋಸ ಮಾಡುತ್ತಾನೆ. ಅರಿಯದವನು ಅರಿಯದವನಿಗೆ ಮೋಸ ಮಾಡುವುದು ತನಗೆ ತಾನೇ ಮೋಸ ಮಾಡಿಕೊಂಡಂತೆ. ಏಕೆಂದರೆ ಅರಿಯಬೇಕಾದುದು ಹಾಸಲುಂಟು ಹೊದಿಯಲು ಉಂಟು !

ಅರಿವಿದ್ದೂ ಅರಿಯದೇ ಅರಿಯದವರಿಗೆ ಅರಿಯಲು ಹೇಳುತ್ತಾನೆ ಎನ್ನುವುದು ಸೋಜಿಗವೇ ಸರಿ. ಹನ್ನೆರಡು ಜನ ಬುದ್ಧಿವಂತರ ಕತೆ ಇದ್ದಂತೆ ! ಇರುವುದು ಹನ್ನೆರಡು ಜನ ; ತನ್ನ ಬಿಟ್ಟು ಎಣಿಕೆ ಮಾಡುತ್ತಾನೆ. ಲೆಕ್ಕ ಸಿಕ್ಕು ವುದೇ ಇಲ್ಲ. ತನ್ನ ಹಿಡಿದು ಎಣಿಕೆ ಮಾಡಲು ತನಗೆ ಬರುವುದೇ ಇಲ್ಲ ! ಅರಿಯದವರನ್ನು ಕಂಡುಹಿಡಿಯಲಿಲ್ಲ. ಆದರೆ ತಾನೇ ಅರಿವು ಅರಿಯಲಿಲ್ಲವೆಂದು ತನಗೆ ಅನ್ನಿಸುವುದೇ ಇಲ್ಲ. ಹೀಗಾಗಿ ತನ್ನ ಲೋಪದೋಷಗಳು ತನಗೆ ತಾನೇ ಅರಿಯಲು ಹೋದಾಗ ತನಗೆ ತಾನೇ ತಿಳಿಯುತ್ತಾನೆ. ತನ್ನನ್ನು ತಾನೇ ಹಳಿದುಕೊಳ್ಳುತ್ತಾನೆ. ಇತರರನ್ನು ಹಳಿಯವುದಿಲ್ಲ. ತನಗೆ ತಾನೇ ಅರಿವಿನ ಪಥವನು ಅರಿಯುತ್ತಾನೆ.

**30**

**ಅರಿವುದೊಂದು ವಾಯು, ಮರೆವುದೊಂದು ವಾಯು.**
**ಉಭಯದಿಂ ತೋರುವ ವಾಯು ಒಂದೆಯಾಗಿ,**
**ವಾಳುಕದ ಒಳ ಹೊರಗಿನ ನೀರಿನಂತೆ**
**ವೆಗ್ಗಳಿಸಿದಡೆ ನಿಂದು ತೆಗೆದಡೆ ಅಲ್ಲಿಯೆ ಅಡಗುವಂತೆ,**
**ಅರಿದು ನುಡಿದು ನಡೆದಡೆ ಜ್ಞಾನಿ,**
**ನುಡಿದ ನುಡಿಗೆ ನಡೆಯಡಗೆ ಆತನೆ ಜೀವಭಾವಿ**
**ಎಂದನಂಬಿಗ ಚೌಡಯ್ಯ .**

ಮನ ಒಂದೆ. ಅರಿವು ಒಂದೆ. ತನು ಕೂಡಾ ಒಂದೆ. ಅರಿವಿನ ಬೆಳಕಿನಿಂದ ಹುಟ್ಟಿದ ನೆರಳು ಮನವೆಂದು ಹೆಸರು ಪಡೆದು ತನುವನ್ನು ಆವರಿಸಿಕೊಂಡಿದೆ. ತನುವಿನ ತುಂಬಾ ಅರಿವು ತನ್ಮಯವಾಗಿ ಬೆರೆತಿದೆ. ಮನ ಬೇರೆಯಾಗಿ ತನುವನ್ನು ಆವರಿಸಿದೆ. ಮನ ಅರಿವನ್ನು ಅರಿಯಲು ಹೋದರೆ ಸಾಕು ಅದರ ಬೆಳಕಿನಲ್ಲಿ ಲೀನವಾಗಿ ಬೆಳಕಾಗಿ, ಅರಿವಾಗಿ ಪರಿವರ್ತನೆಯಾಗುತ್ತದೆ. ಆದರೆ ಮನ ಹೊರಗಿನ ಸುಖ ಭೋಗಗಳಿಗೆ ಹೊರಗಿನ ಅರಿವಿಗೆ ಸೋತಿದೆ.

ಭಗವದ್ಗೀತೆ, ಬೈಬಲ್, ಕುರಾನ್‌ಗಳನ್ನು ಮನ ಓದುತ್ತದೆ ; ಅವುಗಳಿಗೆ ಸೋಲುತ್ತದೆ. ಸಂಗ್ರಹ ಮಾಡಿಕೊಂಡು ನುಡಿಯುತ್ತದೆ. ನುಡಿದಂತೆ ನಡೆಯಲು ಆಗುವುದಿಲ್ಲ. ಏಕೆಂದರೆ ಮನ ಒಂದು ವಸ್ತುವಲ್ಲ. ಅರಿವಿನ ಕಿರಣಗಳಿಂದ ಹುಟ್ಟಿದ ನೆರಳು. ಅದು ಇಲ್ಲದ್ದು. ಇದ್ದದ್ದು ಅರಿವು ; ಇದ್ದು ಇಲ್ಲದಂತಾಗುವುದು ತನು. ಇಲ್ಲದೆ ಇದ್ದಂತೆ ತೋರುವುದು ಮನ.

ಮನ ಬಿಸಿಲ್ಗುದುರೆಯಂತೆ. ಅದು ಬಿಸಿಲ ಜಳದಲ್ಲಿ ಕಾಣುತ್ತದೆ. ಜಲದಂತೆ

ಭಾಸವಾಗುತ್ತದೆ. ಹತ್ತಿರ ಹೋಗಿ ನೋಡಿದರೆ ಇರುವುದಿಲ್ಲ. ಮತ್ತೆ ಅನತಿ ದೂರದಲ್ಲಿ ಕಂಡು ಬರುತ್ತದೆ. ಬಾಯಾರಿದ ಮನುಷ್ಯನನ್ನು ಮೋಸ ಮಾಡುವ ಮಾಯಾಮೃಗ. ಅಂತೆಯೇ ಮನ ಕೂಡಾ ಜಗದಲ್ಲಿರುವ ತನುಗಳನ್ನೆಲ್ಲ ಮೋಸ ಮಾಡುತ್ತದೆ. ತನುವಿಗೆ ಮೋಸ ಮಾಡುವ ಮನವನ್ನು ಆ ಮನದಿಂದಲೇ ಅರಿಯಬೇಕಾಗಿರುವುದರಿಂದ ಅದು ಬೇಗನೆ ತನುವಿಗೆ ವಶವಾಗುವುದಿಲ್ಲ. ತನುವಿನ ಭಾಗ್ಯವಿದ್ದರೆ ಒಂದೇ ಜನ್ಮದಲ್ಲಿ ಆಗುವುದು. ಇಲ್ಲದಿದ್ದರೆ ಜನ್ಮಗಳೇ ಬೇಕಾಗುವುದು.

ಜನ್ಮಗಳಿವೆಯೆಂದು ಪ್ರಸ್ತುತ ತನುವಿಗೆ ಗೊತ್ತಿಲ್ಲ . ಹೀಗಾಗಿ ಹುಟ್ಟಿದಾರಭ್ಯದಿಂದ ಅರಿವಿಗಾಗಿ ಪ್ರಯತ್ನಿಸಬೇಕು. ಮನದ ಪ್ರಯತ್ನಕ್ಕೆ ಫಲವುಂಟು. ಪದವುಂಟು !

ಮನ ಭೂಮಿ, ಹೇಮ, ವಿಷಯ ವಸ್ತುಗಳನ್ನು , ಪದವಿ, ಅಧಿಕಾರಗಳನ್ನು, ಬಯಸಿದ ವಿದ್ಯೆಯನ್ನು ಸರಳವಾಗಿ ತನುವಿನ ಮೂಲಕ ಪಡೆದು ಅದರ ಬಾಹ್ಯಸುಖವನ್ನು ಕ್ಷಣಕಾಲ ಅನುಭವಿಸಿ ನಿವಾಳಿಸಿ ಹೊಗೆದು ಮತ್ತೆ ಮುಂದಿನದನ್ನು ಬೇಡುತ್ತದೆ. ಇದು ಮನದ ಗುಣ, ತನು ಇರುವವರೆಗೆ ಮನದ ಪ್ರಯತ್ನ ಮುಂದುವರೆಯುತ್ತದೆ. ಅದರ ಪ್ರಯಾಣ ನಿಲ್ಲುವುದೇ ಇಲ್ಲ. ಹೀಗೆ ಮನ ತನುವಿನಲ್ಲಿಯೇ ತನ್ಮಯವಾದ ಅರಿವು ತನಗೆ ಬೇಕೆಂದು ಬಯಸಿದಾಗ ಅದು ಒಳಮುಖವಾಗಿ ಪ್ರಯತ್ನಿಸುತ್ತದೆ. ಅಂತರಂಗದ ಈ ಪ್ರಯತ್ನಕ್ಕೆ ಸದ್ಗುರುದೇವ ಸಹಕಾರಿಯಾಗುತ್ತಾನೆ.ಇಂತಹ ಒಳಮುಖದ ಪ್ರಯತ್ನದಲ್ಲಿರುವ ತನುಗಳನ್ನೇ ಆತ ಹುಡುಕುತ್ತಿರುತ್ತಾನೆ. ಅಂತರಂಗದ ಪ್ರಯಾಣಕ್ಕೆ ಸಿದ್ಧವಾದ ಮನ ಸಿಕ್ಕ ಕೂಡಲೇ ಸದ್ಗುರು ಅರಿವಿನ ಬೀಜಗಳನ್ನು ಬಿತ್ತುತ್ತಾನೆ. ಅದು ಸಸಿಯಾಗಿ ಬೆಳೆದು ಜ್ಞಾನದ ಮರವಾಗಿ ಅರಿವಿನ ಸಿಹಿ ಫಲಗಳನ್ನು ಕೊಡುತ್ತಾ ಭೂಮಿಯ ಮೇಲೆ ಬುದ್ಧನಾಗಿ ನಡೆದಾಡುತ್ತದೆ.

ಮನ ತನುವಿನಲ್ಲಿಯೇ ತನ್ಮಯವಾದ ಅರಿವನ್ನು ಅರಿಯುತ್ತದೆ. ಅರಿತರಿತು ಅದರ ಜ್ಞಾನವನ್ನು ಮೆರೆಯುತ್ತದೆ. ಎರಡಾಗಿ ತೋರುವ ಮನ ಘನದಲ್ಲಿ ಬೆರೆತು ಘನಮನವಾಗುತ್ತದೆ. ಒಳ ಹೊರಗಿಲ್ಲದಂತೆ ಒಂದೇಯಾಗುತ್ತದೆ. ಅರಿದರಿದು ನುಡಿಯುತ್ತದೆ. ನುಡಿದಂತೆ ನಡೆಯುತ್ತದೆ. ಮಹಾಜ್ಞಾನಿಯಾಗುತ್ತದೆ. ನುಡಿದಂತೆ ನಡೆದರೆ ಜ್ಞಾನಿ. ನುಡಿದ ನುಡಿಗೆ ನಡೆಯಡಗದಿದ್ದರೆ ಜೀವಭಾವಿ. ಇದು ಅಂಬಿಗರ ಚೌಡಯ್ಯಗಳ ರಹಸ್ಯ ಮಯವಾದ ಸುಂದರ ಸೂತ್ರ .

**31**

**ಅರುಹಿರಿಯರ ದೈವ ಅಗಲ (ತೈಲವಿ)ಲ್ಲಾ ಎಂದಡೆ**
**ಹೊಲೆಯರ ಬೊ(ಮ್ಮು)ಗ ತೋಯೆ ತುಪ್ಪವ ಬೇಡುವಂತೆ**
**ಬ್ರಹ್ಮವಿಷ್ಣುಗಳೆಂಬರಿನ್ನು ಕಾಣರು,**
**ವೇದಂಗಳು ನಾಚದೆ ನುಡಿವ ಪರಿಯ ನೋಡಾ !**
**ಗಂಗೆವಾಳುಕಸಮರುದ್ರರು ಲಿಂಗವ ಕಂಡರೈಸೆ,**
**ಸ್ವಯಂಭುವ ಕಾಣೆರೆಂದನಂಬಿಗ ಚೌಡಯ್ಯ .**

ಬ್ರಹ್ಮನೆಂಬ ದೇವರು ಇಲ್ಲ. ವಿಷ್ಣುವೆಂಬ ದೇವರೂ ಇಲ್ಲ. ಆದರೂ ವೇದಗಳು ಬ್ರಹ್ಮ, ವಿಷ್ಣು ಎಂದು ನಾಚಿಕೆ ಇಲ್ಲದೆ ನುಡಿಯುತ್ತವೆ. ಜನ ಅವರಿಬ್ಬರೂ ಇದ್ದಾರೆಂದೇ ಭಾವಿಸಿದೆ. ಅದು

ಅವರ ಭ್ರಮೆ. ಆ ಭ್ರಮೆ ಕಳೆದುಕೊಂಡರೆ ತಾನೇ ಬ್ರಹ್ಮ. ತಾನೇ ವಿಷ್ಣು.

ಅರುವುಳ್ಳ ಹಿರಿಯರಿಗೆ ನೀಡಲು ತೈಲವಿಲ್ಲ ಎಂದು ಅಲವೊತ್ತುಕೊಳ್ಳುತ್ತಿರುವಾಗಲೇ ಹೊಲೆಯರ ಬ್ರಹ್ಮನಿಗೆ ಅಭಿಷೇಕ ಮಾಡಲು ತುಪ್ಪ ಬೇಡುವಂತೆ. ಇದೊಂದು ಚಮತ್ಕಾರದ ಮಾತು.ಜನ ನಂಬಿದ ಮೌಢ್ಯ ಸಂಪ್ರದಾಯವನ್ನು ಅರಿವಿನ ಖಡ್ಗದಿಂದ ಸೀಳಿ ನೀವಾಳಿಸಿ ಒಗೆಯುವ ಚೌಡಯ್ಯ ಶರಣರ ಮಾತು. ಅವರು ಮಾತ್ರ ಕಟುವಾಗಿ ನುಡಿಯಬಲ್ಲರು. ಇದು ಬ್ರಹ್ಮ,ವಿಷ್ಣುವಿನ ಭಕ್ತರನ್ನು ರೊಚ್ಚಿಗೆಬ್ಬಿಸುವ ಮಾತಲ್ಲ. ಅವರು ನಂಬಿದ ಬ್ರಹ್ಮ ಹೊರಗಿಲ್ಲ. ಅವರು ನಂಬಿದ ವಿಷ್ಣು ಹೊರಗಿಲ್ಲ. ಇಬ್ಬರೂ ತನುವಿನೊಳಗೆ ತನ್ಮಯವಾಗಿದ್ದಾರೆ ಎಂದು ನಂಬಿದವರನ್ನು ನಂಬಿಸುವ ಮಾತು.

ಪೂಜಿಸುವ ಬ್ರಹ್ಮ ತಾನೇ ಎಂದು ತಿಳಿದರೆ ಎಷ್ಟು ಸಂತೋಷವಾಗುತ್ತದೆ. ಹಾಗೆಯೇ ಪೂಜಿಸುವ ವಿಷ್ಣು ಕೂಡಾ ತಾನೇ ಎಂದು ತಿಳಿದರೆ ಎಷ್ಟೊಂದು ಸಂತೋಷವಾಗುತ್ತದೆ.

ತನುವಿನಲ್ಲಿ ತನ್ಮಯವಾದ ಅರಿವೇ ಗುರು. ಆ ಗುರುದೇವನೇ ಮಹಾದೇವ. ಆ ಮಹಾದೇವನೇ ಸದಾಶಿವ. ಆ ಸದಾ ಶಿವನೇ ಸಾಕ್ಷಾತ್ ಪರಬ್ರಹ್ಮ ! ''ಗುರು ದೇವೋ ಮಹಾದೇವೋ, ಗುರುದೇವೋ ಸದಾಶಿವ ಃ ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರುವೇ ನಮಃ ''ಅಂದರೆ ತನುವಿನಲ್ಲಿರುವ ಅರಿವೆ ಗುರು. ಆ ಗುರು ದೇವನೇ ಮಹಾದೇವ, ಆ ಮಹಾದೇವನೇ ಸದಾಶಿವ, ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮ ಎಂದಂತಾಗಲಿಲ್ಲವೆ ?

ಈ ಗುರು ಮಂತ್ರವನ್ನು ಎಲ್ಲರೂ ಉಚ್ಚರಿಸುತ್ತಾರೆ. ಆದರೆ ತಾನೇ ಈ ಮಂತ್ರ ಎಂದು ಕಂಡುಕೊಂಡು ಅನುಭವಿಸಲು ಪಠಿಸುವವನಿಗೆ ಸಾಧ್ಯವಾಗಿಲ್ಲ. ಅಷ್ಟೊಂದು ಸರಳವಾಗಿ ಸಾಧ್ಯವಾಗಬೇಕಾದರೆ ಮನ ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನತ್ತ ಪ್ರಯಾಣ ಮಾಡಬೇಕು. ಆ ಗುರುದೇವನಲ್ಲಿ ಮನವೆಂಬ ತಾನು ಲೀನವಾಗಬೇಕು. ಆಗ ಮನವೇ ಘನಮನವಾಗುತ್ತದೆ. ಸಾಕ್ಷಾತ್ ಗುರುವಾಗುತ್ತದೆ. ಸಾಕ್ಷಾತ್ ಮಹಾದೇವ-ಸದಾಶಿವನಾಗುತ್ತದೆ. ಮನ ತನ್ನ ಭ್ರಮೆ ಕಳೆದುಕೊಂಡು ಪರಬ್ರಹ್ಮನೇ ತಾನಾಗುತ್ತದೆ.

ಮನ ಅರಿವಿನಲ್ಲಿ ಲೀನವಾಗಿ ಭ್ರಮೆ ಕಳೆದುಕೊಂಡು ಬ್ರಹ್ಮನಾಯಿತು. ಆಗ ತನುವೇ ವಿಷ್ಣುವಾಯಿತು. ತನುವಿನಲ್ಲಿ ತನ್ಮಯವಾದ ಅರಿವೇ ಗುರುವಾಯಿತು. ಮಹಾದೇವ-ಸದಾಶಿವನಾಯಿತು. ಅಂದರೆ ಬ್ರಹ್ಮ ವಿಷ್ಣು ಸದಾಶಿವ ಎನ್ನುವವರು ಹೊರಗಿಲ್ಲ. ಅವರು ಮೂರುಜನ ನನ್ನಲ್ಲಿಯೇ ಇದ್ದಾರೆ. ಅವರೆಲ್ಲ ನಾನೇ. ನಾನೇ ಅವರು ಎಂದಂತೆ ಆಗಲಿಲ್ಲವೆ ?

ಗಂಗೆವಾಳುಕ, ಸಮರುದ್ರರು ಲಿಂಗವನ್ನು ಕಾಣಬಹುದು. ಸ್ವಯಂಭು ಕಾಣರು. ಶಿವನೆಂದರೆ ಹೊರಗಿಲ್ಲ. ಆತ ಅಂಗದಲ್ಲಿಯೇ ಸಂಗಮವಾಗಿದ್ದಾನೆ. ಅಂಗವನ್ನು ತಾನೇ ಸೃಷ್ಟಿಸಿ ಆ ಅಂಗಕ್ಕೆ ವಿಷ್ಣುವನ್ನು ಕಾವಲಿರಿಸಿದ್ದಾನೆ. ರಕ್ಷಣೆಯ ಜವಾಬ್ದಾರಿಯನ್ನು ವಿಷ್ಣುವಿಗೆ ನೀಡಿದ್ದಾನೆ.ಅಂಗದಲ್ಲಿ ಸಂಗಮವಾದ ಅರಿವೆಂಬ ಶಿವನ ಬೆಳಕಿನಿಂದ ಹುಟ್ಟಿದ ಮನವೇ ಬ್ರಹ್ಮ ! ಬೆಳಕಿನ ಕಿರಣಗಳಿಂದ ಮನದ ನೆರಳನ್ನು ಕಳೆದು ಬ್ರಹ್ಮವಾಗಿಸಿದ್ದಾನೆ. ಶಿವ ಬ್ರಹ್ಮ ವಿಷ್ಣು ಅಂಗದಲ್ಲಿ ಸಂಗಮವಾಗಿದ್ದಾರೆ. ಹೀಗಾಗಿ ಜಗದ ಅಂಗಗಳೆಲ್ಲ ಲಿಂಗಾಂಗಗಳೇ ಆಗಿವೆ.

**ಸ್ವಯಂಭುವ ಕಾಣೆರೆಂದನಂಬಿಗ ಚೌಡಯ್ಯ :**

ಶಿವನಿಗೆ ಹುಟ್ಟಿಲ್ಲ. ಕೇಡಿಲ್ಲ; ರೂಪವೂ ಇಲ್ಲ. ರೂಪಿನಲ್ಲಿ ನಿರೂಪವಾಗಿದ್ದಾನೆ . ರೂಪು ವಿಷ್ಣುವಾದರೆ, ನಿರೂಪವೇ ಶಿವ. ರೂಪನ್ನು ಆವರಿಸಿದ ಮನವೇ ಬ್ರಹ್ಮ. ಹೀಗಾಗಿ ಶಿವ

ಸ್ವಯಂಭು. ಶಿವನನ್ನು ಹೊತ್ತ ಅಂಗ ಶಿವನಿಂದಲೇ ಜನ್ಮ ಪಡೆದಿದೆ. ಶಿವನನ್ನೇ ಹೊತ್ತಿದೆ. ಶಿವ ವಿಷ್ಣು ಬ್ರಹ್ಮನನ್ನು ಕಂಡ ಅಂಗವೇ ಲಿಂಗಾಂಗ ! ಅದಕ್ಕೆ ಜನನವಿಲ್ಲ ; ಮರಣವಿಲ್ಲ. ಸಾಕ್ಷಾತ್ ಸ್ವಯಂಭು ! ಇದನ್ನು ತನ್ನಿಂದ ತಾನೇ ತಿಳಿಯಬೇಕು. ತಿಳಿಯುವ ಕಲೆ ಕೂಡಾ ತನುವಿನಲ್ಲಿಯೇ ತನ್ಮಯವಾಗಿದೆ. ಹೀಗೆ ತಿಳಿದ ತನುವೇ ಧನ್ಯ !

**32**

**ಅರ್ಚನೆಯ ಮಾಡುವಲ್ಲಿ ಆವೇಶ ಅರತಿರಬೇಕು.**
**ಪೂಜೆಯ ಮಾಡುವಲ್ಲಿ ಪುಣ್ಯಮೂರ್ತಿಯಾಗಿರಬೇಕು.**
**ಕೊಡುವ ಕೊಂಬಲ್ಲಿ ಸರ್ವಭೂತಹಿತನಾಗಿರಬೇಕು.**
**ಇಂತೀ ಸಡಗರಿಸಿಕೊಂಡಿಪ್ಪಾತನ ಅಡಿಗೆರಗುವೆನೆಂದನಂಬಿಗ ಚೌಡಯ್ಯ**

ಅರಿವನು ಅರಿತವರನು ಅರಿಯುವುದು ಕೂಡಾ ಒಂದು ಕಲೆ. ಈ ಕಲೆ ಸಕಲರಿಗೂ ಬರುವುದಿಲ್ಲ. ಅರಿವಿನ ಜಾಡು ಹಿಡಿದು ಅರಿತವರ ಸಂಗ ಮಾಡಿದ ಮಹಾನುಭಾವ ಮಾತ್ರ ಅರಿತವರನು ಅರಿಯಬಲ್ಲ.

ಯಾರಿಗೆ ಅರ್ಚನೆ ಮಾಡಬೇಕು ? ಯಾರಿಗೆ ಪೂಜೆ ಮಾಡಬೇಕು ? ಅರ್ಚನೆ ಮಾಡಿಕೊಳ್ಳುವವನು ತಾನೆ, ಪೂಜೆಗೊಂಬುವವನೂ ತಾನೆ ! ಪಂಚಭೂತಗಳನ್ನೊಳಗೊಂಡವನು ಪೂಜೆ ಮಾಡುವುದೆಂದರೇನು ? ಪೃಥ್ವಿ, ಜಲ, ವಾಯು, ಅಗ್ನಿ, ಆಕಾಶಗಳನ್ನೊಳಗೊಂಡ ಕಾಯ ಮತ್ತೊಂದು ಕಾಯಕ್ಕೆ ಪೂಜಿಸಿ ಧನ್ಯನಾದೆ, ಕೃತಾರ್ಥನಾದೆ ಎಂದು ಕೊಳ್ಳುವುದು ಒಂದು ಸೋಜಿಗವೇ ಸರಿ.

''ಪೂಜೆಯಾಯಿತ್ತಿದೆನೊ ? ಪೂಜೆಯ ಮೇಲೆ ಸಿಂಹಾಸನವಿದೆನೊ ? ಧೂಪ ದೀಪ ನಿವಾಳಿಯಿದೆನೊ ? ತಳದಲ್ಲಿ ಜ್ಯೋತಿ, ಮೇಲೆ ಪ್ರಣತೆ ! ಕಳಸದ ಮೇಲೆ ನೆಲೆಗಟ್ಟು ಕಂಡು ನೋಡಿ ಬೆರಗಾದೆ ಗುಹೇಶ್ವರಾ '' ಪೂಜೆ ಮಾಡಬೇಕಾದರೆ ಪೂಜಿಸುವವನು ಪೂಜೆಗೊಂಬುವವನು ಪ್ರಭುವಿನ ಈ ಸೂತ್ರವನ್ನು ಅರಿತಿರಬೇಕು. ಅರಿತು ಪೂಜೆಯ ಮಾಡುವಲ್ಲಿ ಪುಣ್ಯ ಮೂರ್ತಿಯೇ ತಾನಾಗಿರಬೇಕು.

ಕೊಡುವಲ್ಲಿ ಕೊಂಬಲ್ಲಿ ಸರ್ವಭೂತಹಿತನಾಗಿರಬೇಕು :

ಗಾಳಿ ಬೀಸಿ ಕೊಟ್ಟೆನೆಂದು ಕುದಿಯುವುದಿಲ್ಲ. ಅಗ್ನಿ ಉರಿದು ಬೆಳಕು ನೀಡಿದೆನೆಂದು ಬೇಯುವುದಿಲ್ಲ. ಜಲ ಹರಿದು ತಂಪೆರೆದೆನೆಂದು ಹಪಹಪಿಸುವುದಿಲ್ಲ. ಭೂಮಿ ಸಕಲ ಸಸ್ಯ ಶಾಮಲಕ್ಕೆ ಜನ್ಮ ನೀಡಿ ನನ್ನಿಂದಲೇ ಎಲ್ಲ ಎಂದು ಬೀಗುವುದಿಲ್ಲ. ಇದೆಲ್ಲವನು ನೀಡಿದ ಬಯಲು ಸಕಲ ಜೀವರಾಶಿಗಳನ್ನು ತನ್ನ ಗರ್ಭದಲ್ಲಿಯೇ ಬಂಧಿಸಿಕೊಂಡು ಸಲಹುತ್ತಿದೆ. ಅವುಗಳೊಂದಿಗೆ ಗರ್ಭಧರಿಸಿದ ತಾಯಿಯಂತೆ ಕಚಗುಳಿಯಾಡುತ್ತದೆ.

ಬಯಲು, ತಾನು ಭೂತನಾಥನಾಗಿ ಸಕಲ ಭೂತಗಳಿಗೆ ಜನ್ಮ ನೀಡಿ ಸರ್ವ ಭೂತಗಳ ಹಿತ ಕಾಯುತ್ತದೆ. ಕೊಟ್ಟೆನೆಂದು ಕುದಿಯುವುದಿಲ್ಲ ; ಕೊಂಡೆನೆಂದು ಬೀಗುವುದಿಲ್ಲ. ಹೀಗೆ ಸಡಗರಿಸಿಕೊಂಡಿರುವಾತನ ಅಡಿಗೆರಗಿ ಪೂಜಿಸುವೆನೆಂದಿದ್ದಾರೆ ಅಂಬಿಗರ ಚೌಡಯ್ಯ .

33

**ಅಲ್ಲಲ್ಲಿಗೆ ತಕ್ಕ ಹಾಗೆ ಎಲ್ಲರಿಗೂ ಬೋಧಿಸಲಾಗದು.**
**ಬಲ್ಲವರಲ್ಲಿ ನುಡಿದು,ಅರಿಯದವರಲ್ಲಿ ಗೆಲ್ಲ ಸೋಲಕ್ಕೆ ನುಡಿದಡೆ,**
**ಅವರು ಕಲ್ಲೆದೆಯವನೆಂಬರು.**
**ಒಳ್ಳಿತು ಹೊಲ್ಲವೆನಬೇಡ ಆರಿಗೂ.**
**ತನ್ನಲ್ಲಿಯೆ ಅರಿಕೆಯೆಂದನಂಬಿಗ ಚೌಡಯ್ಯ .**

ತನುವಿನಲ್ಲಿಯೇ ತನ್ಮಯವಾದ ಅರಿವನು ಅರಿತ ಮಹಾಜ್ಞಾನಿಗೆ ಅಂಬಿಗರ ಚೌಡಯ್ಯ ಶರಣರು ಕಿವಿಮಾತನ್ನು ಹೇಳಿದ್ದಾರೆ.

ಜ್ಞಾನ ಸಕಲ ತನುಗಳಲ್ಲಿಯೂ ಇದೆ. ಆದರೆ ಆ ಜ್ಞಾನವನ್ನು ಸಕಲ ತನುಗಳು ಪಡೆದುಕೊಳ್ಳಲು ಸಾಧ್ಯವಾಗುವುದಿಲ್ಲ. ಜ್ಞಾನದ ಬಯಕೆ ಉಂಟಾದ ಭಕ್ತನಿಗೆ ಮಾತ್ರ ಹೇಳು. ಆತ ಆನಂದದಿಂದ ಕೇಳುತ್ತಾನೆ. ಕೇಳಿದ ಮಾತನ್ನು ಪಾಲಿಸುತ್ತಾನೆ. ಸೂತ್ರದ ಮೂಲಕ ಮನದಿಂದಲೇ ಜ್ಞಾನದತ್ತ ಪ್ರಯಾಣ ಮಾಡಿ ಆ ಜ್ಞಾನವೇ ತಾನಾಗುತ್ತಾನೆ. ಅಂತಹವರಿಗೆ ಬೋಧೆಕೊಡು. ಸಕಲರಿಗೂ ಬೋಧೆ ಸಲ್ಲುವುದಿಲ್ಲ.

ಡಬ್ಬೇರು ಮಡುವಿನ ವಿದ್ಯಾನಂದ ಶರಣರು ಈ ನಾಡು ಕಂಡ ಮಹಾಜ್ಞಾನಿಗಳು. ಅವರಿಗೆ ಸಾವಿರಾರು ಜನ ಶಿಷ್ಯರು. ಅರುಹೃದಯ ಕಂಡ ಕೂಡಲೇ ತನ್ನಂತೆಯೇ ಮಾಡಿಕೊಳ್ಳ ಬೇಕೆಂಬ ತವಕ ಅವರಿಗೆ. ಬೋಧಿಸುತ್ತಿದ್ದರು. ಬೋಧಿಸಿದ ಬೋಧೆಯ ಕೆಡಿಸುತ್ತಿದ್ದರು. ನೀನು ಶಿಷ್ಯನಲ್ಲ, ನಾನು ಗುರುವಲ್ಲ. ಇಬ್ಬರೂ ಆನಂದದ ವಿಷಯಕ್ಕಾಗಿ ಬಂದಿದ್ದೇವೆ. ನಿನ್ನೊಳಗಿನ ಗುರುವಿಗೆ ಬೋಧಿಸುವಂತಿಲ್ಲ. ನಿನಗೆ ಬೋಧೆ ನಿಲ್ಲುವುದಿಲ್ಲ. ಇದು ಬಲು ರಹಸ್ಯವಾದ ಮಾತು. ತಿಳಿದವನು ಅವರಂತೆ ಪರಮಾನಂದ ಪದವಿಯ ಹೊಂದುತ್ತಿದ್ದ. ತಿಳಿಯದವರನ್ನು ಕೂಡಲೇ ಗುರುತಿಸಿ ಇದು ಎತ್ತು ; ತತ್ವ ಇದಕ್ಕೆ ನಿಲುಕುವುದಿಲ್ಲ ಭಕ್ತಿ ಸಾಕು ಎನ್ನುತ್ತಿದ್ದರು. ಸಕಲರೂ ಜ್ಞಾನಿಗಳಾಗಬೇಕೆಂದು ಹಗಲಿರುಳು ಏಕಾಂಗಿ ವೀರರಾಗಿ ಮನೆ ಮನೆಗೆ ಸಂಚರಿಸಿದರು.

ಜ್ಞಾನ ಪಡೆಯುವುದು ಅತ್ಯಂತ ಸ್ವಾರ್ಥದ ಕೆಲಸ. ಮತ್ತೊಬ್ಬರಿಂದ ಜ್ಞಾನ ಸಿಕ್ಕುವುದಿಲ್ಲ. ತನುವಿನಲ್ಲಿಯೇ ತನ್ಮಯವಾದುದನ್ನು ತನುವಿನಿಂದ ತಾನೇ ಪಡೆಯಬೇಕು. ಹೀಗೆ ಸಕಲರು ತನಗೆ ತಾನೇ ಪಡೆದುಕೊಳ್ಳಬೇಕು. ಸಕಲ ತನುಗಳಲ್ಲಿಯೂ ಅರಿಯುವ ಶಕ್ತಿಯಿದೆ. ಬಯಕೆ ಆಗಬೇಕು ಅಷ್ಟೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಜ್ಞಾನ ಸಂಗಮವಾಗಿದೆ. ಆಯಾ ಜಾಗದಲ್ಲಿಯೇ ಅದನ್ನು ಪಡೆಯುವ ಮನ ಆವರಿಸಿದೆ. ಕಣ್ಣಿನಲ್ಲಿ ಜ್ಞಾನವಿದೆ ; ಕಣ್ಣನ್ನು ಮನ ಆವರಿಸಿದೆ. ಈ ಮನದಿಂದಲೇ ಕಣ್ಣಿನ ಜ್ಞಾನವನ್ನು ಪಡೆಯಬೇಕು. ಆಗ ಕಣ್ಣಿನಿಂದ ಸಕಲವನ್ನೂ ಸರಿಯಾಗಿ ನೋಡಲು ಬರುತ್ತದೆ.

ಕಣ್ಣು ಯಾರಿಗಿಲ್ಲ. ಜಗತ್ತಿನ ಸರ್ವ ತನುಗಳಿಗೂ ಕಣ್ಣಿದೆ. ಆದರೆ ನೋಡಲು ಬರುತ್ತಿಲ್ಲ. ನೋಡುವ ಸತ್ಯವನ್ನು ನೋಡುತ್ತಿಲ್ಲ. ಕಣ್ಣಿಗೆ ಭಾಷೆಯ ಅವಶ್ಯಕತೆಯಿಲ್ಲ. ಕಲ್ಲನ್ನು ಕಲ್ಲೆಂದು ನೋಡುತ್ತದೆ. ಇದು ಜ್ಞಾನದ ಕಣ್ಣು. ಆ ಕಲ್ಲಿನಲ್ಲಿಯೇ ಮಸೀದಿ ಕೆತ್ತಿದರೆ ಕಣ್ಣು ಮುಸಲ್ಮಾನನಾ ಗುತ್ತದೆ. ಕಲ್ಲು ನೋಡಿದಾಗ ಕಣ್ಣಿಗೆ ಜಾತಿ ಮತ ಪಂಥ ಧರ್ಮಗಳಿರಲಿಲ್ಲ.

ಮಸೀದಿ ಕೆತ್ತಿದರೆ ಏನಾಯಿತು ? ಅದು ಕಲ್ಲಲ್ಲವೆ ? ಚರ್ಚ್ ಕೆತ್ತಿದರೆ ಏನಾಯಿತು ಅದೂ ಕಲ್ಲಲ್ಲವೆ ?ಕಲ್ಲಿನ ಧರ್ಮ ಕಣ್ಣಲ್ಲಿಯೇ ಉಳಿಯಿತು.

ಮುಸಲ್ಮಾನ ಹಿಂದು ಕ್ರೈಸ್ತ ಎಂಬ ಅಜ್ಞಾನವನ್ನು ಕಣ್ಣು ಆಮಂತ್ರಣ ಮಾಡಿಕೊಂಡಿತು. ಕಲ್ಲು ಕಲ್ಲೇ, ಕೆತ್ತಿದ ಕಲ್ಲು ಕೂಡಾ ಕಲ್ಲೇ ಆಗಿದೆ. ಕಲ್ಲನ್ನು ನೋಡಿ ಕಲ್ಲೆಂದು ಹೇಳುವ ಕಣ್ಣಿಗೆ, ಕೆತ್ತಿದ ಕಲ್ಲನ್ನು ನೋಡಿಯೂ ಕಲ್ಲೆಂದು ಹೇಳಲು ಆ ಕಣ್ಣಿಗೆ ಬೋಧೆ ಬೇಕೆ ? ಕುರಾನ್ ಬೈಬಲ್ ಭಗವದ್ಗೀತೆ ಪಠಿಸಬೇಕೆ ? ಕಣ್ಣು ನೋಡುವ ಧರ್ಮ ಮರೆತು ಏನೆಲ್ಲಾ ಧರ್ಮವನ್ನು ಹೇರಿಕೊಂಡಿದೆ. ಹೀಗಾಗಿ ಕಾಣುತ್ತಿದ್ದರೂ ಅದಕ್ಕೆ ಕುರುಡು ಆವರಿಸಿದೆ. 'ಕಣ್ಣು ಕಣ್ಣೊಳಗಿನ ಕಣ್ಣನ್ನು ಅರಿಯಬೇಕಾಗಿದೆ.' ಅದು ತನ್ನಲ್ಲಿಯೇ ಅರಿಯಬೇಕಾಗಿದೆ. ನೋಡೂದನ್ನು ನೋಡಲರಿಯದೆ ಜಗತ್ತೇ ಕೆಟ್ಟಿದೆ ಎಂದು ಪ್ರಭುಗಳು ಹೇಳಿದರೆ ಒಳಿತು ಕೆಟ್ಟದ್ದೆನ್ನದೆ ತನ್ನಲ್ಲಿಯೇ ಅರಿಯಬೇಕು ಎಂದು ಅಂಬಿಗರ ಚೌಡಯ್ಯ ಶರಣರು ಹೇಳಿದ್ದಾರೆ. ಕಣ್ಣಿನ ಪರಮ ರಹಸ್ಯವನ್ನು ಕಣ್ಣೇ ತಿಳಿಯಬೇಕಿದೆ. ಅದು ಕಣ್ಣಲ್ಲಿಯೇ ಇದೆ. ವ್ಯರ್ಥ ಬೋಧಿಸಬೇಡ ಬೋಧೆಗೆ ಗುರಿಯಾಗಬೇಡ ಕಣ್ಣಿನ ಕೆಲಸ ಕಣ್ಣು ಮಾಡಿಕೊಂಡರೆ ಸಾಕು.

**34**

**ಅಷ್ಟ ಮದಂಗಳ ಘಟ್ಟಿಯನೆ ಕರಗಿಸಿ,**
**ಸತ್ವ ರಜ ತಮಂಗಳ ಬಿಟ್ಟು ಕಳೆದು,**
**ಸುತ್ತುವ ಮನದ ಸುಳಿಯ ತಪ್ಪಿಸಿ**
**ಮುಂದೆ ಹುಟ್ಟದೆ ಹೋಗೆಂದನಂಬಿಗ ಚೌಡಯ್ಯ.**

ಹುಟ್ಟಿ ಹುಟ್ಟಿ ಹುಳುಗಳಂತೆ ಸಾಯುವ ತನುಗಳೆಷ್ಟೋ ಇವೆ. ಹುಟ್ಟಿಯೂ ಹುಟ್ಟದಂತೆ, ಸತ್ತರೂ ಸಾಯದಂತೆ, ಜನನ ಮರಣ ಇಲ್ಲದ ತನುಗಳು ಮಾತ್ರ ಬೆರಳೆಣಿಕೆಯಲ್ಲಿ ದೊರೆಯುತ್ತವೆ.ಅದು ಹುಡುಕುವ ಸಾಮರ್ಥ್ಯವಿದ್ದಾತನಿಗೆ !

ಅಂಗ ಅಷ್ಟ ಮದಗಳ ಘಟ್ಟಿ. ಅದನ್ನು ಕರಗಿಸುವುದು ಹುಟ್ಟಿ ಸಾಯುವ ಮುನ್ನ ಆಗಲೇಬೇಕು. ಹೀಗೆಂದು ಮನವೇ ಪಣ ತೊಡಬೇಕು. ಸಾತ್ವಿಕ ರಾಜಸ ತಾಮಸ ಗುಣಗಳನ್ನು ಹೊಂದಿದ ಮನಕ್ಕೆ ಸಾಧ್ಯವಾಗುವುದೇ ಇಲ್ಲ. ಏಕೆಂದರೆ ಆಯಾ ಗುಣಗಳ ಮೂಲಕ ಸುಖಿಸುವುದರಲ್ಲಿಯೇ ತನುವಿನ ಆಯುಷ್ಯ ಮುಗಿದು ಹೋಗುತ್ತದೆ.

ಮನ ತನುವಿಗೆ ವೇಷ ಹಾಕಿ ಬೆಳಿಗ್ಗೆ ಹಲವಾರು ದೇವರುಗಳನ್ನು ಪೂಜಿಸಿ ಸಾತ್ವಿಕನೆನ್ನಿಸಿಕೊಳ್ಳುತ್ತದೆ. ಮನೆಯಲ್ಲಿ ಕಚೇರಿಯಲ್ಲಿ ಅಧಿಕಾರ ಚಲಾಯಿಸಿ ರಾಜಸ ಗುಣಿ ಎಂದು ಕರೆಯಿಸಿಕೊಳ್ಳುತ್ತದೆ. ರಾತ್ರಿ ತಮಂಧದ ಸಕಲ ಗುಣಗಳಿಂದ ಮೆರೆದು ತಾಮಸಿಗನೆಂದು ಕರೆಯಿಸಿಕೊಳ್ಳುತ್ತದೆ. ಸಾತ್ವಿಕ ತನು, ರಾಜಸ ತನು, ತಾಮಸ ತನು ಎಂದು ಬೇರೆ ಬೇರೆ ಇರುವುದಿಲ್ಲ. ಒಂದು ತನುವಿನಲ್ಲಿ ಮೂರೂ ಗುಣಗಳಿರುತ್ತವೆ. ಆದರೆ ಮನ ತೋರಗೊಡುವುದಿಲ್ಲ ; ಗುಪ್ತವಾಗಿ ಆಯಾ ಗುಣಗಳ ಮೂಲಕ ಸುಖಿಸುವುದನ್ನು ಬಿಡುವುದಿಲ್ಲ. ಅದು ಗುರುವಾಗಿರಬಹುದು, ಜಗದ್ಗುರುವಾಗಿರಬಹುದು, ಮನ ಸಾತ್ವಿಕ ರಾಜಸ ತಾಮಸವೆಂಬ ಮೂರೂ ಸುಳಿಗಳ ಮೂಲಕ ಸುತ್ತುತ್ತಲೇ ಇರುತ್ತದೆ. ಮನಕ್ಕೆ ಆಯಾ ಗುಣ ಬಲವಾಗಿ ಕಾಡಿದರೆ

ಅದು ತನುವಿನ ಮೂಲಕ ಗುರುತಿಸಿಕೊಳ್ಳುತ್ತದೆ.

ಉದಾ : ಸಾತ್ವಿಕ ಗುಣವಾದರೆ ದಾನ ಮಾಡುವುದು, ಶಾಲಾ ಕಾಲೇಜುಗಳನ್ನು ಕಟ್ಟಿಸುವುದು, ಗುರುಪೀಠ, ಮಠಗಳಿಗೆ ಅಧಿಪತಿಯಾಗುವುದು, ಕೆರೆ ಭಾವಿಗಳನ್ನು ತೋಡಿಸುವುದು, ಅನ್ನ ಸಂತರ್ಪಣೆ ಮುಂತಾದ ಕೆಲಸಗಳನ್ನು ಮಾಡುತ್ತಾ ಉತ್ತಮನೆಂದು ಹೊಗಳಿಸಿಕೊಳ್ಳುತ್ತದೆ. ಸುಪ್ತವಾಗಿ ರಾಜಸ ತಾಮಸ ಗುಣಗಳಿಂದಲೂ ಸುಖಿಸುತ್ತದೆ.

ರಾಜಸ ಗುಣ ಹೊಂದಿದ್ದರೆ ಶಾಸಕ ಸಚಿವ ಅಧಿಕಾರಿಯಾಗಿ ಯೋಗ್ಯನೆಂದು ಗುರುತಿಸಿಕೊಂಡು ತಾಮಸ ಮತ್ತು ಸಾತ್ವಿಕ ಗುಣಗಳಿಂದ ಸುಖಿಸುತ್ತದೆ.

ತಾಮಸ ಗುಣ ಹೊಂದಿದ್ದರೆ ಕುಡಿತ ಜೂಜು ವಿಷಯಗಳ ವಾಸನೆಯಲ್ಲಿ ಮುಳುಗಿ ಹಗಲಿರುಳೆನ್ನದೆ ತಾಮಸ ಗುಣದಲ್ಲಿಯೇ ಸುಖಿಸಿ ಜನಗಳ ಮೂಲಕ ಛೀ ಥೂ ಅನ್ನಿಸಿಕೊಳ್ಳುತ್ತದೆ. ಮನ ತನುವಿನ ಮೂಲಕ ಸುಖಿಸಿ ತನ್ನ ಸುಖದಿಂದಾದ ದುಃಖವನ್ನು ಸುಖವನ್ನು ತನುವಿನ ಮೂಲಕ ಗುರುತಿಸಿಕೊಳ್ಳುತ್ತದೆ.

ಅಷ್ಟ ಮದಗಳಿಂದ ಕೊಬ್ಬಿ ಸುಖಿಸುವುದು ಕೂಡಾ ಮನವೇ ಆಗಿದೆ. ಹಾಗೆಯೆ ಸಾತ್ವಿಕ, ರಾಜಸ, ತಾಮಸ ಗುಣಗಳ ಮೂಲಕ ಸುಖಿಸುವುದು ಕೂಡಾ ಮನವೇ ಆಗಿದೆ. ಹೀಗೆ ಸುಖಿಸುವ ಮನಕ್ಕೆ ಯಾರೂ ಶಿಕ್ಷೆ ಕೊಡುವುದೇ ಇಲ್ಲ. ಏಕೆಂದರೆ ಅದು ಕಾಣುವುದಿಲ್ಲ. ಕಂಡು ಬರುವುದು ಮಾತ್ರ ತನು. ಅದಕ್ಕೆ ಏನೆಲ್ಲ ಶಿಕ್ಷೆ. ಜೇಲಿಗೆ ಹಾಕುವುದು ತನುವನ್ನೇ, ಜನ ಶಿಕ್ಷೆ ಕೊಡುವುದು ಕೂಡಾ ತನುವಿಗೆ.

ಇದು ಜ್ಞಾನಿಗೆ ಮಾತ್ರ ತಿಳಿಯುತ್ತದೆ. ಆತ ಜ್ಞಾನದ ಶಿಕ್ಷಣ ಕಲೆಯನ್ನು ಬಲ್ಲಾತ. ಹೀಗಾಗಿ ತನುವನ್ನು ಮುಸುಕಿದ ಅಷ್ಟ ಮದಗಳನ್ನು ಕುಟ್ಟಿ ಕರಗಿಸುತ್ತಾನೆ. ಸತ್ವ ರಜ ತಮಂಗಳೆಂಬ ಮೂರೂ ಗುಣಗಳನ್ನು ನಷ್ಟ ಮಾಡಿಕೊಂಡು ನಿರ್ಗುಣಿಯಾಗುತ್ತಾನೆ. ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವನು ತಾನೇ ಆಗಿ ಜನನ ಮರಣಗಳನ್ನು ಗೆಲ್ಲುತ್ತಾನೆ. ಹುರಿದ ಬೀಜದಂತಾಗಿ ಬಯಲಲ್ಲೇ ಬೆರೆತು ಬಯಲಾಗುತ್ತಾನೆ. ಜಗದ ತನುಗಳೆಲ್ಲಾ ಬಯಲ ಬೀಜಗಳೆಂದು ಅರಿಯುತ್ತಾನೆ.

35

**ಅಸುರರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ,**
**ಬ್ರಹ್ಮ ಕಪಾಲವಿಲ್ಲ, ಭಸ್ಮ ಭೂಷಣನಲ್ಲ,**
**ವೃಷಭ ವಾಹನನಲ್ಲ, ಋಷಿಯರುಗಳೊಡನಿದ್ದಾತನಲ್ಲ.**
**ಎಸಗುವ ಸಂಸಾರದ ಕುರುಹಿಲ್ಲದಾತಂಗೆ**
**ಹೆಸರಾವುದಿಲ್ಲೆಂದ ನಬಿಂಗರ ಚೌಡಯ್ಯ**

ಪುರಾತನರು ಜ್ಞಾನಿಗಳು. ಕಾಲಘಟ್ಟದ ನಿಯಮದಂತೆ ತನಿವಿನಲ್ಲಿ ತನ್ಮಯವಾದ ಜ್ಞಾನಕ್ಕೆ ಶಿವನೆಂದು ಹೆಸರಿಸಿ, ತನುವನ್ನು ಆವರಿಸಿದ ಅಜ್ಞಾನಕ್ಕೆ ರಕ್ಕಸನೆಂದು ಕರೆದರು. ತನುವಿನಲ್ಲಿ ಉತ್ಪತ್ತಿಯಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಾದಿ ರಕ್ಕಸರನ್ನು, ತನುವಿನಲ್ಲಿಯ ಶಿವಮಯವಾದ ಜ್ಞಾನದಿಂದ ಜಯಿಸುವ ಬಗೆಯನ್ನು ವಿವರಿಸಿದರು. ದಿನಗಳುರುಳಿದವು, ಆ ವಿವರಣೆ ಕತೆಯಾಯಿತು, ಪುರಾಣವಾಯಿತು. ಕಲಾವಿದ ಶಿವನನ್ನು

ಚಿತ್ರಿಸಿದ. ಕಲ್ಲಿನಲ್ಲಿ, ಲೋಹದಲ್ಲಿ ಕೆತ್ತಿದ. ಚಿತ್ರಕ್ಕೆ ರಕ್ಕಸರ ರುಂಡಗಳ ಮಾಲೆ ಹಾಕಿದ, ಕೈಯಲ್ಲಿ ತ್ರಿಶೂಲ, ಡಮರುಗ, ಕಪಾಲ ಇಟ್ಟ. ಮೈಗೆಲ್ಲ ಭಸ್ಮ ಬಳಿದ, ವಾಹನಕ್ಕಾಗಿ ಎತ್ತನ್ನು, ಸುತ್ತಲೂ ಋಷಿಗಳನ್ನು ಚಿತ್ರಿಸಿದ.

ಕವಿ ಬರೆದ ಕತೆ, ಕಲಾವಿದ ಸೃಷ್ಟಿಸಿದ ಚಿತ್ರವೇ ಸತ್ಯವಾಯಿತು. ತಾನು ಬೇರೆ, ಶಿವ ಬೇರೆ ಎಂಬ ಅಜ್ಞಾನ ನಿರ್ಮಾಣವಾಯಿತು. ಶಿವನ ಕಲ್ಪನೆ ಕಲ್ಲಿನ ಲಿಂಗದಲ್ಲಿ, ಜ್ಯೋತಿರ್ಲಿಂಗದಲ್ಲಿ ಉಳಿಯಿತು. ದರ್ಶನಕ್ಕಾಗಿ ಪುಣ್ಯ ಕ್ಷೇತ್ರಗಳು ನಿರ್ಮಾಣವಾದವು. ಬರೆದ ಕವಿ, ಕೆತ್ತಿದ ಕಲಾವಿದನೂ ಮರೆಯಾದ. ಊರಿಗೊಂದು, ಓಣಿಗೊಂದು, ರಸ್ತೆಗೊಂದು ದೇವಾಲಯಗಳು ನಿರ್ಮಾಣವಾದವು. ಅಜ್ಞಾನದ ವಿಸ್ತಾರ ಅಧಿಕವಾಯಿತು. ಶಿವನಿಲ್ಲದ ತನು ಶವ, ದೇಹವೇ ದೇವಾಲಯವೆನ್ನುವುದೇ ಮರುವಾಯಿತು.

ಕವಿ ಕಲಾವಿದನ ಅಜಾಗರೂಕತೆಗೆ ಮನುಕುಲವೇ ಅಜ್ಞಾನಕ್ಕೆ ಬಲಿಯಾಯಿತು. ಶಿವ ಸಾಕಾರನೆಂದು ಚಿತ್ರ ಬರೆದು ಪೂಜಿಸಿದರು. ಶಿವ ನಿರಾಕಾರನೆಂದು ಬರೆದ ಚಿತ್ರ ಕೆಡಿಸಿ ಜಗಳಕ್ಕಿಳಿದರು. ಯುದ್ಧಗಳಾದವು. ಚಿತ್ರದಲ್ಲಿಯ ಶಿವ ಮಾತನಾಡಲೇ ಇಲ್ಲ. ನಿರಾಕಾರ ಶಿವ ಜಗಳ ಬಿಡಿಸಲೂ ಇಲ್ಲ.

ತನುವಿನಲ್ಲಿ ತನ್ಮಯವಾದ ಶಿವ(ಜ್ಞಾನ)ನನ್ನು ಕಲ್ಲಿನಲ್ಲಿ ಕತೆಯಲ್ಲಿ ಚಿತ್ರದಲ್ಲಿ ನೋಡಲು ಸಾಧ್ಯವೆ ? ''ತನ್ನ ತಾನರಿಯದ ಮುನ್ನ ತನ್ಮಯವಾದ ಅರಿವು. ತನ್ನ ತಾನರಿದ ಬಳಿಕ ಅರಿವು ತನ್ಮಯವೆಂದರಿತ ಅರಿವು. ತನುವಿನಲ್ಲಿರುವ ಆ ಅರಿವೆ ಕರಿಗೊಂಡ ಬಳಿಕ ತಾನೇ ಸೌರಾಷ್ಟ್ರ ಸೋಮೇಶ್ವರಾ'' ಎನ್ನುತ್ತಾರೆ ಆದಯ್ಯ ಶರಣರು.

ತನುವಿನಲ್ಲಿ ಅರಿವು ಶಿವಮಯವಾಗಿದೆ. ಆ ಅರಿವು ನೋಡಿ ಆ ಅರಿವೇ ತಾನಾದಡೆ ತಾನೇ ಶಿವ. ಅರಿಯದಿದ್ದಡೆ ಶಿವನಿದ್ದ ತನುವು ಶವಕ್ಕೆ ಸಮಾನ. ತನುವಿನಲ್ಲಿದ್ದ ಶಿವ ನಿರಾಕಾರ. ಆ ನಿರಾಕಾರವಾದ ಅರಿವಿನ ಬಲ ತೋರಿಸಲು ಹಿರಿಯರು ಕತೆ ಬರೆದರು. ಚಿತ್ರ ಬರೆದು ಶಿವನ ಸುಳುಹು ನೀಡಿದರು:

ಗಂಗೆಯ ಬಿಂದು ತಂದೆ ಗರ್ಭದ ಮೂಲಕ ತಾಯಿ ಗರ್ಭದಲ್ಲಿ ಹೊಕ್ಕು ಪಾಕವಾಗಿ, ಆ (ಜಲ) ಬಿಂದುವೇ ಮೂಳೆ, ಮಾಂಸ, ಎಲುಬು ರಕ್ತ ಮಜ್ಜೆ ಮೇದಸ್ಸು ಚರ್ಮದ ತನುವಾಗಿ ಗಂಗೆಯಾದಳು. ಆ ತನುವಿನಲ್ಲಿ ತನ್ಮಯವಾದ ಅರಿವೇ ಶಿವ. ಚಿತ್ರಕಾರ ತನುವಿನ ಜಟೆಯಲ್ಲಿ ಗಂಗೆಯನ್ನು ಬಂಧಿಸಿ ಗಂಗಾಧರನೆಂದು ಹೆಸರಿಟ್ಟ. ಶಿವನ ತನುವೆ ಬ್ರಹ್ಮವೆಂದು ಸೂಚಿಸಲು ಕಪಾಲ ಕೈಯಲ್ಲಿ ಇಟ್ಟ, ಬ್ರಹ್ಮ ಕಪಾಲನ ಚಿತ್ರ ಬರೆದ. ಅಜ್ಞಾನವನ್ನು ಸುಟ್ಟು ಭಸ್ಮ ಮಾಡಿ ಆ ಭಸ್ಮವನ್ನು ತನುವಿಗೆ ಲೇಪಿಸಿ ಎತ್ತಿನ ಚಿತ್ರ ರಚಿಸಿ ತನುವಿಗೆ ವೃಷಭ ವಾಹನ - ಪಶುಪತಿ ಎಂದು ಕರೆದ. ರೂಪ ನಿರೂಪಗೊಳಿಸುವ ಜ್ಞಾನ ಸೂಚನೆಗಾಗಿ ಜಟೆಯಲ್ಲಿ ಚಂದ್ರನ ಚಿತ್ರ ಬರೆದು ಚಂದ್ರಶೇಖರನೆಂದ. ನಂಜು ತುಂಬಿದ ಮಾತುಗಳನೆಲ್ಲ ಅರಿವಿನ ಆನಂದದಿಂದ ಉಂಡುದಕ್ಕಾಗಿ, ಕೊರಳಲ್ಲಿ ಸರ್ಪ ಹಾಕಿ ನಂಜುಂಡ-ನಾಗಭೂಷಣನೆಂದು ಚಿತ್ರಿಸಿ ಹೆಸರು ಕೊಟ್ಟ.

ತನುವಿನಲ್ಲಿ ಇದ್ದು ಸಂಸಾರದ ಕುರುಹು ಇಲ್ಲದಾತನ ಪರಿಚಯಕ್ಕಾಗಿ ನಾನಾ ರೀತಿಯ ಹೆಸರು ಕೊಟ್ಟು, ಲೋಹದಿಂದ ಕಲ್ಲಿನಿಂದ ಬಣ್ಣದಿಂದ ಚಿತ್ರ ನಿರ್ಮಿಸಿದ ಚಿತ್ರಗಾರ, ಹೀಗೆಲ್ಲ ಮಾಡಿದರೂ, ಹೊರಗನೇ ಹಾಡುವ ಪೂಜಿಸುವ ಭಜಿಸುವ ಅಜ್ಞಾನವೇ ಸತ್ಯವಾಯಿತು. ತನುವಿನ ಶಿವಮಯ ಜ್ಞಾನ ಸುಳ್ಳಾಯಿತು. ತನುವಿನ ಆ ಶಿವನ ಸಾಕ್ಷಾತ್ಕಾರಕ್ಕಾಗಿ ''ನಿರಾಳ ಕೂಸಿಂಗೆ ಬೆಣ್ಣೆಯ

ನಿಕ್ಕಿ ಹೆಸರನಿಟ್ಟು ಕರೆದವರಾರೋ ಅಕಟಕಟಾ ಶಬ್ದದ ಲಜ್ಜೆಯ ನೋಡಾ ಗುಹೇಶ್ವರನನು ಅರಿಯದ ಅನುಭಾವಿಗಳ ತರಕಟ ಕಾಡಿತ್ತು'' ಎಂದು ಅಲ್ಲಮ ಪ್ರಭುಗಳು ತನುವಿನೊಳ ಪ್ರವೇಶಕ್ಕಾಗಿ ನಿರಾಳ ನಿರಕಾರ ಶಿವನ ಸೂತ್ರ ನೀಡಿದರು.

ಶಿವ ಕುರುಹಲ್ಲ, ಕುರುಹು ಉಳ್ಳವ ಶಿವನಲ್ಲ. ಶಿವನಿಗೆ ಹೆಸರಿಲ್ಲ. ತನುವಿನಲ್ಲಿ ತನ್ಮಯವಾದ ಅರಿವೇ ಅಂಬಿಗ. ಸಂಸಾರದಲ್ಲಿ ಬಂಧಿಯಾದ ತನುವನ್ನು ಅಜ್ಞಾನ ಸಾಗರದಿಂದ ಪಾರು ಮಾಡುವ ನಾವಿಕನಿಗೆ ಹೆಸರೆನ್ನುವುದೇ ಇಲ್ಲವೆಂದು ಹೇಳಿದರು ಶರಣ ಚೌಡಯ್ಯನವರು.

**36**

**ಅಳುಪೆಂಬ ನಾಯ ಕಳವಳದರ್ಥವ**
**ಇದ ಬಿಡೈ , ನಿನಗೆ ಸಂಗಡವಲ್ಲ.**
**ಬಂದ ಹೊಲೆಯನ, ನಿಂದ ಹಾರುವನ**
**ಇವರಿಬ್ಬರ ಕೂಡಿಕೊಂಡು ನಿನಗೆ ದೇಹಾರವಾಗದಣ್ಣಾ.**
**ಇವರ ಹಿಂಗಿಸಿ ನಿಜವರಿದು, ನಿಂದಲ್ಲಿ ನೆನದಡೆ**
**ಅಂದಿಂಗಲ್ಲದೆ ಶಿವನಿರನೆಂದಾತನಂಬಿಗ ಚೌಡಯ್ಯ .**

ಮನ ಮನಕ್ಕೆ ಹೇಳಬಹುದು, ಮನಕ್ಕೆ ಸದ್ಗುರು ಕೂಡಾ ಬೋಧಿಸಬಹುದು. ಈ ವಚನದಲ್ಲಿ ಈ ಎರಡೂ ಸುಳುಹುಗಳ ಸೂತ್ರವಿದೆ. ಕಳವಳವನ್ನುಂಟು ಮಾಡುವ ಅರ್ಥದ ಆಸೆಯನ್ನು ಬಿಡು ಎಲೆ ಮನವೆ. ಇದು ನಿನಗೆ ಶೋಭೆಯಲ್ಲ. ಕರೆನ್ಸಿ (ಹಣ) ಇರುವುದು ವಿನಿಮಯಕ್ಕಾಗಿ. ಅದನ್ನು ಮನುಷ್ಯನೇ ರಚಿಸಿ, ಮನುಷ್ಯನೇ ವ್ಯವಹಾರಕ್ಕಾಗಿ ಬಳಸುತ್ತಿದ್ದಾನೆ. ಆದರೆ ಹಣ ಕಳವಳವನ್ನುಂಟು ಮಾಡುತ್ತದೆ. ಕಳುವು ಮಾಡಲು ಆದೇಶ ನೀಡಿ ತನುವಿಗೆ ಕಳ್ಳನ ಪಟ್ಟ ಕಟ್ಟುತ್ತದೆ. ಕೊಲೆ ಮಾಡಲು ಆದೇಶ ನೀಡಿ ತನುವಿಗೆ ಕೊಲೆಗಡುಕನ ಪಟ್ಟ ಕಟ್ಟುತ್ತದೆ. ಎಲೆ ಮನವೆ ಇದು ನಿನಗೆ ಬೇಕೆ ?

**ಬಂದ ಹೊಲೆಯನ, ನಿಂದ ಹಾರುವನ ಇವರಿಬ್ಬರ ಕೂಡಿಕೊಂಡು ನಿನಗೆ ದೇಹಾರವಾಗದಣ್ಣಾ :**

ಭೂಮಿ,ಹೇಮ,ವಿಷಯ ವಸ್ತುಗಳನ್ನು ನೋಡಿ, ಅದನ್ನು ತನುವಿನೊಂದಿಗೆ ಕಾಮಿಸುವ ಮನವದು ಹೊಲೆಯ ಮನ ಅದು ದೇಹವೆಂಬ ದೇವಾಲಯವನ್ನೇ ಹಾಳು ಕೆಡುವವ ಹೊಲೆ ಮನ ; ಇಂತಹ ಹೊಲೆಯನು ಹೊರಗಿನಿಂದ ಬಂದು ದೇಹವನ್ನು ಆವರಿಸಿದ್ದಾನೆ, ಅವನು ದೇಹಕ್ಕೆ ಒಳಿತು ಮಾಡುವುದಿಲ್ಲ. ದೇಹದಲ್ಲಿರುವ ದೇವರ ಪರಿಚಯವೂ ಅವನಿಗಿಲ್ಲ.

ಇನ್ನು ನಿಂದು ಹಾರುವ ಮನವೊಂದಿದೆ. ಅದು ಕೂಡಾ ದೇಹಕ್ಕೆ ಒಳಿತು ಮಾಡುವುದಿಲ್ಲ ; ದೇಹದ ದೇವರ ಪರಿಚಯವೂ ಅದಕ್ಕಿಲ್ಲ. ದೇಹವೇ ದೇವಾಲಯ. ಅದು ಅರಿವೆಂಬ ದೇವರಿದ್ದ ಮನೆ. ಆದರೂ ಕೂಡಾ ಹಾರುವ ಮನ ಬ್ರಾಹ್ಮಣನೆಂದು ಹೆಸರು ಪಡೆದು ದೇಹವನ್ನೇ ನೋಡಿ ದೇಹದೊಂದಿಗೆ ಹಾರುತ್ತದೆ. ದೇಹ, ದೇಹವನ್ನು ದೇಹದಂತೆ ನೋಡಲು ಬರುವುದಿಲ್ಲವೆಂದ ಮೇಲೆ ಹಾಗೇ ಮಾಡುವ ಮನ ಹೊಲೆ ಮನವಲ್ಲವೆ ? ಹೊಲೆಯರಿಬ್ಬರನ್ನು ಕೂಡಿಕೊಂಡ ದೇಹ ದೇವರ ಹತ್ತಿರ ಹೋಗಲು ಸಾಧ್ಯವೆ ?

**ಇವರ ಹಿಂಗಿಸಿ ನಿಜವರಿದು, ನಿಂದಲ್ಲಿ ನೆನೆದಡೆ ಅಂದಿಂಗಲ್ಲದೆ ಶಿವನಿರ ನೆಂದಾತ ನಂಬಿಗ ಚೌಡಯ್ಯ :**

ಮನವೆಂಬ ಹೊಲೆಯರಿಬ್ಬರನು ಹಿಂಗಿಸಿ, ಮನದಿಂದಲೇ ನಿಜವನು ಅರಿದು, ಮನವಿದ್ದ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನು ನೆನೆದಡೆ ಮನ ಘನ ಮನವಾಗುವುದು. ಶಿವ ಮನ, ಮಹಾದೇವನ ಮನವಾಗುವುದು.

**37**

**ಆತ್ಮಂಗೆ ದಶವಾಯು ಉಂಟೆಂಬರು.**
**ಊರ್ಧ್ವನಾಳವೈದು, ಅಧೋನಾಳವೊಂದು,**
**ವಾಯವೊಂದೆ ಭೇದ, ಆತ್ಮವೊಂದರಲ್ಲಿ ಒಡೆಯದಿದೆ,**
**ಇದೇ ನಿರಂತರ ಸುಖ, ಎಚ್ಚರಿಕೆಯ ಕೂಟ.**
**ಮಿಕ್ಕಾದ ನಾಲ್ಕರಲ್ಲಿ ತಿರುಗಿ ಜೀವರುಗಳ ವಾಯು ನಾಲ್ಕು ಮುಚ್ಚಿ**
**ಅಧೋಮುಖಕ್ಕಿಳಿದಲ್ಲಿ ಕೀಳುಜೀವವೆಂದನಂಬಿಗ ಚೌಡಯ್ಯ .**

ಇದ್ದಂತೆ ಇರುವ ಎಂದೆಂದೂ ಬದಲಾಗದ ವಸ್ತುವೊಂದು ಇದೆ. ಅದನ್ನು ಆತ್ಮವೆಂದು ಕರೆದಿದ್ದಾರೆ. ಆತ್ಮ ಪರಮಾತ್ಮನೂ ಹೌದು ಸದಾಶಿವನೂ ಹೌದು ಸಾಕ್ಷಾತ್ ಪರಬ್ರಹ್ಮನೂ ಹೌದು.

ಪ್ರತಿ ತನುವಿನಲ್ಲಿಯೂ ಚಮತ್ಕಾರದ ಐದು ವಸ್ತುಗಳು ಅಡಗಿವೆ. ಅವು ಯಾವೂ ಕಂಡುಬರುವುದಿಲ್ಲ. ಆದರೆ ಅನುಭವಕ್ಕೆ ಬಾರದೆ ಇರುವುದಿಲ್ಲ. ಒಂದು ಸತ್ಯ ವಸ್ತುವಿನಿಂದಲೇ ನಾಲ್ಕು ವಸ್ತುಗಳು ಜನ್ಮ ಪಡೆದಿವೆ. ಈ ನಾಲ್ಕು ವಸ್ತುಗಳನ್ನು ಹಡೆದ ಆ ಒಂದು ವಸ್ತುವಿನಲ್ಲಿ ಲೀನವಾದಾಗಲೇ ಆತ್ಮ ಪರಮಾತ್ಮನೆನ್ನಿಸಿಕೊಳ್ಳುತ್ತದೆ. ದೇಹ ದೇವಾಲಯವಾಗುತ್ತದೆ.

ಮಹಾದೇವನನ್ನು ಹೊತ್ತ ಭಾಗ್ಯ ನನಗೆ ದೊರೆಯಿತಲ್ಲಾ ಎಂದು ನಾಲ್ಕು ವಸ್ತುಗಳ ಸಂಗಮದ ಕೂಟಕ್ಕೆ ಅನುಭವವಾಗುತ್ತದೆ. ಸತ್ಯ ವಸ್ತುವೆಂದರೆ 'ಬಯಲು' ಬಯಲಿಂದಲೇ ಜಲ ವಾಯು ಭೂಮಿ ಬೆಂಕಿಗಳ ಜನನ. ಇವುಗಳ ಸಮ್ಮಿಳನವೇ ದೇಹ. ಇಂತಹ ಅದ್ಭುತವಾದ ಚಮತ್ಕಾರವುಳ್ಳ ದೇಹ ದೇವಾಲಯವಲ್ಲದೆ ಮತ್ತೇನು ? ಸತ್ಯವಸ್ತುವಿನಿಂದ ಹುಟ್ಟಿದವುಗಳೆಲ್ಲ ಸತ್ಯವೇ ಆಗಿರಬೇಕಲ್ಲ ! ಇವು ಊರ್ಧ್ವ ನಾಳಗಳೇ ! ಇವುಗಳ ನೋಟವೆಲ್ಲ ಮೇಲ್ಮುಖ ! ಆದರೆ ವಾಯವೊಂದೇ ಭೇದ ! ಅದು ಬಯಲಲ್ಲಿಯೇ ಸುಳಿದಾಡುತ್ತದೆ. ಆದರೆ ಬಯಲು ಪರಿಚಯವಿಲ್ಲ. ಇದೊಂದು ಸೋಜಿಗವೇ ಸರಿ.

ವಾಹನದ ಚಕ್ರಗಳು ಓಡುತ್ತವೆ. ಅದನ್ನು ಹೊತ್ತ ಎಕ್ಸೆಲ್ ಓಡುವುದಿಲ್ಲ ! ಎಕ್ಸೆಲ್ ಇಲ್ಲದಿದ್ದರೆ ವಾಹನವಿಲ್ಲ, ಚಕ್ರಗಳಿಲ್ಲ. ಆದರೆ ವಾಹ ನಕ್ಕೆ ಚಕ್ರಗಳಿಗೆ ಎಕ್ಸೆಲ್ ಇದೆಯೆಂದೇ ಗೊತ್ತಿಲ್ಲ. ಗೊತ್ತಿಲ್ಲದೆ ಓಡುತ್ತದೆ. ಹಾಗೆಯೇ ಮನವೆಂಬ ಗಾಳಿ ತನಗೆ ತೋಚಿದಂತೆ ದೇಹದೊಂದಿಗೆ ಓಡುತ್ತದೆ. ದೇಹ ಓಡಿದರೇನು ? ಅದರೊಂದಿಗೆ ಆತ್ಮ ಓಡುವುದೇ ? ದೇಹವನ್ನು ಬಿಟ್ಟು ಆತ್ಮವಿಲ್ಲ. ಆದರೆ ಎಕ್ಸೆಲ್‌ನಂತೆ ಆತ್ಮ ಓಡುವುದಿಲ್ಲ. ದೇಹವಿದ್ದ ಆತ್ಮವಿದೆ.

ಗಾಳಿ ಸುಳಿದಾಡಿದಲ್ಲೆಲ್ಲ ಬಯಲಿದೆ. ಬಯಲಲ್ಲಿಯೇ ಗಾಳಿಯ ಪಯಣ. ಹಾಗೆ ಆತ್ಮದಲ್ಲಿಯೇ ಮನದ ಪಯಣ. ಆತ್ಮದಲ್ಲಿ ಮನ ಕೂಟಸ್ಥವಾಗುವುದೊಂದೇ ತಡ,ಆಗ ಮನದ

ಓಟ ನಿಲ್ಲುತ್ತದೆ ! ದೇಹಕ್ಕೆ ನಿರಂತರ ಸುಖ ಸಿಗುತ್ತದೆ. ಆತ್ಮವನ್ನು ಹೊಂದಿದ ದೇಹ ಪರಮಾತ್ಮನ ದೇವಾಲಯವಾಗುತ್ತದೆ. ಇದೇ ಎಚ್ಚರಿಕೆಯ ಕೂಟ.

ಬಯಲು ಬಿಟ್ಟು,ಭೂಮಿ,ಜಲ,ಅಗ್ನಿ,ವಾಯು ವಾಯುವನೆ ಅರಿಯದೆ ನಾಲ್ಕರಲ್ಲಿ ಪಯಣಿಸುವುದೇ ಅಧೋಮುಖ. ಕೀಳು ಜೀವನ. ಅಗ್ನಿಯೊಂದಿಗೆ ವಾಯು ಬೆರೆತರೆ ಅಗ್ನಿ ತನ್ನ ಕೆನ್ನಾಲಿಗೆಯನ್ನು ಚಾಚಿ ಉರಿಯುತ್ತದೆ. ಉರಿದು ಉರಿದು ಸಕಲ ವಸ್ತುಗಳನ್ನು ತನ್ನಂತೆ ಮಾಡಿಕೊಳ್ಳುತ್ತದೆ. ಜಲದೊಂದಿಗೆ ವಾಯು ಬೆರೆತರೆ ಸುನಾಮಿ ಯೇಳುತ್ತದೆ. ಭೂಮಿ ಬಿರಿದು ತನ್ನ ಗರ್ಭದಿಂದ ಲಾವಾರಸ ವನ್ನು ಚಿಮ್ಮುತ್ತದೆ. ಈ ನಾಲ್ಕೂ ಭೂತಗಳು ಬಯಲನ್ನು ಕಾಡುವುದಿಲ್ಲ. ಏಕೆಂದರೆ ಬಯಲ ಮಕ್ಕಳಿವು. ಬಯಲ ಗರ್ಭದಲ್ಲಿಯೇ ಇವುಗಳ ಆಟ. ಇದು ಬಹು ಎಚ್ಚರಿಕೆಯ ಕೂಟ. ಶಿವಶರಣರ ಮಾರ್ಮಿಕ ಭಾಷೆಯಿದು. ಇದನ್ನು ಅರಿತವನೇ ಸುಖಿ !

**38**

**ಆದಿ ಅನಾದಿಯಿಂದತ್ತಣ**
**ಶರಣನ ಷಡಾಧಾರ ಚಕ್ರದೊಳಗೆ**
**ಷಡುಲಿಂಗವು, ಷಡುಮಂತ್ರವು,**
**ಷಡುಭಕ್ತರು, ಷಡುಶಕ್ತಿಗಳು ಇದ್ದುವಯ್ಯಾ.**
**ಆ ಶರಣನ ಜ್ಞಾನಕ್ರೀ ಅರವತ್ತು ನಾಲ್ಕು ಭೇದವಾಯಿತ್ತಯ್ಯಾ.**
**ಒಬ್ಬ ಶರಣನು ಅನಂತ ಶರಣರಾದುದ ಕಂಡೆನೆಂದಾತ**
**ನಮ್ಮ ಅಂಬಿಗರ ಚೌಡಯ್ಯ.**

ಅಂಗ,ಅಂಗದಲ್ಲಿ ಸಂಗಮವಾದ ಲಿಂಗ, ಆ ಲಿಂಗವನ್ನು ತಿಳಿಯುವ ಮನ ಇಂದಿನದಲ್ಲ. ಆದಿ ಅನಾದಿಯಿಂದಲೂ ಅತ್ತತ್ತ . ಅಲ್ಲಿ ಷಢಾಧಾರ ಚಕ್ರವೂ ಇದೆ. ಷಡುಲಿಂಗವೂ ಇದೆ. ಸಾಕ್ಷಾತ್ ಷಡ್ ಮಂತ್ರವು ತಾನೇ ಆಗಿದೆ. ಷಡ್‌ಶಕ್ತಿಗಳು ಅಂಗದಲ್ಲಿಯೇ ಸಂಗಮವಾಗಿವೆ. ಅದು ಅರವತ್ನಾಲ್ಕು ವಿದ್ಯೆಗಳನ್ನು ಬಲ್ಲದು. ಒಂದಂಗದಿಂದಲೇ ಅನಂತ ಲಿಂಗಾಂಗಗಳು ಜನ್ಮ ತಳೆದಿವೆ ಎಂದು ಅಂಬಿಗರ ಚೌಡಯ್ಯ ಶರಣರು ಹೇಳಿದರೆ ಅಲ್ಲಮ ಪ್ರಭುದೇವರು ಹೀಗೆ ಹೇಳುತ್ತಾರೆ :

ಆದಿ ಅನಾದಿ ಎಂಬೆರಡರ ಮೂಲವನೆತ್ತಿ ತೋರಿದನಯ್ಯಾ ಬಸವಣ್ಣನು. ಆದಿಲಿಂಗ ಅನಾದಿ ಜಂಗಮವೆಂಬ ಭೇದವ ವಿವರಿಸಿ ತೋರಿದನಯ್ಯಾ ಬಸವಣ್ಣನು. ಕಾಯದ ಜೀವದ ಸಂಬಂಧವ ಮಾಡಿ ತೋರಿದನಯ್ಯಾ ಬಸವಣ್ಣನು. ಎನ್ನ ಆದಿ ಅನಾದಿಯನು ಬಸವಣ್ಣನಿಂದ ತಿಳಿದು ಗುಹೇಶ್ವರ ಲಿಂಗದಲ್ಲಿ ಸುಖಿಯಾದೆನು ಕಾಣಾ ಚೆನ್ನ ಬಸವಣ್ಣಾ !

ಆದಿಗೆ ಅನಾದಿಗೆ ಭೇದ ಉಂಟೆ ? ಆದಿ ಲಿಂಗ ಅನಾದಿ ಶರಣನೆಂಬುದು ತನ್ನಿಂದ ತಾ ಬಯಲಾಯಿತ್ತು ! ಧರೆಯಾಕಾಶ ಭುವನ ಭವನಂಗಳು ಹುಟ್ಟದ ಮುನ್ನ, ಅನಾದಿ ಪರಶಿವನು ತಾನೆ ತನ್ನ ಲೀಲೆಗೆ ಸಾಕಾರವ ಧರಿಸಿದಡೆ, ಆ ಸಾಕಾರವೆ ಈ ಸಾಕಾರವಾಯಿತ್ತು. ಎನ್ನ ಸಾಕಾರದ ಆದಿಯನೂ, ಎನ್ನ ನಿರಾಕಾರದ ಆದಿಯನೂ ಬಸವಣ್ಣ ಬಲ್ಲನಾಗಿ, ಗುಹೇಶ್ವರಲಿಂಗದ ಘನವು ಬಸವಣ್ಣನಿಂದೆನಗೆ ಸಾಧ್ಯವಾಯಿತ್ತು ಕಾಣಾ ಚೆನ್ನಬಸವಣ್ಣಾ !

ದೇಹದಲ್ಲಿ ಸಹಜ ಶಕ್ತಿ ಇದೆ. ದೇಹದ ಹೊರತು ದೇವರಿಲ್ಲ. ದೇಹವೇ ದೇವಾಲಯ

ಅಲ್ಲಿರುವ ಅರಿವೇ ದೇವರು. ಆ ದೇವರಿಂದಲೇ ದೇಹ. ಆದಿ ಲಿಂಗ ಅನಾದಿ ಶರಣನೆಂಬ ಶಬ್ದ ತನ್ನಿಂದಲೇ ಹೆಣೆಯಲ್ಪಟ್ಟಿದೆ. ಅನಾದಿ ಪರಶಿವನು ತಾನು ತನ್ನ ಲೀಲೆಗಾಗಿ ದೇಹವೆಂಬ ಸಾಕಾರವನು ಸೃಷ್ಟಿಸಿದನು. ಅದರಲ್ಲಿ ತಾನು ನಿರಾಕಾರದಿಂದ ತನ್ಮಯನಾದನು.ಕಣ್ಣು ಸಾಕಾರವಾದರೆ ಅದರ ದೃಶ್ಯ ನಿರಾಕಾರ. ಕಿವಿ ಸಾಕಾರವಾದರೆ ಶಬ್ದ ನಿರಾಕಾರ. ಚರ್ಮ ಸಾಕಾರವಾದರೆ ಸ್ಪರ್ಶ ನಿರಾಕಾರ. ನಾಲಿಗೆ ಸಾಕಾರವಾದರೆ ರುಚಿ ನಿರಾಕಾರ. ಮೂಗು ಸಾಕಾರವಾದರೆ ಪರಿಮಳ ನಿರಾಕಾರ. ಕಾಯ ಸಾಕಾರವಾದರೆ ಜ್ಞಾನ ನಿರಾಕಾರ. ಜ್ಞಾನವನ್ನು ತಿಳಿಯುವ ಮನ ಕೂಡಾ ನಿರಾಕಾರ.

ಯಾವುದು ಆದಿ, ಯಾವುದು ಅನಾದಿ ಎಂದು ಹೇಳುವುದು ಬಲು ಜಟಿಲ. ಸಾಕಾರದ ಆದಿಯನೂ ನಿರಾಕಾರದ ಅನಾದಿಯನೂ ಬಸವಣ್ಣ ಮಾತ್ರ ಬಲ್ಲ. ಗುಹೇಶ್ವರ ಲಿಂಗದ ಘನವು ಬಸವಣ್ಣನಿಂದೆನಗೆ ಸಾಧ್ಯವಾಯಿತ್ತು ಕಾಣಾ ಚೆನ್ನಬಸವಣ್ಣಾ ಎಂದು ಅಲ್ಲಮಪ್ರಭು ದೇವರುಗಳು ಚೆನ್ನಬಸವಣ್ಣನವರಿಗೆ ತಮಗೆ ಎಟುಕಿದ ಘನದ ಬಗ್ಗೆ ವಿವರಿಸಿದ್ದಾರೆ.

**39**

**ಆದಿಶಕ್ತಿವಿಡಿದಾಡುವವರೆಲ್ಲರು ಜಂಗಮವಲ್ಲ,**
**ಅನಾದಿಶಕ್ತಿ ವಿಡಿದಾಡುವವರೆಲ್ಲರು ಜ್ಞಾನಿಗಳಲ್ಲ,**
**ಆದಿ ಅನಾದಿಯೆಂಬೀ ಎರಡ ಭೇದಿಸಿ ದಾಂಟಿ,**
**ಇಚ್ಛಾಶಕ್ತಿಯ ಇಚ್ಛೆಯ ಮರೆದು,**
**ಕ್ರಿಯಾಶಕ್ತಿಯ ಭಾವವ ಬಿಟ್ಟು,**
**ಜ್ಞಾನಶಕ್ತಿಯ ಠಾವವನೊಲ್ಲದೆ,**
**ತಾನು ತಾನಾದವಂಗೆ ಏನೂ ಇದಿರಿಲ್ಲಾ,**
**ಎಂದನಂಬಿಗ ಚೌಡಯ್ಯ .**

ಆದಿಶಕ್ತಿಯ ಆರಾಧಿಸುವವ ಜಂಗಮನಲ್ಲ ; ಅನಾದಿ ಶಕ್ತಿಯ ಆರಾಧಿಸುವವನು ಜ್ಞಾನಿಯಲ್ಲ. ಇವೆರಡನ್ನೂ ಭೇದಿಸಿ ಆದಿ ಅನಾದಿ ಶಕ್ತಿಯ ಆರಾಧಿಸಲು ಕಾರಣವಾದ ಮನವನ್ನು ಹಿಡಿದು ಮಹಾಜ್ಞಾನಕ್ಕೆ ಪಯಣಿಸುವವನೇ ಜಂಗಮ ; ಅವನೇ ಜ್ಞಾನಿ !

ಇಚ್ಛಾಶಕ್ತಿಯೆಂಬುದೇ ಮನ. ಅದು ನಾನಾ ಇಚ್ಛೆಯನು ಬಯಸಿ ಆ ಬಯಕೆಯ ಸುಖವನ್ನು ತನುವಿನ ಮೂಲಕ ಪಡೆಯುತ್ತದೆ. ಅಂತಹ ಇಚ್ಛಾ ಶಕ್ತಿಯೆಂಬ ಮನವನು ಘನಮನದಿಂದಲೇ ಮರೆದು, ಕ್ರಿಯಾಶಕ್ತಿಯ ಮೂಲಕ ಹುಟ್ಟುವ ಭಾವವನ್ನು ನಿರ್ಭಾವಗೊಳಿಸಿ, ಜ್ಞಾನಶಕ್ತಿಯ ಠಾವನೊಲ್ಲದೆ ತಾನು ತಾನೇ ಆದವಂಗೆ ಏನೂ ಇದಿರಿಲ್ಲ ಎಂದಿದ್ದಾರೆ ಅಂಬಿಗ ಚೌಡಯ್ಯ ಶರಣರು.

ಭಾವವನ್ನು ಬಿಡಬೇಕೆಂದು ಹೇಳುತ್ತಾರೆ ಶರಣರು. ಭಾವವನ್ನು ಹಿಡಿಯಬೇಕೆಂದು ಹೇಳುತ್ತಾರೆ ಗುರು ಹಿರಿಯರು. ಗುರುವಿನ ಮೇಲೆ ಭಾವಬೇಕು, ಹಿರಿಯರ ಮೇಲೆ ಭಾವಬೇಕು ಎನ್ನುವುದು ಸಹಜ. ಆದರೆ ಈ ವಚನದಲ್ಲಿ ಶರಣರು ಕ್ರಿಯಾಶಕ್ತಿಯ ಭಾವ ಬಿಡಬೇಕು ಎನ್ನುತ್ತಾರೆ.

ಗೆಳೆಯನ ಮೇಲೆ ಭಾವ ಮಾಡಿದ ಮೇಲೆ ಆ ಭಾವವೇ ಒಮ್ಮೆ ದುರ್ಭಾವವಾಗಿ ಪರಿವರ್ತನೆಯಾಗುತ್ತದೆ. ಭಾವ ಆನಂದವನ್ನುಂಟು ಮಾಡಿದರೆ ದುರ್ಭಾವ ಮತ್ಸರವನ್ನುಂಟು ಮಾಡುತ್ತದೆ. ಗೆಳೆಯನಾಗಿದ್ದಾಗ ಗೆಳೆಯನ ಮಾತುಗಳು ಆನಂದವನ್ನುಂಟು ಮಾಡುತ್ತವೆ. ಆಗ ಭಾವ ಅರಳುತ್ತದೆ. ಆ ಮಾತಿನಲ್ಲಿ ವ್ಯತ್ಯಾಸವಾದರೆ ಗೆಳೆಯನ ಮೇಲೆ ಮಾಡಿದ ಭಾವ ದುರ್ಭಾವವಾಗುತ್ತದೆ. ಆಗ ಆ ಗೆಳೆಯನೆ ವೈರಿಯಾಗುತ್ತಾನೆ.

ಊಸರವಳ್ಳಿಯಂತೆ ಪಲ್ಲಟವಾಗುವ ಭಾವದ ಮೇಲೆ ವಿಶ್ವಾಸ ಮಾಡದೆ ನಿರ್ಭಾವದ ಮೇಲೆ ವಿಶ್ವಾಸ ಮಾಡಬೇಕು. ನಿರ್ಭಾವವೆಂದರೆ ಸತ್ಯ . ಅದು ಬದಲಾಗುವುದಿಲ್ಲ. ಇದ್ದಂತೆ ಇರುವ ವಸ್ತು . ಕಲ್ಲು ಕಲ್ಲೇ ಆಗಿದೆ. ಕಲ್ಲಿನಲ್ಲಿ ಕೆಲವು ಪಕಳೆಗಳನ್ನು ಉದುರಿಸಿದರೇನು ಅದು ಕಲ್ಲಲ್ಲವೆ ? ನಿರ್ಭಾವ ಮಾತ್ರ ಕಲ್ಲನ್ನು ಕಲ್ಲೆಂದೇ ನೋಡುತ್ತದೆ. ಕೆತ್ತಿದ ಕಲ್ಲನ್ನು ಭಾವದಿಂದ ದೇವರೆಂದು ಪೂಜಿಸುವುದಿಲ್ಲ. ಕಲ್ಲೆಂದೇ ಉದಾಸೀನ ಮಾಡುತ್ತದೆ. ಭಾವ ಒಳ್ಳೆಯದಲ್ಲ. ಅದನ್ನು ಬಿಟ್ಟು ನಿರ್ಭಾವದೆಡೆಗೆ ಪಯಣಿಸಬೇಕು. ಇದಕ್ಕೆ ಜ್ಞಾನಶಕ್ತಿಯ ಜಾಗ ತಲುಪಿದರೆ ಮಾತ್ರ ಸಾಧ್ಯ ಆಗುವುದಿಲ್ಲ. ಆ ಜ್ಞಾನಶಕ್ತಿಯೇ ತಾನಾದವನಿಗೆ ಮಾತ್ರ ಭಾವ ದುರ್ಭಾವಗಳನ್ನು ದೂರ ಸರಿಸಿ ನಿರ್ಭಾವಿಯಾಗಲು ಬರುತ್ತದೆ. ಇದು ಸಕಲರಿಗೂ ಸಾಧ್ಯವಲ್ಲ. ಬಯಸಿ ಪ್ರಯತ್ನ ಪಟ್ಟವರಿಗೆ ಮಾತ್ರ ಸಾಧ್ಯ ಎನ್ನುತ್ತಾರೆ ಅಂಬಿಗರ ಚೌಡಯ್ಯ ಶರಣರು.

**40**

**ಆನೆಂಬುದೇನು ? ಇದಿರಿಟ್ಟು ತೋರೂದಿದೇನು ?**
**ಇದೆಲ್ಲಿಂದಲೊದಗಿತ್ತು ?**
**ಇದರ ಲಯವು ತಾನೆಲ್ಲಿ ಎಂದು ಅನುಮಾನಿಸಿ,**
**ಶ್ರೀಗುರುಚರಣವಂ ನಂಬಿ,**
**ಅಂತರ್ಮುಖದಲ್ಲಿ ವಿಚಾರಿಸಿ, ಅಲ್ಲೊಂದು ಮಾರ್ಗವ ಕಂಡು,**
**ಆ ಮಾರ್ಗದ ಬಳಿವಿಡಿದು ತಲೆ ಹೊಲಕ್ಕೆ ಹೋಗಿ,**
**ಹಿಂದು ಮುಂದ ಮರದು, ಮಹಾಬೆಳಗಿನ ಬೆಳಗಿನಲ್ಲಿ ನಿಂದು,**
**ಪರಮಾನಂದ ಸಾಗರದೊಳಗೆ ಸಮರಸನಾದವಂಗೆ**
**ಇಹಪರವಿಲ್ಲೆಂದಾತನಂಬಿಗ ಚೌಡಯ್ಯ .**

ನಾನು ಎನ್ನುವ ಮನ ತನುವನ್ನು ಆವರಿಸಿದೆ. ನಾನು ಎನ್ನುವ ಮನವನ್ನು ಇದಿರಿಟ್ಟು ನೋಡುವ ಮನವೂ ಮನದಲ್ಲಿಯೇ ಇದೆ. ಒಂದರಲ್ಲಿ ಮತ್ತೊಂದು ಅಡಗಿದೆ. ಇವೆರಡರ ಲಯವು ಎಲ್ಲಿ ಎಂದು ಅನುಮಾನಿಸಿ ನೋಡುವ ನೋಟ ಸಿದ್ಧವಾಗುವುದು ಶ್ರೀಗುರು ಚರಣವನ್ನು ನಂಬಿದಾಗ, ಆತ ಅಗಮ್ಯ , ಅಪ್ರಮಾಣ, ಅಗೋಚರ. ಅಂತಹ ಶ್ರೀಗುರುವನ್ನು ಸಂದರ್ಶಿಸುವ ಮಾರ್ಗವನ್ನು ಕಂಡು, ಆ ಮಾರ್ಗ ಹಿಡಿದು ಹೋಗಿ ; ಹಿಂದಿನ ಭೂತಕಾಲವನ್ನು ಮುಂದಣ ಭವಿಷತ್ ಕಾಲವನ್ನು ಮರೆದು ಆ ಮಹಾ ಬೆಳಗಿನ ಬೆಳಗಲ್ಲಿ ಮಿಂದು ; ಅಲ್ಲಿಯೇ ನಿಂದು ; ಪರಮಾನಂದ ಸಾಗರದೊಳಗೆ ಸಮರಸವಾದವಂಗೆ ಇಹವಿಲ್ಲ ; ಪರವಿಲ್ಲ. ಆತನ ದೇಹವೇ ದೇಗುಲ ! ಆತನ ಕಾಯವೇ ಕೈಲಾಸ ! ಆ ಕಾಯದಲ್ಲಿರುವವನೇ ಕೈಲಾಸಪತಿ !

ಅಂಬಿಗ ಚೌಡಯ್ಯ ಶರಣರು ಸಹಜ ತನುವನ್ನು ಸಕಲರಿಗೂ ತಮ್ಮ ಈ ವಚನದ ಸೂತ್ರದ ಮೂಲಕ ಓದುಗರಿಗೆಲ್ಲ ಅರುಹಿದ್ದಾರೆ.

ತನು, ತನುವನ್ನು ಆವರಿಸಿದ ಮನ, ತನ್ನನ್ನು ತಾನು ತನುವಿನಲ್ಲಿಯೇ ತನ್ಮಯವಾದ ಶ್ರೀಗುರುವಿಗೆ ಅರ್ಪಿಸಿಕೊಳ್ಳುವ ಮಾರ್ಗವನ್ನು ಶರಣರು ತಮ್ಮ ಈ ವಚನದ ಮೂಲಕ ಸಕಲರಿಗೂ ತಿಳಿಯುವಂತೆ ಹೇಳಿದ್ದಾರೆ.

ಶರಣರು ಎಷ್ಟೇ ಸರಳವಾಗಿ ಹೇಳಿದರೂ ಕೂಡಾ ಮನ ತನುವನ್ನು ಹೊರಗಡೆಯ ಸುಖದ ಸುಳಿಯಲ್ಲಿ ಕೆಡವಿ ಆನಂದ ಪಡುವುದು. ಶ್ರೀಗುರುವಿನ ಚರಣದಲ್ಲಿ ಮುಳುಗಿ ಪರಮಾನಂದ ಪಡುವುದು ಮನಕ್ಕೆ ಸಾಧ್ಯವಾಗುವುದೇ ಇಲ್ಲ.

**41**

**ಆಯತಲಿಂಗದಲ್ಲಿ ಅನುಭಾವ ಸಾಹಿತ್ಯವಾಗದು.**
**ಸ್ವಾಯತಲಿಂಗದಲ್ಲಿ ನಿರ್ಗಮನ ಸಾಹಿತ್ಯವಾಗದು.**
**ಇದೆಂತಯ್ಯಾ ಆಯತವು ? ಇದೆಂತಯ್ಯಾ ಸ್ವಾಯತವು ?**
**ಆಯತ ಸ್ವಾಯತವೆಂಬ ಉಭಯ ಕುಳಸ್ಥಳವರಿಯದಿದ್ದಡೆ**
**ಅನಾಯತವಾಗಿ ಹೋರಿತ್ತೆಂದನಂಬಿಗ ಚೌಡಯ್ಯ .**

ಅಂಗದಲ್ಲಿ ಲಿಂಗ ಇದೆ. ಅದು ಅಂಗದ ಕಣಕಣದಲ್ಲಿ ಸಂಗಮವಾಗಿದೆ. ಆದರೂ ಅಂಗದ ಮೇಲೆ ಲಿಂಗ ಆಯತ ಮಾಡಿಕೊಂಡಿದೆ ; ಇದು ಮನದ ವ್ಯವಹಾರ. ಆಯತ ಮಾಡಿಕೊಂಡ ಲಿಂಗ ಅಂಗಕ್ಕೆ ಏನನ್ನೂ ಬೋಧಿಸದು. ಅಂಗದ ಪರಿಚಯ ಲಿಂಗಕ್ಕಿಲ್ಲ. ಅಜ್ಞಾನ ಮುಸುಕಿರುವುದರಿಂದ ಆಯತ ಮಾಡಿಕೊಂಡ ಲಿಂಗದ ಪರಿಚಯವೂ ಅಂಗಕ್ಕೆ ಆಗುವುದಿಲ್ಲ. ಆಯತ ಮಾಡಿಕೊಂಡ ಲಿಂಗಕ್ಕೆ ಮೂರೂ ಕಾಲದಲ್ಲಿ ಪತ್ರೆ ಪುಷ್ಪಗಳಿಂದ ಪೂಜಿಸಿದರೂ ಅಂಗಕ್ಕೆ ಯಾವ ಫಲವೂ ದೊರೆಯುವುದಿಲ್ಲ. ಇನ್ನು ಅನುಭಾವ ಸಾಹಿತ್ಯವೆಂಬುದು ಬಹುದೂರ ಉಳಿಯಿತು.

ಶರಣರು ರಚಿಸಿದ ಅನುಭಾವ ಸಾಹಿತ್ಯವಾದರೇನು ಅದನ್ನು ಪಠಿಸಿ ಅಂಗದಲ್ಲಿ ಆಯತ ಮಾಡಿಕೊಂಡರೂ, ಅಂಗ ಆಪತ್ಕಾಲದಲ್ಲಿ ಆಯತ ಮಾಡಿಕೊಂಡ ಸಾಹಿತ್ಯ ವೇದಿಕೆಗೆ, ಚರ್ಚೆಗೆ ಬಂದೀತೆ ಹೊರತು ಅನುಭಾವಕ್ಕೆ ಅನುಕೂಲವಾಗುವುದಿಲ್ಲ.

ಅಂಗ ತನ್ನದೇ, ಅಂಗದಲ್ಲಿ ತನ್ಮಯವಾದ ಲಿಂಗ (ಅರಿವು)ವು ತನ್ನದೇ. ಅರಿವು ಅಂಗದ್ದೇ ಆದರೂ ಅದು ಕೂಡಾ ನಿರ್ಗಮನಿಯಾಗಿ ನಿಲ್ಲಲು ಅಂಗಕ್ಕೆ ಅನುಕೂಲ ಮಾಡಿಕೊಡುವುದಿಲ್ಲ. ಏಕೆಂದರೆ ತನಗೆ ಆಯತವೆಂದರೇನೆಂದು ಗೊತ್ತಿಲ್ಲ ; ಸ್ವಾಯತವೇನೆಂದರೇನೆಂದು ಗೊತ್ತಿಲ್ಲ. ಇವೆರಡನ್ನೂ ಗಮನ ಹರಿಸಿ ನೋಡಿ ನಿರ್ಗಮನಿಯಾಗಿ ನಿಲ್ಲುವ ಶಿಕ್ಷಣ ಅಂಗಕ್ಕೆ ಗೊತ್ತಿಲ್ಲ. ಹಾಗೆ ಗೊತ್ತು ಮಾಡಿಕೊಳ್ಳುವ ಗೋಜಿಗೆ ಹೋಗಲು ಅಂಗ ಇಚ್ಛಿಸುವುದಿಲ್ಲ. ಕಾರಣ ಆಯತ–ಸ್ವಾಯತ ಲಿಂಗಗಳೆರಡೂ ಅನುಭಾವ ಸಾಹಿತ್ಯವಾಗದು.

ಅನುಭಾವ ಸಾಹಿತ್ಯವೆಂದರೆ ಆಯತ ಲಿಂಗವನ್ನು ಅರಿತರಿತು ನೋಡುವುದು. ಸ್ವಾಯತ ಲಿಂಗವನ್ನು ಅರಿತರಿತು ನೋಡುವುದು. ನೋಡಿ ನೋಡಿ ಅಂಗದಲ್ಲಿಯೇ ಸಂಗಮವಾದ ಅನುಭಾವವನ್ನು ಅಂಗವನ್ನು ಆವರಿಸಿದ ಮನದಿಂದಲೇ ಅರಿತು ಬಳಸಿಕೊಳ್ಳುವುದು. ಹಾಗೆ ಬಳಕೆ

ಮಾಡುತ್ತ ಉಭಯ ಸ್ಥಲಗಳನ್ನು ಅರಿತು ಅನಾಯತವಾಗುವುದು. ಅಂದರೆ ಆಯತವನ್ನು ಸ್ವಾಯತವನ್ನು ಕಿತ್ತೆಸೆದು ಸಹಜವಾಗುವುದು.

ಅರಿವು ಇದೆ ಎಂದು ತಿಳಿದ ತನು ಸಹಜ ತನುವಲ್ಲ. ಅರಿವನ್ನು ಆಯತ ಮಾಡಿಕೊಂಡ ತನು ಕೂಡಾ ಸಹಜ ತನುವಲ್ಲ. ಅರಿವನ್ನು ಮರೆತು ಲಿಂಗವೇ ಏನೆಲ್ಲ ಎಂದು ಆಯತ ಮಾಡಿಕೊಂಡು ಪೂಜಿಸುವ ತನು ಕೂಡಾ ಸಹಜ ತನುವಲ್ಲ. ಅರಿವು ಹೀಗಿದೆ ಎಂದು ಭಗವದ್ಗೀತೆ, ಬೈಬಲ್, ಕುರಾನ್‌ಗಳನ್ನು ಉದಾಹರಿಸಿ ಮಠ ಪೀಠಗಳ ಮೇಲೆ ಕುಳಿತು ಬೋಧಿಸುವ ತನುಕೂಡ ಸಹಜ ತನುವಲ್ಲ. ಇದೆಲ್ಲವನ್ನು ಅರಿತರಿತು ಅರಿತುದೆಲ್ಲವನ್ನೂ ಮರೆತು ಬೆಳಗಿಂಗೆ ಬೆಳಗಾಗಿ ಬೆಳಗುವ ತನುವೆ ಸಹಜ ತನು. ಅದು ಆಯತವನ್ನು ಮಾಡಿಕೊಳ್ಳಲಿಲ್ಲ. ಸ್ವಾಯತವನ್ನೂ ಮಾಡಿಕೊಳ್ಳಲಿಲ್ಲ.

ಮರ ಚಿಗುರುವುದನ್ನು, ಹೂ ಬಿಡುವುದನ್ನು, ಕಾಯಿಯಾಗಿ ಮಾಗಿ ಹಣ್ಣಾಗಿ ಉದುರುವುದನ್ನು ಮತ್ತೊಂದು ಮರದಿಂದ ಕಲಿಯುವುದಿಲ್ಲ. ಹಾಗೆ ಮರ ಮತ್ತೊಂದು ಮರಕ್ಕೆ ಹಣ್ಣು ಮಾಡುವುದನ್ನು ಬೋಧಿಸುವುದೂ ಇಲ್ಲ. ಇದು ಮರದ ಸಹಜ ಜ್ಞಾನ. ಹಾಗೆಯೇ ತನು ಕೂಡಾ ಜ್ಞಾನದ ಮರವೇ ಆಗಿದೆ. ಜ್ಞಾನ ತನುವಿಗೆ ಹುಟ್ಟಿನಿಂದಲೇ ಬಂದಿದೆ. ಅದಕ್ಕೆ ನೋಡುವುದನ್ನು, ಕೇಳುವುದನ್ನು, ಮುಟ್ಟಿ ಆನಂದಿಸುವುದನ್ನು, ರುಚಿಸುವುದನ್ನು, ಮೂಸಿಸುವುದನ್ನು ಯಾರೂ ಕಲಿಸಲೇ ಇಲ್ಲ. ಈ ಸಹಜ ಜ್ಞಾನ ಜಗದ ಎಲ್ಲ ತನುಗಳಿಗೂ ಒಂದೇ ಆಗಿದೆ. ಇದಕ್ಕೆ ಭಾಷೆಯ ಅವಶ್ಯಕತೆಯೂ ಇರುವುದಿಲ್ಲ. ದುರ್ದೈವದಿಂದ ಇದೆಲ್ಲ ತನುವಿನಲ್ಲಿದ್ದರೂ ತನು ಮತ್ತೆ ಆಯತ ಮಾಡಿಕೊಂಡಿದೆ ಹಾಗೆಯೇ ಸ್ವಾಯತ ಮಾಡಿಕೊಂಡಿದೆ. ಹೀಗಾಗಿ ತನು ದಾರಿ ತಪ್ಪಿದೆ.

ಆಯತ ಸ್ವಾಯತಗಳೆರಡನ್ನೂ ತಳ್ಳಿ ಅವುಗಳನ್ನು ಸಂಪೂರ್ಣ ಮರೆತು ಸಹಜವಾದರೆ ಸಾಕು ತನುವನ್ನು ತನುವಿನ ಜ್ಞಾನವೇ ಬೆಳಗುತ್ತದೆ.

**42**

**ಆರಿಕೆ ಬಿತ್ತಿದ ಗಿಡುವಿನ ಹೂವ ಕೊಯಿದು,**
**ಊರೆಲ್ಲರೂ ಕಟ್ಟಿಸಿದ ಕೆರೆಯ ನೀರ ತಂದು,**
**ನಾಡೆಲ್ಲರೂ ನೋಡಿಯೆಂದು ಪೂಜಿಸುತ್ತ ,**
**ಪೂಜಿಸಿದ ಪುಣ್ಯ ಹೂವಿಗೋ ? ನೀರಿಗೋ ?**
**ನಾಡೆಲ್ಲಕ್ಕೋ ? ಪೂಜಿಸಿದಾತಗೋ ?**
**ಇದ ನಾನರಿಯೆ, ನೀ ಹೇಳೆಂದನಂಬಿಗ ಚೌಡಯ್ಯ .**

ಯಾರೋ ಬಿತ್ತಿದ ಗಿಡದ ಹೂವನು ಕೊಯಿದು, ಊರ ಜನ ಕಟ್ಟಿಸಿದ ಕೆರೆಯ ನೀರು ತಂದು, ನಾಡಿನ ಜನ ನೋಡಲೆಂದು ಪೂಜಿಸಿದರೆ, ಪೂಜಿಸಿದ ಪುಣ್ಯ ಹೂವಿಗೆ ಹೋಗಬೇಕೋ ? ನೀರಿಗೆ ಹೋಗಬೇಕೋ ? ಕೆರೆ ಕಟ್ಟಿಸಿದ ನಾಡಿನ ಜನಕ್ಕೆ ಹೋಗಬೇಕೋ ? ಅಥವಾ ಪೂಜಿಸಿದವನಿಗೆ ಪುಣ್ಯ ದೊರೆಯಬೇಕೋ ? ಎಂಬುದನ್ನು ಪೂಜಿಸುವಾತನೇ ನಿರ್ಧರಿಸೇಕು.

ಯಾರನ್ನು ಪೂಜಿಸಬೇಕೆಂದು ಅರಿಯದ ನಿಮಿತ್ತ ನಾಡೆಲ್ಲ, ನಾಡಿನ ಜನರೆಲ್ಲ ಪೂಜಿಸುವ ಕ್ರಿಯೆಯಲ್ಲಿ ತೊಡಗಿದೆ. ಒಬ್ಬರನ್ನು ಒಬ್ಬರು ನೋಡಿ ಪೂಜಿಸುವ ಸಂಪ್ರದಾಯ ರೂಢಿಯಲ್ಲಿದೆ.

ಗಿಡ ಮರ ಒರಳು ಒನಕೆ, ಕಲ್ಲು, ಲೋಹ, ಕಟ್ಟಿಗೆಗಳಿಂದ ಮಾಡಿದ ದೇವರನ್ನು ಪೂಜಿಸುವುದು ರೂಢಿಯಲ್ಲಿದೆ. ಆಯಾ ದೇವರನ್ನು ಹೇಗೆ ಪೂಜಿಸಬೇಕೆಂದು ಪುರಾಣ, ಪುಣ್ಯ ಕಥೆಗಳಲ್ಲಿ, ಪೂಜಾ ಪುಸ್ತಕಗಳಲ್ಲಿ ಲಭ್ಯವಾಗುತ್ತದೆ. ದೇವರನ್ನು ಪೂಜಿಸುವ ಕಾಯಕದಲ್ಲಿ ಬ್ರಾಹ್ಮಣ, ಆಚಾರ್ಯ, ಜಂಗಮ ಪೂಜಾರಿಗಳು ತೊಡಗಿದ್ದಾರೆ.

ರುದ್ರಾಭಿಷೇಕ, ವಿಭೂತಿ, ಕುಂಕುಮ, ಗಂಧಾರ್ಚನೆ, ಬಿಲ್ವಪೂಜೆ, ಪಂಚಾಮೃತ ಅಭಿಷೇಕ, ಕಲ್ಯಾಣೋತ್ಸವ ಮುಂತಾದ ಹೆಸರುಗಳಿಂದ ಆಯಾ ದೇವರುಗಳನ್ನು ಪೂಜಿಸಲ್ಪಡುತ್ತಾರೆ. ದೇವರನ್ನು ಪೂಜಿಸುವುದಕ್ಕೆ ಜೇನು, ಜಲ, ವಿಭೂತಿ, ಹೂ, ಕುಂಕುಮ, ಅಷ್ಟಗಂಧ, ಕರ್ಪೂರ, ಊದಿನಕಡ್ಡಿ, ತುಪ್ಪ, ಹಾಲು, ಮೊಸರು, ಬಿಲ್ವ, ಹೂ, ಬನ್ನಿ ಮುಂತಾದ ವಸ್ತುಗಳನ್ನು ಗಿಡ ಮರಗಳ ಹೂಗಳನ್ನು ಬಳಸುತ್ತಾರೆ.

ಕಲ್ಲು ಕಟ್ಟಿಗೆ ಮಣ್ಣು ಲೋಹದಿಂದ ತಾನೇ ನಿರ್ಮಿಸಿದ ವಸ್ತುವು ದೇವರಾಗಲು ಸಾಧ್ಯವೆ ? ಆ ವಸ್ತುವನ್ನು ಯಾರೋ ಬಿತ್ತಿದ ಗಿಡದ ಹೂವನು ಕೊಯಿದು ಪೂಜಿಸುವುದು ಸರಿಯೆ ? ಜನ ಹೀಗೆ ಮಾಡುತ್ತಾರೆಂದು ನಾನೂ ಮಾಡುವುದೆ ? ಪುಸ್ತಕದಲ್ಲಿರುವುದನ್ನು ಓದಿ ಹಾಗೆ ಪೂಜಿಸುವುದು ಸರಿಯೆ ಹೇಗೆ ? ಪೂಜಿಸಿದರೆ ಬರುವ ಪುಣ್ಯವಾದರೂ ಯಾವುದು ? ಪೂಜಿಸದಿದ್ದರೆ ಏನಾಗುತ್ತದೆ ಎಂದು ಯೋಚಿಸುವುದು ಬೇಡವೆ ?

ಸಂಪ್ರದಾಯ, ರೂಢಿಯಿಂದ ಮಾಡುವ ಪೂಜೆ ಪೂಜೆಯೆ ? ಹೀಗೆಂದು ಒಡಲನ್ನೇ ಕೇಳಿ ನಿರ್ಧರಿಸುವುದು ಉಚಿತವಲ್ಲವೆ ? ಒಡಲಿನದೇ ಆದ ಒಂದು ಧರ್ಮವಿದೆ. ಆ ಧರ್ಮ ವನ್ನು ಆಲಿಸಲು ಬರುತ್ತದೆ, ಆಚರಿಸಲು ಬರುತ್ತದೆ ಹಾಗೆಯೇ ಪೂಜಿಸಲು ಬರುತ್ತದೆ.

ಒಡಲೊಳಗೆ ಇದೆ. ಒಡಲಿಂಗೆ ಆಧಾರವಾಗಿ ಇದೆ. ಒಡಲನ್ನು ಸೋಂಕಿಲ್ಲ. ಆದರೂ ಒಡಲನ್ನು ಬೆಳಗುತ್ತದೆ. ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ ಎಂದು ಅಲ್ಲಮಪ್ರಭುಗಳು ಹೇಳಿದ್ದಾರೆ. ಹಾಗೆಯೇ ಜನ ಪೂಜಿಸುವ ಪುಣ್ಯದ ಫಲ ಹೂವಿಗೊ, ನೀರಿಗೊ, ನಾಡಿಗೊ, ಪೂಜಿಸಿದಾತನಿಗೊ ಎಂದು ಚೌಡಯ್ಯ ಶರಣರು ಪೂಜಿಸಿದಾತನನ್ನೇ ಕೇಳಿದ್ದಾರೆ.

ಸ್ನಾನ ಮಾಡಿಸುವುದಾದರೆ ಅಂಗದಲ್ಲಿ ಸಂಗಮವಾದ ಸಂಗಯ್ಯನಿಗೆ ನಿತ್ಯ ಮಜ್ಜನವ ಮಾಡು. ನಾಲಿಗೆಯಲ್ಲಿ ಸಂಗಮವಾದ ಸಂಗಯ್ಯನಿಗೆ ನೈವೇದ್ಯವ ಮಾಡು. ಜುಟ್ಟಿಗೆ ಮಲ್ಲಿಗೆ ಯನು ಕಟ್ಟಿ ಅದರ ಪರಿಮಳವನು ಹೀರು. ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯ ಪ್ರತ್ಯಕ್ಷವಾಗಿ ಕುಣಿಕುಣಿದಾಡುತ್ತಾನೆ. ಬೇಡಿದ ಪದಾರ್ಥಗಳನ್ನು ಕೊಟ್ಟು ಕಾಯಕದಲ್ಲಿಯೇ ಕೈಲಾಸ ತೋರಿಸುತ್ತಾನೆ.

**43**

**ಆರು ಲಿಂಗ ಮೂರು ಲಿಂಗವೆಂಬರು,**
**ನಮಗುಳ್ಳುದೊಂದೆ ಲಿಂಗ,**
**ಒಂದು ಲಿಂಗದಲ್ಲಿ ಒಂದು ಮನ ಸಿಕ್ಕಿದಡೆ**
**ಮರಳಿ ಒಂದು ಲಿಂಗವ ನೆನೆಯಲಿಲ್ಲ ವೆಂದಾತನಂಬಿಗ ಚೌಡಯ್ಯ**

ಅಂಗ ಒಂದೇ. ಅಂಗಕ್ಕಿರುವ ಲಿಂಗ ಕೂಡಾ ಒಂದೇ. ಅದನ್ನು ಲಿಂಗಾಂಗವೆಂದು ಕರೆದರು.

ಹಾಗೆಯೇ ಅಂಗವನ್ನು ಮನ ಆವರಿಸಿರುವುದರಿಂದ ಅಂಗದಲ್ಲಿ ಲಿಂಗ ಸಂಗಮವಾದುದು ಮನಕ್ಕೆ ವೇದ್ಯವಾಗುವುದಿಲ್ಲ. ಮನ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನಲ್ಲಿ ಸಿಲುಕಿದೊಡೆ ಆರು ಲಿಂಗವನ್ನು ನೆನೆಯುವುದಿಲ್ಲ ; ಮೂರು ಲಿಂಗವನ್ನೂ ನೆನೆಯುವುದಿಲ್ಲ. ಲಿಂಗದಲ್ಲಿ ಸಂಗಮವಾದ ಮನ ಘನ ಮನವಾಗವುದು.

ಅಂಗದಲ್ಲಿ ಸಂಗಮವಾದ ಅರಿವು ಒಂದೇ. ಆದರೂ ಕಣ್ಣಿನಲ್ಲಿ ದೃಶ್ಯವಾಗಿ, ಕಿವಿಯಲ್ಲಿ ಶಬ್ದವಾಗಿ, ಮೂಗಿನಲ್ಲಿ ಪರಿಮಳವಾಗಿ, ಚರ್ಮದಲ್ಲಿ ಸ್ಪರ್ಶವಾಗಿ, ನಾಲಗೆಯಲ್ಲಿ ರುಚಿಯಾಗಿ ಮಾರ್ಪಟ್ಟಿದೆ. ಆಯಾ ಜಾಗದಲ್ಲಿ ಮನ ಆವರಿಸಿರುವುದರಿಂದ ದೃಶ್ಯ ಶಬ್ದ ರುಚಿ ಸ್ಪರ್ಶ ವಾಸನೆಯಲ್ಲಿ ಭೇದಜ್ಞಾನವನ್ನು ಕಲ್ಪಿಸಿಕೊಂಡು ಅಂಗವನ್ನು ಮಂಗದಂತೆ ಕುಣಿಸುತ್ತದೆ. ಮನ ಆಯಾ ರುಚಿಗೆ ಆಸೆಪಟ್ಟು ಅಂಗದಲ್ಲಿ ಸಂಗಮವಾದ ಲಿಂಗಯ್ಯನನ್ನೇ ಮರೆತಿದೆ.

ಅಂಗ ಒಂದೇ ಅಂಗದಲ್ಲಿ ಸಂಗಮವಾದ ಜ್ಞಾನ ಒಂದೇ ಅಂಗವನ್ನು ಆವರಿಸಿದ ಮನ ಒಂದೇ. ಮನದಿಂದಲೇ ಜ್ಞಾನದತ್ತ ಪಯಣಿಸಿ, ಆ ಜ್ಞಾನದಲ್ಲಿ ಸಂಗಮವಾಗುವುದೇ ಲಿಂಗಾಂಗ ಸಾಮರಸ್ಯ . ಇದು ರಹಸ್ಯ . ಈ ರಹಸ್ಯದ ಮರ್ಮವನ್ನು ಅರಿತಾಗಲೇ ಅಂಗಕ್ಕೆ ಉಳಿದುದು ಒಂದೇ ಲಿಂಗವೆಂಬುದು ಅರಿವಿಗೆ ಬರುತ್ತದೆ.

**44**

**ಆರೂ ಇಲ್ಲದಂದು ತಾನಹ ದೆವಸ,**
**ತನಗೆ ಆನಾಧಾರವಾದೆ ನೋಡಾ.**
**ಭೂಮಿಯಾಕಾಶ ಐದನೆಯ ಭೂತ ಒಳಗಾಗಿ**
**[ಅಂ] ಬೇರೆ ತಾ ಬೇರೆ ಬಳಿಕಾದ ದೆವಸ,**
**ತಾ ತೋರಿದಂದಹ ಆ ನೂಲ ಹಿಡಿದೆನು.**
**ತೀವಿದ ಒಂಬತ್ತು ದ್ವೀಪಕ್ಕೆ ಭಾವವಿರಹಿತನಾಗಿ ತಾ ಹೊರಗಾದಡೆ**
**[ಅಂ] ಹಿಡಿದೊಳಗು ಮಾಡಿದನೆಂದನಂಬಿಗ ಚೌಡಯ್ಯ**

ಯಾರೂ ಇಲ್ಲದಂದು ನಿರಾಕಾರವಿತ್ತು . ಆ ನಿರಾಕಾರದಿಂದಲೇ ಆಕಾರವೆಂಬ ಅಂಗ ಉದಯವಾಯಿತು. ಭೂಮಿ(ಅಂಗ) ನಿರಾಕಾರಕ್ಕೆ ಆಧಾರವಾಯಿತು. ಭೂಮಿ ಆಕಾಶದೊಳಗಾಗಿ ಅಂಗ ಬೇರೆ; ಅಂಗವನ್ನು ಹೊತ್ತ ಲಿಂಗಬೇರಾಗಿ ತೋರಿದ ದಿನವದು ಬಹು ಸಂಭ್ರಮದ ದಿನ.

ನಿರಾಕಾರವೂ ತಾನೇ ; ಅದನ್ನು ಹೊತ್ತ ಆಕಾರವೂ ತಾನೇ, ಇದನ್ನು ಅರಿಯುವ ಮನವೂ ತಾನೇ, ಅಂಗವನ್ನು ಆವರಿಸಿದ ತಾನು ಒಂದೇ. ಅಂಗವನ್ನು ಅಂಗದಲ್ಲಿ ಸಂಗಮವಾದ ಲಿಂಗವನ್ನು ತಿಳಿಯುವ ತಾನು ಒಂದೇ. ಅಂಗವೆಂಬ ಅಖಂಡ ಸಾಗರದಲ್ಲಿರುವ ಒಂಬತ್ತು ದ್ವೀಪಕ್ಕೆ ಹರಿದಾಡುವ ಭಾವ ಒಂದೇ! ಆ ಭಾವವೇ ಭಾವ ವಿರಹಿತವಾಗಿ ನಿರ್ಭಾವದಿಂದ ಸಂಚರಿಸಿದಡೆ ಆನು ಎಂಬ ಅಹಂಕಾರ ಹಿಡಿದು ಲಿಂಗಾಂಗದೊಳಗೆ ಭಸ್ಮ ಮಾಡಿದನು.

ಆರೂ ಇಲ್ಲದಂದು ಅವನಿದ್ದ. ಅವನಿದ್ದುದನು ಆರೂ ನೋಡಲಿಲ್ಲವೆಂದು ಆಕಾರವೆಂಬ ಭೂಮಿಯನು ಸೃಷ್ಟಿಸಿದ. ಜಲಜನಕವನ್ನು ಆಮ್ಲ ಜನಕವನ್ನು ಸೃಷ್ಟಿಸಿ ಅವರೆಡನೂ ಒಂದು ಮಾಡಿ ಜಲವನ್ನು ಭೂಮಿಗೆ ಚೆಲ್ಲಿದ. ಆ ಜಲದಲ್ಲಿ ಅಗ್ನಿಯನ್ನು ಸೃಷ್ಟಿಸಿದ. ಈ ನಾಲ್ಕು ಭೂತಗಳನ್ನು

ತನ್ನ (ಬಯಲ) ಗರ್ಭದಲ್ಲಿ ಬಂಧಿಸಿಕೊಂಡು ತನ್ನ ಲೀಲೆಯನ್ನು ಮೆರೆಯಲು ಅಂಗವಾಗಿ ಬಂದ. ಲಿಂಗಾಂಗವಾಗಿ ಭೂಮಿಯಲ್ಲಿ ನಿಂದ. ಆರೂ ಇಲ್ಲದ ಆತಂಗೆ ತಾನು ಆಧಾರವಾಗಿನಿಂದ. ಆತ ನಿರಾಕಾರವಾದರೆ ನಾನು ಸಾಕಾರ! ಆತನಿಂದಲೇ ಆತನಿಗಾಗಿಯೇ ತನ್ನನ್ನು ಆಕಾರಗೊಳಿಸಿದ ಅಂಗವೆಂಬುದು ಆತ ನೂತ ನೂಲು. ಇದು ಬಲು ವಿಚಿತ್ರ . ನೂತಾತನನ್ನೇ ಮರೆಯಿತು. ಅಂಗವೆಂಬುದು ಭವ ಸಾಗರವಾಯಿತು. ಅದರಲ್ಲಿ ಒಂಬತ್ತು ದ್ವೀಪಗಳು ನಿರ್ಮಾಣವಾದವು. ಒಂದೊಂದು ದ್ವೀಪವೂ ಬಲು ವಿಚಿತ್ರ .ಅದರೊಳಗೆ ಭಾವವೆಂಬ ರೋಗ ಜನ್ಯವಾಯಿತು. ಆ ಭಾವವನ್ನೇ ನಿರ್ಭಾವಗೊಳಿಸಿ ಒಂಭತ್ತು ದ್ವೀಪದೊಳಗೆ ಸಂಚರಿಸಿದಾಗ ಆನು ಎಂಬ ಅಹಂಕಾರಿ ಅಲ್ಲಿಯೇ ಲಯವಾದ. ಅಂಗವೆಂಬುದು ಲಿಂಗಾಂಗವಾಯಿತು. ಕೂಡಲ ಸಂಗಯ್ಯನ ಕ್ಷೇತ್ರವಾಯಿತು.

**45**

**ಆರೂಢ ಜ್ಞಾನಿಯಾದವಂಗೆ ಅನುಭಾವವೇಕಯ್ಯಾ ?**
**ಮೀರಿದ ಸ್ಥಲದಲ್ಲಿ ನಿಂದವಂಗೆ ನೀರೇನು , ನೆಲವೇನು ?**
**ಎಂದಾತನಂಬಿಗ ಚೌಡಯ್ಯ**

ಮನುಷ್ಯನಿಗೆ ಜ್ಞಾನವಿದೆ. ಪಶು ಪಕ್ಷಿ ಗಿಡಮರ ಬಳ್ಳಿಗಳಿಗೆ ಮನುಷ್ಯನಂತಹ ತಿಳಿಯುವ ಜ್ಞಾನವಿಲ್ಲ. ಆದರೂ ಮನುಷ್ಯ ಬೆಳಗಿನಿಂದ ಮಲಗುವವರೆಗೂ ಆಚರಿಸುವಂತಹ ರೂಢಿಗತ ಆಚಾರಗಳನ್ನು ಮತ್ತಾವ ಪ್ರಾಣಿಗಳೂ ಆಚರಿಸುವುದಿಲ್ಲ. ಜ್ಞಾನವಿದ್ದರೂ ಬಹುತೇಕ ಮನುಷ್ಯರಿಗೆ ಬಳಕೆಯಾಗುತ್ತಿಲ್ಲ. ಹೀಗಾಗಿ ಜ್ಞಾನಿಗಳ ಸಂತ ಮಹಾಂತರ ಮೊರೆ ಹೋಗಲೇಬೇಕಾಗಿದೆ. ಅವರ ಅನುಭಾವಕ್ಕೆ ಮೊರೆ ಹೋಗಲೇಬೇಕಾಗಿದೆ.

ಸಂತ ಮಹಾಂತರು ವಿಜ್ಞಾನಿಗಳು.ಅವರು ಹೇಳಿದಂತೆ ನಡೆಯಬೇಕೆಂದು ಹೇಳುವುದಿಲ್ಲ. ಹೇಳುವುದನ್ನು ಅನುಭವಿಸಿ ; ಒಪ್ಪಿಗೆಯಾದರೆ ನಿಮ್ಮ ಅನುಭವ ನಿಮಗೆ ಹೇಳಿದಂತೆ ರೂಢಿಸಿಕೊಳ್ಳಿ ಎಂದು ಹೇಳುತ್ತಾರೆ. ಲೋಕದ ರೂಢಿ ಒಂದಾದರೆ ತನ್ನ ತನುವಿನ ಅನುಭಾವ ಬೇರೆಯೇ ಆಗಿರುತ್ತದೆ. ಒಡಲ ಜ್ಞಾನ ಹೇಳಿದಂತೆ ಒಡಲನ್ನು ಆವರಿಸಿದ ಮನಕ್ಕೆ ನಡೆಯಲು ಆಗುವುದಿಲ್ಲ. ಆಗ ಲೋಕದ ಜ್ಞಾನ ರೂಢಿಗತ ಜ್ಞಾನವನ್ನು ಮನ ಒಡಲೊಂದಿಗೆ ಅನುಕರಿಸುತ್ತದೆ. ಒಡಲ ಜ್ಞಾನ ಸತ್ಯ ಹೇಳಿದರೆ ಒಡಲನ್ನು ಆವರಿಸಿದ ಲೋಕದ ಜ್ಞಾನ ಅಸತ್ಯವನ್ನು ಬೋಧಿಸಿ ಹಾಗೆ ನಡೆಯಲು ಒಡಲಿಗೆ ಆದೇಶ ಕೊಡುತ್ತದೆ. ಮನ ಹೇಳಿದಂತೆ ಒಡಲು ಕೇಳುವುದು ರೂಢಿಗತ ಜ್ಞಾನವೆಂದು, ಸಂಪ್ರದಾಯವೆಂದು ಕರೆಯಿಸಿಕೊಂಡಿದೆ.

ಕಲ್ಲು ಒಂದೇ ಆ ಕಲ್ಲನ್ನು ಕೆತ್ತಿ ದೇವಾಲಯವನ್ನು ದೇವರನ್ನು ನಿರ್ಮಿಸುತ್ತದೆ ಮನ. ಕಲ್ಲನ್ನೇ ದೇವರೆಂದು ಭಾವಿಸಿ ಅದಕ್ಕೆ ಉಡುಗೆ ತೊಡುಗೆ ಆಭರಣ ಪಾದುಕೆಗಳಿಂದ ಅಲಂಕರಿಸಿ, ಶಿಖರಕ್ಕೆ ಚಿನ್ನದ ಕಳಶಾರೋಹಣ ಮಾಡಿ ತೇರು ಉಚ್ಛ್ರಾಯ ಪಲ್ಲಕ್ಕಿ ಉತ್ಸವಗಳನ್ನು ಆಚರಿಸಿ ಆ ದೇವಾಲಯಕ್ಕೆ ಕಲ್ಲೆಂಬುದನ್ನೇ ಮರೆತು ನಿತ್ಯ ನಿತ್ಯ ಪ್ರದಕ್ಷಿಣೆ ಹಾಕುತ್ತದೆ. ತಾನೇ ತನ್ನ ಕೆಲಸಗಳನು ಮಾಡಿಕೊಂಡು ದೇವರು ಮಾಡಿದನೆಂದು ಭಾವಿಸುತ್ತದೆ. ಕೆಲಸ ಆಗದಿದ್ದರೆ ದೀರ್ಘ ನಮಸ್ಕಾರ, ಜ್ಯೋತಿ ಹೊರುವುದು, ಶಸ್ತ್ರ ಹಾಕಿಕೊಂಡು ಅಗ್ನಿ ತುಳಿದು ಕೆಲಸ ಆಯಿತೆಂದು ಸಂಭ್ರಮಿಸುತ್ತದೆ. ಇದು ರೂಢಿಗತ ಸಂಪ್ರದಾಯವಾಗಿದೆ.

ಕಲ್ಲನ್ನೇ ಕೆತ್ತಿ ಕಲ್ಲನ್ನೇ ಮರೆತು ಮಸೀದಿಯೆಂದು, ಚರ್ಚ ಎಂದು ಹೇಳು ಮನ ತನುವಿಗೆ ನಾಲ್ಕೈದು ಬಾರಿ ಪ್ರಾರ್ಥಿಸಲು ಆದೇಶಿಸುತ್ತದೆ.

ಹಿಂದುವಾದರೇನು, ಮುಸಲ್ಮಾನನಾದರೇನು, ಕ್ರೈಸ್ತನಾದರೇನು ತನು ಒಂದೇ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಒಂದೇ.ಆದರೂ ತನು ತನು ವೆಂದು ಮರೆತು ಹಿಂದು ಮುಸಲ್ಮಾನ ಕ್ರೈಸ್ತನಾಗಿ ರೂಢಿಗತ ಸಂಪ್ರದಾಯದಲ್ಲಿ ಭ್ರಮೆಯಿಂದ ಆನಂದ ಪಡುತ್ತದೆ. ಸಂಪ್ರದಾಯದಲ್ಲಿ ಹೆಚ್ಚು ಕಮ್ಮಿಯಾದರೆ ಜಗಳ ಕಾಯುತ್ತದೆ. ಪ್ರಾರ್ಥಿಸುವ ಚರ್ಚ್ ಮಸೀದಿಗಳಿಗೆ, ಪೂಜಿಸುವ ದೇವಾಲಯಕ್ಕೆ ತೊಂದರೆಯಾದರೆ ಅದು ಕಲ್ಲೆಂದು ತಿಳಿಯದೆ ತನು ತನುವಿನೊಂದಿಗೆ ಜಗಳ ಕಾಯುತ್ತದೆ.

ಚರ್ಚ್, ಮಸೀದಿ, ದೇವಾಲಯವಾದರೇನು ಅವುಗಳ ಸತ್ಯ ಕಲ್ಲು. ಕಲ್ಲನ್ನು ಕಲ್ಲೆಂದು ತಿಳಿದರೆ ಸಂಪ್ರದಾಯ ಆಚಾರಗಳಿಗೆ ಕಡಿವಾಣ ಬೀಳುತ್ತದೆ. ರೂಢಿಯಲ್ಲಿದ್ದ ಆಚಾರವೇ ಆ ರೂಢಿಯಾಗುತ್ತದೆ. ಅಗೋಚರದ ಆಚಾರದ ಆರೂಢ ಜ್ಞಾನವೇ ಒಡಲ ನಿಜಜ್ಞಾನ. ಅದನ್ನು ಮರೆತದ್ದಕ್ಕಾಗಿ ಒಡಲು ಹಿಂದು ಮುಸಲ್ಮಾನ ಕ್ರೈಸ್ತನಾಗಿದೆ. ಜಾತಿ ಮತ ಪಂಥಗಳನ್ನು, ಹೆಣ್ಣು ಗಂಡೆಂಬ ಅಜ್ಞಾನದ ಸಂಪ್ರ ದಾಯವನ್ನು ಹೇರಿಕೊಂಡು ಒಡಲು ತನಗೆ ತಾನೇ ಗಾಯ ಮಾಡಿಕೊಳ್ಳುತ್ತಲಿದೆ.

ಆರೂಢಜ್ಞಾನಿಯಾದ ಒಡಲಿಗೆ ಮತ್ತೊಂದು ಒಡಲು ಹೇಳುವ ಅನುಭಾವದ ಅವಶ್ಯವೂ ಇರುವುದಿಲ್ಲ. ಆತನಿಗೆ ಜಲ ಒಂದೇ ನೆಲ ಒಂದೇ ಕುಲ ಒಂದೇ. '' ಜಲಒಂದೇ ಶೌಚಾಚ ಮನಕ್ಕೆ, ನೆಲ ಒಂದೇ ಹೊಲೆಗೇರಿ ಶಿವಾಲಯಕ್ಕೆ,ಕುಲ ಒಂದೇ ತನ್ನ ತಾನರಿದವಂಗೆ '' ಎಂದು ಬಸವಣ್ಣನವರು ಹೇಳಿದಂತೆ ಅಂಬಿಗರ ಚೌಡಯ್ಯ ಶರಣರೂ ಹೇಳಿದ್ದಾರೆ. ಕ್ರಿಸ್ತ ಹೇಳಿದರೇನು, ಕ್ರಿಷ್ಣ ಹೇಳಿದರೇನು, ಬುದ್ಧ ಬಸವಾದಿ ಶರಣರು ಹೇಳಿದರೇನು? ಒಡಲ ಸತ್ಯ ಒಂದೇ ಆಗಿದೆ. ಭ್ರಮೆಯಿಂದಾಗಿ ಅದು ಅನೇಕವಾಗಿದೆ.

**46**

**ಆವ ಪದಾರ್ಥವ ಮೋಹಿಸಿ ಲವಲವಿಸಬೇಡ.**
**ಬಪ್ಪುದು ಬಪ್ಪುದಲ್ಲದೆ ಬಾರದ್ದು ಬಪ್ಪುದೆ ?**
**ಬಪ್ಪುದು ತಪ್ಪದು ಬಾರದುದು ಬಾರದು,**
**ಅಹದಹದಾಗದ್ದಾಗದು.**
**ಬಹು ದುಃಖಂಗೊಳಲೇಕೆ ? ಬಪ್ಪುದು ತಪ್ಪದು, ಸಹಜವೆಂತಾಗುವುದಲ್ಲದೆ**
**ವಿಹಿತವ ತಾ ಬರುವುತಿಹನು ಪಣೆಯೊಳು ಶಿವನು.**
**ಇಂತಿದು ನಿನ್ನ ಭೋಗವೆಲ್ಲಿದ್ದಡೂ ಬಿಡದೆಂದಾತ**
**ನಮ್ಮಂಬಿಗರ ಚೌಡಯ್ಯ .**

ಒಡಲನ್ನು ಆವರಿಸಿದ ಮನ, ಒಡಲ ವೈರಿಯೂ ಹೌದು; ಒಡಲ ಸ್ನೇಹಿತನೂ ಹೌದು. ಮನಕ್ಕೆ ಪದಾರ್ಥದ ಸತ್ಯ ಗೊತ್ತಿಲ್ಲ. ಹೀಗಾಗಿ ಅದು ಆಭರಣವನ್ನು ಮೋಹಿಸಿ ಒಡಲಿನೊಂದಿಗೆ ಸಂಗ್ರಹಿಸುತ್ತದೆ. ಒಡಲಿಗೆ ಅಲಂಕರಿಸಿ ಸುಖಿಸುತ್ತದೆ. ಮನದ ಆಭರಣ ಮೋಹಕ್ಕಾಗಿ ಒಡಲು

ಶ್ರೀಮಂತನ ಪಟ್ಟ ಇಲ್ಲ ಕಳ್ಳನ ಪಟ್ಟ ಕಟ್ಟಿಕೊಳ್ಳುತ್ತದೆ. ಮನಸ್ಸಿಗೆ ಆಭರಣ ನೋಡಲು ಬರುತ್ತದೆಯೇ ಹೊರತು ಅದರ ಸತ್ಯ ನೋಡಲು ಬರುವುದಿಲ್ಲ. ಆಭರಣದ ಸತ್ಯ ಲೋಹ ! ಅದು ಹಳದಿ ಯಾದರೇನು , ಬಿಳಿ ಅಥವಾ ಕಪ್ಪು ಬಣ್ಣದ್ದಾದರೇನು ಅದು ಲೋಹವಲ್ಲವೆ ? ಲೋಹವೇ ಸತ್ಯ ಎನ್ನುವುದನ್ನು ಮರೆತು ಮನ ಆಭರಣಕ್ಕೆ ಮೋಹಗೊಳ್ಳುತ್ತದೆ. ಮನದ ಮೋಹ ಒಡಲಿಗೆ ಆವರಿಸಿ ಒಡಲನ್ನು ಕಳ್ಳತನಕ್ಕೆ ಪ್ರೇರೇಪಿಸುತ್ತದೆ. ಇಲ್ಲ ಹಗಲಿರುಳು ದುಡಿದು ಆಭರಣ ಸಂಗ್ರಹಿಸಿ ಒಡಲಿಗೆ ಶ್ರೀಮಂತನ ಪಟ್ಟ ಕಟ್ಟುತ್ತದೆ. ಮನ ಒಂದೇ, ಒಡಲು ಒಂದೇ ಅದರ ಸಂಗ್ರಹ ಗುಣ ಒಂದೇ, ವೃತ್ತಿ ಮಾತ್ರ ಬೇರೆ ಬೇರೆ. ಮನದ ಉದ್ದೇಶ ಒಂದೇ. ಅದು ಮೋಹಕ್ಕೆ ಬಲಿಯಾಗಿದೆ.

ಶ್ರೀಮಂತನ ಮನೆಗೆ ಕಳುವಿಗೆ ಹೋಗಿ ಆಭರಣ ಕದಿಯುತ್ತದೆ. ಶ್ರೀಮಂತ ಪ್ರಾಣ ಕಳೆದುಕೊಂಡರೂ ಸರಿ ಆಭರಣ ಕೊಡುವುದಿಲ್ಲ.ಕಳ್ಳ ಶ್ರೀಮಂತನ ಕೊಂದರೂ ಅಡ್ಡಿಯಿಲ್ಲ ಆಭರಣ ಬಿಡುವುದಿಲ್ಲ. ಒಡಲನ್ನು ಆವರಿಸಿದ ಮನಕ್ಕೆ ಆಭರಣದ ಮೋಹ ಪ್ರಧಾನವೇ ಹೊರತು ಒಡಲ ಪ್ರಾಣವಲ್ಲ ! ಒಡಲೂ ಅಲ್ಲ !

ಒಡಲೊಳಗೆ ಅರಿವಿದೆ. ಒಡಲನ್ನು ಮನ ಆವರಿಸಿದೆ. ಅರಿವಿಗೆ ಆಭರಣವೆಂಬುದು ಲೋಹ. ಮನಕ್ಕೆ ಆಭರಣದ ಮೋಹ ! ಲೋಹ ಯಾರಿಗೂ ಬೇಡ ; ಆಭರಣ ಸಕಲರಿಗೂ ಬೇಕು. ಅರಿವು ಮರೆಯಾಗಿ, ಮರೆವು ಮುಂದಾದರೆ ಪದಾರ್ಥದ ಮೋಹ ಒಡಲನ್ನು ಆವರಿಸುತ್ತದೆ. ಅಜ್ಞಾನದ ಈ ಲವಲವಿಕೆ ಬೇಡ ಮನವೇ ಎಂದು ಅಂಬಿಗರ ಚೌಡಯ್ಯ ಶರಣರು ಮನಕ್ಕೆ ಉಪದೇಶ ನೀಡಿದ್ದಾರೆ.

ಎಲೆ ಮನವೇ ಪದಾರ್ಥದ ಸತ್ಯ ನಿನಗೆ ಗೊತ್ತಿಲ್ಲ. ಅರಿವಿಗೆ ಗೊತ್ತಿಲ್ಲದೆ ಇಲ್ಲ. ಆ ಅರಿವಿನೊಳಗೆ ಬೆರೆತು ನೀನು ಆ ಅರಿವೇ ಆಗು; ಸಹಜನಾಗು. ಆಗ ಬಪ್ಪುದು ಬಪ್ಪುದಲ್ಲದೆ ಬಾರದ್ದು ಬಪ್ಪುದೆ ? ಬಪ್ಪುದು ಬಪ್ಪುದು, ಬಾರದುದು ಬಾರದು. ಬಹು ದುಃಖಗೊಳಲೇಕೆ ? ಹಣೆಯಲ್ಲಿ ಬರೆದ ಬರಹ ಅದು ಶಿವನದು ; ಕಾಯಕ್ಕೆ ಘಟಿಸದೆ ಬಿಡದು. ಕಾಯ ನಿನ್ನದಲ್ಲ. ಅದನ್ನು ಆವರಿಸಿದ ಮನವೂ ನೀನಲ್ಲ ; ನೀನೆಂದು ತಿಳಿದು ಅರಿವೆಂಬ ಶಿವನಿಗೆ ಮೊರೆ ಹೋಗು ಕಾಯದ ಭೋಗದಲ್ಲಿದ್ದುದು ಘಟಿಸದೆ ತಪ್ಪದು ; ಅದು ಕಾಯಗುಣ ಎಂದಿದ್ದಾರೆ ಚೌಡಯ್ಯ ಶರಣರು.

**47**

**ಆವಾವ ತ್ರಿಗುಣ ಭೇದದಲ್ಲಿ ವಿಶ್ವಾಸವ ಮಾಡಿದಡೂ ಭಾವ ಶುದ್ಧವಾಗಿರಬೇಕು.**
**ಯೋಗಿಯಾದಲ್ಲಿ ದೇಹ ಧರ್ಮವ ಮರೆದು, ಭೋಗಿಯಾದಲ್ಲಿ ಸಂಚಿತವ ಮರೆದು,**
**ತ್ಯಾಗಿಯಾದಲ್ಲಿ ನೆನಹು ಹಿಂಚು ಕೊಡುವುದು ಮುಂಚಾಗಿರಬೇಕು.**
**ಇಂತೀ ಯೋಗಿ ಭೋಗಿ ತ್ಯಾಗಿ,**
**ಇಂತೀ ತ್ರಿವಿಧವನೊಳಕೊಂಡು ವಿರಕ್ತನಾದಲ್ಲಿ**
**ಆತನ ಅಡಿಗೆರಗುವೆನೆಂದನಂಬಿಗ ಚೌಡಯ್ಯ .**

ಸಾತ್ವಿಕ ರಾಜಸ ತಾಮಸ ಗುಣಗಳು ತನುವಿನಲ್ಲಿ ಸುಳಿಯುತ್ತವೆ. ಸಾತ್ವಿಕನಾಗಿರಬೇಕೆಂದು ಪ್ರತಿ ತನು ಪ್ರಯತ್ನಿಸಿದರೂ ಕೂಡಾ ತನಗರಿಯದಂತೆ ರಾಜಸ ತಾಮಸ ಗುಣಗಳಿಗೆ ತನು ಒರಗುತ್ತದೆ. ಇದಕ್ಕೆ ಮನವೇ ಕಾರಣ. ಮನಕ್ಕೆ ಸ್ವರೂಪಜ್ಞಾನ ಹೊಂದಬೇಕು ಎನ್ನುವ ಉತ್ಕಟ

ಇಚ್ಛೆ ಆಗದಿದ್ದರೆ ಅದು ಮೂರೂ ಗುಣಗಳ ಮೂಲಕ ನಾಟಕವಾಡುತ್ತದೆ. ಆಯಾ ಗುಣದಲ್ಲಿ ಆ ಗುಣದ ಭಾವ ಶುದ್ಧಿಯಾಗಿರುವುದಿಲ್ಲ. ಎಷ್ಟೇ ಜಪ ತಪ ಮಾಡಿದರೂ ಬದಲಾಗುವುದೇ ಗುಣಗಳ ನಿಯಮ. ಸಂಪೂರ್ಣ ನಿರ್ಗುಣಿಯಾದಾಗ ಮಾತ್ರ ಭಾವ ನಿರ್ಭಾವವಾಗುತ್ತದೆ. ಆಗ ಗುಣದ ಭಾವ ಶುದ್ಧಿ ಮಾಡುವ ಅವಶ್ಯಕತೆ ಬೀಳುವುದೇ ಇಲ್ಲ.

**ಯೋಗಿಯಾದಲ್ಲಿ ದೇಹದ ಧರ್ಮವ ಮರೆದು, ಭೋಗಿಯಾದಲ್ಲಿ ಸಂಚಿತವ ಮರೆದು, ತ್ಯಾಗಿಯಾದಲ್ಲಿ ನೆನಹು ಹಿಂಚು ಕೊಡುವುದು ಮುಂಚಾಗಿರಬೇಕು :**

ದೇಹದಲ್ಲಿ ಸಂಗಮವಾದ ಅರಿವಿನ ಧರ್ಮ ಸಹಜವಾಗಿದೆ. ದೇಹ ಅರಿವಿಗೆ ಸಂಬಂಧಿಸಿದ ಸಂಪತ್ತು . ದೇಹವನ್ನು ಮನ ಆವರಿಸಿರುವುದರಿಂದ ದೇಹ, ಸಹಜ ಧರ್ಮವನ್ನು ಮರೆತು ಮನ ತನ್ನ ಸುಖಕ್ಕೆ ಅನುಕೂಲವಾದ ಧರ್ಮವನ್ನು ದೇಹದಲ್ಲಿ ಸಂಗ್ರಹ ಮಾಡಿಕೊಂಡಿದೆ. ಮನಕ್ಕೆ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂದರೆ ಬಲು ಪ್ರೀತಿ. ಇದನ್ನೇ ದೇಹದ ಧರ್ಮವೆಂದು ದೇಹ ಭಾವಿಸಿಯಾಗಿದೆ. ದೇಹ ತನ್ನನ್ನು ಆವರಿಸಿದ ಮನದ ಈ ಧರ್ಮವನ್ನು ಮರೆಯುವಂತಿಲ್ಲ. ಮನ ದೇಹದ ಸಹಜ ಧರ್ಮವನ್ನು ಬಯಸುವಂತಿಲ್ಲ. ಹೀಗಾಗಿ ಮನ ಯೋಗಿ, ಭೋಗಿ, ತ್ಯಾಗಿ ಎಂಬ ಪಾತ್ರದ ಮೂಲಕ ಅಭಿನಯ ವ್ಯಕ್ತಪಡಿಸುತ್ತದೆ.

ಇವು ಮನದ ಮೂರು ಪಾತ್ರಗಳೇ ಹೊರತು ಮತ್ತೇನೂ ಅಲ್ಲ. ಒಂದು ವೇಳೆ ದೇಹ ಯೋಗಿಯಾಗಬೇಕೆಂದು ಬಯಸಿದರೆ ಅದರ ಭಾವ ಶುದ್ಧವಾಗಿರಬೇಕು ಎನ್ನುತ್ತಾರೆ ಅಂಬಿಗರ ಚೌಡಯ್ಯ ಶರಣರು. ಭಾವ ಕೂಡಾ ತನುವಿಗೆ ಹಾಕಿರುವ ಮನದ ಒಂದು ಪಾತ್ರವೇ ಆಗಿದೆ. ಪಾತ್ರ ಶುದ್ಧವಾಗಿರಲು ಸಾಧ್ಯವಿಲ್ಲ. ಹಾಗೆ ಶುದ್ಧವಾಗಬೇಕಾದರೆ ಭಾವ ಬಹಳಷ್ಟು ಪ್ರಯಾಸ ಪಡಬೇಕಾಗುತ್ತದೆ. ಏಕೆಂದರೆ ಭಾವಕ್ಕೆ ನಿರ್ಭಾವಿಯಾಗುವ ತಂತ್ರಜ್ಞಾನ ಹೊಳೆದಿರುವುದಿಲ್ಲ. ಹೀಗಾಗಿ ಶರಣರು ಭಾವಶುದ್ಧವಾಗಿದ್ದರೆ ಮಾತ್ರ ಅವನನ್ನು ಯೋಗಿ ಎನ್ನಲು ಸಾಧ್ಯವಾಗುತ್ತದೆ ಎನ್ನುತ್ತಾರೆ.

**ಭೋಗಿಯಾದಲ್ಲಿ ಸಂಚಿತವ ಮರೆದು :**

ಸಂಸಾರಿಯಾದವನನ್ನು ಭೋಗಿ ಎನ್ನುತ್ತಾರೆ. ಅವನು ಲೋಕದ ಸರ್ವ ಸುಖಗಳಿಗೂ ಆಕರ್ಷಿತನಾಗುತ್ತಾನೆ. ಆತ ಯಾವ ಸುಖದಲ್ಲಿಯೇ ಇರಲಿ ಭೂತ ಕಾಲದ ನೆನಪುಗಳು ಹರಿದು ತಿನ್ನುತ್ತದೆ. ಅದನ್ನು ಸಂಚಿತ ಕರ್ಮ ಎನ್ನುತ್ತಾರೆ. ನೆನಪಾದಂತೆಲ್ಲ ಭೋಗಿಸುವ ವಸ್ತುವಿಗೆ ಸೆರೆಯಾಳಾಗುತ್ತಾನೆ. ಆ ವಸ್ತು ದೊಡ್ಡದಲ್ಲ. ವಸ್ತುವಿಗೆ ಸೆರೆಯಾಳಾಗುವುದು ಭೋಗಿಯ ಧರ್ಮವಲ್ಲ. ಪದಾರ್ಥಗಳನ್ನು ಬಳಸಿ ಭೋಗಿಯಾದರೇನು ಪದಾರ್ಥಗಳಿಗೆ ಅಂಟದಂತೆ ದೂರವಿರಬೇಕು. ಬಳಸಿಯೂ ಬಳಸದಂತಿರಬೇಕು. ರುಚಿಯ ತತ್ವ ತಿಳಿದರೆ ಯಾವ ವಸ್ತುಗಳೂ ಬಳಸುವ ತನುವನ್ನು ಬಾಧಿಸಲಾರವು.

**ತ್ಯಾಗಿಯಾದಲ್ಲಿ ನೆನಹು ಹಿಂಚು ಕೊಡುವುದು ಮುಂಚಾಗಿರಬೇಕು :**

ಇದು ಅದ್ಭುತವಾದ ಸೂತ್ರ . ಪ್ರತಿ ವ್ಯಕ್ತಿಯೂ ತಪ್ಪು ಮಾಡುತ್ತಾನೆ. ಮಾಡಿದ ಮೇಲೆ ತಪ್ಪೆಂದು ತನ್ನ ಗಮನಕ್ಕೆ ಬರುವುದು. ಇದು ಎಲ್ಲರಿಗೂ ತಿಳಿಯುತ್ತದೆ. ಆದರೂ ಆ ಸಂದರ್ಭದಲ್ಲಿ ಮಾಡುವ ತಪ್ಪು ದೇಹಕ್ಕೆ ಸುಖ ನೀಡುತ್ತದೆ. ಆಗ ತನುವಿನ ಜ್ಞಾನ ಹಿಂದೆ ಇದ್ದು ವೀಕ್ಷಿಸುತ್ತದೆ. ಮನ ತನುವನ್ನು ಬಳಸಿ ತನುವಿಗೆ ಸುಖ ನೀಡುತ್ತದೆ. ಮಾಡಿದ ತಪ್ಪು, ಸುಖಿಸಿದ ಸುಖ ಇವೆರಡು ತನುವಿನಲ್ಲಿ ಸಂಗ್ರಹವಾಗಿ ನೆನಪಾದಂತೆಲ್ಲ ತನು ದುಃಖಕ್ಕೀಡಾಗುತ್ತದೆ. ಜ್ಞಾನ ಹಿಂದೆ ಇದ್ದು ಭೋಗಿಸುವ ತವಕ ಮುಂದೆ ಇರುತ್ತದೆ. ತ್ಯಾಗಿಯಾದವನು ಆಲೋಚನೆಗೆ ಒಳಗಾಗಿ ಸುಖಿಸುವ

ಮನವನ್ನು ಹಿಂದೆ ತಳ್ಳಿ ತನ್ನ ಜ್ಞಾನವನ್ನು ಮುಂದೆ ಮಾಡುತ್ತಾನೆ. ಹೀಗೆ ಮಾಡಲು ಪ್ರಯತ್ನಿಸಬೇಕು ಇದು ಸಕಲರಿಗೂ ಸಾಧ್ಯವೆನ್ನುವ ಸೂತ್ರವನ್ನು ಅಂಬಿಗರ ಚೌಡಯ್ಯ ಶರಣರು ಈ ವಚನದಲ್ಲಿ ಪ್ರಸ್ತಾಪಿಸಿದ್ದಾರೆ.

**48**

**ಆಶೆಯಲಿದ್ದವನ ತಲೆಯನರಿದು,**
**ಆಶೆಯ ಹರಿಯಲೊದ್ದವನದೊಂದೆ ಹುಟ್ಟಿನಲ್ಲಿ ಒಯ್ದು**
**ಕೈಲಾಸಕ್ಕೆ ಹೋದಾತ**
**ಅಂಬಿಗ ಚೌಡಯ್ಯ .**

ಆಸೆ ಹೊಂದಿದವನು, ಆಸೆ ಇಲ್ಲದವನು ಇವರಿಬ್ಬರು ಕಾಯದಲ್ಲಿಯೇ ಇದ್ದಾರೆ. ಕಾಯ ಆಸೆ ಇಲ್ಲದವನದು. ಕಾಯವನ್ನು ಆವರಿಸಿದವನು ಆಸೆ ಉಳ್ಳವನು. ಆಸೆ ಮಾಡುವವನು ಕಾಯ ಹಿಡಿದು ಆಸೆ ಮಾಡುತ್ತಾನೆ. ಕಾಯ ಹಿಡಿದು ಉಣ್ಣುತ್ತಾನೆ ; ಕಾಯ ಹಿಡಿದು ಮುಟ್ಟುತ್ತಾನೆ ; ಕಾಯ ಹಿಡಿದು ಮೂಸಿಸುತ್ತಾನೆ. ಕಾಯ ಹಿಡಿದು ಕೇಳಿ ಕಾಯಕ್ಕೆ ಆಸೆ ಹುಟ್ಟಿಸುತ್ತಾನೆ. ಆಸೆ ಇಲ್ಲದ ಕಾಯವೇ ಇಲ್ಲ. ಎಲ್ಲ ಆಸೆ ಉಳ್ಳ ಕಾಯಗಳೇ ಆಗಿವೆ.

ಕರೆನ್ಸಿ, ಆಭರಣ, ಭೂಮಿ, ವಿಷಯ, ಪದವಿ, ಅಧಿಕಾರ ಇವು ಮನಕ್ಕೆ ಬಲು ಮೋಹ. ಅವುಗಳನ್ನು ಸಂಗ್ರಹ ಮಾಡಿ ತನ್ನದೆಂದು ಮನ ಜಂಬ ಕೊಚ್ಚಿಕೊಳುತ್ತದೆ. ಆ ವಸ್ತುಗಳನ್ನು ಮನ ಸಿದ್ಧಪಡಿಸಿರುವುದರಿಂದಾಗಿ ಸಿದ್ಧಪಡಿಸಿದ ಮನವೆ ಮೋಹಗೊಳ್ಳುತ್ತದೆ. ಆ ಮೋಹಕ್ಕೆ ಮನ ಹಾಗೂ ಕಾಯ ಬಲಿಯಾಗುತ್ತವೆ. ಹಾಗೆ ಬಲಿಯಾಗುವ ಮನ ಕಾಯದಲ್ಲಿ ತನ್ಮಯವಾದ ಅಕಾಯವೆಂಬ ಅರಿವಿನಿಂದ ನೋಡಿದರೆ ಮನ ಆಯಾ ವಸ್ತುಗಳಿಗೆ ಬಲಿಯಾಗುವುದಿಲ್ಲ. ಮನಕ್ಕೆ ಅರಿವಾಗುವುದರಿಂದ ಕಾಯ ಆಯಾ ವಸ್ತುಗಳನ್ನು ಬಯಸುವುದಿಲ್ಲ. ಇದು ಚೌಡಯ್ಯ ಶರಣರ ಸೂತ್ರ ; ಸಕಲ ಶರಣರ ಸೂತ್ರವೂ ಇದೇ ಆಗಿದೆ.

'' ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ. ಇವು ಜಗಕಿಕ್ಕಿದ ವಿಧಿ. ನಿನ್ನದೆಂಬುದು ಜ್ಞಾನರತ್ನ ಕಾಣಾ. ಅದನ್ನು ಕೆಡಗೊಡದೆ ಅಲಂಕರಿಸಿದೆಯಾದಡೆ ನಿನ್ನಂತ ಸಿರಿವಂತರು ಯಾರೂ ಇಲ್ಲ ಎಲೆ ಮನವೇ '' ಎಂದು ಪ್ರಭುಗಳು ಹೇಳುತ್ತಾರೆ.

ಭೂಮಿ ಹೇಮ ವಿಷಯಾದಿ ವಸ್ತುಗಳ ಮೇಲೆ ಆಸೆಪಡುವ ಮನದ ತಲೆಯನರಿದು, ಆಸೆ ಮಾಡದ ಜ್ಞಾನದ ಹತ್ತಿರ ಒಯ್ದರೆ, ಆಸೆ ಮಾಡುವ ಮನದ ರೋಗಕ್ಕೆ ಕತ್ತರಿ ಬೀಳುತ್ತದೆ. ಆಗ ಕಾಯವೇ ಕೈಲಾಸವಾಗುತ್ತದೆ.

ಭೂಮಿ ಹೇಮ ವಿಷಯ ವಸ್ತುಗಳನ್ನು ಆಸೆ ಮಾಡುವ ಮನ ಕಾಯದೊಂದಿಗೆ ಶ್ರೀಮಂತ ಅಥವಾ ಕಳ್ಳ ಎಂದು ಗುರುತಿಸಿಕೊಳ್ಳುತ್ತದೆ. ಆಸೆ ಮಾಡದ ನಿರಾಸೆ ಉಳ್ಳ ಕಾಯ ಸಂತ ಯೋಗಿ ಶರಣ ದಾಸ ಮಹಾಜ್ಞಾನಿ ಎಂದು ಗುರುತಿಸಿಕೊಳ್ಳುತ್ತದೆ. ಕಾಯವೇ ಕೈಲಾಸವೆಂದು ಗುರುತಿಸಿಕೊಳ್ಳುತ್ತದೆ.

ಜ್ಞಾನಿಯ ದೃಷ್ಟಿಯಲ್ಲಿ ಸಕಲ ಕಾಯಗಳೂ ಕೈಲಾಸಗಳೇ ! ಆದರೆ ಆಯಾ ಕಾಯಗಳಿಗೆ ತಾನೇ ಕೈಲಾಸವೆಂದು ಗೊತ್ತಿಲ್ಲ. ಜ್ಞಾನಿಗೆ ಗೊತ್ತಿಲ್ಲದೆ ಇಲ್ಲ. ಏಕೆಂದರೆ ಆಸೆಯೇ ಇಲ್ಲದ ನಿರಾಶಾ ಪುರುಷನೊಬ್ಬ ಕಾಯದಲ್ಲಿಯೇ ಇದ್ದಾನೆ, ಆಸೆ ಉಳ್ಳ ಅಜ್ಞಾನಿ ಮನ ಕಾಯವನ್ನು ಆವರಿಸಿದೆ. ಆ ಮನದಿಂದಲೇ ನಿರಾಶೆ ಹೊಂದಿದ ಮಹಾ ಪುರುಷನೆಡೆಗೆ ಪ್ರಯಾಣ ಬೆಳೆಸಿದಾಗ ಆಸೆವುಳ್ಳ

ಮನವೇ ನಿರಾಶಾ ಪುರುಷನಾಗುತ್ತದೆ.

ನಿರಾಶೆ ಹೊಂದಲು ಜಪ ತಪಗಳನ್ನು ಮಾಡಬೇಕಿಲ್ಲ, ಕಾಯದಲ್ಲಿ ನಿರಾಶೆಯೆಂಬ ಮಹಾ ಪುರುಷನೇ ತನ್ಮಯವಾಗಿದ್ದಾನೆ. ಆಸೆ ಉಳ್ಳ ಮನ ನಿರಾಶಾ ಪುರುಷನನ್ನು ಸೇರಬೇಕು ಅಷ್ಟೆ. ಈ ಘಟನೆ ಕಾಯದಲ್ಲಿಯೇ ಘಟಿಸಬೇಕು. ಸ್ವಾತಿ ಹನಿ ಮುತ್ತು ಮಾಡಲು ಬಾಯ್ತೆರೆದ ಚಿಪ್ಪಿನಲ್ಲಿ ಬಿದ್ದು ಮುತ್ತು ಮಾಡಿದಂತೆ.

49

**ಆಶೆಯುಳ್ಳಾತನೊಬ್ಬರಾಧೀನದಲ್ಲಿಪ್ಪನು.**
**ಆಶೆಯ ಮನದ ಕೊನೆಯನರಿದಾತ**
**ಕೈಲಾಸದಾಚೆಯಲ್ಲಿಪ್ಪನೆಂದಾತ**
**ನಮ್ಮ ಅಂಬಿಗ ಚೌಡಯ್ಯ !**

ಶರಣರ ಈ ವಚನದಲ್ಲಿ ಸಂಪೂರ್ಣ ಬೆಡಗು ತುಂಬಿದೆ. ಈ ಮಾತು ಒಂದು ತನುವಿಗೆ ಹೇಳಿದ್ದಲ್ಲ. ಒಬ್ಬ ವ್ಯಕ್ತಿಗೂ ಹೇಳಿದ್ದಲ್ಲ. ಪ್ರತಿ ಕಾಯದಲ್ಲಿ ಆಸೆಯುಳ್ಳ ಮನವೆಂಬ ಅಜ್ಞಾನಿಯೂ ಇದ್ದಾನೆ. ಹಾಗೆಯೇ ಆಸೆಯೆಂಬ ಮನದ ಕೊನೆಯನು ಅರಿತ ಮಹಾಂತನೊಬ್ಬ ಕಾಯದಲ್ಲಿಯೇ ಇದ್ದಾನೆ. ಆತನು ಇದ್ದ ಕಾಯವದು ಕೈಲಾಸವೇ ಆಗಿದೆ.

ಆಶೆಯ ಮನದ ಕೊನೆಯನು ಅರಿದಾತನ ತನುವದು ಜಗದಗಲ ಮುಗಿಲಗಲ; ಮಿಗೆಯಗಲ. ಇಡೀ ಬ್ರಹ್ಮಾಂಡವೇ ಆಶೆಯನು ಅರಿತ ಮಹಾಂತನ ತನುವಿನಲ್ಲಿ ಚುಳುಕಾಗಿದೆ. ಆತನ ಶ್ರೀಪಾದ ಪಾತಾಳದಿಂದಲೂ ಅತ್ತತ್ತ . ಆತನ ಶ್ರೀಮುಕುಟ. ಬ್ರಹ್ಮಾಂಡದಿಂದಲೂ ಅತ್ತತ್ತ . ವ್ಯಾಪಿಸಿದೆ. ಆ ಮಹಾಂತನ ತನು ಅಗಮ್ಯ ; ಅಪ್ರಮಾಣ! ಅಪ್ರತಿಮವಾದ ಅರಿವೆಂಬ ಮಹಾಲಿಂಗವೇ ಅಂಗದಲ್ಲಿ ಚುಳುಕಾಗಿದೆ ಎಂದು ಬಸವಣ್ಣನವರು ಆಶೆಯ ಮನದ ಕೊನೆಯನು ಅರಿತ ಮಹಾಂತನ ಕಾಯವನು ಕೈಲಾಸಕ್ಕಿಂತಲೂ ಅಧಿಕವೆಂದು ಹಾಡಿದ್ದಾರೆ. ಕಾಯದ ಆಳ ಹಾಗೂ ಅದರ ಸುಖವನ್ನು ಉಂಡ ಶರಣರು ಮಾತ್ರ ಬಣ್ಣಿಸಬಲ್ಲರು. ಉಳಿದವರು ಕಾಯವನ್ನು ಕ್ರೌರ್ಯದಿಂದ, ದ್ವೇಶ ಅಸೂಯೆಗಳಿಂದ, ಕಾಮದಿಂದ, ಮದ ಮತ್ಸರಗಳಿಂದ ಅಳೆಯುತ್ತಾರೆ. ಅಳಿಮನದ ಕಾಯಗಳಿಗೇನು ಗೊತ್ತು ಕಾಯದ ಮಹಿಮೆ.

50

**ಆಳಾಪದ ಸೊಬಗು, ಘಂಟೆವಾದ್ಯದ ಕೂಗಿನ ಕೊರಚು,**
**ಪರಿಚಾರಕರ ಎಡೆಯಾಟದಿಂದ ಸೊಬಗು ಮೆರೆಯಿತ್ತು .**
**ಎನಗೆ ಇನ್ನಾವುದು ಇಲ್ಲ, ಇನ್ನೇವೆನೆಂದನಂಬಿಗ ಚೌಡಯ್ಯ**

ಸಂಗೀತದ ಆಲಾಪ, ಘಂಟೆವಾದ್ಯ, ಪರಿಚಾರಕರ ಆಟದ ಸೊಬಗಿನಿಂದ ತನು ಆನಂದದಿಂದ ಮೆರೆಯುತ್ತದೆ. ಮೈ ಮರೆಯುತ್ತದೆ. ಒಂದೇ ಕೊರಳಿನಿಂದ ಸಪ್ತಸ್ವರಗಳನ್ನು ನುಡಿಸುವ ಶಕ್ತಿ ತನುವಿಗಿದೆ. ಆಲಾಪದ ನಾದವನ್ನು ಆನಂದದಿಂದ ಕೇಳುವ ಶಕ್ತಿ ಕಿವಿಗಿದೆ. ಘಂಟೆಯ ನಾದ ತನುವಿಗೆ ಭಕ್ತಿಯನ್ನು ಉಂಟು ಮಾಡಿ ಕೈಮುಗಿಯುವಂತೆ ಮಾಡುತ್ತದೆ. ತನುವಿನಿಂದ

ಹೊರಟ ನಾದ ತನುವನ್ನೇ ಮೈಮರೆಸುತ್ತದೆ.

ನುಡಿಸುವುದೊಂದು ಪಾಂಡಿತ್ಯ ; ಕೇಳುವುದೊಂದು ಪಾಂಡಿತ್ಯ ! ಒಂದು ತನು ಮತ್ತೊಂದು ತನುವನ್ನು ಹೊಗಳುವುದು. ಇದು ತನುವಿನ ಪಾಂಡಿತ್ಯದ ಗೀಳು. ಸ್ವರಕ್ಕೆ ಅರಳುವ ಬೇ ಸ್ವರಕ್ಕೆ ಕೆರಳುವ ತನುವನ್ನು ಸಹಜ ತನುವೆನ್ನಲು ಸಾಧ್ಯವೇ , ಹೊಗಳಿಕೆಯಿಂದ ಅರಳುವ, ತೆಗಳಿಕೆಯಿಂದ ಕೆರಳುವ ತನುವು ಕೂಡಾ ಸಹಜ ತನುವಲ್ಲ.

ತನುವಿನಲ್ಲಿ ನಾದವನ್ನು ನಾದಿ ನಾದಿ ಕೇಳುವ ಶಕ್ತಿಯಿದೆ. ಇದು ತನುವಿನ ಸಹಜ ಶಕ್ತಿ . ಶಬ್ದದಲ್ಲಿ ಅರಿವಿದೆ. ತಿಳಿಯುವಲ್ಲಿ ಅಜ್ಞಾನವಿದೆ. ಹೀಗಾಗಿ ಶಬ್ದದ ನಾದದಿಂದ ತನು ಅರಳುತ್ತದೆ ಕೆರಳುತ್ತದೆ.

ತನುವಿನ ಸಂಪತ್ತೆಂದರೆ ಶಬ್ದ. ಅದನ್ನು ಅರಿವಿನಿಂದ ನುಡಿದು ಅರಿವಿನಿಂದ ಕೇಳುವ ಕಲೆಯೇ ಸಹಜ ತನುವಿನ ಕಲೆ. ಶಬ್ದದ ನಾದ ಕೇಳಿ ತನು ಅರಳಿತು ಎಂದರೆ ಶಬ್ದವನ್ನು ತನು ವಿಪರೀತವಾಗಿ ಅರ್ಥೈಸಿಕೊಂಡಿತು ಎಂದು ಅರ್ಥ. ಶಬ್ದದ ನಾದ ಕೇಳಿ ತನು ಕೆರಳಿತು ಎಂದರೆ ಶಬ್ದವನ್ನು ವಿಪರೀತವಾಗಿ ಕೇಳಿತು ಎಂದು ಅರ್ಥವಲ್ಲವೆ !

ಕತ್ತೆ ಎನ್ನುವುದು ಒಂದು ಶಬ್ದ. ಇದನ್ನು ಬೋರ್ಡ್ ಮೇಲೆ ಬರೆದರೆ ನಪುಂಸಕವಾಗುತ್ತದೆ. ಓದಿದರೆ ಕತ್ತೆ ಎನ್ನುವುದು ಒಂದು ಪ್ರಾಣಿ ಎಂದು ಅರಿವಾಗುತ್ತದೆ. ಅರ್ಥೈಸಿಕೊಂಡರೆ ಅದು ಕತ್ತೆಯಲ್ಲ ; ಮನುಷ್ಯ ಅದನ್ನು ಗುರುತಿಸಲು ಇಟ್ಟ ಹೆಸರು ಎಂದು ತಿಳಿಯುತ್ತದೆ. ಕೇಳಿದರೆ ಸುಮ್ಮನಾಗುತ್ತದೆ. ಮತ್ತೊಬ್ಬ ವ್ಯಕ್ತಿ ಕತ್ತೆ ಎಂದುತನಗೇ ಹೇಳಿದ್ದು ಎಂದು ಕೇಳಿ ಹಚ್ಚಿಕೊಂಡರೆ ತನು ವಿಕೃತಗೊಳ್ಳುತ್ತದೆ ; ತನುವಿನಲ್ಲಿ ಅಗ್ನಿಯ ಜ್ವಾಲೆಗಳು ಏಳುತ್ತವೆ. ನುಡಿದವನನ್ನು ಕೊಲ್ಲುವ ಇಲ್ಲ ತಾನೇ ಅಪಮಾನದಿಂದ ಸಾಯುವ ಹಂತಕ್ಕೆ ತನು ತಲುಪುತ್ತದೆ. ತನುವಿನಿಂದ ಉತ್ಪತ್ತಿಯಾದ ನಾದ ತನುವಿಗೆ ತಿಳಿಯಲಿಲ್ಲ. ನಾದವನ್ನು ಕೇಳಿ ಆನಂದದಿಂದ ಅರಳುವ ; ಇಲ್ಲ ಕೆರಳುವ ತನುವನ್ನು ಸಹಜ ತನುವೆಂದು ಶರಣರು ಗುರುತಿಸಲಿಲ್ಲ.

**ಎನಗೆ ಇನ್ನಾವುದೂ ಇಲ್ಲ, ಇನ್ನೇವೆನೆಂದನಂಬಿಗ ಚೌಡಯ್ಯ :**

ನಾದದಲ್ಲಿ ಅರಿವಿದೆ. ಅದನ್ನು ತಿಳಿಯುವ ಸಹಜ ಶಕ್ತಿ ತನುವಿಗೆ ಮಾತ್ರ ಇದೆ. ಆದರೂ ತನು ನಾದವನ್ನು ಶಬ್ದವನ್ನು ವಿಪರೀತವಾಗಿ ತಿಳಿದು ಸುಖದಿಂದ ಅರಳುತ್ತದೆ ಇಲ್ಲ ದುಃಖದಿಂದ ಕೆರಳುತ್ತದೆ. ಅರಳದೆ ಕೆರಳದೆ ಅರಿವಿನಿಂದ ಕೇಳುವ ಶಕ್ತಿ ಬಳಕೆಯಾಗದೆ ತನುವಿನಲ್ಲಿ ಹಾಗೆ ಉಳಿದು ಅದು ಒಮ್ಮೆ ಇಲ್ಲವಾಗುತ್ತದೆ. ಈ ರಹಸ್ಯವನ್ನು ಬಸವಣ್ಣನವರು ಜಗತ್ತಿನ ತನುಗಳಿಗೆ ತಿಳಿಯಲೆಂದು ಈ ಕೆಳಗಿನಂತೆ ಹೇಳಿದ್ದಾರೆ .

ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲವಯ್ಯಾ .

ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲವಯ್ಯಾ , ನಾದವ ಮಾಡಿದ ರಾವಣಂಗೆ ಅರೆ ಆಯುಷ್ಯವಾಯಿತ್ತು .ವೇದವ ನೋದಿದ ಬ್ರಹ್ಮನ ಶಿರ ಹೋಯಿತ್ತು . ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ, ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ.

ಶಿವನೆಂದರೆ ಕೈಲಾಸದಲ್ಲಿರುವ ಕಲ್ಪನೆಯ ಶಿವನಲ್ಲ . ಕಲ್ಪನೆಯ ಪಾರ್ವತಿಯೂ ಅಲ್ಲ. ಅಂಥವರು ಯಾರೂ ಇಲ್ಲವೇ ಇಲ್ಲ. ಅಂಗದಲ್ಲಿ ಸಂಗಮವಾದ ಅರಿವೇ ಶಿವ ! ಅಂಗವನ್ನು ಆವರಿಸಿರುವ ಮನವೇ ಪಾರ್ವತಿ ! ಗುರುದೇವೋ ಮಹಾದೇವೋ, ಗುರುದೇವೋ ಸದಾ ಶಿವಃ, ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರುವೇ ನಮಃ. ತನ್ನ ಅರಿವೇ ತನಗೆ ಗುರು. ಆ ಅರಿವು

ಗುರುದೇವನೂ ಹೌದು ಮಹಾದೇವನೂ ಹೌದು ಸದಾಶಿವನೂ ಹೌದು ; ಸಾಕ್ಷಾತ್ ಪರಬ್ರಹ್ಮನೂ ಹೌದು. ಅಂಗದ ಅರಿವು ಅಂಗಕ್ಕೆ ಬಳಕೆಯಾಗದ ನಿಮಿತ್ತ ಅಂಗವನ್ನು ಆವರಿಸಿದ ಮನಸ್ಸು ನಾದ ಮತ್ತು ವೇದ ರೂಪದ ಶಬ್ದ ಕೇಳುತ್ತಿರುವುದರಿಂದ ಸುಖದಿಂದ ದೇಹ ಅರಳುತ್ತದೆ. ದುಃಖದಿಂದ ದೇಹ ಕೆರಳುತ್ತದೆ. ಸಹಜವಾಗಿ ನಾದ ಮತ್ತು ಶಬ್ದ ಕೇಳಿದರೆ ಅದು ಅಂಗವನ್ನು ಕೆರಳಿಸುವುದಿಲ್ಲ, ಅರಳಿಸುವುದಿಲ್ಲ ಬದಲಾಗಿ ಅರಿವಾಗುತ್ತದೆ.

ಅಂಗದಲ್ಲಿ ಸಂಗಮವಾದ ಅರಿವೆಂಬ ಶಿವನು ನಾದಪ್ರಿಯನೂ ಅಲ್ಲ, ವೇದ ಪ್ರಿಯನೂ ಅಲ್ಲ ವೇದ ಮತ್ತು ನಾದಕ್ಕೆ ಒಳಗಾದದ್ದು ಮನಸ್ಸು. ಅದು ಅಂಗದಲ್ಲಿ ಸಂಗಮವಾದ ಶಿವ (ಅರಿವು)ನನ್ನು ಮರೆತಿರುವುದರಿಂದ ವೇದಕ್ಕೂ ನಾದಕ್ಕೂ ಒಳಗಾಗಿದೆ ; ಬಲಿಯಾಗಿದೆ.

ಆಲಾಪದ ಸೊಬಗಿಗೂ, ಘಂಟಾವಾದನಕ್ಕೂ ಇನ್ನಾವ ಸೊಬಗಿಗೂ ಒಳಗಾಗದ್ದರಿಂದ ಎನಗೆ ಇನ್ನಾವುದೂ ಇಲ್ಲ. ನಾದ ಮತ್ತು ವೇದ ಹುಟ್ಟಿದ್ದು ತನುವಿನಿಂದಲೇ ಎಂದು ತನುವನ್ನು ಆವರಿಸಿರುವ ಮನಕ್ಕೆ ಗೊತ್ತಾದರೆ ಸಾಕು ಅದನ್ನು ಸಹಜ ಅರಿವಿನಿಂದ ಅರಳದೆ ಕೆರಳದೆ ಕೇಳುತ್ತದೆ. ತನುವಿನ ಈ ಶಿವ ರಹಸ್ಯ ತನುವನ್ನು ಆವರಿಸಿದ ಮನಕ್ಕೆ ಗೊತ್ತಾಗಬೇಕು.

**51**

**ಈರೇಳು ಭುವನವನೊಳಕೊಂಡ ಮಹಾಘನಲಿಂಗವು**
**ಶಿವಭಕ್ತನ ಕರಸ್ಥಲದಾಯಕ್ಕೆ ಬಂದು, ಪೂಜೆಗೊಂಬ ಪರಿಯ ನೋಡ !**
**ಅಪ್ರಮಾಣ-ಅಗೋಚರವಾದ ಲಿಂಗದಲ್ಲಿ ಸಂಗವ ಬಲ್ಲಾತನೆ**
**ಸದಾಚಾರಸದ್ಭಕ್ತನು !**
**ಹೀಂಗಲ್ಲದೆ ಹಣವಿನಾಸೆಗೆ ಹಂಗಿಗನಾಗಿ,**
**ಜಿಹ್ವಾಲಂಪಟಕ್ಕೆ ಅನಾಚಾರದಲ್ಲಿ ಉದರವ ಹೊರದು ಬದುಕುವಂಥ**
**ಭಂಡರು ಭಕ್ತರಾದವರುಂಟೆ ? ಹೇಳ !**
**ಅಂಥ ಅನಾಚಾರಿ ಶಿವದ್ರೋಹಿಗಳ ಮುಖವ ನೋಡಲಾಗದು ! ಅದೆಂತೆಂದಡೆ :**
**ಕತ್ತೆ ಭಕ್ತನಾದಡೆ ಕಿಸುಕುಳವ ತಿಂಬುದ ಮಾಣ್ಬುದೆ ?**
**ಹಂದಿ ಭಕ್ತನಾದಡೆ ಹಡಿಕೆಯ ತಿಂಬುದ ಮಾಣ್ಬುದೆ ?**
**ಬೆಕ್ಕು ಭಕ್ತನಾದಡೆ ಇಲಿಯ ತಿಂಬುದ ಮಾಣ್ಬುದೆ ?**
**ಸುನಕಗೆ ಪಂಚಾಮೃತವ ನೀಡಲು ಅಡಗ ತಿಂಬುದ ಮಾಣ್ಬುದೆ ?**
**ಇಂತೀ ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಮರಳಿ ತನ್ನ ಜಾತಿಯ ಕೂಡಿದಡೆ**
**ಆ ಕತ್ತೆ-ಹಂದಿ-ಬೆಕ್ಕು-ಸುನಕಗಿಂದತ್ತತ್ತ ಕಡೆ ಕಾಣಿರೊ !**
**ಹೊನ್ನ ಬೆಟ್ಟವನೇರಿ ಕಣ್ಣು ಕಾಣದಿಪ್ಪಂತೆ,**
**ಗಣೆಯನೇರಿದ ಡೊಂಬ ಮೈಮರದಿಪ್ಪಂತೆ,**
**ಅಂಕವನೇರಿದ ಬಂಟ ಕೈಮರದಿಪ್ಪಂತೆ ! ಇಂತಿವರು ಮಾಡುವ ಭಕ್ತಿಯೆಲ್ಲವು**
**ನಡುನೀರೊಳು ಹೋಗುವ ಹರುಗೋಲು**
**ಹೊಡಗೆಡದಂತಾಯಿತ್ತೆಂದಾತನಂಬಿಗರ ಚೌಡಯ್ಯನು !**

ಜಗದ ಅಂಗಗಳಲೆಲ್ಲ ಲಿಂಗವೇ ಸಂಗಮವಾಗಿದೆ. ಅಂತಹ ಮಹಾಘನಲಿಂಗವೆಂಬ ಅರಿವು

ಭಕ್ತಿ ಮಾಡಿದ ಭಕ್ತನ ಅಂಗಕ್ಕೆ ಬಂದು ಪೂಜೆಗೊಳ್ಳುತ್ತದೆ. ಜ್ಞಾನವೆಂಬುದು ಅಂಗದಲ್ಲಿ ಸಂಗಮವಾಗಿದೆ. ಅಂಗವನ್ನು ಆವರಿಸಿದ ಮನದಿಂದ ಭಕ್ತಿ ಮಾಡುವುದು ಜಗದ ಅಂಗಗಳಿಗೆಲ್ಲ ಸಾಧ್ಯವಾಗುವುದಿಲ್ಲ. ಹೀಗೆ ಸಾಧ್ಯವಾದ ಅಂಗ ಅದು ಬರೀ ಅಂಗವಲ್ಲ ; ಮಹಾಲಿಂಗ ! ಅದು ಜಗದಗಲ, ಮುಗಿಲಗಲ. ಮಿಗೆಯಗಲವಿರುವ ಲಿಂಗವೆಂಬ ಮಹಾಜ್ಞಾನವು ಅಂಗದಗಲದಲ್ಲಿ ಬಂದು ಚುಳುಕಾಗಿದೆ. ಅದನ್ನು ಯಾರೂ ಪ್ರಮಾಣಿಸುವಂತಿಲ್ಲ. ಅದು ಯಾರ ಗೋಚರಕ್ಕೂ ಬರುವಂಥದ್ದಲ್ಲ. ಮಹಾಲಿಂಗವೆಂಬ ಜ್ಞಾನದ ಸಂಗವ ಬಲ್ಲಾತನೆ ಬಲ್ಲ ! ಆತನು ಸದಾಚಾರಿಯೂ ಹೌದು ; ಅಗೋಚರದ ಆಚಾರಿಯೂ ಹೌದು. ಏಕೆಂದರೆ ಜ್ಞಾನಿಯ ಆಚಾರ ಯಾರ ಗೋಚರಕ್ಕೂ ಬರುವುದಿಲ್ಲ.

ಲೋಕದ ಜನ ಆಲಯ ಮಸೀದಿ ಚರ್ಚ್‌ಗಳಿಗೆ ಹೋಗಿ, ಪೂಜಿಸಿ-ಪ್ರಾರ್ಥಿಸುತ್ತಾರೆ. ಈ ಆಚಾರ ಲೋಕದ ಗಮನಕ್ಕೆ ಬರುತ್ತದೆ. ಇವರು ಅಂಗದಲ್ಲಿ ಸಂಗಮವಾದ ಜ್ಞಾನವನ್ನು ಅರಿಯರು. ಪ್ರಾರ್ಥಿಸಿದರೇನು, ಪೂಜಿಸಿದರೇನು ? ಮನ ಅಂಗದೊಂದಿಗೆ ಮಾಡುವ ಹಾದರ ತೊಲಗದು. ಅಂಗ ನೋಡಿ ಕಾಮುಕರಾಗಿ, ಭೋಗದ ಲಾಲಸೆಯಿಂದ ಮನದಲ್ಲಿ ಹಾದರ ಮಾಡುತ್ತಾರೆ. ಕಿವಿಯಿಂದ ಕೇಳಿ ಕೆಂಡಾಮಂಡಲವಾಗುತ್ತಾರೆ. ಸ್ಪರ್ಶಿಸಿ ಭೋಗಕ್ಕೆಳೆಸುತ್ತಾರೆ. ಪೂಜಿಸಿ-ಪ್ರಾರ್ಥಿಸಿದರೂ ಅಂಗದ ಮಂಗ ಬುದ್ಧಿ ತೊಲಗುವುದಿಲ್ಲ. ಪ್ರಾರ್ಥಿಸಿ-ಪೂಜಿಸುವುದೂ ಬಿಡುವುದಿಲ್ಲ ; ಅಂಗದೊಂದಿಗೆ ಹಾದರ ಮಾಡುವುದನ್ನೂ ಬಿಡುವುದಿಲ್ಲ. ಇದು ಜಗದ ಜನರ ದಿನಚರಿ.

ಜ್ಞಾನಿ ಹಾಗಲ್ಲ. ಆತ ಚರ್ಚ್-ಮಸೀದಿ-ಆಲಯಗಳಿಗೆ ಹೋಗಿ ಪೂಜಿಸಿ ಪ್ರಾರ್ಥಿಸುವುದಿಲ್ಲ. ಬದಲಾಗಿ ಅಂಗವನ್ನು ನೋಡಿ ಅದರಲ್ಲಿ ಸಂಗಮವಾದ ಮಹಾಲಿಂಗವನ್ನು ನೋಡಿ ಆ ಲಿಂಗಕ್ಕೆ ವಂದಿಸುತ್ತಾನೆ. ಪ್ರತಿ ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನನ್ನು ಆರಾಧಿಸುತ್ತಾನೆ. ಆಲಯ-ಮಸೀದಿ- ಚರ್ಚ್‌ಗಳಿಗೆ ಬಳಸಿರುವ ಕಲ್ಲು ಒಂದೇ ; ಕಲ್ಲನ್ನು ನೋಡಿದ ಕಣ್ಣು ಪೂಜಿಸಲು ಅಂಗಕ್ಕೆ ಆದೇಶ ನೀಡುವುದಿಲ್ಲ. ಹಾಗೆಯೇ ಜ್ಞಾನಿ.ಆತನಿಗೆ ಚರ್ಚ್-ಮಸೀದಿ-ಆಲಯಗಳೊಂದೆ ! ಕಲ್ಲನ್ನು ನೋಡಿದ ಕಲ್ಲೆಂದು ತಿಳಿದ ! ಹೀಗೆ ತಿಳಿದ ಜ್ಞಾನಿಯ ಅಂಗ ಮುಸಲ್ಮಾನನಾಗಲಿಲ್ಲ. ಕ್ರಿಶ್ಚನ್ ಆಗಲಿಲ್ಲ-ಹಿಂದೂ ಆಗಲಿಲ್ಲ.

ಸಕಲ ಅಂಗಗಳಲ್ಲಿ ಭರಿತವಾದ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಒಂದೇ. ಇವು ಸೋರದಂತೆ ಸುಂದರವಾಗಿ ಪ್ಯಾಕ್ ಮಾಡಲ್ಪಟ್ಟ ಚರ್ಮ ಒಂದೇ. ಇಂಥ ಅಂಗಗಳಲ್ಲಿ ಮೂಡಿದ ಕಣ್ಣು ಕಿವಿ ಮೂಗು ನಾಲಿಗೆ ಒಂದೇ ! ಇವುಗಳನ್ನು ಮುಸಲ್ಮಾನ-ಹಿಂದೂ-ಕ್ರಿಶ್ಚಿಯನ್ ಎನ್ನಲು ಬರುತ್ತದೆಯೆ ? ಹಾಗೆ ಅಂದು ಕೊಂಡ ಅಂಗಗಳು ಎಷ್ಟು ಬಾರಿ ಪೂಜಿಸಿದರೇನು ? ಎಷ್ಟು ಬಾರಿ ಪ್ರಾರ್ಥಿಸಿದರೇನು ? ಅವುಗಳ ಮನಸ್ಥಿತಿ ಸುಧಾರಿಸಿಕೊಳ್ಳಲು ಸಾಧ್ಯವಾಗುವುದೆ ?

ಆಲಯ ಮಸೀದಿ ಚರ್ಚ್ ಕಟ್ಟಿಸಿದ ಅಂಗಕ್ಕೆ ಪುಣ್ಯ ಬರುವುದೆ? ಅಂಗವನ್ನು ಅಂಗವೆಂದು ಅದು ಮಹಾಜ್ಞಾನವುಳ್ಳ ಶಿವನಿದ್ದ ಶಿವಾಲಯವೆಂದು ತಿಳಿಯದ ಅಂಗವನ್ನು ಅಂಗವೆನ್ನಲು ಸಾಧ್ಯವೆ ? ಅಂಗ ಈ ದೇಶದ್ದಾದರೇನು ? ಅನ್ಯ ದೇಶದ್ದಾದರೇನು ? ಅದರ ನೋಡುವ ನೋಟ, ಕೇಳುವ ಶಬ್ದ, ಮುಟ್ಟುವ ಸ್ಪರ್ಶ, ರುಚಿಸುವ ರುಚಿ, ವಾಸಿಸುವ ಪರಿಮಳ ಒಂದೇ ಅಲ್ಲವೆ ? ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳಿಂದ ನೋಡುವ ಅಂಗವನ್ನು ಅಂಗವೆನ್ನಲು ಸಾಧ್ಯವೆ ? ಕ್ರಿಸ್ತ ಕ್ರಿಷ್ಣ ಪೈಗಂಬರರು ಅದನ್ನು ಮಂಗವೆಂದು ಕರೆದರು, ಸೈತಾನನೆಂದು ಕರೆದರು, ರಾಕ್ಷಸ ಎಂದು ಕರೆದರು. ಅಂಬಿಗರ ಚೌಡಯ್ಯ ಶರಣರು ಅಂಥವರನ್ನು '' ಜಿಹ್ವಾಲಂಪಟಕ್ಕಾಗಿ ಅನಾಚಾರದಿಂದ ಹೊಟ್ಟೆಗಾಗಿ ಬದುಕುವ ಭಂಡರು '' ಎಂದು ಕರೆದರು. ಇಂಥವರು ಭಕ್ತರಾಗಲು ಸಾಧ್ಯವೆ ?

ತಮ್ಮ ಜ್ಞಾನಕ್ಕೆ ತಾವೇ ಭಕ್ತಿ ಮಾಡಿ ಜ್ಞಾನಿಗಳಾಗಲು ಸಾಧ್ಯವೆ ಎಂದು ಪ್ರಶ್ನಿಸಿದ್ದಾರೆ.

ಅನಾಚಾರಿ ಶಿವದ್ರೋಹಿಗಳ ಮುಖವ ನೋಡಲಾಗದು ! ಅದೆಂತೆಂದಡೆ : ಕತ್ತೆ ಭಕ್ತನಾದಡೆ ಕಿಸುಕುಳವ ತಿಂಬುದ ಮಾಂಬುದೆ ? ಹಂದಿ ಭಕ್ತನಾದಡೆ ಹಡಿಕೆಯ ತಿಂಬುದ ಮಾಂಬುದೆ ? ಬೆಕ್ಕು ಭಕ್ತನಾದಡೆ ಇಲಿಯ ತಿಂಬುದ ಮಾಂಬುದೆ ? ಸುನಕಗೆ ಪಂಚಾಮೃತವ ನೀಡಲು ಅಡಗ ತಿಂಬುದ ಮಾಂಬುದೆ ಎಂದು ಪ್ರಶ್ನಿಸುತ್ತಾರೆ.

ಹಿಂದು ಮುಸಲ್ಮಾನ ಕ್ರಿಶ್ಚಿಯನ್ ಆದರೇನು ? ಅವರೆಲ್ಲ ಅರಿವಿನ ಹೊನ್ನ ಬೆಟ್ಟವನು ಏರಿದವರು. ಆದರೂ ಕಣ್ಣು ಕಾಣದಂತೆ ಇರುವರು. ಅರಿವಿನ ಹೊನ್ನ ಗಣೆಯನ್ನು ಏರಿ ಮೈಮರೆತಿರುವರು. ಯುದ್ಧದಲ್ಲಿ ಮೈಮರೆತ ಯೋಧ ಸಾಯುವೆನಲ್ಲ ಎಂಬುದನ್ನೆ ಮರೆತಂತೆ ; ಅಜ್ಞಾನಕ್ಕೆ ಜಗದ ಅಂಗಗಳೆಲ್ಲ ಬಲಿಯಾಗಿವೆ. ಇಂಥವರು ಮಾಡುವ ಭಕ್ತಿಯೆಲ್ಲವೂ ನಡು ನೀರೊಳಗೆ ಹೋಗುವ ಹರಗೋಲಿಗೆ ತೂತು ಬಿದ್ದಂತಾಯಿತು. ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**52**

**ಈಶಲಾಂಛನವ ತೊಟ್ಟು ಮನ್ಮಥ ವೇಷ ಲಾಂಛನವ ತೊಡಲೇತಕ್ಕೆ ?**
**ಇದು ನಿಮ್ಮ ನುಡಿ ನಡೆಗೆ ನಾಚಿಕೆಯಲ್ಲವೆ ?**
**ಅಂದಳ, ಛತ್ರ , ಆಭರಣ, ಕರಿತುರಗಂಗಳ ಗೊಂದಣವೇತಕ್ಕೆ ?**
**ಅದು ಘನಲಿಂಗದ ಮೆಚ್ಚಲ್ಲ, ಎಂದನಂಬಿಗ ಚೌಡಯ್ಯ.**

ಅಂಗವೆಂಬುದು ಅರಿವಿನ ಲಿಂಗದ ಲಾಂಛನ. ಈಶ ಲಾಂಛನ. ಶಿವ ಲಾಂಛನ ! ಅದು ತನ್ನದಾದರೇನು, ಇತರರದಾದರೇನು ? ಅಂಗಗಳೆಲ್ಲ ಲಿಂಗಾಂಗಗಳೇ ಆಗಿವೆ. ಅದು ಲಿಂಗವೆಂದು ತಿಳಿಯದ ಕಾರಣ ಅಂಗ ಮಂಗದಂತೆ ಅಂಗವನ್ನೇ ಮನ್ಮಥ ಲಾಂಛನ ಮಾಡಿಕೊಂಡಿದೆ. ಹೀಗಾಗಿ ಅಂಗ ಮತ್ತೊಂದು ಅಂಗವನ್ನು ಅಕ್ಕ ತಂಗಿ ಅಣ್ಣ ತಮ್ಮ ಎಂದು ನುಡಿಯುತ್ತಾ ನುಡಿದಂತೆ ನಡೆಯದೆ ಮನದೊಂದಿಗೆ ಮನ್ಮಥನ ಆಟ ಆಡುತ್ತಾ ಕಾಮದಿಂದ ಮೈಮರೆಯುತ್ತದೆ. ಸಂಬಂಧಗಳು ಕಳಚಿ ಬಿದ್ದು , ನುಡಿದಂತೆ ನಡೆಯದೆ, ಹಾದರದೊಂದಿಗೆ ಅಂಗ ಸುಖಿಸುತ್ತದೆ. ಲಿಂಗಾಂಗವೇ ಆಗಬೇಕಾದ ಅಂಗ ಭೋಗಾಂಗವಾಗುತ್ತದೆ.

ಅಕ್ಕ ತಂಗಿ ಎಂದು ನುಡಿದು ನುಡಿದಂತೆ ನಡೆಯದೆ ಮನ ಹಾದರ ಮಾಡುತ್ತದೆ. ನುಡಿದ ನುಡಿ, ನುಡಿದಂತೆ ನಡೆಯಲಾಗದ ನಡೆ ಇವೆರಡು ಈಶ ಲಾಂಛನದಲ್ಲಿಯೇ ಸಂಗ್ರಹವಾಗಿ ನೆನಪಾದಾಗಲೆಲ್ಲ ಪಾಪಪ್ರಜ್ಞೆ ಹಾವಿನಂತೆ ಅಂಗವನ್ನೇ ಕಚ್ಚಿ ಕಚ್ಚಿ ಅಂಗವನ್ನು ಸಾಯುವಂತೆ ಮಾಡುತ್ತದೆ. ನುಡಿದದ್ದೂ ತಾನೇ ; ನುಡಿದಂತೆ ನಡೆಯದ್ದು ತಾನೇ. ಏನಿದು ಮೋಸ ! ತನ್ನನ್ನು ತಾನೇ ಮೋಸ ಮಾಡಿಕೊಳ್ಳುವುದೇ ಅಂಗದ ಸುಖಕ್ಕಾಗಿ ಲಿಂಗವೆಂಬ ಘಟ ಸರ್ಪದೊಂದಿಗೆ ಕಚ್ಚಿಸಿಕೊಳ್ಳುತ್ತದೆ.

'ನುಡಿದಂತೆ ನಡೆಯದಿರ್ದೊಡೆ ಹಿಡಿದಿರ್ಪ ಲಿಂಗ ಘಟಸರ್ಪ ಕಾಣಾ ಕೂಡಲ ಸಂಗಮದೇವಾ ' ನುಡಿಯುವಾಗ ಬಲುಸುಖ. ನುಡಿದಂತೆ ನಡೆಯದೆ ಇದ್ದಾಗಲೂ ಬಲು ಸುಖ. ಇವೆರಡೂ ಘಟನೆಗಳು ಅಂಗದಲ್ಲಿಯೇ ಉಳಿದು ನೆನಪಾದಾಗೊಮ್ಮೆ ಏಕೆ ನುಡಿದೆ ಎಂದು; ನುಡಿದಂತೆ ಏಕೆ ನಡೆಯಲಿಲ್ಲವೆಂದು ಭೋಗದಲ್ಲಿ ಮೈಮರೆತ ಅಂಗವನ್ನು ಅಂಗದಲ್ಲಿಯೇ

ಸಂಗಮವಾದ ಲಿಂಗಯ್ಯನೇ ಘಟಸರ್ಪವಾಗಿ ಕಚ್ಚುತ್ತಾನೆ.

ಅಂಗದಲ್ಲಿ ಸಂಗಮವಾದ ಅರಿವಿನ ಸುಖದ ಮುಂದೆ ಅಂದಳ ಛತ್ರ ಆಭರಣ ಕರಿ ತುರಗಂಗಳು ತೃಣ. ಹೀಗಾಗಿಯೇ ಸಿದ್ಧಾರ್ಥ ಬುದ್ಧನಾದ. ವರ್ಧಮಾನ ಮಹಾವೀರನಾದ. ಇವರಿಗೆ ಇವರ ರಾಜ್ಯದ ಸಂಪತ್ತು ತೃಣವಾಯಿತು. ಇವರ ಲಿಂಗಾಂಗದ ಸುಖವೇ ಘನಲಿಂಗವಾಯಿತು.

53

**ಈಶ್ವರನ ಕಾಬುದೊಂದಾಸೆಯುಳ್ಳೊಡೆ ಪರದೇಶಕ್ಕೆ ಹೋಗಿ ಬಳಲದಿರು,**
**ಕಾಶಿಯಲ್ಲಿ ಕಾಯವ ವಿನಾಶವ ಮಾಡಲುಬೇಡ.**
**ನಿನ್ನಲ್ಲಿ ನೀ ತಿಳಿದು ನೋಡಾ,**
**ಸರ್ವೇಶ ಮುಳ್ಳಗುತ್ತ ತೆರಹಿಲ್ಲೆಂದಡೆ, ಒಂದು ಗೋಂಟ ಸಾರಿರ್ದನೆ ?**
**ಎಂದನಂಬಿಗ ಚೌಡಯ್ಯನು.**

ಕಾಶಿಯಲ್ಲಿ ವಿಶ್ವನಾಥನಿಲ್ಲ. ಶ್ರೀಶೈಲದಲ್ಲಿ ಮಲ್ಲಿಕಾರ್ಜುನನಿಲ್ಲ. ದೇವನನ್ನು ಕಾಣುವ ಆಶೆಯಿಂದ ದೇಶ ತಿರುಗಬೇಕಿಲ್ಲ. ದೇಹದಲ್ಲಿಯೇ ದೇವನಿದ್ದಾನೆ. ದೇಶವೆಂದರೆ ಬಯಲು. ದೇಹವೆಂದರೂ ಬಯಲು. ದೇಹದ ಒಳ ಹೊರಗೂ ದೇವನೆಂಬ ಬಯಲೇ ಭರಿತವಾಗಿದೆ. ಕಾಯವನ್ನು ಸುಟ್ಟು ಬೂದಿ ಮಾಡಲು ಕಾಶಿಯನ್ನೇ ಆಯ್ಕೆ ಮಾಡಬೇಡ. ಅಲ್ಲಿ ಸುಟ್ಟರೆ ಪುಣ್ಯವೆಂದು ತಿಳಿಯಬೇಡ. ಕಾಯವಿದ್ದಾಗಲೇ ಕಾಯವನ್ನೂ ಕೈಲಾಸ ಪತಿಯನ್ನು ಒಮ್ಮೆ ನೀನು ತಿಳಿದು ನೋಡು. ಅಲ್ಲಿಯೇ ಈಶನಿದ್ದಾನೆ. ಜಗವನ್ನು ಹೊತ್ತ ಜಗದೀಶನಿದ್ದಾನೆ.

ಮುಳ್ಳುಗುತ್ತುವಡೆ ತೆರಹಿಲ್ಲದ ಘನ. ಮುಳ್ಳಿನ ಮೊನೆ ಇಡಲೂ ಸಂದಿಲ್ಲದಂತೆ ಅಂಗದ ಕಣ ಕಣದಲ್ಲಿ ಸಂಗಯ್ಯನು ಸಂಗಮವಾಗಿದ್ದಾನೆ. ಅಂಗವನ್ನು ಆವರಿಸಿದ ಮನದಿಂದಲೇ ಅಂಗದಲ್ಲಿ ಸಂಗಮವಾದ ಸಂಗಯ್ಯನನ್ನು ಒಮ್ಮೆ ನೋಡು. ನೋಡುವ ನೀನು ನೋಡಲ್ಪಡುವ ಆತ ಒಂದೇ ಆಗಿ ಕಾಣುವಿ. ಸಾಯುವ ಮುನ್ನ ಸತ್ತಹಾಗೆ ಇರುವ ಸಂಪತ್ತು ಆತನಿಂದ ನಿನಗೆ ಲಭ್ಯವಾಗುತ್ತದೆ.

ಸಾಯುವ ಮುನ್ನ ಸತ್ತಹಾಗೆ ಇರುವುದು ಸಹಜ ಕೆಲಸವಲ್ಲ. ಆ ಕೆಲಸವನ್ನು ನೈಪುಣ್ಯತೆಯಿಂದ ಮಾಡಿಕೊಂಡವನಿಗೆ ಮಾತ್ರ ಹೊಳೆಯುತ್ತದೆ.

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ದೇವರು ಕಾಯ ಇಲ್ಲವಾಗುವ ಮುನ್ನ ಕಾಯದಲ್ಲಿಯೇ ಕಾಣುತ್ತಾನೆ. ಆಗ ಕಾಶಿ ಶ್ರೀಶೈಲಗಳಿಲ್ಲ, ಕೇದಾರ ಗೋಕರ್ಣಗಳಿಲ್ಲ. ಕಾಯವೇ ಕಾಶೀ ಕ್ಷೇತ್ರವಾಗುತ್ತದೆ. ಅದರಲ್ಲಿ ಭರಿತವಾದ ವಿಶ್ವನಾಥನೇ ಆರಾಧ್ಯ ದೈವನಾಗುತ್ತಾನೆ.

54

**ಉಂಡರೆ ಭೂತನೆಂಬರು,**
**ಉಣದಿದ್ದರೆ ಚಕೋರನೆಂಬರು,**
**ಭೋಗಿಸಿದರೆ ಕಾಮಿಯೆಂಬರು,**
**ಭೋಗಿಸದಿದ್ದರೆ ಮುನ್ನ ಮಾಡಿದ ಕರ್ಮಿ ಎಂಬರು.**
**ಊರೊಳಗಿದ್ದರೆ ಸಂಸಾರಿ ಎಂಬರು,**

**ಅಡವಿಯೊಳಗಿದ್ದರೆ ಮೃಗಜಾತಿ ಎಂಬರು,**
**ನಿದ್ರೆಗೈದರೆ ಜಡದೇಹಿ ಎಂಬರು,**
**ಎದ್ದಿದ್ದರೆ ಚಕೋರನೆಂಬರು.**
**ಇಂತೀ ಜನಮೆಚ್ಚಿ ನಡೆದವರ**
**ಎಡದಪಾದ ಕಿರಿ ಕಿರುಗುಣಿಯಲ್ಲಿ ಮನೆ ಮಾಡು, ಮನೆ ಮಾಡು**
**ಎಂದಾತ ನಮ್ಮ ಅಂಬಿಗರ ಚೌಡಯ್ಯ.**

ಉಂಡರೆ ಒಂದು ; ಉಣದಿದ್ದರೆ ಒಂದು ; ಭೋಗಿಸಿದರೆ ಒಂದು ; ಭೋಗಿಸದಿದ್ದರೆ ಒಂದು ; ಊರೊಳಗಿದ್ದರೆ ಒಂದು ; ಅಡವಿಯೊಳಗಿದ್ದರೆ ಒಂದು. ನಿದ್ರೆಗೈದರೆ ಒಂದು ; ಎದ್ದಿದ್ದರೆ ಒಂದು ಎನ್ನುವ ಜನರ ಬಾಯಿ ಮುಚ್ಚಿಸಲು ಸಾಧ್ಯವೆ ? ಏನು ಅವರಂತೆ ನಡೆಯಲು ಸಾಧ್ಯವೆ ? ಹೇಗಿದ್ದರೂ ಲೋಪವನ್ನೇ ಹೇಳುವ ಜನರ ಸಂಪೂರ್ಣ ಮೆಚ್ಚುಗೆ ಅಸಾಧ್ಯ .

ಮನಕ್ಕೆ ಬಯಕೆಯಾದಂತೆ ನಡೆಯುವುದು ; ಜನಕ್ಕೆ ಬೇಕಾದಂತೆ ನಡೆಯುವುದು ಇವೆರಡೂ ತಾನೇ ಮಾಡುವ ತಪ್ಪುಗಳು ; ಅಪರಾಧಗಳು. ಜನ ಮೆಚ್ಚುವಂತೆ ನಡೆದರೆ ಜನಾರ್ಧನ ಮೆಚ್ಚುವುದಿಲ್ಲ. ಮನ ಮೆಚ್ಚುವಂತೆ ನಡೆದರೆ ಮಹಾದೇವನಿಗೆ ಒಪ್ಪಿಗೆಯಿಲ್ಲ. ಇವೆರಡೂ ಮಾಡುವ ಮುನ್ನ ಅನುಭವದ ಒರೆಗಲ್ಲಿಗೆ ಹಾಕಿ ತನ್ನನ್ನು ತಾನೆ ತಿಕ್ಕಿಕೊಳ್ಳಬೇಕು.

ಮನ-ಜನ ಮೆಚ್ಚುವ ಸುಖಗಳು ತನುವಿಗೆ ದುಃಖವನ್ನುಂಟು ಮಾಡುತ್ತವೆ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ಮಾತು ಶಾಶ್ವತ ಸುಖವನ್ನುಂಟು ಮಾಡುತ್ತದೆ. ಹೊರಗಿನಿಂದುಂಟಾಗುವ ಸುಖವನ್ನು ದುಃಖವನ್ನು ನೀವಾಳಿಸಿ ಒಗೆಯುತ್ತದೆ.

ಜನ ಮೆಚ್ಚಿ ನಡೆದವರ, ಮನಮೆಚ್ಚಿ ನಡೆದವರನ್ನು ಒಮ್ಮೆ ಅನುಭವದಿಂದ ನೋಡು. ಅಂಗದಲ್ಲಿ ಸಂಗಮವಾದ ಲಿಂಗಯ್ಯನಿಂದ ಒಡಮೂಡಿದ ಮಾತಲ್ಲದ ಮಾತನ್ನು ಕೇಳು.ಅದು ಮನದ ಮಾತಲ್ಲ ; ಮಹಾದೇವನ ಮಾತು. ಅದು ಜನದ ಮಾತಲ್ಲ ಜನಾರ್ಧನನ ಮಾತು. ತನ್ನ ಅನುಭವದಿಂದ ಬಂದ ತನ್ನ ಮಾತು !

55

**ಉಡುವಿನ ಕಣ್ಣು, ಪಡಿಯ ಅಡಿ, ಕೀಚಕನ ಮುಟ್ಟು ,**
**ಘಾತಕನ ಸ್ನೇಹ, ವೇಸಿಯ ಮೋಹದ ಆಸೆ,**
**ಸುಜಾತಿಯಲ್ಲದವನ ಕೊಳುಕೊಡೆ, ನಿರಾಸೆಯಲ್ಲದವನ ಮಾತಿನ ಮಾಲೆ**
**ಅದೇತಕ್ಕೆ ಬಾತೆಯೆಂದನಂಬಿಗ ಚೌಡಯ್ಯ.**

ನೋಡಿದ್ದನ್ನೆಲ್ಲ ಬೇಡುವ ಕಣ್ಣನ್ನು ಕಣ್ಣೆನ್ನಬಹುದೆ ? ಅದು ಕಣ್ಣಲ್ಲ ಉಡುವಿನ ಕಣ್ಣು. ದೃಷ್ಟಿ ನೆಟ್ಟ ವಸ್ತುವನ್ನು ಬೇಡಿದ ಕಣ್ಣು. ಕಾಮದ ಕಣ್ಣು. ಬೆಳಕಿನ ಗುಣ ಬೆಳಗುವುದು ಮಾತ್ರ . ಬೆಳಕು ಬೆಳಗಿದ ವಸ್ತುವನ್ನು ಹಿಡಿಯುವುದಿಲ್ಲ; ಬೇಡುವುದಿಲ್ಲ. ಬೆಳಗುತ್ತದೆ. ಹಾಗೆಯೇ ಕಣ್ಣಿನಲ್ಲಿ ಅರಿವಿನ ಬೆಳಕಿದೆ. ಬೆಳಕಿನ ಜೊತೆಗೆ ಅರಿವೂ ಪ್ರಸಾರವಾಗುತ್ತದೆ. ನೋಡಿದ್ದನ್ನೆಲ್ಲ ಬೇಡುವ ಕಣ್ಣಿನಲ್ಲಿ ಅರಿವು ಪ್ರಸಾರವಾಗದೆ ಕಣ್ಣಿನಲ್ಲಿಯೇ ಉಳಿಯುತ್ತದೆ. ದೃಶ್ಯದ ಜೊತೆಗೆ ಬೇಡುವ ಅಜ್ಞಾನ ಪ್ರಸಾರವಾಗುತ್ತದೆ. ಹೀಗಾಗಿ ನೋಡಿದ್ದನ್ನೆಲ್ಲ ಬೇಡುವ ಕಣ್ಣನ್ನು ಕಣ್ಣೆಂದು ಕರೆಯಲಿಲ್ಲ. ಅದನ್ನು

ಉಡುವಿನ ಕಣ್ಣು ಎಂದು ಕರೆದರು. ಈ ಕಣ್ಣು ಕಾಣುತ್ತದೆ. ಆದರೆ ವಸ್ತುವಿನ ಸತ್ಯ ಕಾಣುವುದಿಲ್ಲ. ಹೀಗಾಗಿ ಕಂಡರೂ ಕೂಡಾ ಕುರುಡುಗಣ್ಣು ಇದು. ಹಗಲು ಕುರುಡು ಕಣ್ಣಿಗೆ ರೋಗವಾಗಿ ಆವರಿಸಿದೆ.

ಅಡಿಯಿಲ್ಲದ ಪಡಿ ಅಳತೆಗೆ ಬಾರದು. ಹಾಗೆಯೇ ಉಡುವಿನ ಕಣ್ಣು ಕೂಡಾ ! ದೃಶ್ಯದ ಸತ್ಯ ಕಣ್ಣಲ್ಲಿಯೇ ಬಿಟ್ಟು ಸಂಚರಿಸಿದರೆ ಅದನ್ನು ಕಣ್ಣೆನ್ನಲು ಸಾಧ್ಯವೆ ? ನೋಡಿದ್ದೆಲ್ಲ ಬೇಡಿ ಅಂಗವನ್ನು ಮಂಗವನ್ನಾಗಿಸುತ್ತದೆ.

**ಕೀಚಕನ ಮುಟ್ಟು, ಘಾತಕನ ಸ್ನೇಹ, ವೇಸಿಯ ಮೋಹದ ಆಸೆ, ಸುಜಾತಿಯಲ್ಲದವನ ಕೊಳುಕೊಡೆ, ನಿರಾಸೆಯಲ್ಲದವನ ಮಾತಿನ ಮಾಲೆ ಅದೇತಕ್ಕೆ ಬಾತೆ :**

ಕೀಚಕ ದ್ರೌಪದಿಯನ್ನು ಮುಟ್ಟಿ ಸತ್ತ. ಸಂತರು ಜ್ಞಾನಿಗಳು ಮುಟ್ಟಿದರೆ ಸತ್ತವರು ಬದುಕುತ್ತಾರೆ. ಕೀಚಕ ದ್ರೌಪದಿಯನ್ನು ಮುಟ್ಟಿ ತಾನೇ ಸತ್ತ. ಕೀಚಕನ ಮುಟ್ಟುವಿಕೆಯಲ್ಲಿ ಅದೆಂತಹ ಸಾವಿನ ಬಯಕೆ ಅಡಗಿತ್ತು. ಸಂತ ಜ್ಞಾನಿಗಳ ಚರ್ಮ ಒಂದೇ ; ಕೀಚಕ, ಭಸ್ಮಾಸುರನ ಚರ್ಮ ಕೂಡಾ ಒಂದೇ. ಭಸ್ಮಾಸುರ ತನ್ನನ್ನು ತಾನೇ ಮುಟ್ಟಿಕೊಂಡು ಸತ್ತ. ಕೀಚಕ ದ್ರೌಪದಿಯನ್ನು ಮುಟ್ಟಿ ಸತ್ತ. ಚರ್ಮದಲ್ಲಿ ಸಾವಿಲ್ಲದ ಕೇಡಿಲ್ಲದ ಜ್ಞಾನ ಭರಿತವಾಗಿದೆ ; ಹಾಗೆಯೇ ಮರಣ ಆವರಿಸಿಕೊಂಡಿದೆ.

ಅಕ್ಕ ಮಹಾದೇವಿಯನ್ನು ಮುಟ್ಟಲು ಬಂದ ಕೌಶಿಕನಿಗೆ ಆಘಾತವೇ ಕಾದಿತ್ತು. ನೀನೊಬ್ಬನೆ ನನ್ನನ್ನು ಮುಟ್ಟಲು ಬಯಸುತ್ತಿಲ್ಲ ; ಬದಲಾಗಿ ಮುಟ್ಟುವ ಆಸೆಯಿಂದ ಜಗತ್ತೇ ತವಕ ದಲ್ಲಿದೆ. ನೀನೊಬ್ಬನೆ ಯಾಕೆ, ಇಡೀ ಜಗತ್ತೇ ನನ್ನ ಹುಟ್ಟು ಬಟ್ಟೆಯನ್ನು ನೋಡಲಿ ಎಂದು ತೊಟ್ಟ ಬಟ್ಟೆಯನ್ನು ಕಳಚಿದಳು ಅಕ್ಕ !

ಅಕ್ಕನಂತೆ ದ್ರೌಪದಿ ಬಯಸಲಿಲ್ಲ. ದ್ರೌಪದಿಯನ್ನು ಮುಟ್ಟಿದ ತಪ್ಪಿಗಾಗಿ ಕೀಚಕ ಸತ್ತ ! ಕೀಚಕನ ಮುಟ್ಟುವಿಕೆಯಿಂದಾಗಿ ದ್ರೌಪದಿಗೆ ತಳಮಳವಾಯಿತು. ಅಂದರೆ ಚರ್ಮ ರೋಗ ಗ್ರಸ್ತವಾಗಿದೆ. ಶ್ರೀ ಕೃಷ್ಣನ ಅರಿವಿನ ಔಷಧಿ ಕೀಚಕನಿಗೂಬೇಕು ; ದ್ರೌಪದಿಗೂ ಬೇಕು. ಮುಟ್ಟಿದರೆ ತೊಂದರೆಯಾಗುತ್ತದೆ ; ಹಾವು ಹರಿದಾಡುತ್ತದೆ ಎಂದರೆ ಚರ್ಮದಲ್ಲಿ ದೋಷ ವಿದೆಯೆಂದು ಅರ್ಥವಲ್ಲವೆ ? ಎಡಗೈ ಬಲಗೈ ತಾಕಿದರೆ ತೊಂದರೆಯಿಲ್ಲ. ಕೈಗೆ ಮತ್ತೊಂದು ಕೈ ತಾಕಿದರೆ ತೊಂದರೆಯಾಗುತ್ತದೆ ಯಾಕೆ ತೊಂದರೆಯಾಗಬೇಕು. ಎರಡೂ ಕೈಗಳಲ್ಲಿರುವ ಪದಾರ್ಥ ಒಂದೇ ಎಂದು ಎರಡೂ ಕೈಗೂ ಹೊಳೆಯುವುದಿಲ್ಲ. ಹೀಗಾಗಿ ಕೀಚಕನು ಮುಟ್ಟಿದ ಚರ್ಮದಿಂದಲೇ ಕೀಚಕ ಸತ್ತ.

ಘಾತಕನ ಸ್ನೇಹ, ವೇಸಿಯ ಮೋಹದ ಆಸೆ, ಸುಜಾತಿಯಲ್ಲದವನ ಕೊಳಿಕೊಡೆ, ನಿರಾಸೆ ಯಲ್ಲದವನ ಮಾತಿನ ಮಾಲೆ ಅದೇತಕ್ಕೆ ಬರುವುದು ಎಂದು ಪ್ರಶ್ನಿಸಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಮನಸ್ಸು ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ಅಂಗದಲ್ಲಿ ಸೃಷ್ಟಿಸಿ ಅಂಗದೊಂದಿಗೆ ಸ್ನೇಹ ಮಾಡುವ ಅಂಗವನ್ನೇ ಹಾಳುಗೆಡುವುತ್ತದೆ. ಅಂತಹ ಮನದೊಂದಿಗೆ ಸ್ನೇಹ ಮಾಡಿ ಮುಗ್ಗುಲಾಗುವುದು ಅಂಗಕ್ಕೆ ಬೇಕೆ ? ಅಂಗಕ್ಕೆ ಮತ್ತೊಂದು ಅಂಗ ವೈರಿಯಲ್ಲ; ಅಂಗವನ್ನು ಆವರಿಸಿದ ಮನವೇ ವೈರಿ ! ಆದರೆ ಸ್ನೇಹ ಮಾಡಿದೆ. ಎಚ್ಚರದಿಂದ ಮನದ ಸ್ನೇಹವನ್ನು ಮುರಿದುಕೊಂಡು ಮಹಾದೇವನತ್ತ ತಳ್ಳಬೇಕು !

**56**

**ಉಪ್ಪಿಲ್ಲದ ಮೇಲೋಗರ ತುಪ್ಪದಲ್ಲಿ ಬೆಂದಡೆ,**

**ತುಪ್ಪ ಲೇಸೆಂದಡೆ ಸಪ್ಪೆಯಾಗಿ ತೋರಿತ್ತು .**
**ಅರಿವು ಶುದ್ಧವುಳ್ಳವನೆಂದಡೆ,**
**ಕುರುಹಿನ ಬೆಂಬಳಿಯಲ್ಲಿ ಅಡಗಿದಡೆ ಅರಿವಿಗೆ ದೂರವೆ ?**
**ಅರಿವು ಕುರುಹು ನಿಃಪತಿಯಹನ್ನಕ್ಕ**
**ಆರನೂ ಕೆಡೆನುಡಿಯಬೇಡೆಂದನಂಬಿಗ ಚೌಡಯ್ಯ .**

ಒಂದು ತನು. ದಾನ ಧರ್ಮ ಮಾಡಿ ಸಾತ್ವಿಕನು ಎನ್ನಿಸಿಕೊಳ್ಳಬಹುದು, ಆದರೂ ತನಗೆ ತಾನೇ ಉತ್ತಮನಲ್ಲ ; ಸಾತ್ವಿಕನೂ ಅಲ್ಲ. ಅದು ಇತರರಿಗೆ ತೋರುವುದಕ್ಕಾಗಿ ಅಲ್ಲ. ಮನ ತನುವಿಗೆ ಹಾಕಿದ ವೇಷ ! ಅಂತಹ ವೇಷದ ತನುವನ್ನು ಅರಿವಿನ ತಂತ್ರಜ್ಞಾನ ಹೊಂದಿದ ಬ್ರಹ್ಮ ತನು ಎನ್ನಲು ಬರುವುದಿಲ್ಲ. ಇತರರಿಂದ ಸಾತ್ವಿಕ ಎಂದು ಅನ್ನಿಸಿಕೊಳ್ಳಲು ಪ್ರಯತ್ನಿಸುತ್ತದೆಯೇ ಹೊರತು ಅದು ಸಹಜ ತನುವಲ್ಲ. ಇತರ ತನುಗಳು ಅಂತಹ ತನುವನ್ನು ಸಾತ್ವಿಕ ಎಂದು ಹೊಗಳಿದರೆ ಅದು ವಿಕಸಿತವಾಗುತ್ತದೆ ಹಾಗೆಯೇ ತಾನು ಸಾತ್ವಿಕ ಅಲ್ಲ ಎನ್ನುವ ಕೂಗು ಒಳಗಿಂದ ತನಗೆ ತಾನೇ ಕೇಳಿ ಬರುತ್ತದೆ.

ಉಪ್ಪಿಲ್ಲದೆ ತುಪ್ಪದಲ್ಲಿಯೇ ಬೆಂದ ಅನ್ನವಾದರೂ ಅದು ಸಪ್ಪೆ ಹೇಗೆಯೋ ಹಾಗೆಯೇ ಅರಿವು ಸಂಗಮವಾದ ತನುವೆಂದು ಮನಕ್ಕೆ ಮನವರಿಕೆಯಾಗುವವರೆಗೂ ಅದು ಸಹಜ ತನುವಲ್ಲ.

ತನು ಜಗದ್ಗುರು, ಮಠಾಧೀಶನ ವೇಷದಲ್ಲಿರಬಹುದು ; ಅದನ್ನು ಇಡೀ ಸಮಾಜವೇ ಗೌರವಿಸಬಹುದು ; ಆದರೂ ಅದು ಲಿಂಗ ಅಂಗ ಒಂದಾದ ಅಂಗವೆಂದು ಅಂಗವನ್ನು ಆವರಿಸಿದ ಮನ ತಿಳಿಯದ ಅಂಗ. ಅಂಗದಲ್ಲಿಯೇ ಸಂಗಮವಾಗಿದ್ದರೂ ಅಂಗದಲ್ಲಿ ಸಂಗಮವಾದ ಅಂಗವೆಂದು ಅರಿಯದ ಮನ.

ಅಂಗ ಮತ್ತು ಅರಿವು ಒಂದಾಗುವವರೆಗೆ ವಿಚಾರವಿಲ್ಲದೆ ನುಡಿಯಬೇಡ. ನುಡಿದ ನುಡಿಯೆಲ್ಲವೂ ಅರಿವಿನ ನುಡಿಯಲ್ಲ ; ಕಲಿತ ನುಡಿ ; ಕೈಗಡದ ನುಡಿ ; ಅವು ಶಾಸ್ತ್ರದ ನುಡಿ. ಲಿಂಗಾಂಗದ ನುಡಿಯದು ನುಡಿಯಲ್ಲದ ನುಡಿ. ಸರ್ವಾಂಗಗಳನ್ನು ಲಿಂಗವೆಂದೇ ಭಾವಿಸಿದ ನುಡಿ.

57

**ಊರ ಸುತ್ತಿ ಬಂದಡೇನಯ್ಯ, ಸೇರಬೇಕು ಹೆಬ್ಬಾಗಿಲಲ್ಲಿ.**
**ಹೊರಬೇಕು, ಗುರುಲಿಂಗಜಂಗಮದ ಪಾದವ.**
**ಶ್ವಾನಜ್ಞಾನದ ಮಾತ ಕಲಿತು**
**ಅರಿಕೆಯ ಮಾತಿಗೆ ಹೋರಾಟಕ್ಕೆ ಹೋದರೆ,**
**ಸೇರಿದ್ದ ಲಿಂಗ ದೂರವಾಯಿತು,**
**ಎಂದ ನಮ್ಮ ಅಂಬಿಗ ಚೌಡಯ್ಯ .**

ದೇಶ ಸುತ್ತು ಇಲ್ಲ ಕೋಶ ಓದು ಎನ್ನುವ ಗಾದೆ ಇದೆ. ಆದರೆ ಈ ಗಾದೆಯನ್ನು ಅಂಬಿಗರ ಚೌಡಯ್ಯ ಶರಣರು ಸುಳ್ಳು ಮಾಡಿದ್ದಾರೆ. ದೇಶ ಸುತ್ತಿದರೂ ಇಲ್ಲ ; ಕೋಶ ಓದಿದರೂ ಇಲ್ಲ. ಅಂಗದಲ್ಲಿ ಸಂಗಮವಾದ ಅರಿವಿನ ಸಂಗಯ್ಯನ ಪಾದ ದಕ್ಕಬೇಕಾದರೆ ಆತನಿದ್ದ ಅರಿವಿನ ಹೆಬ್ಬಾಗಿಲಿನ ಪ್ರವೇಶ ಮಾಡಬೇಕು. ಅಲ್ಲಿಯೇ ಲೀನವಾಗಿ ಆತನೊಂದಿಗೆ ಸಂಗಮವಾಗಬೇಕು.

ಅಲ್ಲಿಯೇ ಗುರುವೂ ಇದ್ದಾನೆ ; ಲಿಂಗವೂ ಇದೆ ; ಜಂಗಮವೂ ಇದೆ.

ಕೋಶ ಓದಿ ಮಾತ ಕಲಿತು ಶ್ವಾನದಂತೆ ಬೊಗಳಬಹುದು; ಅದು ಕೆಲಸಕ್ಕೆ ಬಾರದ ಮಾತು. ತನಗೆ ಸುಖ ಕೊಡದ ಮಾತು. ಅದೇನಿದ್ದರೂ ವ್ಯವಹಾರದ ಮಾತು. ಮಾತನಳಿಯುವ ಮಾತಲ್ಲದ ಮಾತಲ್ಲ.

ಕಲಿತ ಮಾತು ತನುವನ್ನು ಅರಳಿಸುತ್ತದೆ ; ಇಲ್ಲ ಕೆರಳಿಸುತ್ತದೆ. ಇವರೆಡೂ ಕೆಲಸಕ್ಕೆ ಬಾರದ ಮಾತು. ಮಾತಿನಲ್ಲಿ ಅರಿವಿದೆ ಎಂದು ತನುವಿಗೆ ತಿಳಿಯದ್ದರಿಂದ ತನು ಅರಳಿತು ; ತನು ಕೆರಳಿತು. ಮಾತು ತನುವಿನಲ್ಲಿ ರಸಾಯನಿಕ ಕ್ರಿಯೆಯನ್ನುಂಟು ಮಾಡಿತು. ಹೀಗೆ ಅರಳಿಸುವ ಕೆರಳಿಸುವ ಮಾತು ತನುವಿನದಲ್ಲ. ತನು ಇತರ ತನುಗಳಿಂದ ಪುಸ್ತಕಗಳಿಂದ ಕಲಿತು ಆಡಿದ ಮಾತು. ತನುವಿನಲ್ಲಿ ತನ್ಮಯವಾದ ಮೂತು ಅರಿವಿನ ಮಾತು. ಅದು ಅರಿತರಿತು ನುಡಿಯುವ ಮಾತು. ಅರಿತರಿತು ಕೇಳುವ ಮಾತು. ಅರಿವಾಗುವ ಮಾತು. ಆಗ ತನು ಕೆರಳಲಿಲ್ಲ ಅರಳಲಿಲ್ಲ.

ಅರಳುವ ಕೆರಳುವ ಎರಡು ಮಾತುಗಳು ಅಂಗಕ್ಕೆ ಪ್ರಸಾದವಾದವು. ಕೇಳಿದ ಮಾತು ಆಡಿದ ಮಾತನ್ನು ಲಿಂಗ ಮೆಚ್ಚಿ ಹೌದೌದೆಂದಿತು.

**58**

**ಊರೆಲ್ಲಾ ಏರಿದ ಹರಗುಲವ,**
**ನೀರಿನಲ್ಲಿ ದಾರಿಯಕೊಂಡು ಹೋಹವನ ಆರೈಕೆಯಲ್ಲದೆ**
**ಏರಿದವರೆಲ್ಲಕ್ಕೂ ಆರೈಕೆವುಂಟೆ?**
**ಹೇಳುವಾತನ ವಿರಕ್ತಿ , ಕೇಳುವಾತನ ಸದ್ಭಕ್ತಿ**
**ಉಭಯದ ನೆಲೆಯ ಆರಿಂದ ಅರಿಯಬೇಕೆಂದನಂಬಿಗ ಚೌಡಯ್ಯ .**

ತನು ಒಂದು ಸಾಗರ, ಅದರಲ್ಲಿ ವಿಚಾರದ ಹರಗೋಲು ಹಾಕಿ ದಾರಿ ಹುಡುಕಿಕೊಂಡು ದಡ ಸೇರಬೇಕು. ಸಾಗರವೂ ಇದೆ; ಹರಿಗೋಲೂ ಇದೆ. ಅದನ್ನು ದಾಟಿ, ದಡ ಸೇರುವವನೂ/ ಸೇರಿಸು ವವನು ಆರೈಕೆ ಮಾಡುತ್ತಾನೆಯೇ ಹೊರತು, ಕುಳಿತವರೆಲ್ಲರೂ ಮಾಡುತ್ತಾರೆಯೇ. ಅದು ಸಾಧ್ಯವಾಗುವುದಿಲ್ಲ. ಅವರೇನಿದ್ದರೂ ಕುಳಿತು ಪ್ರಯಾಣ ಮಾಡುವವರು. ಅವರಿಗೇನು ಗೊತ್ತು ಹರಗೋಲಿನ ಮಹಿಮೆ.

ತನು ಅದ್ಭುತವಾದ ಶಕ್ತಿ ಉಳ್ಳ ವಿಚಾರ ಸಾಗರ. ಅದರಲ್ಲಿ ಹರಗೋಲು ಹಾಕಿಕೊಂಡು ವಿಹರಿಸಿ ದಾಟಿ ದಡಸೇರುವವನೇ ಸಮರ್ಥ.

ತನುವಿಗೆ ಹೇಳುವ ಶಕ್ತಿಯೂ ಇದೆ; ಕೇಳುವ ಶಕ್ತಿಯೂ ಇದೆ. ಹೇಳುವಾತನು ವಿರಕ್ತಿ ಹೊಂದಿ ಕೇಳುವಾತನು ಸದ್ಭಕ್ತಿ ಹೊಂದಿದ್ದರೆ ಮಾತ್ರ ಎರಡೊಂದಾದ ತನು. ಹೇಳುವ ತನು ಬೇರಲ್ಲ; ಕೇಳುವ ತನು ಬೇರಲ್ಲ. ಎರಡರಲ್ಲೂ ಇದ್ದ ಶಕ್ತಿ ಒಂದೇ; ಭಕ್ತಿ ಒಂದೆ. ವೇದ ಶಾಸ್ತ್ರ ಆಗಮ ಪುರಾಣ ಉಪನಿಷತ್‌ಗಳನ್ನು ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಓದಿ ಹೇಳುವಾಗ ನಾನು ಎಂಬ ಅಹಂಕಾರ ಕರಗಿ ತಾನು ಅವನೇ ಆಗಿ ತನ್ಮಯವಾಗಿ ಹೇಳುವಾಗ ಕೇಳುಗ ಹೇಳುಗನಲ್ಲಿ ಕರಗಿ ಹೇಳುವವನೂ ಕೇಳುವವನೂ ತಾನೇ ಆಗುತ್ತಾನೆ. ಅಂತಹ ಹೇಳುಗ ಹೇಳುಗನಲ್ಲ. ಕೇಳುಗ ಕೇಳುಗನೂ ಅಲ್ಲ. ಇಬ್ಬರೂ ವಿಚಾರ ಸಾಗರದಲ್ಲಿ ಆನಂದದಿಂದ

ಹರಿಯುವ ಹರಿಗೋಲಿನ ಆನಂದದ ಸವಿಯನು ಸವಿಯಲು ಬಂದವರು.

ಹೇಳುವಾತ ಗುರುವಲ್ಲ; ಕೇಳುವಾತ ಶಿಷ್ಯನಲ್ಲ, ಹೇಳುವಾತ ಭಕ್ತನಾಗಿ ಭಕ್ತಿಯಿಂದ ಗುರುವಿಗೆ ಹೇಳಿದ ; ಕೇಳುವಾತ ಗುರುವಾಗಿ ಹೇಳುಗನ ಭಕ್ತಿಯನ್ನು ಆನಂದದಿಂದ ಸವಿದ. ಇವರಿಬ್ಬರೂ ತಮ್ಮ ಮಾತು ತಾವೇ ಆನಂದದಿಂದ ಸವಿದರು. ಉಳಿದವರು ಬತ್ತಿ ಹೊಸೆಯುತ್ತ ಕೇಳಿದರು. ಹೇಳುಗ ಕೇಳುಗರಿಬ್ಬರ ಆನಂದದ ಪರಿಚಯ ಇತರ ಕೇಳುಗರಿಗೆ ಇರುವುದಿಲ್ಲ. ಅದನ್ನು ಅರಿಯುವುದೂ ಜಟಿಲ.

**59**

**ಎತ್ತ ಸುತ್ತಿ ಬಂದಡೂ ಊರಿಗೆ ಬಪ್ಪುದು ತಪ್ಪದು.**
**ಹಲವು ಮಾತನಾಡಿದಡೇನು ?**
**ಮೂರು ಮಲವ ಮರೆದಿರಬೇಕು.**
**ಹೊಲಬುದಪ್ಪಿದ ಮೃಗ ಬಲೆಯೊಳಗೆ ಬಿದ್ದಂತಾಗಬೇಡ.**
**ಇದನರಿತು ಬದುಕೆಂದನಂಬಿಗ ಚೌಡಯ್ಯ .**

ತನ್ನ ಗ್ರಾಮದಿಂದ ತೀರ್ಥಕ್ಷೇತ್ರಗಳನ್ನು ಸುತ್ತಲು ಹೋದವನು ಮರಳಿ ತನ್ನ ಗ್ರಾಮಕ್ಕೆ ಬರಲೇಬೇಕು. ತಾನು ಹುಡುಕಲು ಹೋದ ಸತ್ಯ ವಸ್ತುವು ಹುಡುಕುವ ಜಾಗದಲ್ಲಿಯೇ ಇದೆ. ಹಲವು ಮಾತನು ಆಡಿದಡೇನು ಮಾತು ಹೊರಟ ಜಾಗದಲ್ಲಿಯೇ ಮಾಣಿಕ್ಯವಿದೆ ; ಸ್ಫಟಿಕವಿದೆ ; ಮುತ್ತಿದೆ.

ತಾನು ಮಾತನಾಡುತ್ತಾನೆ. ಅದು ಮಾತನಾಡದೆ ಮುತ್ತಿನ ಹಾರದಂತೆ ಬೆಳಗುತ್ತದೆ. ಸ್ಫಟಿಕದ ಸಲಾಕೆಯಂತೆ ಬೆಳಗುತ್ತದೆ. ಮಾಣಿಕ್ಯದ ದೀಪ್ತಿಯಂತೆ ಬೆಳಗುತ್ತದೆ. ಬೆಳಗುವ ಜಾಗವನ್ನು ಆಣವಮಲ ಮಾಯಾಮಲ ಕಾರ್ಮಿಕ ಮಲವೆಂಬ ಮಲತ್ರಯಗಳು ಮುಸುಕಿವೆ.

ಲಿಂಗದಿಂದಲೇ ಹುಟ್ಟಿದ ಮನ ಲಿಂಗದಲ್ಲಿಯೇ ಲೀನವಾಗಿ ಘನಮನವಾಗಬೇಕಿತ್ತು. ಆದರೆ ಲಿಂಗವನ್ನು ಹೊತ್ತ ಅಂಗವನ್ನು, ಲಿಂಗವನ್ನು ದಾರಿ ತಪ್ಪಿಸುತ್ತಲಿದೆ. ಸ್ವತಃ ತಾನೇ ದಾರಿ ತಪ್ಪುತ್ತಲಿದೆ. ದಾರಿತಪ್ಪಿದ ಮೃಗ ಬೇಟೆಗಾರನು ಬೀಸಿದ ಬಲೆಯೊಳಗೆ ಬಿದ್ದು ಪ್ರಾಣ ಕಳೆದುಕೊಂಡರೆ ಫಲವಿಲ್ಲ. ಅದ್ಭುತವಾದ ಅರಿವಿನ ಲಿಂಗಾಂಗ ಮತ್ತೆ ದೊರೆಯುವುದು ದುರ್ಲಭ

ಇದನರಿತು ಬದುಕೆಲೆ ಮನವೆ ; ನಿನ್ನ ಗುರಿ ಘನಮನವಾಗುವತ್ತ ಸಾಗಲಿ. ನೀನು ಮರುಳಾಗುವುದು ಮಲಕ್ಕೆಂದು ಮರೆಯಬೇಡ. ಅರಿವಿನಿಂದ ತಿಳಿದು ನೀನು ಹಿಡಿದ ಅಂಗದಲ್ಲಿಯೇ ಲಿಂಗವಾಗಿ ಅರಳು !

**60**

**ಎರಡು ಗ್ರಾಮದ ನಡುವೆ ಕಡದ ಸೀಮೆಯ ಕಲ್ಲು .**
**ಅದ ಕಟ್ಟಿದಾತ ಗುರುವಲ್ಲ, ಕಟ್ಟಿಸಿಕೊಂಡಾತ ಶಿಷ್ಯನಲ್ಲ.**
**ಆದಿಯನರಿಯದ ಗುರುವು, ಭೇದಿಸಲರಿಯದ ಶಿಷ್ಯ ,**
**ಇವರಿಬ್ಬರೂ ಉಭಯ ಭ್ರಷ್ಟರೆಂದಾತನಂಬಿಗ ಚೌಡಯ್ಯ .**

ಅರಿವು ಒಂದು ಗ್ರಾಮ ; ಅರಿವನ್ನು ಅರಿಯಲು ಬಂದ ಮನವೆಂಬ ಮರೆವು ಒಂದು ಗ್ರಾಮ.

ಈ ಎರಡೂ ಗ್ರಾಮಗಳಿಗೆ ದೇಹವೆಂಬ ದೇವಾಲಯವೇ ಸೇತುವೆ. ದೇಹ ಈ ಎರಡೂ ಗ್ರಾಮಗಳಿಗೆ ಒಂದು ಉಪಕರಣವೂ ಹೌದು. ಅರಿವೆಂದರೇನೆಂದು ಅರಿಯದೆ ಮನವೆಂದರೇನೆಂದು ಅರಿಯದೆ ದೇಹಕ್ಕೆ ಕಟೆದ ಸೀಮೆಯ (ಲಿಂಗ)ಕಲ್ಲು ಕಟ್ಟಿದರೇನು ? ಅದು ಲಿಂಗವೆ ? ಕಟ್ಟಿದಾತ ಗುರುವೆ ? ಕಟ್ಟಿಸಿಕೊಂಡಾತ ಶಿಷ್ಯನೆ ?

ಅಂಗದಲ್ಲಿ ಸಂಗಮವಾದ ಅರಿವೇ ಅಂಗಕ್ಕೆ ಗುರುವಾಗಿರುವಾಗ ಆ ಗುರುವಿಗೆ ಮತ್ತೊಬ್ಬ ಗುರು ಲಿಂಗವನ್ನು ಕಟ್ಟಲು ಬರುತ್ತದೆಯೆ ? ಅರಿವೆಂಬ ಗುರುದೇವನೇ ಆದಿ; ಅದನ್ನು ಅರಿಯುವ ಮನವೆಂಬ ಶಿಷ್ಯನೇ ಅನಾದಿ !

ಆದಿಯನು ಅರಿಯದ ಗುರು, ಅದನ್ನು ಭೇದಿಸಲರಿಯದ ಶಿಷ್ಯ ಇವರಿಬ್ಬರೂ ಭ್ರಷ್ಟರು. ಅಂಗಕ್ಕೆ ಲಿಂಗ ಕಟ್ಟುವಾತ ಗುರುವಲ್ಲ. ಅದನ್ನು ಕಟ್ಟಿಸಿಕೊಳ್ಳುವಾತ ಶಿಷ್ಯನಲ್ಲ. ಇವರಿಬ್ಬರೂ ಭ್ರಷ್ಟರು. ಏಕೆಂದರೆ ಅಂಗದಲ್ಲಿ ಲಿಂಗ ಸಂಗಮವಾಗಿದೆ. ಇದನ್ನು ಅರಿಯದೆ ಗುರುವೆಂದು ಅನ್ನಿಸಿಕೊಂಡಾತ ಅಂಗಕ್ಕೆ ಲಿಂಗ ಕಟ್ಟಲು ಸಿದ್ಧನಾಗಿದ್ದಾನೆ. ಅಂಗದಲ್ಲಿ ಲಿಂಗವೂ ಇದೆ, ಗುರುದೇವನೂ ಇದ್ದಾನೆ. ಲಿಂಗ ಕಟ್ಟುವ ಕಾಯಕದಲ್ಲಿದ್ದ ಗುರುವಿಗೆ ಇದರ ಪರಿಚಯವಿಲ್ಲ. ಕಟ್ಟಿ ಸಿಕೊಳ್ಳಲು ಸಿದ್ಧನಾದ ಶಿಷ್ಯನಿಗೂ ಇದರ ಪರಿಚಯವಿಲ್ಲ. ಹೀಗಾಗಿ ಇವರಿಬ್ಬರನ್ನೂ ಅಂಬಿಗರ ಚೌಡಯ್ಯ ಭ್ರಷ್ಟರೆಂದು ಕಠಿಣವಾಗಿ ನಿಂದಿಸಿದ್ದಾನೆ.

ಪ್ರತಿ ಅಂಗದಲ್ಲಿಯೂ ಅರಿವೆಂಬ ಗುರುದೇವನು ಸಂಗಮವಾಗಿದ್ದಾನೆ. ಹಾಗೆಯೇ ಆ ಗುರುದೇವನನ್ನು ತಿಳಿಯದ ಮನವೆಂಬ ಶಿಷ್ಯನೂ ಅಂಗವನ್ನು ಆವರಿಸಿದ್ದಾನೆ. ಅಂಗದಲ್ಲಿರುವ ಶಿಷ್ಯನೇ ಅಂಗದಲ್ಲಿ ಸಂಗಮವಾದ ಗುರುದೇವ ನನ್ನು ಆರಾಧಿಸಿ ಅಂಗದಲ್ಲಿಯೇ ಒಂದಾಗಬೇಕು. ಇಂತಹ ದಿವ್ಯ ಅಂಗಕ್ಕೆ ಮತ್ತೊಂದು ಅಂಗ ಹೊತ್ತ ವೇಷದ ಗುರು ಲಿಂಗ ಕಟ್ಟಲು ಬರುತ್ತದೆಯೇ ? ಎಂಬುದು ಚೌಡಯ್ಯ ಶರಣರ ಪ್ರಶ್ನೆ.

ಆದಿ ಅನಾದಿ ಕಾಲದಿಂದಲೂ ಅರಿವೆಂಬ ಗುರುದೇವನು, ಆ ಗುರುದೇವನಿಗೆ ಶಿಷ್ಯನಾಗುವ ಹಂಬಲವುಳ್ಳ ಮನವೆಂಬ ಮರೆವು ; ಇವರಿಬ್ಬರೂ ಅಂಗವನ್ನು ಉಪಕರಣ ಮಾಡಿಕೊಂಡು ಅಂಗದಲ್ಲಿಯೇ ಇದ್ದಾರೆ ; ಎತ್ತು ಏರಿಗೆ ಎಳೆದರೆ ಕೋಣ ಕೆರೆಗೆ ಎಳೆದಂತೆ. ಇವರಿಬ್ಬರೂ ಉತ್ತರ ದಕ್ಷಿಣದಂತೆ. ಗುರುವಿನ ಪರಿಚಯ ಶಿಷ್ಯನಿಗಿಲ್ಲ ; ಹೀಗಾಗಿ ಗುರುವನ್ನು ಮಾಡಿಕೊಂಡು ದೀಕ್ಷೆಗಾಗಿ ಹಂಬಲಿಸಿದ್ದಾನೆ ಶಿಷ್ಯ . ಶಿಷ್ಯನನ್ನಾಗಿ ಸ್ವೀಕರಿಸಿ ದೀಕ್ಷೆ ಕೊಡಲು ಸಿದ್ಧತೆ ನಡೆಸಿದ್ದಾನೆ ಗುರು. ಇವರಿಬ್ಬರೂ ಭ್ರಷ್ಟರು. ಶಿಷ್ಯನ ಅಂಗದಲ್ಲಿ ಗುರುವಿದ್ದುದು ಗುರುವಿಗೆ ತಿಳಿಯದು ; ಶಿಷ್ಯನಿಗೂ ತಿಳಿಯದು. ಗುರುವಾದಾತ ಶಿಷ್ಯನನ್ನು ಮುಟ್ಟಿ ನಿನ್ನ ಈ ಅಂಗದಲ್ಲಿಯೇ ಗುರುವಿದ್ದಾನೆ ಎಂದು ತೋರಿಸುವುದು ಆತನ ಕೆಲಸ. ಶಿಷ್ಯನಾದಾತ ತನ್ನಂಗದಲ್ಲಿಯೇ ಗುರುವಿದ್ದಾನೆ ಎಂದು ನೋಡಿಕೊಳ್ಳುವುದು ಆತನ ಕೆಲಸ. ಅವರವರು ಅವರವರ ಅಂಗದಲ್ಲಿಯೇ ಸಂಗಮವಾದ ಗುರುದೇವನನ್ನು ಗುರುವನ್ನಾಗಿಸಿಕೊಂಡು ಆ ಗುರುದೇವನ ಮಾತಲ್ಲದ ಮಾತ ಕೇಳುವುದು ಆನಂದದ ಕೆಲಸ. ಇದನ್ನು ಬಿಟ್ಟು ಗುರು ಶಿಷ್ಯರ ಮಾಡಿಕೊಳ್ಳುವ ಕೆಲಸವದು ಭ್ರಷ್ಟರ ಕೆಲಸ. ವ್ಯವಹಾರದ ಕೆಲಸ. ಹಾದರದ ಕೆಲಸ. ಗುರು ಶಿಷ್ಯರ ವ್ಯವಹಾರದ ಹಾದರವನ್ನು ಸಕಲ ಶರಣರೂ ಖಂಡಿಸಿದ್ದಾರೆ.

**61**

**ಎಲ್ಲರೊಳಗೆ ಗೆಲ್ಲ ಸೋಲಕ್ಕೆ ಹೋರಬಂದೆನೆ ?**
**ಬೆಲ್ಲವ ಮೆದ್ದಡೆ ತಮ್ಮ ತಮ್ಮ ಬಾಯಲ್ಲಿಗೆಲ್ಲ ಸಿಹಿ.**

**ಬಲ್ಲವನಾದ ಮತ್ತೆ ನಾಡೆಲ್ಲರೂ ಕೂಡಿ ಬಾಳದ ಹೆಣ್ಣಿಗೆ ನ್ಯಾಯವನಾಡುವಂತೆ,**
**ಅರಿದ ಅರಿವಿಂಗೆ ಮರೆದ ಮರವೆಗೆ**
**ತನ್ನಲ್ಲಿದ್ದು ಕರಿಗೊಂಡವನೆ ಸಾಕ್ಷಿಯೆಂದನಂಬಿಗ ಚೌಡಯ್ಯ .**
**ಎಲ್ಲರೊಳಗೆ ಗೆಲ್ಲ ಸೋಲಕ್ಕೆ ಹೋರಬಂದನೆ ?:**

ಜಗದ ತನುಗಳ ತುಂಬಾ ಜ್ಞಾನ ಭರಿತವಾಗಿದೆ. ಆ ಜ್ಞಾನವನ್ನೇ ಸಂತ ಮಹಾಂತರು ದೇವರೆಂದು ಅಲ್ಲಾ ಎಂದು, ಗಾಡ್ ಎಂದು, ಚೈತನ್ಯವೆಂದು, ಬೆಳಕು ಎಂದು ಕರೆದರು. ಆ ದೇವರೇ ದೇಹವನ್ನು ಹೊತ್ತು, ಗರ್ಭದಿಂದ ಹೊರಬಂದು, ಆ ದೇಹದಲ್ಲಿಯೇ ಭರಿತನಾಗಿದ್ದಾನೆ. ದೇವಭರಿತ ದೇಹವನ್ನು ಮನ ತನ್ನ ಸುಖಕ್ಕಾಗಿ ಬಳಸುತ್ತಲಿದೆ. ಗೆಲುವು ಸೋಲಿಗಾಗಿ ಬಳಸುತ್ತಲಿದೆ. ಕೊಲೆ ಸುಲಿಗೆ ಹಾದರ ಜೂಜು ಕುಡಿತಕ್ಕಾಗಿ ಬಳಸುತ್ತಲಿದೆ. ದೇಹದಲ್ಲಿ ದೇವರು ಭರಿತವಾಗಿದ್ದರೂ, ಅರಿಯದೇ ದೇಹದೊಂದಿಗೆ ದೇವರನ್ನು ಕಲ್ಲಿನಲ್ಲಿ ಕೆತ್ತಿ , ಆಲಯ, ಮಸೀದೆ, ಚರ್ಚ್ ನಿರ್ಮಿಸಿ, ಪೂಜೆ-ಪ್ರಾರ್ಥನೆ ಮಾಡುತ್ತದೆ. ಅದು ದೇವರಲ್ಲ ಕಲ್ಲು ಎನ್ನುವ ಸುಳುಹು ದೇವರು ಕೊಟ್ಟರೂ ಅದನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳದೆ ಮನ ದೇವರಿದ್ದ ದೇಹವನ್ನು ದಂಡನೆಗೆ ಈಡು ಮಾಡಿದೆ. ದೇವರೇನು ಸಕಲ ದೇಹಗಳಲ್ಲಿ ಗೆಲ್ಲ ಸೋಲಕ್ಕೆ ಬಂದನೆ ? ಸುಖ ದುಃಖಗಳನ್ನು ಅನುಭವಿಸಲು ಬಂದನೆ ?

**ಬೆಲ್ಲವ ಮೆದ್ದಡೆ ತಮ್ಮ ತಮ್ಮ ಬಾಯಲ್ಲಿಗೆಲ್ಲ ಸಿಹಿ :**

ಅಂಗದಲ್ಲಿ ಸಂಗಮವಾದ ಅರಿವಿನ ಬೆಲ್ಲ ಮೇಯುವ ಇಚ್ಛೆ ಮನಕ್ಕೆ ಇಲ್ಲದ ನಿಮಿತ್ತ ಮನದ ದೆಸೆಯಿಂದ ಅಂಗ ಸುಖ ದುಃಖಗಳಿಗೆ ಈಡಾಗಿದೆ. ಶಾಶ್ವತ ಸುಖ ಅಂಗದಲ್ಲಿಯ ಸಂಗಯ್ಯನಲ್ಲಿಯೇ ಉಳಿದಿದೆ. ದೇವರು ಅಂಗದಲ್ಲಿ ಬಂದದ್ದು ಅಂಗವನ್ನು ಆವರಿಸಿರುವ ಮನವನ್ನು ತನ್ನತ್ತ ಸೆಳೆಯುವುದಕ್ಕಾಗಿ. ಮನಕ್ಕೆ ದೇವರು ಯಾರು ಎಂದು ತಿಳಿಯದ್ದಕ್ಕಾಗಿ ಅಂಗದಲ್ಲಿಯೇ ಉಳಿದು ಅಂಗವನ್ನು ಮಂಗದಂತೆ ಮರ ಸುತ್ತುವುದಕ್ಕೆ ಹಚ್ಚಿದೆ. ಮನ ದೇವನನ್ನು ಅರಿತು ಅಂಗದಲ್ಲಿಯೇ ಹುಡುಕಿದರೆ ಅರಿವಿನ ಬೆಲ್ಲದ ಸಿಹಿ ಅಲ್ಲಿಯೇ ಇದೆ. ಆಗ ಮಾತನಾಡಿದರೆ ಸಿಹಿ, ನೋಡಿದರೆ ಸಿಹಿ, ಮುಟ್ಟಿದರೆ ಸಿಹಿ, ರುಚಿಸಿದರೆ ಸಿಹಿ, ಮೂಸಿಸಿದರೆ ಸಿಹಿ, ಕೇಳಿದರೆ ಸಿಹಿ. ಬಾಯಿತುಂಬ ಸಿಹಿಯೇ ಸಿಹಿ. ಸಕಲ ಅಂಗಗಳಲ್ಲಿಯೂ ಈ ಸಿಹಿ ಭರಿತವಾಗಿದ್ದರೂ ಆಯಾ ಅಂಗಕ್ಕೆ ಅದು ತಿಳಿಯುತ್ತಿಲ್ಲ.

**ಬಲ್ಲವನಾದ ಮತ್ತೆ ನಾಡೆಲ್ಲರೂ ಕೂಡಿ ಬಾಳದ ಹೆಣ್ಣಿಗೆ ನ್ಯಾಯ ಮಾಡುವಂತೆ :**

ಅಂಗದಲ್ಲಿ ಸಂಗಯ್ಯನೆಂಬ ಗಂಡ ಸಂಗಮವಾಗಿದ್ದಾನೆ. ಅಂಗದಲ್ಲಿಯೇ ಮನವೆಂಬ ಹೆಣ್ಣೂ ಇದ್ದಾಳೆ. ಈಕೆ ಗಂಡನನ್ನು ಹೊರಗೆ ಹುಡುಕಬೇಕಿಲ್ಲ. ಮನೆಯಲ್ಲಿಯೇ ಮನ್ಮಥ ಮನೆ ಮಾಡಿದ್ದರೂ ಅಂಗವೆಂಬ ಮನೆಯನ್ನೇ ಹಾದರದ ಮನೆಯನ್ನಾಗಿ ಮಾಡಿದ್ದಾಳೆ. ಬಾಳುವೆ ಮಾಡದ ಹೆಣ್ಣಿಗೆ ಸಕಲರೂ ನ್ಯಾಯ ಹೇಳುತ್ತಾರೆ ; ಹನ್ನೆರಡು ಜನ ಬುದ್ಧಿವಂತರಂತೆ ! ಅವರಿಗೆ ತನ್ನನ್ನು ಎಣಿಕೆ ಮಾಡುವುದು ಗೊತ್ತಿಲ್ಲದ್ದಕ್ಕಾಗಿ ಲೆಕ್ಕ ಸಿಕ್ಕುವುದೇ ಇಲ್ಲ. ಎಷ್ಟು ಬಾರಿ ಎಣಿಸಿದರೂ ಹನ್ನೊಂದೇ ಜನ. ತನ್ನ ಲೆಕ್ಕ ತನಗೇ ಗೊತ್ತಿಲ್ಲದವನು ನ್ಯಾಯದ ಮಾತು ಆಡಬಹುದೆ ? ಅವನು ಬಲ್ಲವನು ಆಗಬಲ್ಲನೆ ? ನಾಡಿನ ಜನರೆಲ್ಲ ತನ್ನ ಬಿಟ್ಟು ಎಣಿಸುವವರೇ ಆಗಿದ್ದಾರೆ. ಆದರೂ ನ್ಯಾಯ ಹೇಳುತ್ತಾರೆ. ಹೀಗಾಗಿ ಅರಿವಿನ ಬೆಲ್ಲದ ರುಚಿಯನು ಸವಿಯಲು ಅವರಿಗೆ ಸಾಧ್ಯವಿಲ್ಲ.

**ಅರಿದ ಅರಿವಿಂಗೆ ಮರೆದ ಮರೆವೆಗೆ ತನ್ನಲ್ಲಿದ್ದು ಕರಿಗೊಂಡಂತೆ ಸಾಕ್ಷಿಯೆಂದ ನಂಬಿಗ ಚೌಡಯ್ಯ!.**

ಮರೆತು ಸುಖಕ್ಕೆ ಭಾಗಿಯಾದವನೂ ತಾನೆ. ಮರೆದುದನು ಅರಿತು ಹೀಗೆ ಮಾಡಬಾರದಿತ್ತು ಎಂದು ದುಃಖಕ್ಕೆ ಭಾಗಿಯಾದವನೂ ತಾನೆ. ಅರಿಯುವುದಕ್ಕೆ ಅರಿವು ಸಹಕರಿಸಿತು ; ಮರೆಯುವುದಕ್ಕೆ ಮನ ಸಹಕರಿಸಿತು. ಮರೆತ ಮನ ಸಾಕ್ಷಿಯಾಗಿ ಅರಿವನ್ನು ಅರಿತಾಗಲೇ ಅರಿವು ಕರಿಗೊಳ್ಳುವುದು. ಆ ಅರಿವೇ ತಾನಾಗುವುದು. ಮರೆತ ಲೆಕ್ಕ ಸಿಕ್ಕು ಹನ್ನೆರಡಾಗುವುದು. ತನ್ನನ್ನು ಮರೆತು ಇತರರನ್ನು ಎಣಿಸಿದ ಲೆಕ್ಕ ಹನ್ನೊಂದಾಯಿತು. ತನ್ನನ್ನು ತಾನೇ ಎಣಿಸಿಕೊಂಡಾಗ ಇತರರನ್ನು ಎಣಿಸಲು ಸಾಧ್ಯವಾಗಲೇ ಇಲ್ಲ. ತನ್ನಲ್ಲಿ ತಾನೇ ಕಳೆದು ಹೋಗಿದ್ದ. ಎಣಿಸಿದಾಗ ತನ್ನಲ್ಲಿ ತಾನೇ ಸಿಕ್ಕ !

**62**

**ಎಲ್ಲವ ಕಳಿದುಳಿದ ಹೂವ ತಂದು,**
**ಗೆಲ್ಲ ಸೋಲಕ್ಕೊಳಗಾಗದ ನೀರ ತುಂಬಿ,**
**ಕರಣಂಗಳೆಲ್ಲವು ಕಂಗಳ ತುಂಬಿ ನಿಂದು ನೋಡಿ,**
**ಎಂದೂ ತನ್ನಂಗದಿಚ್ಛೆಯ ಮರೆದು,**
**ಲಿಂಗವ ಪೂಜಿಸಬೇಕೆಂದನಂಬಿಗ ಚೌಡಯ್ಯ .**

ಅಂಗ ಯಾವುದೇ ಇಚ್ಛೆಗೆ ಒಳಗಾಗದಿದ್ದಾಗ ಲಿಂಗ ಅಂಗಕ್ಕೆ ಒಳಕೆಯಾಗುತ್ತದೆ. ಅಲ್ಲಿಯ ವರೆಗೆ ಅಂಗದಲ್ಲಿ ಲಿಂಗ ಸಂಗಮವಾಗಿದ್ದರೂ ಅಂಗಕ್ಕೆ ಸೋಂಕದೆ ಅಂಗದಲ್ಲಿಯೇ ಇದ್ದು ಮನಕ್ಕೆ ಪಾಠ ಮಾಡುತ್ತದೆ. ಲಿಂಗ ಮಾಡುವ ಪಾಠ ಮನಕ್ಕೆ ಕೇಳುವುದಿಲ್ಲ. ಹೀಗಾಗಿ ಲಿಂಗದ ಗುಲಾಮನಾಗಬೇಕಾದ ಅಂಗ ಮನದ ಗುಲಾಮನಾಗುತ್ತದೆ.

ಹೂವು ಸುಗಂಧ ಭರಿತವಾಗಿದೆ. ಹಾಗೆಂದು ಮನ ತಿಳಿದಿದೆ. ಮನಕ್ಕೆ ಗೊತ್ತಿರುವುದೇ ಅಷ್ಟು. ಅರಳಿದಾಗ ಸುಗಂಧ ಭರಿತವಾಗಿದ್ದ ಹೂವು ಕೊಳೆತಾಗ ದುರ್ಗಂಧದಿಂದ ನಾರುತ್ತದೆ. ಅಂದರೆ ಹೂವಿನಲ್ಲಿ ಸುಗಂಧವೂ ಇದೆ ; ದುರ್ಗಂಧವೂ ಇದೆ ಎಂದಾಯಿತು. ಹೊರಗೆ ಇರುವ ಹೂವಿನ ಪರಿಚಯವೇ ಮೂಗಿಗೆ ಇಲ್ಲವೆಂದ ಮೇಲೆ ಒಳಗಡೆ ಇರುವ ಲಿಂಗದ ಪರಿಮಳ ಹೇಗೆ ಪರಿಚಯವಾಗುತ್ತದೆ ?

ಹೂವಿನಲ್ಲಿರುವ ಸುಗಂಧವನ್ನು ದುರ್ಗಂದವನ್ನು ಕಳೆದು ಉಳಿದ ಹೂವನ್ನು ತಂದು ಪೂಜಿಸುವುದು ಹೇಗೆ ? ಈ ತಂತ್ರಜ್ಞಾನ ಮನಕ್ಕೆ ಗೊತ್ತಿಲ್ಲ. ಮನಕ್ಕೆ ಮನವರಿಕೆ ಮಾಡುವ ಸಮರ್ಥ ಗುರುವಿನ ಪರಿಚಯ ಮನಕ್ಕೆ ಆಗುವವರೆಗೆ ಇದು ಸಾಧ್ಯವಾಗುವುದಿಲ್ಲ. ಹೂವಿನಿಂದ, ಪತ್ರಿಯಿಂದ, ಧೂಪ ದೀಪ ಲೋಬಾನ ಅಷ್ಟಗಂಧ ವಿಭೂತಿಯಿಂದ ಪೂಜಿಸುವುದು ಮಾತ್ರ ಮನಕ್ಕೆ ಗೊತ್ತು . ಅದು ತಾನೇ ಮಾಡಿದ ಕಲ್ಲಿನ ಲಿಂಗಕ್ಕೆ. ಅದು ಎರೆದರೆ ನೆನೆಯುವುದಿಲ್ಲ ; ಮರೆದರೆ ಬಾಡುವುದಿಲ್ಲ. ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆಯೆಂದು ತನಗನ್ನಿಸುವುದೇ ಇಲ್ಲ. ಹಾಗೆಯೇ ಪೂಜಿಸಿ ಪೂಜಿಸಿ ಅಂಗಕ್ಕೆ ಘನದ ದರ್ಶನ ಭಾಗ್ಯ ಸಿಕ್ಕದಂತೆ ವ್ಯರ್ಥ ಸಾಯಿಸುತ್ತದೆ ಮನ !

**ಗೆಲ್ಲ ಸೋಲಕ್ಕೊಳಗಾಗದ ನೀರ ತುಂಬಿ, ಕರಣಂಗಳೆಲ್ಲವು ಕಂಗಳ ತುಂಬಿ ನಿಂದು ನೋಡಿ :**

ನೆಲ ಒಂದೇ ಹೊಲೆಗೇರಿ ಶಿವಾಲಯಕ್ಕೆ, ಜಲ ಒಂದೇ ಶೌಚಾಚಮನಕ್ಕೆ, ಕುಲ ಒಂದೇ ತನ್ನ ತಾನರಿದವಂಗೆ ಎಂದು ಬಸವಣ್ಣನವರು ಸಾರಿದರೂ ಜಲದಲ್ಲಿ ನೆಲದಲ್ಲಿ ತನುವಿನಲ್ಲಿ ಭೇದ ಮಾಡುವುದು ನಿಂತಿಲ್ಲ. ಜೀವ ಜಲ ಬಿಂದು ಗರ್ಭದಲ್ಲಿ ಹೊಕ್ಕು ತನುವಾಗಿ ಹೊರ ಬಂದಿದೆ. ತನು ಜಾತಿ-ಮತ, ಹೆಣ್ಣು-ಗಂಡು, ಶ್ರೀಮಂತ-ಬಡವ, ಮುಂದು- ಹಿಂದು, ಗುರು-ಶಿಷ್ಯ ,ರಾಜ-ಪ್ರಜೆ ಎಂಬ ಗೆಲುವು ಸೋಲಿಗೆ ಒಳಗಾಗಿದೆ. ಈ ಭೇದ ಅಂಗದಲ್ಲಿ ಇರುವವರೆಗೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನನ್ನು ಪೂಜಿಸಲು ಬರುವುದಿಲ್ಲ.

ಅಂಗ ಜೀವ ಜಲಭರಿತ ಅರಿವಿನ ಪಾತ್ರೆ . ಆ ಪಾತ್ರೆಗೆ ಮನವೆಂಬ ಅಜ್ಞಾನ ಮುಸುಕಿದೆ. ಹೀಗಾಗಿ ಗುರುದೇವನಿದ್ದ ಅಂಗವನ್ನು ಹಿಡಿದು ಗೆಲ್ಲ ಸೋಲಕ್ಕೆ ಒಳಗಾಗಿದೆ. ಕಣ್ಣು ಕಿವಿ ಮೂಗು ಚರ್ಮ ನಾಲಿಗೆ ಅರಿವಿನಿಂದ ಕೆಲಸ ಮಾಡುತ್ತಿಲ್ಲ. ಅರಿವೆಂಬ ಗುರುದೇವನ ಮಾತು ಕೇಳುತ್ತಿಲ್ಲ. ಕರಣೇಂದ್ರಿಯಗಳನ್ನು ಆವರಿಸಿದ ಮನದಿಂದಲೇ ಅರಿವೆಂಬ ಗುರುದೇವನನ್ನು ಪೂಜಿಸಬೇಕಾಗಿದೆ. ಈ ಪೂಜೆ ಜಲರಹಿತ ಪೂಜೆ. ಜಲದಿಂದಲೇ ಹುಟ್ಟಿದ ಮನ ಜಲವೇ ಆಗಿದೆ. ಗುರುದೇವನನ್ನು ಅರಿಯದ ಕಾರಣ ಸೋಲು ಗೆಲವುಗಳಿಗೆ ದಾಸನಾಗಿದೆ. ಗುರು ದೇವನನ್ನು ಪೂಜಿಸಿದ ಕೂಡಲೇ ಸೋಲು ಗೆಲವುಗಳಿಂದ ಮುಕ್ತನಾಗುತ್ತದೆ. ಆಗ ಕರಣಗಳ ತುಂಬ ಜ್ಞಾನ ಕಿರಣಂಗಳೇ ತುಂಬುತ್ತವೆ. ಆ ಕಿರಣಗಳಿಂದ ಕರಣಂಗಳು ಥಳ ಥಳ ಹೊಳೆಯುತ್ತವೆ. ಸಕಲರನ್ನು ನೋಡಿ, ಕೇಳಿ, ಮುಟ್ಟಿ, ಪರಿಮಳದಿಂದ ಆಸ್ವಾದಿಸಿ, ರುಚಿಸಿ ತನ್ನಂತೆ ತಿಳಿದು ಆನಂದ ಪಡುತ್ತದೆ.

**ಎಂದೂ ತನ್ನಂಗದಿಚ್ಛೆಯ ಮರೆದು ಲಿಂಗ ಪೂಜಿಸಬೇಕೆಂದ ನಂಬಿಗಚೌಡಯ್ಯ :**

ಲಿಂಗ ಕಿರಣಗಳಿಂದ ಕೂಡಿದ ಅಂಗ ಮಹಾಲಿಂಗವೇ ಆದಾಗ ಅಂಗದ ಇಚ್ಛೆ ಎಂಬುದು ಇನ್ನೆಲ್ಲಿ ? ಅಂಗ ಲಿಂಗಾಂಗವೇ ಆಗಿದೆ. ಲಿಂಗ ಲಿಂಗವನ್ನು ಪೂಜಿಸಲು ಬರುವುದೆ ? ಲಿಂಗಕ್ಕೆ ಲಿಂಗ ಕಟ್ಟಲು ಬರುವುದೆ ತಾನೇ ಲಿಂಗವಾಗಿರುವಾಗ ತನಗೆ ಮತ್ತೊಂದು ಲಿಂಗವೆ ? ಅಂಗದಲ್ಲಿ ಲಿಂಗವಿದೆ ಎಂಬುದು ಅಂಗವನ್ನು ಆವರಿಸಿದ ಮನಕ್ಕೆ ಮನವರಿಕೆಯಾದಾಗ, ಅಂಗದ ಮೇಲೆ ಲಿಂಗ ಕಟ್ಟಿಕೊಂಡ ಮೆರೆದಾಡುವ ಮನ ಆ ಲಿಂಗವನ್ನು ಎಸೆದು ಅಂಗದಲ್ಲಿಯೇ ಸಂಗಮವಾಯಿತು. ಪೂಜಿಸುವ ಮನ ಪೂಜೆಗೆ ಬಾರದಂತೆ ಘನ ಮನವಾಯಿತು.

**63**

**ಎಲ್ಲಾ ದೇವರಿಗೆ ಮಸ್ತಕದ ಪೂಜೆ,**
**ನಮ್ಮ ಗುರುಲಿಂಗಜಂಗಮ ದೇವರಿಗೆ ಪಾದಾಂಗುಷ್ಟದ ಪೂಜೆಯೆಂಬುದು**
**ಸಕಲ ವೇದಶಾಸ್ತ್ರಪುರಾಣಂಗಳು, ಶ್ರುತಿ ಸ್ಮೃತಿಗಳು ಸಾರುತ್ತಿರಲು,**
**ಅದನರಿದು ಓದುತ್ತ ಓದುತ್ತ ಹಾಡುತ್ತ ಹಾಡುತ್ತ**
**ಅದಕ್ಕೆ ಅಪಖ್ಯಾತಿಯ ತರುವವನೆಂತು ಜಂಗಮವೊ ?**
**ಅವನೆಂತು ಭಕ್ತನೊ ?**
**ತಾನೊಡೆಯನಂತೆ, ತಾ ಭಕ್ತನಂತೆ,**
**ತನ್ನೆಡೆಯ ಗುಡಿಯ ಲಿಂಗದ ಮುಂದಿಟ್ಟು**
**ನಿತ್ನಷ್ಟಲಿಂಗಕ್ಕೆ ಕೊಟ್ಟುಕೊಂಬ**
**ತುಡುಗುಣಿ ನಾಯ ಮೂಳಹೊಲೆಯರ ಕಂಡಡೆ**

**ನಡುವಿನ ಮೇಲೆ ಒದೆಯೆಂದಾತ**
**ನಮ್ಮ ಅಂಬಿಗರ ಚೌಡಯ್ಯ .**

ದೇವರು ಮಾನವರಿಂದ ಹುಟ್ಟಿದರು. ಮಾನವರಿಂದಲೇ ಪೂಜೆಗೊಳ್ಳುತ್ತಿದ್ದಾರೆ. ಮಾನವ ನಿರ್ಮಿಸಿದ ದೇವನನ್ನು ಮಾನವನೇ ಪೂಜಿಸಬಹುದೆ ? ಕಲ್ಲಿನಿಂದ, ಲೋಹದಿಂದ ದೇವನನ್ನು ನಿರ್ಮಿಸಿ, ಅದಕ್ಕೆ ಭವ್ಯವಾದ ಮಂದಿರ ಆಲಯಗಳನ್ನು ; ಪ್ರಾರ್ಥಿಸುವುದಕ್ಕಾಗಿ ಚರ್ಚ್ ಮಸೀದಿಗಳನ್ನು ಕಟ್ಟಿ, ಕಟ್ಟಿದ ತನ್ನನ್ನೇ ಮರೆತು ಅವುಗಳಿಗೆ ಭ್ರಮಿತನಾಗುವುದೆ ? ಅಂತಹ ದೇವರುಗಳ ಸತ್ಯ ಕಲ್ಲು ಕಟ್ಟಿಗೆ ಲೋಹ ! ಆದರೂ ಮಸ್ತಕ, ಪಾದ, ಪಾದುಕೆ, ಭುಜ, ಕಿರೀಟಗಳನ್ನು ಕೆತ್ತಿ ಆಲಯದ ಗೋಪುರಗಳಿಗೆ ಚಿನ್ನದ ಕಲಶಗಳನ್ನಿಟ್ಟು ಭ್ರಮಿಸಿ ಸಂಭ್ರಮಿಸುವ ಮಾನವನ ಭ್ರಮೆಗೆ ಏನ್ನೆನ್ನಬೇಕು ? ತಾನೇ ಕೆತ್ತಿ ಪ್ರತಿಷ್ಠಾಪಿಸಿದ ಮೂರ್ತಿಗೆ ಮಸ್ತಕಾಭಿಷೇಕ ಮಾಡಿದರೆ ಅದು ತನಗೆ ವರ ನೀಡಬಲ್ಲುದೆ ಹೇಗೆ ಎಂದು ಪೂಜಿಸುವ ತಾನೇ ನಿರ್ಧರಿಸಬೇಕು.

ಅಂಗವನ್ನು ಮಸ್ತಕ ಪಾದ ಎಂದು ವಿಂಗಡಿಸಿದ್ದೇ ತಪ್ಪಾಗಿದೆ. ಸಕಲ ಅವಯವಗಳಿಂದ ಕೂಡಿದ ಅರಿವಿನ ಪರಿಪೂರ್ಣ ಅಂಗವೇ ಲಿಂಗಾಂಗವಾಗಿದೆ. ಇದನ್ನು ಗಮನಿಸದ ಅಂಗ ಮಸ್ತಕಕ್ಕೆ ಅಭಿಷೇಕ ಮಾಡುವ ನೆಪದಲ್ಲಿ ತನ್ನಂಗವನ್ನೇ ಬೇರ್ಪಡಿಸಿಕೊಂಡಿದೆ.

ಮಸ್ತಕದಲ್ಲಿ ಅಹಂಕಾರ ಭರಿತವಾಗಿದೆ. ಅದನ್ನು ನಷ್ಟ ಮಾಡಿ ಸಕಲ ಲಿಂಗಾಂಗವನ್ನು ಪಾದ ಹೊತ್ತುಕೊಂಡಿದೆ. ಮುಳ್ಳು, ಕಲ್ಲು, ಮಲ, ಮೂತ್ರ , ಕೆಸರು, ಧೂಳು, ಮಣ್ಣು, ಉರಿಬಿಸಿಲನ್ನೂ ಗಮನಿಸದೆ ಪಾದ ಇಡೀ ಲಿಂಗಾಂಗವನ್ನು ಶ್ರದ್ಧೆಯಿಂದ ಭಕ್ತಿಯಿಂದ ಹೊತ್ತುಕೊಂಡಿದೆ. ಕಳಶಪ್ರಾಯವಾದ ದೇವರನ್ನೇ ಹೊತ್ತಿದ್ದೇನೆಂಬ ಭಾವ ಪಾದಕ್ಕೆ ! ನೆತ್ತಿ ತನ್ನನ್ನು ಹೊತ್ತ ಶ್ರೀ ಪಾದವೆಂದು ಪಾದವನ್ನು ಭಾವಿಸುವುದೇ ಇಲ್ಲ. ಪಾದ ಯಾರದಾದರೇನು ? ನೆತ್ತಿ ಯಾರದಾದರೇನು ? ಇವೆರಡೂ ಅಂಗಕ್ಕೆ ಸಂಬಂಧಪಟ್ಟ ಅಮೂಲ್ಯ ವಸ್ತುಗಳೆಂದು ನೆತ್ತಿ ಅರಿಯಬೇಡವೆ ? ಪಾದ ತಟ್ಟಿದರೆ ಸಾಕು ನೆತ್ತಿಯಲ್ಲಿ ಅಗ್ನಿಯ ಜ್ವಾಲೆಗಳೇ ಏಳುತ್ತವೆ. ಹಾವಿನಂತೆ ಬುಸು ಗುಡುತ್ತದೆ. ಅದು ರಾಜನ ಮಸ್ತಕವಾದರೆ ಪಾದ ತಟ್ಟಿದ ಮಸ್ತಕ ನೆಲಕ್ಕುರುಳುತ್ತದೆ !

ಸಕಲ ಆಗಮ ವೇದ ಶಾಸ್ತ್ರ ಪುರಾಣಗಳು, ಶ್ರುತಿ, ಸ್ಮೃತಿಗಳು ಶ್ರೀಪಾದವನ್ನು ಪೂಜಿಸೆಂದು ಸಾರುತ್ತಲಿವೆ. ಅದನ್ನು ಓದುತ್ತ ಓದುತ್ತಾ ಹಾಡುತ್ತಾ ಪುನಃ ಪಾದ ತಟ್ಟಿದರೆ ಅಪಖ್ಯಾತಿಗೆ ಗುರಿಯಾಗುವ ಅಂಗವುಳ್ಳವನನ್ನು ಲಿಂಗಾಂಗವೆಂದು ಗುರುತಿಸಬಹುದೆ ? ಅಂಗ ಯಾವುದಾದರೇನು ? ಅದಕ್ಕೆ ಮಸ್ತಕವೂ ಇದೆ, ಪಾದಗಳೂ ಇವೆ. ಅಂಗದ ಪಾದಗಳನ್ನು ಶ್ರೀಪಾದಗಳೆಂದು ಸಾರಿವೆ ಶಾಸ್ತ್ರಗಳು. ಕಲ್ಲಿನಿಂದ ಕೆತ್ತಿದ ಮಸ್ತಕಕ್ಕೆ ಅಭಿಷೇಕ ಮಾಡಿದರೆ ಅದು ನೆನೆದು ಒದ್ದೆಯಾಗುವುದೆ ? ಮರೆತರೆ ಬಾಡುವುದೆ? ಹಾಗಾಗುವುದಿಲ್ಲವೆಂದ ಮೇಲೆ ಹುರುಳಿಲ್ಲದ ಕೆಲಸವನ್ನು ತಾನೇಕೆ ಮಾಡುತ್ತಿದ್ದೇನೆ ಎನ್ನುವುದನ್ನು ತಾನೇ ತಿಳಿಯಬೇಡವೆ ?

ಅಂಗಕ್ಕೆ ಅಭಿಷೇಕ ಮಾಡಿದರೆ ಅಂಗದಲ್ಲಿ ಸಂಗಮವಾದ ಲಿಂಗ ಅರಳುತ್ತದೆ. ಪಾದಕ್ಕೆ ಅಭಿಷೇಕ ಮಾಡಿದರೆ ಮಸ್ತಕದಲ್ಲಿದ್ದ ಅಹಂಕಾರ ನಷ್ಟವಾಗುತ್ತದೆ. ಅದು ಗುರುವಿನ ಪಾದ ; ಭಕ್ತ ಶಿಷ್ಯ ಭವಿಯ ಪಾದವೆಂದೆಣಿಸುವಂತಿಲ್ಲ. ಸಕಲ ಪಾದಗಳೆಲ್ಲ ಶ್ರೀಪಾದಗಳೇ ಆಗಿವೆ. ಅಂಗದ ಪಾದಕ್ಕೆ ಮಸ್ತಕ ಬಾಗಿಸಿ ನೋಡಿ, ಆ ಮಸ್ತಕ ಆನಂದದಿಂದ ಅರಳುತ್ತದೆ. ಬಾಗಿದ ಮಸ್ತಕವನ್ನು ಅಪ್ಪಿಕೊಳ್ಳಲು ತಾನೂ ಬಾಗುತ್ತದೆ. ಎರಡೂ ಮಸ್ತಕಗಳಲ್ಲಿದ್ದ ಅಹಂಕಾರ ನಷ್ಟ ವಾಗಿ ಕ್ಷಣಾರ್ಧದಲ್ಲಿ

ಅಂಗಗಳು ಲಿಂಗಾಂಗವಾಗುತ್ತವೆ.

ಶ್ರೀಪಾದಕ್ಕೆ ಅಪಖ್ಯಾತಿಯ ತರುವವನು ಜಂಗಮನೂ ಅಲ್ಲ, ಭಕ್ತನೂ ಅಲ್ಲ, ಒಡೆಯನೂ ಅಲ್ಲ, ಗುರುವೂ ಅಲ್ಲ, ಶಿಷ್ಯನೂ ಅಲ್ಲ.

ತನ್ನೆಡೆಯ ಕಲ್ಲದೇವರ ಗುಡಿಯ ಮುಂದಿಟ್ಟು, ಪುನಹ ಆ ಎಡೆಯನ್ನು ಇಷ್ಟ ಲಿಂಗಕ್ಕೆ ತೋರಿಸಿ, ಕಣ್ಣೆಗೊತ್ತಿಕೊಂಡು ಪ್ರಸಾದವೆಂದು ಸ್ವೀಕರಿಸುವ ಭಕ್ತನು ಭಕ್ತನಲ್ಲ ; ತುಡುಗುಣಿಯ ದನವಿದ್ದಂತೆ. ಅಂತಹ ಆಚಾರದಲ್ಲಿರುವ ನಾಯಿ ಮೂಳ ಹೊಲೆಯರ ಕಂಡಡೆ ನಡುವಿನ ಮೇಲೆ ಒದೆಯೆಂದಾತ ನಮ್ಮ ಅಂಬಿಗರ ಚೌಡಯ್ಯ ಎಂದು ಶರಣರು ಖಾರವಾಗಿ ನುಡಿದಿದ್ದಾರೆ.

ತಿಳಿಯುವವನು ತಾನೇ. ತಿಳಿಯದೇ ಪೂಜಿಸಿ ಆಚರಿಸುವವನು ತಾನೇ. ತನ್ನನ್ನು ಮನ ಆವರಿಸಿ ತಿಳಿಯದಂತೆ ಮಾಡಿದೆ. ಹಾಗೆ ತಿಳಿಯದಂತೆ ಮಾಡಿದ ವಿಷಯ ಕೂಡಾ ತನಗೆ ತಿಳಿದಿದೆ. ತಿಳಿದವನು ತಿಳಿಯದವನನ್ನು ಒದ್ದು ಹೊರ ಹಾಕಬೇಕು. ಅಂದರೆ ತನ್ನ ಅಜ್ಞಾನವನ್ನು ತನ್ನ ಜ್ಞಾನದಿಂದ ಒದ್ದು ಓಡಿಸಬೇಕೆಂದು ಶರಣರು ರಹಸ್ಯವಾದ ಮಾತುಗಳೊಂದಿಗೆ ಓದುಗರಲ್ಲಿ ತಮ್ಮ ಅಕ್ಕರೆಯ ಅಕ್ಷರಗಳ ಮೂಲಕ ಅರುಹಿದ್ದಾರೆ.

**64**

**ಎಲುವೆಂಬ ಹಂಜರ ಥಟ್ಟಾಗಿ,**
**ಉಭಯವ ಘಟಿಸಿದ ತೊಗಲು**
**ಬ್ರಹ್ಮನೆಂಬ ಅಳಿಲೆಯ ಕಾಯಲ್ಲಿ**
**ವಿಷ್ಣುವೆಂಬ ನೀರ ಹೊಯಿದು,**
**ರುದ್ರನೆಂಬ ಚೂರ್ಣದಲ್ಲಿ ಖಾರಕ್ಕೆ ಮೆಟ್ಟಲಾಗಿ,**
**ತೊಗಲ ಹೊಲಸು ಕೆಟ್ಟಿತ್ತು , ಹರುಗುಲ ಹುದಿಗಿತ್ತು .**
**ವರ್ತನವೆಂಬ ಹುಟ್ಟ ಹಿಡಿದು,**
**ಮಾಟಕೂಟವೆಂಬ ಹೊಳೆಯಲ್ಲಿ ಕೂಟದವರು ದಾಟುತ್ತಿದಾರೆ,**
**ಎಂದನಂಬಿಗ ಚೌಡಯ್ಯ .**

ದೇಹವೆಂಬುದೊಂದು ಮಾಟಕೂಟದ ಚರ್ಮದ ಕವಚ ಹೊಂದಿದ ಎಲುವಿನ ಹಂದರ. ಇದು ಬ್ರಹ್ಮನಿಂದ ಹುಟ್ಟಿ ವಿಷ್ಣುವಿನಿಂದ ರಕ್ಷಿಸಲ್ಪಟ್ಟು ರುದ್ರನಿಂದ ನಾಶ ಹೊಂದುತ್ತದೆ. ಹುಟ್ಟಿಸಿದ ಬ್ರಹ್ಮ ಹುಟ್ಟಿಸಿದ ಅಂಗದಲ್ಲಿಯೇ ಇದ್ದು ಭ್ರಮೆಗೆ ಒಳಪಡಿಸಿದ್ದಾನೆ. ರಕ್ಷಣೆ ಮಾಡುವ ಅಂಗದಲ್ಲಿಯೇ ವಿಷ್ಣುವಿದ್ದು ಅಂಗವನ್ನು ರಕ್ಷಿಸುತ್ತಿದ್ದಾನೆ. ನಾಶ ಮಾಡುವ ರುದ್ರನೂ ಅಂಗದಲ್ಲಿಯೇ ಇದ್ದು ನಾಶಕ್ಕಾಗಿ ಹಾದಿ ಕಾಯುತ್ತಿದ್ದಾನೆ.

ಬ್ರಹ್ಮ ವಿಷ್ಣು ರುದ್ರರೆಂಬುವವರು ಚರ್ಮದ ಕವಚದಲ್ಲಿಯೇ ಹುದುಗಿದ್ದಾರೆ. ಇವರು ಸೂಸುವ ಜ್ಞಾನದ ಕಿರಣಗಳ ನೆರಳೇ ಕತ್ತಲೆಯಾಗಿ; ಭ್ರಮೆಯ ಅಜ್ಞಾನದಿಂದ ಚರ್ಮ ಕೆಟ್ಟು ಹೋಗಿದೆ. ಹರಗೋಲಿನ ದುರ್ವಾಸನೆ ಅಧಿಕವಾಗಿದೆ. ಬ್ರಹ್ಮನೆಂಬ ಅಳಿಲೆಯ ಕಾಯಿಗೆ (ಚರ್ಮ ಹದ ಮಾಡುವ ಚಕ್ಕೆ)ವಿಷ್ಣುವೆಂಬ ನೀರು ಹೊಯ್ದು ರುದ್ರನೆಂಬ ಖಾರ ಹಾಕಿ ತೊಗಲಲ್ಲಿ ನೆನೆಯಿಸಲು ಅದರ ಹೊಲಸು ಕೆಡುತ್ತದೆ. ವರ್ತನೆಂಬ ಹುಟ್ಟ ಹಿಡಿದು ಮಾಟ ಕೂಟವೆಂಬ

ಹೊಳೆಯಲ್ಲಿ ಕೂಟದವರು ದಾಟುತ್ತಿದ್ದಾರೆ.

ಅಂಗವೆಂಬುದೇ ಹರಗೋಲು. ರಕ್ತ ಜಲ ಎಲುವಿನ ಹಂದರವನ್ನು ಚರ್ಮದಿಂದ ಬಿಗಿದುಕೊಂಡು ಜಲದಲ್ಲಿಯೇ ಪಯಣಿಸಬೇಕಾಗಿದೆ. ಜಲದಲ್ಲಿಯೇ ಪಾಪ ಪುಣ್ಯ ಜಾತಿ ಮತ ಭಾಷೆ ವೇಷ ಹೆಣ್ಣು ಗಂಡು ಎಂಬ ಅಜ್ಞಾನದ ಅಲೆಗಳು ಹರಗೋಲಿಗೆ ಬಡಿದು ನುಜ್ಜು ಗುಜ್ಜು ಮಾಡುತ್ತದೆ. ಆಯ ನೋಡಿ ಹುಟ್ಟು ಹಾಕಿ ಜ್ಞಾನದ ದಡ ಸೇರಬೇಕಾಗಿದೆ.

**65**

**ಎಲೋ ಮಾನವ ಕೇಳೆಲೊ,**
**ಶೀಲದಲ್ಲಿ ಸಂಪನ್ನರಾದವರು ನೀವು ಕೇಳಿರೊ :**
**ಹಣ್ಣುಗಳು ಸಣ್ಣ ಜಾತಿಯ ಎಂಜಲು,**
**ಹಾಲು ಕರುವಿನ ಎಂಜಲು,**
**ಮೊಸರು ಗೊಲ್ಲತಿಯ ಎಂಜಲು,**
**ಅಕ್ಕಿ, ಗೋಧಿ, ಜೋಳ, ಬೆಲ್ಲಗಳು ನೊಣದ ಎಂಜಲು,**
**ನೀರು, ಮೀನು, ಕಪ್ಪೆಗಳ ಎಂಜಲು,**
**ಉಪ್ಪು ಉಪ್ಪಾರನ ಎಂಜಲು,**
**ಎಣ್ಣೆ ಸರ್ವಮಾನವರ ಎಂಜಲು,**
**ಸಕಲ ಪದಾರ್ಥವು ಅನಂತ ಹುಳುಗಳ ಎಂಜಲು.**
**ಇಂತಹ ಎಂಜಲವು ಎಂದು ಕಣ್ಣಾರೆ ನೋಡಿ, ಕಿವಿಯಾರೆ ಕೇಳಿ,**
**ಮಾಡುವ ದುರಾಚಾರವ ಆರು ಬಣ್ಣಿಸಬಹುದು?**
**ಅರಿವು ಇಲ್ಲದವರು ಅರಮನೆಗೆ ಮಾಡಿದರು,**
**ಭಕ್ತಿಯಿಲ್ಲದವರು ತಮ್ಮ ಗುರುಲಿಂಗಜಂಗಮಕ್ಕೆ ಮಾಡಿದರು.**
**ಇಂತಪ್ಪ ಸರ್ವರ ಎಂಜಲು ತಿಂದು**
**ಶಿವಲಿಂಗವ ಧರಿಸಿಕೊಂಡು, ಶಿವಭಕ್ತರೆಂದು ಹೇಳಿಸಿ,**
**ಕಾಲಿಗೆ ಬಂದಂತೆ ಕುಣಿದು, ಬಾಯಿಗೆ ಬಂದಂತೆ ಅಂದು,**
**ಮನಬಂದಂತೆ ಸ್ತ್ರೀ ಸಂಗದಲ್ಲಿ ಆಚರಿಸುವ**
**ಭ್ರಷ್ಟ ಹೊಲೆಮಾದಿಗರಿಗೆ ಶೀಲವು ಎಲ್ಲಿಹುದು ?**
**ಆಚರಣೆ ಎಲ್ಲಿಹುದು ? ಕುಲವೆಲ್ಲಿಹುದು ?**
**ಇಂತಪ್ಪ ಮೂಳಹೊಲೆಯರ ಮೂಗ ಕೊಯ್ದು**
**ಪಡಿಹಾರಿ ಉತ್ತಣ್ಣಗಳ ಪಾದುಕದಿ ಹೊಡೆ ಎಂದಾತ**
**ನಮ್ಮ ಅಂಬಿಗರ ಚೌಡಯ್ಯ .**

ಅಂಗ ಎನ್ನುವುದು ಒಂದೇ. ಅದಕ್ಕೆ ಆಚಾರ ಅನಾಚಾರವೆನ್ನುವುದೇ ಇಲ್ಲ. ಅದು ಅರಿವೆಂಬ ಲಿಂಗಕ್ಕೆ ಬಳಕೆಯಾಗುವ ಉಪಕರಣ. ಹೀಗಾಗಿ ಅಂಗವನ್ನು ಹೆಣ್ಣು ಗಂಡು ಎಂದು ಕರೆಯುವಂತಿಲ್ಲ. ಜಾತಿ ಮತ ಪಂಥ ಶ್ರೀಮಂತ ಬಡವ ಎನ್ನುವ ಪಾತ್ರಗಳೂ ಅದಕ್ಕಿಲ್ಲ.

ಅಂಗವನ್ನು ಮನ ಆವರಿಸಿರುವುದರಿಂದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಆ ಮನದಿಂದಲೇ ಹುಟ್ಟಿದವು. ಮನದ ಸುಖಕ್ಕಾಗಿ ಅಗೋಚರದ ಆಚಾರದಲ್ಲಿ ತೊಡಗಿದ ಅಂಗ ಮನದೆಡೆಗೆವಾಲಿತು. ಮಹಾದೇವನ ಮಾತು ಕೇಳಬೇಕಾದ ಅಂಗ ಮನದ ಮಾತು ಕೇಳಿತು. ಶೀಲದಲ್ಲಿ ಸಂಪನ್ನವಾಯಿತು.

ಅಂಗ ಅರಿವಿನ ಲಾಂಛನ ಎನ್ನುವುದು ಮರೆತು ಮತ್ತೊಂದು ಅಂಗಕ್ಕೆ ಗುರುವಾಯಿತು ; ಜಂಗಮನಾಯಿತು ; ಮೌಲ್ವಿ, ಪಾದ್ರಿ , ಆಚಾರ್ಯನಾಯಿತು. ಹಣ್ಣು ಹಾಲು ಮೊಸರು ಅಕ್ಕಿ ಗೋಧಿ ಬೇಳೆ ಬೆಲ್ಲ ಎಣ್ಣೆ ತುಪ್ಪ ಮುಂತಾದ ಎಂಜಲಲ್ಲದ ಖಾದ್ಯಗಳನ್ನು ಭಿಕ್ಷೆ ಪಡೆದು ಶೀಲವಂತನಾಯಿತು. ಇವೆಲ್ಲ ಒಂದೊಂದರ ಎಂಜಲೆನ್ನುವುದನ್ನು ಅರಿಯಲಿಲ್ಲ. ಬೇಡಿ ಮೋಸಕ್ಕೊಳಗಾಯಿತು ; ಮೋಸ ಮಾಡಿತು.

ಅಂಗಗಳೆಲ್ಲ ಒಂದೇ ಎನ್ನುವುದನ್ನು ಮರೆತ ಅಂಗಗಳು ಅನಂತ. ಕೆಲವು ಅರಮನೆಗೆ ಸೆರೆಯಾಳಾದವು. ಇನ್ನೂ ಕೆಲವು ಗುರು ಲಿಂಗ ಜಂಗಮ ಪಾದ್ರಿ, ಮೌಲ್ವಿ ಪೂಜಾರಿಗಳಿಗೆ ಸೆರೆಯಾಳಾದವು. ಹೀಗೆ ಸರ್ವರ ಎಂಜಲು ತಿಂದ ವೇಷಧಾರಿ ಗುರುವರ್ಗ ಶಿವಲಿಂಗ, ಜನಿ ವಾರ, ಶಿಲುಬೆ ಧರಿಸಿ ; ಜುಟ್ಟು ಗಡ್ಡ ಬಿಟ್ಟು, ತಲೆ ಬೋಳಿಸಿಕೊಂಡು, ನಿಲುವಂಗಿ, ಕಾವಿ ಧರಿಸಿ ಕಾಲಿಗೆ ಬಂದಂತೆ ಕುಣಿದು,ಬಾಯಿಗೆ ಬಂದಂತೆ ಅಂದು, ಮನ ಬಂದಂತೆ ಸ್ತ್ರೀ ಸಂಗದೊಂದಿಗೆ ಇದ್ದು ಪುನಃ ಮಡಿ ಶೀಲ ಆಚಾರವೆಂದು ಆಚರಿಸುವ ಭ್ರಷ್ಟ ಹೊಲೆ ಮಾದಿಗರಿಗೆ ಶೀಲ ಎಲ್ಲಿಯದೋ ಎಂದು ಪ್ರಶ್ನಿಸಿದ್ದಾರೆ ಅಂಬಿಗರ ಚೌಡಯ್ಯ .

ಇವರಿಗೆ ಆಚಾರ ಉಂಟೆ ? ಕುಲ ಉಂಟೆ ? ಇಂತಪ್ಪ ಮೂಳ ಹೊಲೆಯರ ಮೂಗ ಕೊಯ್ದು ಪಡಿಹಾರಿ ಉತ್ತಣ್ಣಗಳ ಪಾದುಕೆಯಿಂದ ಹೊಡೆ ಎಂದು ಅವರ ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನನ್ನು ಬೇಡಿಕೊಂಡಿದ್ದಾರೆ. ಭ್ರಮೆಯ ಆಚಾರದಲ್ಲಿದ್ದ ವರನ್ನು ಯಾರೂ ಹೊಡೆಯಬೇಕಿಲ್ಲ. ಅವರ ಅಂಗದಲ್ಲಿ ಸಂಗಮವಾದ ಅರಿವು ಅವರನ್ನು ಹೊಡೆಯದೆ ಬಿಡುವಂತಿಲ್ಲ. ಅರಿವು ಮರೆತದ್ದಕ್ಕಾಗಿ ಮರೆವಿನ ಆಟ ನಡೆದಿದೆ.

**66**

**ಎಸವಿನ ಗುರು ಹೋಗಿ ಶಿಶುವಧೆಯ ಮಾಡಿದ.**
**ಶಿಶು ಹೋಗಿ ಮರಳಿ ಗುರುವ ಕೊಂದಡೆಯು,**
**ಹೆಸರುಗೊಂಬ ಅಣ್ಣಗಳು ನೀವು ಕೇಳಿರೋ :**
**ಇವರಿಬ್ಬರೂ ಸತ್ತ ಠಾವನೊಬ್ಬರೂ ಅರಿಯರು,**
**ನಿರ್ವಯಲೆಂದಾತನಂಬಿಗ ಚೌಡಯ್ಯ .**

'ತಮಸೋಮಾ ಜ್ಯೋತಿರ್ಗಮಯ' ಇದು ಒಂದು ಮಹಾಸೂತ್ರ . 'ಎಸವಿನ ಗುರು ಹೋಗಿ ಶಿಶುವಧೆಯ ಮಾಡಿದ ' ಇದು ಕೂಡಾ ಅಂಬಿಗರ ಚೌಡಯ್ಯಗಳ ಮಹಾಸೂತ್ರ . ಇವೆರಡೂ ಒಂದೇ. ಶಬ್ದ ಮಾತ್ರ ಬೇರೆ ಬೇರೆ. ಕತ್ತಲಿನಿಂದ ಬೆಳಕಿನೆಡೆಗೆ ಪ್ರಯಾಣ ಮಾಡುವುದು. ಆ ಬೆಳಕೇ ತಾನಾಗುವುದು. ಕತ್ತಲು ಬೆಳಕಿನಲ್ಲಿ ಲೀನವಾಗಿ ಬೆಳಕೇ ಆಗುವುದು.

ಏನೂ ತಿಳಿಯದ ಮುನ್ನ ಶಿಶುವಾಗಿದ್ದ; ಆ ಶಿಶುವೇ ಅರಿವಿನೆಡೆಗೆ ಹೋಗಿ ಗುರುವಾದ.

ಅಲ್ಲಿಗೆ ಶಿಶುವಧೆಯಾಯಿತು. ಅರಿವನ್ನು ಅರಿಯಬೇಕಾದ ಶಿಶುವೂ ಅಂಗದಲ್ಲಿಯೇ ಸಂಗಮವಾಗಿದೆ. ಅರಿವೆಂಬ ಗುರುದೇವನೂ ಅಂಗದಲ್ಲಿಯೇ ಸಂಗಮವಾಗಿದ್ದಾನೆ. ಗುರುವಾದರೂ ಶಿಶುವಿನ ವಧೆ ಮಾಡಿ ಆ ಶಿಶುವನ್ನೇ ಗುರುವಾಗಿಸಿಕೊಳ್ಳಬೇಕು. ಶಿಶುವಾದರೂ ಗುರುದೇವನಲ್ಲಿ ಲೀನವಾಗಿ ಆ ಗುರುದೇವನೇ ತಾನಾಗಬೇಕು. ಎರಡೂ ಒಂದೇ. ಕಾಯದಲ್ಲಿ ಈ ಕಾಯಕ ಘಟಿಸಲೇಬೇಕು. ಅಂದಾಗ ಮಾತ್ರ ಕಾಯವೇ ಜ್ಞಾನಪುಷ್ಪವಾಗಿ ಅರಳಿ ಅರಿವಿನ ಪರಿಮಳ ಬೀರುತ್ತದೆ.

**ಶಿಶು ಹೋಗಿ ಮರಳಿ ಗುರುವ ಕೊಂದಡೆಯು, ಹೆಸರುಗೊಂಬ ಅಣ್ಣಗಳು ನೀವು ಕೇಳಿರೋ:**

ಈ ಲೋಕದಲ್ಲಿ ಗುರು ಎಂದು ಜಂಬ ಕೊಚ್ಚಿಕೊಳ್ಳುವ ಅಂಗಗಳೂ ಇವೆ. ಶಿಷ್ಯನೆಂದು ಜಂಬಕೊಚ್ಚಿಕೊಳ್ಳುವ ಅಂಗಗಳೂ ಇವೆ. ಇವೆರಡೂ ಅಂಗಕ್ಕೆ ಬಡಿದ ರೋಗಗಳು. ಸಕಲ ಅಂಗಗಳಲ್ಲಿಯೂ ಅರಿವೆಂಬ ಗುರುದೇವನು ಸಂಗಮವಾಗಿದ್ದಾನೆ. ಹಾಗೆಯೇ ಆ ಅರಿವನ್ನು ತಿಳಿದು ಆ ಅರಿವೇ ತಾನಾಗಬೇಕೆಂಬ ಬಯಕೆಯ ಶಿಶುಕೂಡಾ ಅಂಗದಲ್ಲಿಯೇ ಇದೆ. ಇವೆರಡೂ ಇಲ್ಲದ ಅಂಗಗಳು ಈ ಲೋಕದಲ್ಲಿಯೇ ಇಲ್ಲ. ಅಂದ ಮೇಲೆ ನಾನು ಗುರು ವೆಂಬುದೊಂದು ಅಹಂಕಾರವಲ್ಲವೆ? ನಾನು ಇಂಥವರ ಶಿಷ್ಯನೆಂಬುದು ಕೂಡಾ ಒಂದು ಅಹಂಕಾರವಲ್ಲವೆ?

ವೇದ ಆಗಮ ಉಪನಿಷತ್ತು ಭಗವದ್ಗೀತೆ ಕೈವಲ್ಯ ಮುಂತಾದ ಗ್ರಂಥಗಳಿಂದ ಅರಿವು ತಿಳಿಯಬಹುದು. ಆದರೆ ಅಂಗದಲ್ಲಿಯ ಅರಿವೇ ಪುಸ್ತಕಕ್ಕೆ ಅಕ್ಷರಗಳ ಮೂಲಕ ಪ್ರಸಾರವಾಗಿದೆ. ಪುನಃ ಆ ಅರಿವೇ ಅಂಗದಲ್ಲಿ ಸಂಗ್ರಹವಾದರೆ ಅದು ಅಂಗದ ಆಪತ್ಕಾಲಕ್ಕೆ ಬಳಕೆಯಾಗುವುದಿಲ್ಲ. ನುಡಿಯುವುದಕ್ಕಾಗಿ ಮಾತ್ರ ಬಳಕೆಯಾಗುತ್ತದೆ. ಸಂಗ್ರಹವಾದ ಅರಿವು ಅರಿವನ್ನೇ ಮರೆ ಮಾಡಿ ಅಹಂಕಾರಿಯನ್ನಾಗಿಸುತ್ತದೆ. ಇಂತಹ ಅರಿವು ಸಹಜ ಅರಿವು ಅಲ್ಲವೆಂದು ಗುರುವಿನ ಮೂಲಕ ತಿಳಿದ ಶಿಶು ಆ ಸಹಜ ಅರಿವೇ ತಾನಾಗಿ ತನ್ನಲ್ಲಿಯೇ ಸಂಗ್ರಹವಾದ ಅರಿವೆಂಬ ಗುರುವನ್ನು ಕೊಂದ.

ಅರಿವನ್ನು ತಿಳಿಯಲು ಹೋದ ಶಿಶುವನ್ನು ಗುರುದೇವ ಅರಿವು ಹೇಳುವ ಮೂಲಕ ಶಿಶುವನ್ನು ವಧೆ ಮಾಡಿದ. ಆ ಶಿಶುವೇ ಸಹಜ ಅರಿವಾಗಿ ಅರಿವು ಹೇಳಲು ಬಂದ ಗುರುದೇವನನ್ನು ಕೊಂದ. ಗುರುದೇವ ಗುರುವೆಂಬ ಅಹಂಕಾರದಿಂದ ಮುಕ್ತನಾದ. ಶಿಶು ಶಿಷ್ಯನೆಂಬ ಅಹಂಕಾರದಿಂದ ಮುಕ್ತನಾಗಿ ಅಂಗದಲ್ಲಿ ಸಂಗಮವಾದ ಆ ಅರಿವೇ ತಾನಾದ.

ಪಂಡಿತ ಶಾಸ್ತ್ರೀ ಆಚಾರ್ಯ ಮೌಲ್ವಿ ಪಾದ್ರಿ ಎಂದು ಹೆಸರಿಟ್ಟುಕೊಂಡು ಮೋಸಕ್ಕೊಳಗಾಗಿ, ಅರಿವೆಂಬ ಲಿಂಗಾಂಗಗಳನ್ನೇ ಮೋಸ ಮಾಡುವ ಅಣ್ಣಗಳಿರಾ ನೀವು ಕೇಳಿರೋ: ಇವರಿಬ್ಬರೂ ಸತ್ತ ಠಾವನು ಒಬ್ಬರೂ ಅರಿಯಲಿಲ್ಲ ಎಂಬ ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ ಚೌಡಯ್ಯ ಶರಣರು.

**67**

**ಏಕಾದಶ ರುದ್ರರು ಹೊರಗಾದ,**
**ಈರೇಳು ಲೋಕ ಹದಿನಾಲ್ಕು ಭುವನ ಯುಗಜುಗಂಗಳಲ್ಲಿ ಒಳಗಾಗಿ**
**ತಿರುಗುವುದೊಂದು ಶಕ್ತಿಯ ಭೇದ.**
**ದಶಾವತಾರವಾಗಿ ಕಾಲಕರ್ಮಂಗಳಲ್ಲಿ ಓಲಾಡುತ್ತಿಪ್ಪುದು**
**ಒಂದು ಶಕ್ತಿಯ ಭೇದ.**

**ಉಂಟು ಇಲ್ಲಾ ಎಂದು ನಿಶ್ಚಿಂತಕ್ಕೆ ಹೋರುವುದೊಂದು ಶಕ್ತಿಯ ಭೇದ.**
**ಇಂತೀ ತ್ರಿವಿಧ ಶಕ್ತಿಯ ಆದಿ ಆಧಾರವನರಿದು**
**ಕರ್ಮವ ಕರ್ಮದಿಂದ ಕಂಡು, ಧರ್ಮವ ಧರ್ಮದಿಂದ ಅರಿದು,**
**ಜ್ಞಾನವ ಜ್ಞಾನದಿಂದ ವಿಚಾರಿಸಿ, ಇಂತೀ ತ್ರಿಗುಣದಲ್ಲಿ ತ್ರಿಗುಣಾತ್ಮಕನಾಗಿ,**
**ದರ್ಪಣದಿಂದ ಒಪ್ಪಂಗಳನರಿವಂತೆ**
**ಅರಿವು ಕುರುಹಿನಲ್ಲಿ ನಿಂದು, ಕುರುಹು ಅರಿವನವಗವಿಸಿದಲ್ಲಿ**
**ತ್ರೈಮೂರ್ತಿ ನಷ್ಟವೆಂದನಂಬಿಗ ಚೌಡಯ್ಯ .**

ಕಾಯದ ಭೇದ ಗುಣವನ್ನು ಕಾಯವೇ ಅರಿಯಬೇಕು. ಕಾಯ ಒಂದೇ ಆದರೂ ಕಾಯದ ಗುಣಗಳು ಅನೇಕ ; ಕಾಯದ ನಿರ್ಗುಣ ಒಂದೇ. ಕಾಯದ ನಿರ್ಗುಣವನ್ನು ಕಾಯದ ಮೂಲಕವೇ ತಿಳಿಯಬೇಕು.ಕಾಯದ ಗುಣಗಳನ್ನು ಕಾಯದ ಮೂಲಕವೇ ಕನ್ನಡಿಯಂತೆ ತಿಳಿದು ತಪ್ಪು ಒಪ್ಪುಗಳನ್ನು ಸರಿಪಡಿಸಿಕೊಂಡು ಸಹಜ ನಿರ್ಗುಣಿಯಾಗಬೇಕು.

ಕಾಯದಿಂದಲೇ ಚಿನ್ನವನ್ನು ಕಂಡುಹಿಡಿದು ಹಲವಾರು ಆಭರಣಗಳನ್ನು ಮಾಡಿ ಅದಕ್ಕೆ ಮೋಹಗೊಂಡು ಸಂಗ್ರಹಿಸಿ ಸೈ ಎನ್ನಿಸಿಕೊಳ್ಳಲು ರಾಜನಾದ.ರಾಜ ರಾಜನನ್ನು ಕೊಂದು ಚಿನ್ನ ಮಡದಿ ಮಕ್ಕಳನ್ನು ಪಡೆದು ರಾಜ್ಯವನ್ನು ವಿಸ್ತರಿಸಿದ. ಇದಕ್ಕೆ ಸಹಕರಿಸಿದ ಕಾಯ ಸೈನಿಕ, ಸೇನಾಧಿ ಪತಿ, ಪ್ರಧಾನಿ, ಕಾಲಾಳಾಯಿತು; ದಾಸಾನು ದಾಸಿಯಾಯಿತು. ಸತಿ ಸುತರಾಗಿ ಭ್ರಮೆಯ ಆನಂದದಿಂದ ಕಾಯ ಮೆರೆಯಿತು. ಕಾಯಕ್ಕೆ ಕಾಯದಿಂದಲೇ ಭ್ರಮಾ ಸುಖವಾಯಿತು. ಕಾಯಕ್ಕೆ ಕಾಯದಿಂದಲೇ ಭ್ರಮಾ ದುಃಖವಾಯಿತು. ಕಾಯದಲ್ಲಿರುವ ನಿರ್ಗುಣ ಶಕ್ತಿ ಒಂದೇ. ಕಾಯಕ್ಕೆ ಅಂಟಿಕೊಂಡಿರುವ ಗುಣಾವಗುಣಗಳು ಒಂದೇ. ಉಂಟು ಇಲ್ಲಾ ಎನ್ನುವ ಚಿಂತೆ ಕಾಯಕ್ಕೆ ಅಂಟಿಕೊಂಡಿದೆ. ಅದನ್ನು ಕಾಯದಿಂದಲೇ ಅರಿಯಬೇಕು. ಅರಿಯಲು ಹೋಗುವ ಮಾರ್ಗಗಳನ್ನು ಕಾಯವೇ ಸೃಷ್ಟಿ ಮಾಡಿದೆ. ಕಾಯ ಕಾಯಕ್ಕೆ ಸಹಕರಿಸಲು ಸಾಧ್ಯವೆ ? ಆದರೂ ಧರ್ಮ ಅಧರ್ಮವೆಂದು, ಪಾಪ ಪುಣ್ಯವೆಂದು ಕಾಯವನ್ನು ಕಾಯವೇ ಮೋಸ ಮಾಡುತ್ತಲಿದೆ. ಧರ್ಮ ಅಧರ್ಮಗಳನ್ನು ಹೇಳುವ ಕಾಯವಾದರೂ ಕಾಯದ ಗುಣವನ್ನು ಅರಿಯಬೇಕು ; ಅರಿತರಿತು ನಿರ್ಗುಣಿಯಾಗಬೇಕು. ಉಳಿದ ಕಾಯಗಳಾದರೂ ಕಾಯದಲ್ಲಿಯೇ ಸಂಗಮವಾದ ಜ್ಞಾನವನ್ನು ಬಳಸಿಕೊಂಡು ನಿರ್ಗುಣಿಯಾಗಬೇಕು.

ಕಾಯದಲ್ಲಿಯೇ ಮಾಡುವ ಕಾಯಕ ಕಾಯಕ್ಕೆ ಹಾಸಲುಂಟು ಹೊದಿಯಲುಂಟು. ಹೀಗಂದ ಮೇಲೆ ಕಾಯ ಕಾಯಕ್ಕೆ ತಿಳಿಹೇಳುವ ನಾಟಕ ಮಾಡುವುದೆ ? ಅದನ್ನು ಕಾಯಕವನ್ನಾಗಿಸಿಕೊಳ್ಳುವುದೇ? ಕಾಯವನ್ನು ಹೊರತಾಗಿ ಮಾಡುವ ಕಾಯಕಗಳನ್ನು ಕಾಯಕ ಎನ್ನಬಹುದೆ? ಅದರಲ್ಲಿ ಧರ್ಮ ಕರ್ಮ ಪಾಪ ಪುಣ್ಯ ಅಡಗಿಲ್ಲವೆ ? ಗಿಡ ಮರ ಬಳ್ಳಿ ಪಶು ಪಕ್ಷಿಗಳು ಯಾವ ಧರ್ಮವನ್ನು ಆಚರಿಸುತ್ತಲಿವೆಯೆಂದು ಕಾಯ ಒಮ್ಮೆ ಇಣಿಕಿ ಹಾಕಿ ನೋಡಬಾರದೆ ? ಕಾಯದಲ್ಲಿ ಹುದುಗಿದ್ದ ಅರಿವಿನ ಸಂಪತ್ತನ್ನು ಪಡೆಯುವುದೇ ಕಾಯದ ಕಾಯಕವೆಂದು ಕಾಯ ತಿಳಿಯಬೇಡವೆ ? ಕಾಯಕವೇ ಕೈಲಾಸವಲ್ಲ ; ಕಾಯವೇ ಕೈಲಾಸ !

**68**

**ಐಶ್ವರ್ಯ ದುಃಖದಲ್ಲಿ ಬೇಯುವ**

**ಹೊಲೆ ಸಂಸಾರವನೆ ಕಚ್ಚಿ ಕೊಲೆಗೀಡಾಗದೆ,**
**ಸಲೆ ಸತ್ಯ ಸದಾಚಾರದಲ್ಲಿ ನಡೆ.**
**ಸಟೆಯನು ಬಿಡು, ದಿಟವನೆ ಹಿಡಿ.**
**ಈ ಘಟವುಳ್ಳನಕ ಕಾಲದಲ್ಲಿ ಶಿವಭಕ್ತಿಯ ನಟಿಸಿ ನಡೆ**
**ಎಂದಾತ ನಮ್ಮ ಅಂಬಿಗರ ಚೌಡಯ್ಯ .**

ಕಾಯದ ಐಶ್ವರ್ಯವೆಂದರೆ ಭೂಮಿ ಹೇಮ ಕಾಮಿನಿ (ವಿಷಯ)ಯಲ್ಲ. ಭೂಮಿ ನಿನ್ನದಲ್ಲ ಹೇಮ ನಿನ್ನದಲ್ಲ ಕಾಮಿನಿಯು ನಿನ್ನವಳಲ್ಲ. ಇವು ಜಗಕ್ಕಿಕ್ಕಿದ ವಿಧಿ ; ನಿನ್ನದೆಂಬುದು ಜ್ಞಾನರತ್ನ ಕಾಣಾ. ಅದನ್ನು ಕೆಡಗೊಡದೆ ಅಲಂಕರಿಸಿಯಾದಡೆ ನಿನ್ನಂಥ ಸಿರಿವಂತರು ಯಾರೂ ಇಲ್ಲ ಎಲೆ ಮನವೆ ಎಂದು ಅಲ್ಲಮಪ್ರಭುಗಳು ಅದ್ಭುತವಾದ ಸೂತ್ರವನ್ನೇ ಕಾಯಕ್ಕೆ ದಯಪಾಲಿಸಿದ್ದಾರೆ.

ಕಾಯ, ಭೂಮಿ, ಹೇಮ, ವಿಷಯ ವಸ್ತುಗಳನ್ನೇ ಐಶ್ವರ್ಯವೆಂದು ನಂಬಿ ಹೊಲೆ ಸಂಸಾರವನೆ ಕಚ್ಚಿಕೊಂಡು ಕೊಲೆಗೀಡಾಗುತ್ತಲಿದೆ ಎಂದು ಅಂಬಿಗರ ಚೌಡಯ್ಯ ಶರಣರು ಕಾಯಕ್ಕೆ ಕಿವಿ ಮಾತು ಹೇಳಿದ್ದಾರೆ.

ಭೂಮಿ ಹೇಮ ವಿಷಯವೆಂಬುದು ವಿಷ. ಇದು ಸುಳ್ಳು. ಸುಳ್ಳನ್ನು ಬಿಡು. ಅದು ನಿನ್ನ ಅನುಭವದಿಂದಲೇ ನೋಡಿ ನಿರ್ಧರಿಸು. ಮಣ್ಣಿನ ಗರ್ಭದಲ್ಲಿ ಹುಟ್ಟಿದ ಹೊನ್ನು; ಅದಕ್ಕೆ ಬಣ್ಣವಿದ್ದರೇನಾಯಿತು ? ಅದು ನಿನ್ನಂತೆ ನೋಡಿ ಕೇಳಿ ಮುಟ್ಟಿ ರುಚಿಸಿ ಅರಿವಿನಿಂದ ಆನಂದ ಪಡುವುದೆ ? ಅದು ನಿನ್ನ ದೃಶ್ಯ ಶಕ್ತಿಯಿಂದ ಹುಟ್ಟಿದ ಲೋಹ. ಕಾಯ ಲೋಹಕ್ಕೆ ಮರುಳಾಗಿ ಕಾಯವನ್ನೇ ದಂಡಿಸುವುದು ಕಾಯಕ್ಕೆ ಶೋಭೆ ತರುವುದೇ ? ಲೋಹದಿಂದ ಕಾಯವನ್ನು ಅಲಂಕರಿಸುವುದೆ ? ಕಾಯ ಅರಿವಿನ ಕೈಲಾಸವೆಂಬುದು ಕಾಯವೇ ಮರೆತರೆ ಹೇಗೆ ?

ಕಾಯ ದೇವೇಂದ್ರನಾಗಬಹುದು, ಮುನಿಯಾಗಬಹುದು, ಋಷಿಯಾಗಬಹುದು, ರಾಜ, ಮಂತ್ರಿ , ಶಾಸಕನಾಗಬಹುದು, ಏನಾದರಾಗಬಹುದು ಶಿವನಾಗುವುದು ಜಟಿಲ. ಶಿವನಿಗೆ ಯಾವ ಆಭರಣಗಳೂ ಇಲ್ಲ. ಕಾಯವನ್ನು ತಿನ್ನುವ ಹಾವೆಂಬ ಮನವನ್ನೇ ಆಭರಣ ಮಾಡಿಕೊಂಡು ನಾಗಾಭರಣನೆನ್ನಿಸಿ ಕೊಂಡಿದ್ದಾನೆ. ನಾಗಭೂಷಣನಾಗಿದ್ದಾನೆ. ಕಾಯದ ಸರ್ವ ಗುಣಾವಗುಣಗಳೆಂಬ ಸೆಗಣಿಯನ್ನು ಸುಟ್ಟು ಭಸ್ಮ ಮಾಡಿಕೊಂಡು ಕಾಯಕ್ಕೆ ಲೇಪಿಸಿಕೊಂಡಿದ್ದಾನೆ. ಕಾಯವನ್ನೇ ಭಸ್ಮಕಾಯ ಮಾಡಿಕೊಂಡಿದ್ದಾನೆ. ವಿಕೃತ ಗುಣದ ಚಂದ್ರನನ್ನು ಜಟೆಯಲ್ಲಿ ಧರಿಸಿಕೊಂಡು ಚಂದ್ರಶೇಖರನಾಗಿದ್ದಾನೆ. ಅಂಗದಲ್ಲಿಯೇ ಸಂಗಮವಾದ ಗಂಗೆಯನ್ನು ಜಟೆಯಲ್ಲಿ ಧರಿಸಿಕೊಂಡು ಗಂಗಾಧರನೆನ್ನಿಸಿಕೊಂಡಿದ್ದಾನೆ. ಪ್ರಾಣ ಹೀರಿ ಸುಖಿಸುವ ಮನವೆಂಬ ಪ್ರಾಣಿಗುಣದ ಚರ್ಮ ಧರಿಸಿ ಚರ್ಮಾಂಬರಿಯಾಗಿದ್ದಾನೆ. ಸುಖ ದುಃಖಗಳೆಂಬ ವಿಷವನ್ನು ಕಂಠದಲ್ಲಿ ಧರಿಸಿಕೊಂಡು ನೀಲಕಂಠನೆನಿಸಿಕೊಂಡಿದ್ದಾನೆ.

ಮನವೆಂಬ ನಾರಿಯನ್ನು ಅಂಗದಲ್ಲಿ ಧರಿಸಿ ಅರ್ಧ ನಾರೀಶ್ವರನಾಗಿದ್ದಾನೆ. ಕಾಯವನ್ನೇ ಕೈಲಾಸ ಮಾಡಿಕೊಂಡು ಕಾಯದಲ್ಲಿಯೇ ವಾಸಿಸಿ ಕೈಲಾಸಪತಿಯೆನಿಸಿದ್ದಾನೆ. ಇದು ಕಾಯದ ಸಂಪತ್ತು . ಈ ಸಂಪತ್ತಿನ ಮುಂದೆ ದೇವೇಂದ್ರನ ಸಂಪತ್ತು ತೃಣ. ಅದು ಹೊಲೆ ಸಂಸಾರ. ಅಲ್ಲಿ ಕಾಳಕೂಟ ವಿಷದ ಸರ್ಪವಿದೆ. ಸಾಕಿದ ತನ್ನನ್ನೇ ಕಚ್ಚಿ ಕಚ್ಚಿ ಕೊಲ್ಲುತ್ತದೆ.

ಕಾಯ ನಚ್ಚಿಕೊಂಡು ಸುಖಿಸುವ ಬಾಹ್ಯ ಸಂಪತ್ತು ಸಟೆ. ಕಾಯದಲ್ಲಿ ಸಂಗಮವಾದ ಕಾಯದ ಅರಿವಿನ ಸಂಪತ್ತೇ ದಿಟ. ಸಟೆಯನ್ನು ಬಿಡು. ದಿಟವನ್ನು ಹಿಡಿದು ಶಿವ ನೀನಾಗು.

ಸಾಧ್ಯವಾಗದಿದ್ದರೆ ಸಾಯುವ ತನಕ ಅಂದರೆ ಕಾಯವಿರುವವರೆಗೆ ಶಿವಭಕ್ತಿಯ ನಟಿಸಿಯಾದರೂ ನಡೆ. ಎಂದು ಅಂಬಿಗರ ಚೌಡಯ್ಯ ಶರಣರು ಕಾಯಗಳೆಲ್ಲ ಕೈಲಾಸವಾಗಲು ಯೋಗ್ಯವಾದ ಮಹಾ ಸೂತ್ರವನ್ನು ಕರುಣಿಸಿದ್ದಾರೆ.

**69**

**ಒಂದನರಿದು ಒಂದ ಮರೆದೆಹನೆಂಬ ಸಂದೇಹದವನಲ್ಲ.**
**ಸರ್ವರ ಕೂಡಿಕೊಂಡು ಅರಿದೆಹೆನೆಂಬ ಬಂಧಮೋಕ್ಷದವನಲ್ಲ.**
**ಆಗಿಗೆ ಮುಯ್ಯಾಂತು ಚೇಗೆಗೆ ಮನಗುಂದುವನಲ್ಲ.**
**ಸುಖ ದುಃಖವೆಂಬ ಉಭಯವ ಸರಿಗಾಬವನಲ್ಲ.**
**ನಿಂದ ನಿಜವೆ ತಾನಾಗಿದ್ದವಂಗೆ ಬೇರೆ ಬಂಧವೊಂದೂಯಿಲ್ಲ.**
**ಎಂದನಂಬಿಗ ಚೌಡಯ್ಯ.**

ಸ್ವರೂಪ ಜ್ಞಾನ ಆದ ಅಂಗವದು ಅಂಗವಲ್ಲ. ಅದು ಲಿಂಗಾಂಗ ! ಒಂದು ಅರಿತೆ ಒಂದು ಮರೆತೆನೆಂಬ ಸಂದೇಹ ಆ ಲಿಂಗಕ್ಕೆ ಇರುವುದಿಲ್ಲ. ಸರ್ವರ ಕೂಡಿ ಕೊಂಡು ಸ್ವರೂಪ ಜ್ಞಾನ ಹೊಂದಲು ಬರುವುದಿಲ್ಲ. ಅದೇನಿದ್ದರೂ ಸ್ವಪ್ರಯತ್ನ. ಆ ಪ್ರಯತ್ನದಲ್ಲಿ ಸಫಲವಾದ ಅಂಗಕ್ಕೆ ಬಂಧ ಮೋಕ್ಷಗಳಿಲ್ಲ. ಪಾಪ ಪುಣ್ಯಗಳಿಲ್ಲ. ಧರ್ಮ ಕರ್ಮಗಳಿಲ್ಲ; ಆಗು ಹೋಗುಗಳಿಗೆ ಮನಗುಂದುವುದಿಲ್ಲ. ನಿಜವರಿತ ನಿರಂಜನನು ಆತ.ಸಕಲ ಗುಣಾವಗುಣಗಳನ್ನು ಕಳೆದುಕೊಂಡ ನಿರ್ಗುಣಿಯಾತ.

ಈ ಎಲ್ಲ ಸಂಪತ್ತು ಅಂಗದಲ್ಲಿಯೇ ಸಂಗಮವಾಗಿದೆ. ಈ ಸಂಪತ್ತನ್ನು ಪಡೆಯಬೇಕಾದ ಮನ ಕೂಡಾ ಅಂಗವನ್ನು ಆವರಿಸಿದೆ. ತನುವಿನ ಮನದಿಂದಲೇ ತನುವಿನ ಸಂಪತ್ತನ್ನು ಪಡೆಯಬೇಕೆಂಬ ಬಯಕೆ ಮನಕ್ಕೆ ಉಂಟಾದಾಗಲೇ ಈ ಕಾಯಕ ಅಂಗದಲ್ಲಿಯೇ ಶುರುವಿಟ್ಟುಕೊಳ್ಳುತ್ತದೆ. ಅಂಗ ಲಿಂಗಾಂಗವಾಗುತ್ತದೆ. ವಿರಾಟ ಸ್ವರೂಪವಾಗುತ್ತದೆ. ಇಂತಹ ಜ್ಞಾನದ ಸವಿಯನ್ನು ಪ್ರತಿಯೊಂದು ಅಂಗ ಕೂಡಾ ಅನುಭವಿಸಿಯೇ ಸುಖಿಸಬೇಕೆಂಬ ಕಳಕಳಿಯಿಂದ ಶರಣರು ಈ ಮಹಾ ಸೂತ್ರವನ್ನು ಕರುಣಿಸಿದ್ದಾರೆ.

**70**

**ಒಂದ ಬಿಟ್ಟು ಒಂದನರಿದೆಹೆನೆಂಬನ್ನಕ್ಕ ಮರದ ಸಂದಿನ ಬೊಂಬೆಯೆ ?**
**ಅರಿವುದು ಕುರುಹೊ ಅರಿವೊ ? ಸುಡುವುದು ಮರನೊ ಬೆಂಕಿಯೊ ?**
**ಎರಡರ ಹೆಚ್ಚು ಕುಂದ ತಿಳಿದು ಹೇಳೆಂದನಂಬಿಗ ಚೌಡಯ್ಯ.3**

ಅಂಗವನ್ನು ಮನ ಆವರಿಸಿದೆ. ಆ ಮನದಿಂದಲೇ ಅಂಗವನ್ನು, ಅಂಗದಲ್ಲಿ ಸಂಗಮವಾದ ಅರಿವೆಂಬ ಸಂಗಮನಾಥನನ್ನು ತಿಳಿಯಬೇಕು. ಮನದಿಂದ ಅಂಗವನ್ನು ತಿಳಿದರೆ ಅಂಗ ಅರಿಷಡ್ವರ್ಗಗಳೆಂಬ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳಿಗೆ ಬಲಿಯಾಗುತ್ತದೆ. ಹೀಗಾಗಿ ಮನದಿಂದ ಅಂಗವನ್ನು ಹಿಡಿದು ಮನದಿಂದ ಅರಿವಿನ ಸಂಗಯ್ಯನನ್ನು ಅರಿಯಬೇಕು. ಅರಿತರಿತು ಆ ಸಂಗಯಯ್ಯನಲ್ಲಿಯೇ ಬೆರೆಯಬೇಕು.

ಅಂಗವನ್ನು ಅರಿವನ್ನು ಅರಿಯದಿದ್ದರೆ ಮರದೊಳಗಿದ್ದ ಮಂದಾಗ್ನಿ ಮರವನ್ನೇ ಸುಟ್ಟಂತೆ ಅಂಗ ಕಾಮವೆಂಬ ಅಗ್ನಿಗೆ ಬಲಿಯಾಗುತ್ತದೆ. ಕ್ರೋಧ ಲೋಭ ಮದ ಮತ್ಸರಗಳೆಂಬ ಅಗ್ನಿಗೆ ಕ್ಷಣ ಕ್ಷಣಕ್ಕೂ ಬಲಿಯಾಗಿ ಒಮ್ಮೆ ಇಲ್ಲವಾಗುತ್ತದೆ. ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನಿಗೆ ಆ ಬೆಂಕಿ ತಾಗುವುದೇ ಇಲ್ಲ.

ಅರಿವಿನ ಸಂಗಯ್ಯ ಒಡಲೊಳಗೆ ಇದ್ದಾನೆ ; ಆದರೆ ಒಡಲು ತಾಗಿಲ್ಲ. ಒಡಲಿಗೆ ಆಧಾರವಾಗಿದ್ದಾನೆ ; ಒಡಲು ಸೋಂಕಿಲ್ಲ. ಒಡಲನ್ನು ಸೋಂಕದೆ ಅರಿವಿನ ಬೆಳಕಿನಿಂದ ಬೆಳಗಿಂಗೆ ಬೆಳಗಾಗಿ ಬೆಳಗುತ್ತಿದ್ದಾನೆ. ಆತ ಬೆಳಗುವಾತ. ಬೆಳಕು ಸುಡುವುದಿಲ್ಲ ; ಬೆಳಗುತ್ತದೆ. ಬೆಂಕಿ ಸುಡದೆ ಬಿಡುವುದಿಲ್ಲ ! ಅರಿತರೆ ಅರಿವಿನ ಬೆಂಕಿ ಬೆಳಕು ಚಿಮ್ಮುತ್ತದೆ. ಅರಿಯದಿದ್ದರೆ ಬೆಂಕಿ ಸುಡುತ್ತದೆ.

ಅಂಗ ಮನದ ಸಹಾಯದಿಂದ ಅರಿವನ್ನು ಬಳಕೆ ಮಾಡಿಕೊಂಡು ಬೆಳಗುವ ಉಪಕರಣ. ಇವೆರಡೂ ರತ್ನಗಳು ; ಜ್ಞಾನ ರತ್ನಗಳು ! ಕಾಮ ಕ್ರೋಧ ಮೋಹ ಲೋಭ ಮೋಹ ಮದ ಮತ್ಸರಗಳಿಗೆ ಅಷ್ಟ ಮದಗಳಿಗೆ ಸಪ್ತ ವ್ಯಸನಗಳಿಗೆ ಅಂಗವನ್ನು ಬಳಸದೆ ಜ್ಞಾನ ರತ್ನಕ್ಕಾಗಿ ಬಳಕೆ ಮಾಡಬೇಕು. ಜ್ಞಾನರತ್ನವೆಂಬುದು ಅಂಗದ ಅರಿವಿನ ಸಿಂಹಾಸನ. ಆ ಸಿಂಹಾಸನದ ಮೇಲೆ ಅಂಗ ಅಲಂಕರಿಸಬೇಕು.

**ಎರಡರ ಹೆಚ್ಚು ಕುಂದ ತಿಳಿದು ಹೇಳೆಂದನಂಬಿಗ ಚೌಡಯ್ಯ :**

ಶರಣರು ಮಹಾಜ್ಞಾನಿಗಳು. ಬೆಡಗಿನ ಶಬ್ದಗಳನ್ನು ಬಳಸಿ ಅರಿವಿನೆಡೆಗೆ ಹೋಗುವ ಸೂತ್ರವನ್ನು ಬೆಡಗಿನಿಂದ ಮುಚ್ಚಿಡುತ್ತಾರೆ. ಅದನ್ನು ಬಿಚ್ಚಿಕೊಂಡು ಓದುವ ಓದುಗ ಗುರಿ ಮುಟ್ಟುತ್ತಾನೆ. ಸಕಲ ಅರಿವಿನ ಸುಖ ಅಂಗದಲ್ಲಿ ಅಡಗಿದ್ದರೂ ದಾರಿ ಮಾತ್ರ ಬಲು ದುರ್ಗಮವಾದುದು. ಸೂತ್ರ ತಿಳಿದು ನಡೆದವನಿಗೆ ಮಾತ್ರ ಅಂಗ ಅಂಗದಲ್ಲಿ ಸಂಗಮವಾದ ಅರಿವು ಈ ಎರಡರ ಬೆಳಕು ಹೊಳೆಯುತ್ತದೆ. ಕುಂದ ಅಂದರೆ ರತ್ನ. ಅಂಗ ಮತ್ತು ಅರಿವು ಇವೆರಡೂ ಅರಿವಿನ ರತ್ನಗಳೇ ! ಇವೆರಡನ್ನೂ ಬಳಕೆ ಮಾಡಿ ಆ ಸಿಂಹಾಸನದ ಮೇಲೆ ಕೂಡಬೇಕೆಂಬ ಬಯಕೆ ಮನಕ್ಕೆ ಆಗಬೇಕು.

ಅರಿಷಡ್ವರ್ಗಗಳಿಂದ ಕ್ಷಣ ಕ್ಷಣಕ್ಕೂ ಅಂಗಕ್ಕೆ ಬೆಂಕಿ ಹೊತ್ತಿಸಿಕೊಳ್ಳಬೇಕೋ ಅಥವಾ ಅರಿವಿನ ಬೆಳಕಿನಿಂದ ಸದಾ ಬೆಳಗಬೇಕೋ ಎಂಬದನ್ನು ಮನವೇ ನಿರ್ಧರಿಸಬೇಕು. ಬೆಂಕಿಯಿಂದ ಸುಡುವ ಆ ಬೆಳಕಿನಿಂದ ಬೆಳಗುವ ಎರಡೂ ಕೆಲಸಗಳು ಅಂಗದಲ್ಲಿಯೇ ಸಂಗಮವಾಗಿವೆ. ಮನ ನಿರ್ಧರಿಸಬೇಕು ಅಷ್ಟೆ.

**71**

**ಒಡಲಿಂಗಾರು ಬಾಯಿ, ನಡುವೆ ಮೂರು ದೇಹ,**
**ಹಿಡಿದ ಪ್ರಣತೆ ಹದಿನಾರು. ಆ ಸೊಡರಿಂಗೆರೆದೆಣ್ಣೆ ಬಯಲೆಣ್ಣೆ**
**ಆ ಸೊಡರೊಳಗಳ ಬೆಳಗ ದೃಢವಾಗಿ ಹಿಡಿದು**
**ಕಡೆಗಾಣಿಸೆಂದನಂಬಿಗ ಚೌಡಯ್ಯ**

ಅಂಗವೆಂಬುದು ಬಯಲ ಬೀಜದಿಂದ ಬೆಳೆದು ಬೆಳಗಿಂಗೆ ಬೆಳಗಾಗಿ ಬೆಳಗುವ ಜ್ಞಾನದ ಮರ. ಸಿದ್ದಾರ್ಥ ಬುದ್ಧತ್ವ ಹೊಂದಿದ ಮೇಲೆ ಈ ವೃಕ್ಷವನ್ನು ಬೋಧೀವೃಕ್ಷವೆಂದು ಕರೆದ. ಶರಣರು

ಇದನ್ನು ಲಿಂಗಾಂಗವೆಂದು ಕರೆದರು.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂದರೆ ಅಂಗಕ್ಕೆ ಬಲು ಪ್ರೀತಿ. ಅದನ್ನೇ ಉಣ್ಣುತ್ತದೆ ; ಅದನ್ನೇ ತೇಗುತ್ತದೆ. ಈ ಆರೂ ಬಾಯಿಯ ಮೂಲಕ ತನ್ನ ಹಸಿವನ್ನು ಇಂಗಿಸಿಕೊಳ್ಳುತ್ತದೆ ಅಂಗ.

ನೋಡುವುದಕ್ಕೆ ಅಂಗ ಒಂದೇ ಎಂದು ಕಂಡರೂ ಆ ಅಂಗದಲ್ಲಿ ಇನ್ನೂ ಎರಡು ಅಂಗಗಳು ಇವೆ. ಅವು ಕಾಣುವುದಿಲ್ಲ. ಕಾಣಲು ಪ್ರಯತ್ನ ಮಾಡಿದ ಅಂಗಕ್ಕೆ ಕಾಣದೇ ಇರುವುದಿಲ್ಲ. ಕಾಣುವ ಒಂದಂಗವನ್ನು ಸ್ಥೂಲ ಅಂಗವೆಂದು ಕರೆದರು. ಕಾಣಬಾರದ ಮತ್ತೆರಡು ಅಂಗಗಳನ್ನು ಸೂಕ್ಷ್ಮಾಂಗವೆಂದು, ಕಾರಣಾಂಗವೆಂದು ಕರೆದರು.

ಅಂಗ ಬೆಳಗುವುದು ಕಾರಣಾಂಗದ ಬೆಳಕಿನಿಂದ. ಅದು ಸೂಕ್ಷ್ಮಾಂಗದ ಗಮನಕ್ಕೆ ಬಂದಾಗ ಇಡೀ ಅಂಗವು ಬೆಳಗಿಂಗೆ ಬೆಳಗಾಗಿ ಬೆಳಗುವುದು. ಬತ್ತಿಯಿಲ್ಲದೆ ಬಯಲೆಣ್ಣೆಯಿಂದ ಸದಾ ಬೆಳಗುವ ಬೆಳಕು ಬೆಳಗಿಸಿಕೊಂಡ ಅಂಗಕ್ಕೆ ಮಾತ್ರ ಎಲ್ಲೆಡೆ ಬೆಳಕೆ ಕಾಣುವುದು. ಈ ಬೆಳಕು ಸಕಲ ಅಂಗಗಳಲ್ಲಿಯೂ ಇದೆ. ಆದರೆ ಜಾತಿ, ಮತ, ಪಂಥ, ಹೆಣ್ಣು, ಗಂಡು, ಶ್ರೀಮಂತ, ಬಡವ ಎನ್ನುವ ಬೆಂಕಿ ಅಂಗ ಹೊತ್ತಿಸಿಕೊಂಡಿರುವುದರಿಂದ ಬೆಳಕು ಕಾಣುತ್ತಿಲ್ಲ. ತನ್ನನ್ನು ತಾನೇ ಕತ್ತಲಲ್ಲಿಟ್ಟುಕೊಂಡಿದೆ.

72

**ಒಬ್ಬ ಗುರುವೆಂಬಿರಿ –**
**ಆ ಗುರುವು ತೋರಿದ ಚರಲಿಂಗಕ್ಕೆ ಅರಿಕೆಯಿಲ್ಲ.**
**ಕಿರುಕುಳದ ಬೆನ್ನೊಳು ಹರಿದಾಡುವ ನರಕಿಯ**
**ಯಮನವರು ಕೊಂಡೊಯ್ದು**
**ನಡುವಿಂಗೆ ನುಲಿಕಿಯನಿಕ್ಕಿ, ಮೆಟ್ಟಿ ಮೆಟ್ಟಿ ಗುದ್ದುವಾಗ**
**ಪಲುಗಿರಿದು ಬಿದ್ದು ಹೋಗುವ ಮಾನವರ ಕಂಡು,**
**ಜಗವರಿಕೆಯಲ್ಲ ನಗುತ್ತಿದ್ದಾತ ನಮ್ಮ ಅಂಬಿಗರ ಚೌಡಯ್ಯ.**

ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕ್ತಿ . ಗುರುವಿಲ್ಲದ ದೇಹ ಒಂದೂ ಇಲ್ಲ. ಪ್ರಪಂಚದ ಸರ್ವದೇಹಗಳಿಗೂ ಗುರುವಿದ್ದಾನೆ. ಅಂಗದಲ್ಲಿ ಸಂಗಮವಾದ ಗುರುದೇವನನ್ನು ಅಂಗವೇ ಕಂಡುಕೊಂಡು ಆ ಗುರುದೇವನಿಗೆ ತಾನು ಶಿಷ್ಯನಾಗಬೇಕು.

ಅಂಗದಲ್ಲಿ ಮೂರು ಅಂಗಗಳು ಸಂಗಮವಾಗಿವೆ. ಒಂದು ಗುರುದೇವನ ಅಂಗ. ಮತ್ತೊಂದು ಗುರುದೇವನನ್ನು ತಿಳಿದು ಆ ಗುರುದೇವನಿಗೆ ಶಿಷ್ಯನಾಗಬೇಕಾದ ಅಂಗ. ಮಗದೊಂದು ಗುರು ದೇವನಿಗೆ ಮತ್ತು ಶಿಷ್ಯನಿಗೆ ಉಪಕರಣದಂತೆ ಬಳಕೆಯಾಗುವ ಸ್ಥೂಲಾಂಗ.

ಸ್ಥೂಲಾಂಗ, ಮತ್ತೊಂದು ಸ್ಥೂಲಾಂಗವನ್ನು ಗುರುವನ್ನಾಗಿ ಸ್ವೀಕರಿಸಿ, ಆ ಅಂಗಕ್ಕೆ ಗುಲಾಮನಾಗುವುದಕ್ಕೆ ಬರುವುದಿಲ್ಲ. ಅದು ಕಿರುಕುಳದ ಅಂಗ. ಒಂದು ಅಂಗ ಮತ್ತೊಂದು ಅಂಗಕ್ಕೆ ಏನನ್ನೂ ಕೊಡಲು ಬರುವುದಿಲ್ಲ; ಹಾಗೆಯೇ ತೆಗೆದುಕೊಳ್ಳಲೂ ಬರುವುದಿಲ್ಲ. ಏಕೆಂದರೆ ಪ್ರತಿ ಅಂಗದಲ್ಲಿ ಪರಿಪೂರ್ಣವಾದ ಅರಿವಿದೆ ; ಮಹಾಜ್ಞಾನವಿದೆ. ಅಂಗದಲ್ಲಿ ಸಂಗಮವಾದ

ಮಹಾಜ್ಞಾನವನ್ನು ಆ ಜ್ಞಾನ ಮೂರ್ತಿಯನ್ನು ಸೂಕ್ಷ್ಮಾಂಗವೆಂಬ ಶಿಷ್ಯ ಗುರುವನ್ನಾಗಿಸಿಕೊಳ್ಳಬೇಕು. ಈ ಕ್ರಿಯೆ ಸ್ಥೂಲಾಂಗದಲ್ಲಿ ಘಟಿಸಬೇಕು. ಇಂತಹ ಅಂಗವನ್ನು ಯಮ ಕೊಂಡೊಯ್ಯುವುದಿಲ್ಲ. ಮೆಟ್ಟಿ ಮೆಟ್ಟಿ ಗುದ್ದುವುದಿಲ್ಲ.

ಇದ್ಯಾವುದೂ ಅರಿಯದೆ ಕಿರುಕುಳದ ಬೆನ್ನ ಬಿದ್ದು ಹರಿದಾಡುವ ನರಕಿಯನು ಯಮ ಕೊಂಡೊಯ್ಯದೆ ಬಿಡುವುದಿಲ್ಲ. ಅಂಗದ ಹಲ್ಲು ಬಿದ್ದು ಬೆನ್ನು ಬಾಗುವ ಮುನ್ನ ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನ ದರುಶನ ಅಂಗಕ್ಕೆ ಆಗಲೇಬೇಕು.

73

**ಒಬ್ಬ ತಂದೆಯ ಬಸಿರಲ್ಲಿ ಒಂಬತ್ತು ಮಕ್ಕಳು ಹುಟ್ಟಿದಡೇನಯ್ಯ ?**
**ಅವರೊಳಗೊಬ್ಬಾತಂಗೆ ಸೆರಗ ಕಟ್ಟಿ ಮದುವೆಯ ಮಾಡಿದ ಬಳಿಕ ,**
**ಆತಂಗೆ ತನ್ನಂಗದ ಸುಖವನೊಪ್ಪಿಸಬೇಕಲ್ಲದೆ,**
**ಉಳಿದಿರ್ದವರೆಲ್ಲ ತನ್ನ ಮಾವನ ಮಕ್ಕಳೆಂದು**
**ಅವರಿಗೆ ಸೆರಗು ಹಾಸುವವಳನು ಒಪ್ಪುವರೆ ಲೋಕದೊಳು ?**
**ಪರಮಾತ್ಮನೆಂಬ ಶಿವನಿಗೆ ಆಶ್ರಯವಾಗಿ ಹುಟ್ಟಿತ್ತು ಲಿಂಗ ,**
**ಆತಂಗೆ ವಾಹನವಾಗಿ ಹುಟ್ಟಿದಾತ ವೃಷಭ,**
**ಆತಂಗೆ ಯೋಗವಾಗಿ ಹುಟ್ಟಿದಾತ ವಿನಾಯಕ,**
**ಆತಂಗೆ ಯುದ್ಧಕ್ಕೆ ಸರಿಯಾಗಿ ಹುಟ್ಟಿದಾತ ವೀರಭದ್ರ .**
**ಇಂತಿವರೆಲ್ಲ ಶಿವನ ಮಕ್ಕಳಾದರೆ,**
**ತನಗೊಂದು ಪ್ರಾಣಲಿಂಗವೆಂದು ಕಂಕಣ ಕಟ್ಟಿ ,**
**ಕರಸ್ಥಲಕ್ಕೆ ಬಂದ ಬಳಿಕ ಅದನು ನಂಬಲರಿಯದೆ**
**ಮತ್ತನ್ಯದೈವಕ್ಕೆರಗಿದಡೆ ನಾಯಕ ನರಕವೆಂದಾತ**
**ನಮ್ಮ ಅಂಬಿಗರ ಚೌಡಯ್ಯ .**

ಅಂಗದ ಸುಖವನ್ನು ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನಿಗೆ ಒಪ್ಪಿಸಬೇಕಲ್ಲದೆ, ಅಂಗವನ್ನು ಆವರಿಸಿದ ಮನವೆಂಬ ಹೆಣ್ಣು ಅನ್ಯರಿಗೆ ಸೆರಗು ಹಾಸಿದರೆ ಹೇಗೆ ? ಅಂಗದ ಬಸಿರಲ್ಲಿ ಒಂಬತ್ತು ಮಕ್ಕಳು. ಅವರಲ್ಲಿ ಒಬ್ಬಾತಂಗೆ ಸೆರಗ ಕಟ್ಟಿ ಮದುವೆಯ ಮಾಡಿದ ಬಳಿಕ ಸಕಲ ಮಕ್ಕಳೂ ಅದನ್ನೇ ಅನುಸರಿಸಬೇಕು. ಆತಂಗೆ ತನ್ನ ಸುಖವನ್ನೆಲ್ಲ ಒಪ್ಪಿಸಬೇಕು.

ಅಂಗ ಒಂದೇ ಅದರ ಬಸಿರಲ್ಲಿ ಕಣ್ಣುಗಳೆರಡು, ಕಿವಿಗಳೆರಡು, ಮೂಗಿನ ಹೊರಳೆಗಳೆರಡು, ನಾಲಗೆ ಒಂದು, ಜನನಾಂಗ ಒಂದು, ಗುದದ್ವಾರ ಒಂದು . ಹೀಗೆ ಒಂಬತ್ತು ಮಕ್ಕಳು. ಒಬ್ಬ ತಂದೆಯ ಬಸಿರಲ್ಲಿ ಒಂಬತ್ತು ಮಕ್ಕಳು ಹುಟ್ಟಿದ ಬಳಿಕ ಒಬ್ಬನಾದಡೂ ಅರಿವಿನ ಸಂಗಯ್ಯನೆಂಬ ತಂದೆಗೆ ವಿಧೇಯನಾಗಿರಬೇಕಲ್ಲ ? ಒಬ್ಬನಿದ್ದಡೆ ಸಾಕು ಸಕಲರೂ ಅವನ ಹಿಂಬಾಲಿಸುವರು. ತಮ್ಮನ್ನು ತಾವು ಹಡೆದ ತಂದೆಗೆ ಒಪ್ಪಿಸುವರು.

ಅರಿವಿನ ಸಂಗಮನಾಥನನ್ನು ಬಿಟ್ಟು ಅಂಗದ ಬಸಿರಲ್ಲಿ ಹುಟ್ಟಿದ್ದ ಮಕ್ಕಳು ಆ ಅಂಗದೊಂದಿಗೆ ಹಾದರ ಮಾಡುತ್ತವೆ. ಕಣ್ಣು ನೋಡಿದೆಡೆಯಲೆಲ್ಲ ಅಂಗದೊಂದಿಗೆ ಹೋಗಿ

ಸುಖಪಡುತ್ತದೆ. ಕಿವಿ ಕೇಳಿದಲ್ಲೆಲ್ಲ ಅಂಗ ಸುಖ ದುಃಖಗಳನ್ನು ಹೇರಿಕೊಂಡು ಹಾದರ ಮಾಡುತ್ತದೆ. ತಂದೆಯ ಮಾನ ಕಳೆಯುವ ಮಕ್ಕಳು ಅಂಗದಲ್ಲಿಯೇ ಮನೆ ಮಾಡಿಕೊಂಡಿದ್ದಾರೆ.

**ಪರಮಾತ್ಮನೆಂಬ ಶಿವನಿಗೆ ಆಶ್ರಯವಾಗಿ ಹುಟ್ಟಿತ್ತು ಲಿಂಗ, ಆತಂಗೆ ವಾಹನವಾಗಿ ಹುಟ್ಟಿದಾತ ವೃಷಭ :**

ಮಹಾಜ್ಞಾನವೆಂಬ ಸುಜ್ಞಾನಮೂರ್ತಿ ತನ್ನ ಲೀಲೆಗಾಗಿ ಗರ್ಭದಲ್ಲಿ ಚುಳುಕಾದ. ಪರಮಾತ್ಮನೆಂಬ ಶಿವನನ್ನು ಹೊತ್ತ ಅಂಗ ಆತನಿಗೆ ವೃಷಭನೆಂಬ ವಾಹನವಾಯಿತು.

ಚೌಡಯ್ಯ ಶರಣರ ಅದ್ಭುತ ಸೂತ್ರವಿದು. ಜಗದ ಸಕಲ ಅಂಗಗಳು ಪರಮಾತ್ಮನನ್ನು ಹೊತ್ತು ; ಆತನಿಗೆ ವಾಹನವಾಗಿ, ಆತನನ್ನು ಅರಿಯದೆ ಪಶು ವಿನಂತೆ ತಿರುಗುತ್ತಲಿವೆ. ' ಪಶು ನಾನು ಪಶುಪತಿ ನೀನು, ತುಡುಗುಣಿಯೆಂದು ಹಿಡಿದು ಬಡಿಯದ ಮುನ್ನ, ತಂದೆ ನಿನ್ನ ಬಯ್ಯದಂತೆ ಮಾಡು ' ಎಂದು ಬಸವಣ್ಣ ಹೃದಯ ತುಂಬಿ ಹಾಡಿದ್ದಾರೆ.

ಅಂಗ ಪಶುವಿನಂತೆ ವರ್ತಿಸಿದರೆ ಅಂಗವನ್ನು ಹಡೆದ ತಂದೆಯನ್ನು ಬಯ್ಯುತ್ತಾರೆ. ಅಂಗದ ತಂದೆ ನೀನು. ನಿನ್ನ ಬಯ್ಯದಂತೆ ಈ ಅಂಗವನ್ನು ನೀನೇ ರಕ್ಷಣೆ ಮಾಡು. ಎಂತಹ ಸೊಗಸಾದ ಮಾತಿದು. ರೋಮಾಂಚನವಾಗುವ ಮಾತು. ಪಶು ಆ ಪಶುಪತಿಯನ್ನು ಅಪ್ಪಿಕೊಳ್ಳುವ ಮಾತು. ಯಾವ ಕವಿ ಸಾಹಿತಿಗೂ ನಿಲುಕದ ಮಾತು !

ಶಿವನಿಗೆ ವೃಷಭ ವಾಹನವಾದರೆ, ಆತನ ಯೋಗಕ್ಕೆ ಯೋಗವಾಗಿ ವಿನಾಯಕನಾದ. ಆತನ ಯುದ್ಧಕ್ಕೆ ಸರಿಯಾಗಿ ಹುಟ್ಟಿದಾತ ವೀರಭದ್ರನಾದ. ಇಂತಿವರೆಲ್ಲರು ಶಿವನ ಮಕ್ಕಳೆಂದು ಹೆಸರು ಪಡೆದರು. ಶಿವ ತಾರತಮ್ಯ ಮಾಡದೆ ತಾನೇ ಹಡೆದ ಅಂಗಕ್ಕೊಂದು ಲಿಂಗವೆಂಬ ಕಂಕಣ ಕಟ್ಟಿ ಅಂಗದಲ್ಲಿಯೇ ಸಂಗಮವಾದ. ಅದನ್ನು ನಂಬಲರಿಯದೆ ಅನ್ಯ ದೈವವನ್ನು ಪೂಜಿಸಿ ಅದಕ್ಕೆರಗುವ ಅಂಗಕ್ಕೆ ನಾಯಕ ನರಕ ತಪ್ಪದು ಎಂದಾತ ನಮ್ಮ ಅಂಬಿಗರ ಚೌಡಯ್ಯ .

**74**

**ಓಂಕಾರವೆಂಬಾಕಾರದಲ್ಲಿ ನಾಲ್ಕು ವೇದ,**
**ನಾಲ್ಕು ವೇದದಲ್ಲಿ ಇಪ್ಪತ್ತೆಂಟಾಗಮ,**
**ಇಪ್ಪತ್ತೆಂಟಾಗಮದಲ್ಲಿ ಹದಿನೆಂಟು ಪುರಾಣ,**
**ಹದಿನೆಂಟು ಪುರಾಣದಲ್ಲಿ ಹದಿನಾರು ಶಾಸ್ತ್ರವಡಗಿದವು.**
**ಆ ಶಾಸ್ತ್ರದ ಕೊನೆಯ ಮೊನೆಯ ಮೇಲಿಪ್ಪ**
**ಷಡ್ದರ್ಶನದ ಕಹಿಯ ಬೇರ ಹಿಡಿದು,**
**ವೀರಶೈವನೆಂಬ ಸಿದ್ಧನು ಕೀಳುವಾಗ,**
**ಕಾಯಯ್ಯಾ ಎಂದು ಬಾಯ ಬಿಟ್ಟವು.**
**ಅವಕ್ಕೆ ಕರುಣಿಸಿ ಬಿಟ್ಟಾತನಂಬಿಗ ಚೌಡಯ್ಯ .**

ನಾಲ್ಕು ವೇದ, ಇಪ್ಪತ್ತೆಂಟು ಆಗಮಗಳು, ಹದಿನೆಂಟು ಪುರಾಣ, ಹದಿನಾರು ಶಾಸ್ತ್ರಗಳು ಅಂಗದಿಂದಲೇ ಹೊರ ಬಂದವು. ಅಂಗವೆಂಬುದು ಲಿಂಗ ; ಲಿಂಗಾಂಗ. ಅದು ಓಂಕಾರವೂ ಹೌದು. ಸಕಲ ಶಾಸ್ತ್ರಗಳು ಅಂಗದಿಂದಲೇ ಹೊರಬಂದು ಅಂಗದಲ್ಲಿ ಸಂಗ್ರಹವಾಗಿ ಅಂಗವನ್ನು

ಕಿರಿದನ್ನಾಗಿಸಿ ತಾನೇ ಹಿರಿದಾಗಿವೆ. ಹೀಗಾಗಿ ಜಗತ್ತಿನಾದ್ಯಂತ ಬೈಬಲ್ ಭಗವದ್ಗೀತೆ ಕುರಾನ್ ಮುಂತಾದ ಪುಸ್ತಕಗಳು ಮಾನವನಿಂದ ಪೂಜಿಸಲ್ಪಡುತ್ತಿವೆ. ಇದು ಒಂದು ಸೋಜಿಗವೇ ಸರಿ.

'' ನಿತ್ಯ ನಿರಂಜನ ತಾನೆಂದು ಅರಿಯದೆ 'ತತ್ವಮಸಿ' ಎಂದು ಹೊರಗನೆ ಹಾಡಿ ಸತ್ತಿತ್ತಲ್ಲ ಜಗವೆಲ್ಲ ನಾಯಿಸಾವ. ತಮ್ಮ ತಾವು ಅರಿಯದೆ ಸತ್ತವರ ಪತ್ರ ಓದಿದಡೆ ಎತ್ತಣ ಮುಕ್ತಿ ಗುಹೇಶ್ವರಾ ''

ಸಂತರು, ಮಹಾಂತರು ತಮ್ಮ ತಮ್ಮ ತನುವಿನೊಳಗೆ ಇರುವಂತಹ ಅರಿವಿನ ಶಕ್ತಿಯನ್ನು ತಾವೇ ಕಂಡುಕೊಂಡರು. ಪರಮಹಂಸನಂತೆ ಬದುಕಿದರು. ಜಗದ ಸಕಲ ಜನ ಹೀಗೆ ಬದುಕಬಹುದೆಂದು ಸೂತ್ರ ಬರೆದು ಸತ್ತು ಹೋದರು. ಸತ್ತವರು ಬರೆದ ಪತ್ರಗಳು ಇವು. ಪುಸ್ತಕ ರೂಪದಲ್ಲಿ ವೇದ ವೇದಾಂತಗಳೆಂದು, ಪುರಾಣ, ಶಾಸ್ತ್ರಗಳೆಂದು, ದರ್ಶನಗಳೆಂದು ಹೆಸರು ಪಡೆದವು. ಅವುಗಳೇ ಶ್ರೇಷ್ಟವೆಂದು ಪೂಜಿಸಿದರೆ, ಅವುಗಳನ್ನು ಬರೆದವರು ಶ್ರೇಷ್ಟರೆಂದು ಆರಾಧಿಸಿದರೆ, ಅಂಗ ನಿತ್ಯ ನಿರಂಜನ ಆಗಬಲ್ಲುದೆ ? ರಂಜನೆಗೆ ಒಳಪಟ್ಟ ಅಂಗ ನಿರಂಜನನಾಗಬೇಕಿದೆ. ನಿರಂಜನ ವಸ್ತು ಕೂಡಾ ಅಂಗದಲ್ಲಿಯೇ ಇದೆ. ನಿರಂಜನದೆಡೆಗೆ ಹೋಗುವ ಸೂತ್ರಗಳನ್ನು ಪೂಜಿಸುವ ಅವಶ್ಯಕತೆ ಇಲ್ಲ ಎಂದು ಅಲ್ಲಮ ಪ್ರಭುಗಳು ಸುಳುಹು ನೀಡಿದ್ದಾರೆ.

ವೀರನಾದವನು ಅರಿವಿನಿಂದ ಅಂಗದಲ್ಲಿ ಸಂಗ್ರಹವಾದ ಶಾಸ್ತ್ರ ಪುರಾಣ ವೇದ ಆಗಮ ಉಪ ನಿಷತ್ತುಗಳನ್ನು ಬೇರು ಸಹಿತ ಕಿತ್ತು ಬೀಸಾಡಬೇಕಿದೆ. ಏಕೆಂದರೆ ಅಂಗವು ಸ್ವತಹ ಲಿಂಗಾಂಗವಾಗಿದೆ. ಓಂಕಾರವೇ ತಾನಾಗಿದೆ. ಅದು ಏನನ್ನೂ ಸಂಗ್ರಹಿಸಿಕೊಳ್ಳಬೇಕಾಗಿಲ್ಲ.

75

**ಓದಿ ಬೋಧಿಸಿ ಇದಿರಿಗೆ ಹೇಳುವನ್ನಬರ ಚದುರತೆಯಲ್ಲವೆ ?**
**ತಾ ತನ್ನನರಿದಲ್ಲಿ, ಆ ಅರಿಕೆ ಇದಿರಿಗೆ ತೋರಿದಲ್ಲಿ**
**ಅದೆ ದೇವತ್ವವೆಂದನಂಬಿಗ ಚೌಡಯ್ಯ .**

ಓದು ಬರಹ ಆನಂದಕ್ಕಾಗಿ. ಹೇಳುವುದಕ್ಕಾಗಿ ಅಲ್ಲ. ಒಂದು ದೇಹ ಮತ್ತೊಂದು ದೇಹಕ್ಕೆ ಹೇಳುವುದೇನಿದೆ ? ಬೋಧಿಸುವುದಾದರೂ ಏನಿದೆ ? ದೇಹ ಯಾವ ದೇಶ ಭಾಷೆಯದ್ದಾದರೇನು ? ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಒಂದೇ. ಅವುಗಳ ಜ್ಞಾನ ಕೂಡಾ ಒಂದೇ. ಸಹಜ ಸ್ಥಿತಿಯಲ್ಲಿದ್ದು ಸಹಜ ಸ್ಥಿತಿಯನ್ನು ಮರೆತಿದೆ. ಅಸಹಜವಾದುದನ್ನು ಸಂಗ್ರಹಿಸಿಕೊಂಡು ದೇಹ ವಿಲವಿಲನೆ ಒದ್ದಾಡುತ್ತಿದೆ. ಪುನಃ ಸಹಜ ಸ್ಥಿತಿಗೆ ಬರಬೇಕಾದರೆ ದೇಹಕ್ಕೆ ಬೋಧೆ ಬೇಕಿಲ್ಲ. ಸಹಜ ಸ್ಥಿತಿಯಲ್ಲಿದ್ದ ಜ್ಞಾನೇಂದ್ರಿಯಗಳನ್ನು ಆವರಿಸಿದ ಮನ ಆಚೆ ಸರಿದರೆ ಸಾಕು ; ಜ್ಞಾನ ತನ್ನ ಕೆಲಸವನ್ನು ತಾನು ಮಾಡುತ್ತದೆ. ಈ ತಂತ್ರಜ್ಞಾನ ಬಲ್ಲ ದೇಹ ಮತ್ತೊಂದು ದೇಹಕ್ಕೆ ಮಾಹಿತಿ ಕೊಡಬಹುದು ಅಷ್ಟೆ. ಅದನ್ನು ಬಿಟ್ಟು ತಾನು ಜ್ಞಾನಿ, ಗುರು, ಮಠಾಧೀಶ ಎಂದು ಓದಿ ಹೇಳಬೇಕಿಲ್ಲ. ಬೋಧಿಸಬೇಕಾಗಿಲ್ಲ.

ದೇಹದಲ್ಲಿರುವ ಸಂಪತ್ತು ಒಂದೇ. ದೇಹದಿಂದ ಪುಸ್ತಕಕ್ಕೆ ಬಂದ ಸಂಪತ್ತು ಕೂಡಾ ಒಂದೇ. ಅದನ್ನು ನುಡಿಯಿಂದ, ಓದುವುದರ ಮೂಲಕ, ಕೇಳುವುದರ ಮೂಲಕ ತಿಳಿಯುವ ಶಕ್ತಿ ದೇಹಕ್ಕಿದೆ. ಭಾಷೆ ಒಂದಾಗಿರಬೇಕು ಅಷ್ಟೆ. ಅಥವಾ ಸಂಜ್ಞೆಯಿಂದಲೂ ದೇಹಕ್ಕೆ ತಿಳಿಯುವ ಶಕ್ತಿ ಇದೆ. ಕಣ್ಣು ನಾಲಿಗೆ ಚರ್ಮ ಮೂಗು ಈ ಜ್ಞಾನೇಂದ್ರಿಗಳಿಗೆ ಭಾಷೆ ಇಲ್ಲ. ದೃಶ್ಯ ರುಚಿ ಸ್ಪರ್ಶ ವಾಸನೆ ಮೂಲಕ

ತಿಳಿಯುತ್ತದೆ. ಕಿವಿ ಮಾತ್ರ ಶಬ್ದದಿಂದ ತಿಳಿಯುತ್ತದೆ.

ತಾನು ತನ್ನನ್ನು ಅರಿದ ಶಬ್ದವದು ಮೌನ. ಕಿವಿ ಶಬ್ದ ತಿಳಿಯುತ್ತದೆ. ಕಣ್ಣು ನಿಃಶಬ್ದದಿಂದ ನೋಡುತ್ತದೆ. ಹಾಗೆಯೇ ಚರ್ಮ ನಾಲಗೆ ಕೂಡಾ ನಿಃಶಬ್ದದಿಂದಲೇ ಸ್ಪರ್ಶಿಸಿ ರುಚಿಸುತ್ತವೆ. ಆಯಾ ವಿಷಯದಲ್ಲಿ ಆಯಾ ಜ್ಞಾನೇಂದ್ರಿಯಗಳು ಪರಿಣತಿಯನ್ನು ಪಡೆದಿವೆ. ಶಬ್ದ ನುಡಿಯುವ ಬಾಯಿಗೆ ಈ ಯಾವ ಕೆಲಸಗಳೂ ಗೊತ್ತಿರುವುದಿಲ್ಲ. ಆದರೆ ಓದಿ ಬೋಧಿಸಿ ಚದುರತೆಯನ್ನು ಮೆರೆಯುತ್ತದೆ. ಬಾಯಿಗೆ ಸ್ಪರ್ಶ ವಾಸನೆ ದೃಶ್ಯ ಶಬ್ದ ಸುಖ ಗೊತ್ತಿಲ್ಲ. ಅದರ ದುಃಖವೂ ಗೊತ್ತಿಲ್ಲ. ಆದರೂ ಜ್ಞಾನಿಯಂತೆ ಪಂಡಿತನಂತೆ ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಓದಿ ಬೋಧಿಸುತ್ತದೆ. ತಾನು ತನ್ನನ್ನು ಅರಿತಲ್ಲಿ ಆ ಅರಿಕೆ ಇದಿರಿನ ದೇಹದಲ್ಲಿ ತನಗೇ ತೋರುವುದು. ತನ್ನನ್ನು ತಾನು ಅರಿಯದ್ದಕ್ಕಾಗಿ ಓದುವುದು ಬೋಧಿಸುವುದು ನಡೆದಿದೆ. ಇದು ಪ್ರಪಂಚದ ಅಜ್ಞಾನ, ಅಂದರೆ ಪ್ರ-ಪಂಚ: ಪಂಚ ಜ್ಞಾನೇಂದ್ರಿಯಗಳ ಅಜ್ಞಾನ.

ಜ್ಞಾನವೂ ಅಲ್ಲಿಯೇ ಇದೆ. ಅಜ್ಞಾನವೂ ಅಲ್ಲಿಯೇ ಇದೆ. ಜ್ಞಾನ ಅಂಗದಲ್ಲಿ ಸಂಗಮವಾಗಿದೆ. ಅಜ್ಞಾನ (ಮನ) ಅಂಗವನ್ನು ಆವರಿಸಿದೆ. ಆವರಿಸಿದ ಮನದಿಂದಲೇ ಜ್ಞಾನವನ್ನು ಅರಿತು ಆ ಜ್ಞಾನದ ಸಹಜ ಸುಖವನ್ನು ಪಡೆಯಬೇಕಿದೆ. ಹೀಗೆ ಜಗದ ಅಂಗಗಳೆಲ್ಲ ಸಹಜ ಸುಖವನ್ನು ಪಡೆಯಬೇಕೇ ವಿನಹ ಓದಿ ಬೋಧಿಸಿ ಚದುರತೆಯನ್ನು ಮೆರೆಯುವಂತಿಲ್ಲ. ಒಂದು ವೇಳೆ ಹಾಗಾದರೆ ಅದಕ್ಕದೇ ಅಜ್ಞಾನ. ಅದನ್ನು ಕಿತ್ತೆಸೆಯಬೇಕಾದರೆ ಅದೇ ಪ್ರಯಾಸ ಪಡಬೇಕು ; ಪ್ರಯತ್ನಿಸಬೇಕು. ಬೋಧಿಸಬೇಕೇಕೆ ? ಅದರ ಬದಲಾಗಿ ಸುಮ್ಮನಿದ್ದು ತನ್ನನ್ನು ತಾನು ತಿಳಿದರೆ ಸಾಲದೆ ? ಆ ದೇವತ್ವವನು ಪಡೆದು ಅದರ ಸುಖವನು ಅನುಭವಿಸಿದರೆ ಸಾಲದೆ ? ಇದು ಅಂಬಿಗರ ಚೌಡಯ್ಯಗಳ ಪ್ರಶ್ನೆ.

76

**ಓದಿಹೆನೆಂಬ ಒಡಲು, ಕಂಡೆಹೆನೆಂಬ ಭ್ರಾಂತು,**
**ಸರ್ವರಿಗೆ ಹೇಳಿಹೆನೆಂಬ ತೇಜಸ್ಸು,**
**ಇಂತಿವೆಲ್ಲವು ಇದಿರಿಗೆ ಹೇಳೆ**
**ತನ್ನ ಉದರದ ಕಕ್ಕುಲತೆಯಲ್ಲದೆ**
**ಆತ ಅರಿವಿಂಗೆ ಒಡಲಲ್ಲಾ ಎಂದನಂಬಿಗ ಚೌಡಯ್ಯ.**

ಅರಿವಿನ ಒಡಲು ಬಲು ಸಹಜ. ಅದರಲ್ಲಿ ಅಹಂಕಾರ ನಿರ್ನಾಮವಾಗಿರುತ್ತದೆ. ಕಕ್ಕುಲತೆ, ಕರುಣೆ, ಭಾವಗಳೂ ಇರುವುದಿಲ್ಲ. ಹೀಗೆ ಏನೂ ಇಲ್ಲದ ಒಡಲು ಅದ್ಹೇಗೆ ಸಹಜ ಎಂಬ ಪ್ರಶ್ನೆ ಓದುಗರಲ್ಲಿ ಹುಟ್ಟಬಹುದು ; ಇದು ಸಹಜ :

ಓದಿದರೆ ಒಡಲಿಗೆ ಆನಂದವಾಯಿತು. ಅಂದರೆ ಓದಿದ್ದು ಒಡಲಲ್ಲಿ ಜೀರ್ಣವಾಯಿತು. ಒಡಲಲ್ಲಿ ಜೀರ್ಣವಾದ ಅನ್ನವನ್ನು ಹೇಗೆಂದು ಬಣ್ಣಿಸುವುದು ? ಬಣ್ಣಿಸಲು ಬರುವುದಿಲ್ಲ. ಏಕೆಂದರೆ ಅನ್ನ ಜೀರ್ಣವಾಗಿ ರಕ್ತ ಮೂಳೆ ಮಾಂಸಕ್ಕೆ ಹರಿದು ಚರ್ಮದ ಕಾಂತಿ ಇಮ್ಮಡಿ ಗೊಳಿಸಿದೆ. ಅಂತಹ ಅನ್ನವನ್ನು ದೇಹದ ಮೂಲಕ ಕಂಡುಕೊಳ್ಳಬೇಕು. ಹೀಗಾಗಿ ಅನ್ನವನ್ನು ಅನ್ನಂ ಬ್ರಹ್ಮ ಎಂದರು.

ಅಂತೆಯೇ ಓದಿದ ಒಡಲನ್ನು ನೋಡಿಯೇ ಕಂಡುಕೊಳ್ಳಬೇಕು. ಅದರ ಪ್ರಶಾಂತತೆ

ಸಮಾಧಾನ ಆಲನೆ ಎಲ್ಲವುಗಳಲ್ಲಿಯೂ ಬದಲಾವಣೆ ! ಅದೊಂದು ಜ್ಞಾನದ ಮರ . ಅದರಲ್ಲಿ ಅಹಂಕಾರವಿಲ್ಲ. ಭ್ರಾಂತಿ ಇಲ್ಲ ಹೇಳಿಹೆನೆಂಬ ಉತ್ಸಾಹವೂ ಇಲ್ಲ. ಎಲ್ಲವೂ ಸಹಜ.

ಓದಿದ್ದನ್ನು ಹೇಳಿಹೆನೆಂಬ ತೇಜಸ್ಸು ಕೂಡಾ ಕೃತ್ರಿಮ. ಏಕೆಂದರೆ ಉಂಡದ್ದು ಜೀರ್ಣವಾದರೆ ಆ ಅನ್ನವನ್ನು ಬಣ್ಣಿಸುವಂತಿಲ್ಲ. ಹಾಗೆಯೇ ಓದಿದ ಓದನ್ನು ನುಡಿದು ಹೇಳುವಂತಿಲ್ಲ . ಓದಿ ತಿಳಿದದ್ದು ಅನಂತ. ಸೋರಿಕೆಯಾಗಿ ಹೊರ ಬಂದದ್ದು ತೃಣ. ಓದಿದ ಓದು ತಿಳಿಯುವ ಆನಂದ ಒಂದೇ ; ಅದನ್ನು ವಿಸ್ತರಿಸುವಂತಿಲ್ಲ. ಹೊರ ಹಾಕುವಂತಿಲ್ಲ. ಏಕೆಂದರೆ ಕೇಳುವ ಮತ್ತೊಂದು ವಸ್ತು ಭರಿತವಾದ ಒಡಲ ಮುಂದೆ ಒಡಲು ಉಸುರುವುದೆಂದರೇನು ? ಅದಕ್ಕೇನು ತಿಳಿದಿಲ್ಲ; ಇದಕ್ಕೇನು ತಿಳಿದಿದೆ ! ಹೇಳಿಹೆನೆಂಬುದು ಉದರದ ಕಕ್ಕುಲತೆಯೇ ಹೊರತು ಅದು ಸಹಜವಲ್ಲ.

ಓದಿಹೆನೆಂಬ, ಕಂಡೆಹೆನೆಂಬ, ಸರ್ವರಿಗೆ ಹೇಳಿಹೆನೆಂಬ ಉದರದ ಕಕ್ಕುಲತೆಯು ಅರಿವಿಂಗೆ ಬಹು ದೂರ ! ಅದು ಅರಿವಿಗೆ ಹೇಳಿ ಮಾಡಿಸಿದ ಒಡಲಲ್ಲ.

ಕಂಡದ್ದನ್ನು ಕಂಡೆಹೆನೆಂದು ಕಣ್ಣಿನ ಮೂಲಕ ಹೇಳುವುದು ಹೇಗೆ ? ಕಂಡ ವಸ್ತು ಕಣ್ಣಿನಲ್ಲಿ ಜೀರ್ಣವಾದರೆ ಹೇಳಲು ಬರುವುದಿಲ್ಲ. ಕಂಡದ್ದು ಒಂದು ; ಹೇಳಿದ್ದು ಒಂದು. ಓದಿದ್ದು ಒಂದು ; ಹೇಳಿದ್ದು ಒಂದು. ಕಂಡದ್ದು ಕಂಡಂತೆ ಕಾಣಲು ಬರುತ್ತದೆ ಹೊರತು ಹೇಳಲು ಬರುವುದಿಲ್ಲ. ಹಾಗೆಯೇ ಕಣ್ಣಿನ ಮೂಲಕ ಓದಲು ಬರುತ್ತದೆಯೇ ಹೊರತು; ಜೀರ್ಣ ವಾಗದಿದ್ದರೆ ಬಾಯಿ ಮೂಲಕ ಹೊರ ಚೆಲ್ಲುತ್ತದೆ. ಏಕೆಂದರೆ ಅವೆರಡೂ ಜೀರ್ಣವಾಗಲಿಲ್ಲ. ಜೀರ್ಣವಾಗದ್ದಕ್ಕಾಗಿ ಓದಲು ಕಾಣಲು ಬಾರದ ಬಾಯಿ ಹೊರ ಹಾಕಿತು. ಹಾಗೆಂದ ಮೇಲೆ ಅದು ಸುಳ್ಳಾಗಿರಬೇಕಲ್ಲ. ಒಡಲಿಗೆ ಓದಲು ಅಥವಾ ಕೇಳಿ ತಿಳಿಯಲು, ನೋಡಲು ಬರುವುದಿಲ್ಲವೆ ? ಒಡಲು ತನ್ನ ಕೆಲಸವನ್ನು ತಾನೇ ಮಾಡಲು ಬರುತ್ತದೆ. ಅದು ಸಂಗ್ರಹಕ್ಕೆ ಯೋಗ್ಯವಲ್ಲದ ವಸ್ತು . ಸಂಗ್ರಹ ಒಡಲಿಗೆ ಕರುಣೆ ಕಕ್ಕುಲತೆ ಭಾವ ದುರ್ಭಾವ ಅಹಂಕಾರವನ್ನು ಸೃಷ್ಟಿಸುತ್ತದೆ. ಹೀಗಾಗಿ ಒಡಲಲ್ಲಿ ಅನ್ಯ ವಸ್ತು ಅಂದರೆ ಸಿಬುರು ಮುಳ್ಳುಕಟ್ಟಿಗೆ ಕಬ್ಬಿಣ ಚುಚ್ಚಿ ಒಳ ಸೇರಿದರೆ ಅದು ಹೊರಗೆ ಬರುವವರೆಗೆ ಯಾತನೆಗೆ ಗುರಿಯಾಗುತ್ತದೆ. ಏಕೆಂದರೆ ಹೊರಗಿನ ವಸ್ತು ಒಡಲು ಸೇರಿ ಜೀರ್ಣವಾಗಲಿಲ್ಲ. ಹಾಗೆಯೇ ಓದಿದ, ಕಂಡ ವಸ್ತು ಜೀರ್ಣವಾಗದಿದ್ದರೆ ಒಡಲು ಮತ್ತೊಂದು ಒಡಲಿಗೆ ಬೋಧಿಸುತ್ತದೆ. ಬೋಧಿಸುವ ವೇಷ ಹಾಕುತ್ತದೆ. ವೇಷ ಹಾಕಿದ ಒಡಲು ; ವಿಶೇಷವೆಂದು ತಿಳಿಯುವ ಒಡಲುಗಳೆರಡು ಒಂದೇ. ಜೀರ್ಣವಾಗದ ಜೀರ್ಣಿಸಿಕೊಳ್ಳದ ಒಡಲುಗಳು. ಇವು ಉದರದ ಕಕ್ಕುಲತೆಯನ್ನು ಮರೆಯುವವಲ್ಲದೆ ಅರಿವಿಂಗೆ ದೂರ ಎಂದಿದ್ದಾರೆ ಅಂಬಿಗರಚೌಡಯ್ಯ ಶರಣರು.

77

**ಕಂಗಳ ನಾಮ ಹರುಗುಲವಾಗಿ, ನೋಡುವ ದೃಷ್ಟಿ ಅಂಬಿಗನಾಗಿ,**
**ಕರಣೇಂದ್ರಿಯವೆಂಬ ಬಹುಜನಂಗಳು ಕೂಡಿ,**
**ಆಸೆಯೆಂಬ ಹೊಳೆಯ ದಾಟುವುದಕ್ಕೆ ಹುಟ್ಟ ಕಾಣದೆ**
**ಹರಗುಲು ಈಚೆ ಉಳಿಯಿತ್ತೆಂದನಂಬಿಗ ಚೌಡಯ್ಯ .**

ಕಣ್ಣು ನೋಡುವ ಒಂದು ಉಪಕರಣ. ನದಿ ದಾಟುವುದಕ್ಕೆ ಹರಗೋಲು ಹೇಗೆ ಉಪಕರ

ಣವೋ ಹಾಗೆಯೇ ಕಣ್ಣು ಕೂಡಾ ಒಂದು ಉಪಕರಣ. ನೋಡುವ ದೃಶ್ಯದಲ್ಲಿ ಅರಿವೆಂಬ ಅಂಬಿಗನಿದ್ದಾನೆ ; ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಬಹುಜನರಿದ್ದಾರೆ. ಇವರು ನೋಡುವ ದೃಶ್ಯವೆಂಬ ಅರಿವನ್ನು ಆವರಿಸಿದ್ದಾರೆ. ಹೀಗಾಗಿ ಅರಿವು ಕಣ್ಣಿನಲ್ಲಿಯೇ ಮರೆವಾಗಿ ; ಮರೆವೇ ಕಣ್ಣಿನ ರಾಜ್ಯಭಾರ ಮಾಡುತ್ತಲಿದೆ.

ಕಣ್ಣೇನೋ ಕಾಣುತ್ತದೆ. ಕಾಣುವ ವಸ್ತುವದು ಸತ್ಯವಲ್ಲ. ಸತ್ಯವಲ್ಲದ ವಸ್ತುವಿನ ಮೇಲೆ ಕಣ್ಣಿನ ದೃಶ್ಯಕ್ಕೆ ಬಲು ಮೋಹ. ನೋಡುವ ದೃಶ್ಯ ಕಣ್ಣನ್ನು ಆವರಿಸಿದೆ. ಆ ದೃಶ್ಯದಲ್ಲಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಬೆರೆತಿವೆ. ಸಹಜ ದೃಶ್ಯ ಕಣ್ಣಿನಲ್ಲಿಯೇ ಸಂಗಮವಾಗಿದೆ. ಸಹಜ ಮತ್ತು ಅಸಹಜ ದೃಶ್ಯಗಳೆರಡೂ ಕಣ್ಣನ್ನು ಉಪಕರಣ ಮಾಡಿಕೊಂಡಿವೆ. ಹೀಗಾಗಿ ಅಂಬಿಗರ ಚೌಡಯ್ಯ ಶರಣರು ಕಣ್ಣನ್ನು ಹರಗೋಲು ಎಂದು ಕರೆದರು. ಹರ ಗೋಲು ನದಿ ದಾಟುವ ಉಪಕರಣ. ಹಾಗೆಯೇ ಕಣ್ಣು ಸಹಜ ಮತ್ತು ಅಸಹಜ ದೃಶ್ಯಗಳೆರಡೂ ಬಳಕೆಯಾಗುವ ಉಪಕರಣ.

ಕಣ್ಣಿನಲ್ಲಿ ಬುದ್ಧತ್ವ ಇದೆ. ಅದು ಸಹಜ ದೃಶ್ಯ . ಹಾಗೆಯೇ ಅರಿಷಡ್ವರ್ಗಗಳೆಂಬ ಬಹು ಜನರು ಕಣ್ಣನ್ನು ಆವರಿಸಿದ್ದಾರೆ. ಬುದ್ಧತ್ವ ಬಳಸಿಕೊಂಡು ನೋಡಿದರೆ ಆಸೆಯೆಂಬ ಹೊಳೆಯನ್ನು ಸಹಜವಾಗಿ ದಾಟಬಹುದು. ಇದು ಸರಳ ಕೆಲಸವೂ ಹೌದು ; ಅತ್ಯಂತ ಜಟಿಲ ಕೆಲಸವೂ ಹೌದು. ಸಿದ್ಧಾರ್ಥ ತನ್ನ ಕಣ್ಣು ಕಳೆದುಕೊಂಡು ಬುದ್ಧನ ಕಣ್ಣು ಪಡೆದುಕೊಳ್ಳಲು ಎಂಟು ವರ್ಷಗಳೇ ಬೇಕಾದವು. ಕಣ್ಣು ಒಂದೇ ; ದೃಶ್ಯ ಎರಡು. ಒಂದು ಬುದ್ಧನ ದೃಶ್ಯ ; ಮತ್ತೊಂದು ಸಿದ್ಧಾರ್ಥನ ದೃಶ್ಯ . ಸಿದ್ಧಾರ್ಥನ ದೃಶ್ಯವನ್ನು ಸಿದ್ಧಾರ್ಥನೇ ಕಳೆದುಕೊಂಡು ಬುದ್ಧನ ದೃಶ್ಯದತ್ತ ಪ್ರಯಾಣ ಮಾಡಬೇಕು. ಆಗ ಸಹಜ ದೃಶ್ಯ ಬಳಕೆಗೆ ಬರುತ್ತದೆ.

ಅಸಹಜ ದೃಶ್ಯ ಸಹಜ ದೃಶ್ಯದೆಡೆಗೆ ಪಯಣಿಸದಿದ್ದರೆ ಕಣ್ಣು ಕಾಣುತ್ತದೆ ; ಆದರೂ ಅದು ಕಾಣುವ ಕಣ್ಣಲ್ಲ ; ಕುರುಡು ಕಣ್ಣು.

ಕಣ್ಣು ಹೆಣ್ಣೂ ಅಲ್ಲ ಗಂಡೂ ಅಲ್ಲ. ಹೆಣ್ಣೆಂದು ಗಂಡೆಂದು ನೋಡುವ ಕಣ್ಣು ಸಿದ್ಧಾರ್ಥನ ಕಣ್ಣು ; ಅಸಹಜ ಕಣ್ಣು. ಕಣ್ಣು ಸಹಜ ಮತ್ತು ಅಸಹಜ ದೃಶ್ಯ ಬಳಕೆಯಾಗುವ ಒಂದು ಉಪಕರಣವೆಂದು ಕಣ್ಣಿಗೆ ಬುದ್ಧತ್ವ ಬಳಕೆಯಾಗುವ ಮನವರಿಕೆಯಾಗುತ್ತದೆ. ಆಗ ಸಿದ್ಧಾರ್ಥನ ಕಣ್ಣು ಇಲ್ಲವಾಗುತ್ತದೆ. ಅಂದರೆ ಬುದ್ಧನ ಸಹಜ ದೃಶ್ಯದಲ್ಲಿ ಅಸಹಜ ದೃಶ್ಯ ಲೀನವಾಗುತ್ತದೆ. ಆಗ ಹೆಣ್ಣು ಗಂಡು ಮಾಯವಾಗಿ ಅಂಗ ಲಿಂಗಾಂಗವಾಗುತ್ತದೆ.

ಕರೆನ್ಸಿಯ ಸತ್ಯ ಸಹಜ ದೃಶ್ಯಕ್ಕೆ ಕಾಗದದಂತೆ ಗೋಚರಿಸುತ್ತದೆ, ಚಿನ್ನದ ಸತ್ಯ ಹಳದಿ ಲೋಹವಾಗಿ ಗೋಚರಿಸುತ್ತದೆ. ಅಂಗ ಹೆಣ್ಣು ಗಂಡೆಂಬ ರೋಗವನ್ನು ಕಳೆದು ಲಿಂಗಾಂಗವಾಗಿ ಗೋಚರಿಸುತ್ತದೆ. ಅದು ಇರುವುದೇ ಹಾಗೆ ಆದರೆ ಕರಣೇಂದ್ರಿಯಗಳಲ್ಲಿ ಬಹುಜನರೆಂಬ ಅರಿಷಡ್ವರ್ಗಗಳು ಆವರಿಸಿರುವುದರಿಂದ ಸಹಜ ಸತ್ಯ ಕಣ್ಣಿನಲ್ಲಿಯೇ ಉಳಿದು ಅಸಹಜ ದೃಶ್ಯ ಮಾತ್ರ ಬಳಕೆಯಾಗುತ್ತದೆ. ಹೀಗಾಗಿ ಸಹಜ ದೃಶ್ಯ ಕಾಣುವುದೆಲ್ಲ ಅಸತ್ಯವೇ. ಸತ್ಯ ಕಣ್ಣಲ್ಲಿಯೇ ಉಳಿಯುತ್ತದೆ ಎಂದು ಶರಣರು ಈ ಸೂತ್ರದ ಮೂಲಕ ಸರ್ವ ಓದುಗರಿಗೂ ಎಡೆ ಮಾಡಿದ್ದಾರೆ.

**78**

**ಕಂಡು ಕೊಟ್ಟೆಹೆನೆಂಬುದು ಖಂಡಿತಂಗಲ್ಲದೆ ಪರಿಪೂರ್ಣಂಗುಂಟೆ ?**

**ಉಂಡು ತೇಗಿಹೆನೆಂಬುದು ನಿತ್ಯತೃಪ್ತಂಗುಂಟೆ ?**

**ಒಂದನರಿದು ಒಂದ ಮರೆದೆನೆಂದು ಸಂದೇಹಕ್ಕೊಳಗಾದವಂಗೆ**

**ಲಿಂಗವಿಲ್ಲ, ಎಂದನಂಬಿಗ ಚೌಡಯ್ಯ.**

ದೇಹದ ಸ್ವಭಾವ ದೇಹವನ್ನೇ ತಿಂದು ಹಾಕುತ್ತದೆ. ಸ್ವಭಾವ ನಿರ್ಭಾವವಾಗುವವರೆಗೂ ದೇಹಕ್ಕೆ ಉಪದ್ರವ ತಪ್ಪಿದ್ದಲ್ಲ. ದೇಹವನ್ನು ಭಾವ ಆವರಿಸಿರುವುದರಿಂದ ಅದು ಸ್ವಭಾವವಾಗಿ, ದುರ್ಭಾವವಾಗಿ ಮಾರ್ಪಡುತ್ತದೆ.

ಕಂಡುದು ಕಣ್ಣು ; ಬಾಯಿ ಕಂಡೆನೆಂದು ಹೇಳುತ್ತದೆ. ಕಂಡದ್ದನ್ನು ಕೊಟ್ಟೆನೆಂದು ಹೇಳುತ್ತದೆ. ಕಂಡದ್ದನ್ನು ಕಂಡಂತೆ ಕಣ್ಣಿಗೇ ಬಿಡುವ ಕಾಯಕದಲ್ಲಿ ತೊಡಗಿದಾತನೇ ಜ್ಞಾನಿ. ಆತನನ್ನು ಅಖಂಡ ಪರಿಪೂರ್ಣಾನಂದನೆಂದು ಕರೆಯುತ್ತಾರೆ. ಹಾಗೆ ಕರೆದರೂ ಆತ ಮೌನಿಯೇ. ಏಕೆಂದರೆ ಜ್ಞಾನಿಗೆ ಒಂದು ಸೂತ್ರ ಹೊಳೆದರೆ ಸಾಕು ಸಕಲ ಜ್ಞಾನೇಂದ್ರಿಯಗಳೂ ಜಾಗರ ವಾಗುತ್ತವೆ. ಅವುಗಳ ಸಹಜ ಪರಿಪೂರ್ಣ ಸುಖವನ್ನು ಆತ ಹೊಂದುತ್ತಾನೆ.

**ಒಂದನರಿದು ಒಂದ ಮರೆದೆನೆಂದು ಸಂದೇಹಕ್ಕೊಳಗಾದವಂಗೆ ಲಿಂಗವಿಲ್ಲನೆಂದ ಅಂಬಿಗ ಚೌಡಯ್ಯ :**

ಒಂದನರಿದ ಮೇಲೆ ಎಲ್ಲವನು ಅರಿಯುವುದಕ್ಕೆ ಅದೇನು ಸಂದೇಹ ? ಸಂದೇಹವೇ ಇರುವುದಿಲ್ಲ ; ಆದರೆ ಮರೆತು ಅನುಭವಿಸುವುದಕ್ಕೆ ಸುಖವೆನಿಸುತ್ತದೆ.

ಕೊಟ್ಟೆನೆನ್ನುತ್ತಾನೆ. ನಾನು ಕೊಟ್ಟೆನೆನ್ನುತ್ತಾನೆ. ಕೊಟ್ಟವನಾದ ತನ್ನನ್ನು ದಾನಿ ಎಂದು ಕರೆಯಿಸಿ ಕೊಳ್ಳುತ್ತಾನೆ. ಪಡೆದವನನ್ನು ಭಿಕ್ಷುಕ ಎಂದು ಮೂದಲಿಸಿ ನುಡಿಯುತ್ತಾನೆ. ತಾನೇನು ಕೊಟ್ಟ ? ಕೊಟ್ಟ ಆ ವಸ್ತು ತನ್ನದೆ ? ಅದು ತನ್ನ ಪ್ರೊಡಕ್ಟೆ ? ತಾನು ತನ್ನ ಶರೀರದ ಮೂಲಕ ಉತ್ಪನ್ನ ಮಾಡಿದನೆ ? ಹಸು ಹಾಲು ಕರೆಯಿತು. ಅದು ಕರುವಿಗಾಗಿ. ಅದನ್ನು ತಾನು ಪಡೆದು ಅದರ ತುಪ್ಪ ಬೆಣ್ಣೆ ಹಾಲು ಮೊಸರು ಮಜ್ಜಿಗೆ ತಾನು ಉಣ್ಣುವುದೇ ತಪ್ಪು. ಏಕೆಂದರೆ ಅದು ಕರುವಿಗಾಗಿ ಕೊಟ್ಟ ಸಂಪತ್ತು. ಹಸುವಿನ ಸಂಪತ್ತು. ಆ ಸಂಪತ್ತನ್ನು ತನ್ನದೆಂದು ಮತ್ತೊಬ್ಬನಿಗೆ ದಾನ ಮಾಡಲು ಬರುತ್ತದೆಯೆ? ಇದು ಖಂಡಿತ ಗುಣವಲ್ಲವೆ ? ಇದು ಖಂಡಿತನ ಸ್ವಭಾವ ವಲ್ಲವೆ ? ಅರಿತು ಅರಿವಿಗೆ ಶರಣು ಹೋಗಿ ಶರಣನಾದವನಿಗೆ ಇದು ತಿಳಿಯುತ್ತದೆ. ಆತ ಕರುವಿಗೆ ಅರ್ಪಣೆ ಮಾಡುತ್ತಾನೆ. ಈತನನ್ನು ಖಂಡಿತನೆಂದು ಕರೆಯುವಂತಿಲ್ಲ. ಅಖಂಡಿತ ನಾತ ಪರಿಪೂರ್ಣನಾತ.

ಕೊಟ್ಟೆನೆಂಬುದು ಒಂದು ಸೂತಕ. ಕಂಡೆನೆಂಬುದೂ ಒಂದು ಸೂತಕ. ಉಂಡು ತೇಗಿದೆನೆಂಬುದು ಒಂದು ಸೂತಕ. ದಾನ ಮಾಡಿದೆನೆಂಬುದನ್ನು ಅರಿಯುತ್ತಾನೆ. ದಾನ ಮಾಡಲು ಅದು ತನ್ನ ಸೊತ್ತೆ ? ಆ ವಸ್ತು ತನ್ನ ದೇಹದಿಂದ ಉತ್ಪನ್ನ ಮಾಡಿದನೆ ಎಂಬ ಸತ್ಯವನ್ನು ಮರೆಯುತ್ತಾನೆ. ಅದು ಸೂತಕವಾಗಿ ತನ್ನ ದೇಹದಲ್ಲಿಯೇ ಉಳಿಯುತ್ತದೆ.

''ಕೊಟ್ಟುದೊಂದು ಸೂತಕ , ಮುಟ್ಟಿದುದೊಂದು ಸೂತಕ, ಕೊಟ್ಟುಕೊಂಬುದೊಂದು ಸೂತಕ.ಲಿಂಗ ನಿಜಾಯಿತಂಗೆ ಇವೆಲ್ಲಿಯವು? ಕೂಡಲ ಚೆನ್ನ ಸಂಗಾ ಲಿಂಗ ನಾನೆಂಬ ಸೂತಕವಿಲ್ಲವಾಗಿ '' ಎಂದು ಚೆನ್ನಬಸವಣ್ಣನವರು ಸೂತಕದ ಗುಟ್ಟು ರಟ್ಟು ಮಾಡಿದ್ದಾರೆ.

ಲಿಂಗ (ಅರಿವು)ಅಂಗದಲ್ಲಿ ಸಂಗಮವಾಗಿದೆ. ಹೀಗಾಗಿ ಅಂಗ ಲಿಂಗವನ್ನು ಕಟ್ಟಿಕೊಳ್ಳ ಬೇಕಾಗಿಲ್ಲ. ಕಟ್ಟಿಕೊಂಡ ಲಿಂಗ ಅಂಗಕ್ಕೆ ಉಪದೇಶ ಮಾಡುವುದಿಲ್ಲ. ಅಂಗದಲ್ಲಿ ಸಂಗಮವಾದ

ಲಿಂಗ(ಅರಿವು) ಅಂಗಕ್ಕೆ ಉಪದೇಶ ಮಾಡದೆ ಬಿಡುವುದಿಲ್ಲ. ಹೀಗಾಗಿ ಲಿಂಗ ಕಟ್ಟಿಕೊಂಡ ಅಂಗಕ್ಕೆ ಲಿಂಗವಿಲ್ಲ. ಏಕೆಂದರೆ ಅಂಗ ಕಟ್ಟಿಕೊಂಡ ಲಿಂಗವನ್ನು ನೆನೆಯುತ್ತದೆಯೇ ಹೊರತು ಅಂಗದಲ್ಲಿ ಸಂಗಮವಾದ ಲಿಂಗವನ್ನು ಅರಿಯುವುದಿಲ್ಲ. ಆ ಲಿಂಗಕ್ಕೆ ಶರಣು ಹೋಗುವುದಿಲ್ಲ. ಅಂಗದಲ್ಲಿ ಲಿಂಗ ಸಂಗಮವಾಗಿದೆ ಎಂದು ಅಂಗಕ್ಕೆ ಗೊತ್ತಿರುವುದಿಲ್ಲ. ಹೀಗಾಗಿ ಸಂದೇಹಕ್ಕೆ ಒಳಗಾದ ಅಂಗಕ್ಕೆ ಲಿಂಗವಿಲ್ಲ ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

79

**ಕಂಥೆ ತೊಟ್ಟವ ಗುರುವಲ್ಲ, ಕಾವಿ ಹೊತ್ತವ ಜಂಗಮನಲ್ಲ,**
**ಶೀಲ ಕಟ್ಟಿದವ ಶಿವಭಕ್ತನಲ್ಲ, ನೀರು ತೀರ್ಥವಲ್ಲ,**
**ಕೂಳು ಪ್ರಸಾದವಲ್ಲ.**
**ಹೌದೆಂಬವನ ಬಾಯ ಮೇಲೆ**
**ಅರ್ಧಮಣದ ಪಾದರಕ್ಷೆಯ ತೆಗೆದುಕೊಂಡು**
**ಮಾಸಿ ಕಡಿಮೆಯಿಲ್ಲದೆ ತೂಗಿ ತೂಗಿ ಟೊಕಟೊಕನೆ**
**ಹೊಡೆ ಎಂದಾತ ನಮ್ಮ ಅಂಬಿಗ ಚೌಡಯ್ಯ.**

ಗುರು, ಜಂಗಮ, ಶಿವಭಕ್ತ, ತೀರ್ಥ, ಪ್ರಸಾದಗಳಿಗೆ ವಿಶೇಷ ಅರ್ಥವಿದೆ. ಅದನ್ನು ಅರ್ಥೈಸಿದರೆ ಮಾತ್ರ ಸಾಲದು ; ಆಚರಣೆಗೆ ತಂದುಕೊಂಡ ತನು ಮಾತ್ರ ಆಯಾ ಶಬ್ದದಿಂದ ಅಗೋಚರವಾಗಿ ತನ್ನನ್ನು ತಾನೇ ಪುರಸ್ಕರಿಸಿಕೊಳ್ಳುತ್ತದೆ. ವೇಷದಿಂದ ಗುರು ಎಂದು ಕರೆಯಿಸಿಕೊಂಡವನು ಗುರುವಲ್ಲ. ಜಂಗಮನಲ್ಲ. ಶಿವ ಭಕ್ತನಲ್ಲ. ತೀರ್ಥ ಪ್ರಸಾದ ಅವನಿಗೆ ಇಲ್ಲವೇ ಇಲ್ಲ.

**ಗುರು :** ಅಂಗದಲ್ಲಿ ಅರಿವು ಸಂಗಮವಾಗಿದೆ. ಅಂಗವನ್ನು ಮನ ಆವರಿಸಿದೆ. ಆವರಿಸಿದ ಮನದಿಂದ ಅಂಗದಲ್ಲಿ ಸಂಗಮವಾದ ಅರಿವು ಕಂಡುಕೊಂಡು ಆ ಅರಿವನ್ನು ಆಚರಿಸುತ್ತಾ ಅರಿವಿನಿಂದ ಬದುಕುತ್ತಾ ಸದಾ ಆನಂದದಿಂದ ಇರುವವನೇ ಗುರು. ಅರಿವು ಸಕಲ ಅಂಗಗಳಲ್ಲಿಯೂ ಸಂಗಮವಾಗಿದೆ. ಅಂದರೆ ಸಕಲ ಅಂಗಗಳಲ್ಲಿಯೂ ಗುರುವಿದ್ದಾನೆ. ಅಂತಹ ಗುರುವಿಗೆ ಗುರು ದೀಕ್ಷೆ ಕೊಡಲು ಬರುತ್ತದೆಯೇ ? ಬರುವುದಿಲ್ಲ. ವೇಷದ ಗುರು ದೀಕ್ಷೆ ಕೊಡುತ್ತಾನೆ. ಏಕೆಂದರೆ ವೇಷದ ಗುರು ಗುರುವನ್ನು ಕಂಡು ಕೊಂಡಿಲ್ಲ. ಗುರುವೆಂದರೆ ಯಾರೆಂದು ಗುರುವಿಗೆ ತಿಳಿದಿಲ್ಲ. ವೇಷ ಧರಿಸಿದ ಗುರು ತಂತ್ರ ಜ್ಞಾನಿಯಲ್ಲ.

ಸಕಲ ಅಂಗಗಳೂ ಅರಿವೆಂಬ ಗುರುದೇವನೇ ತಾನಾಗಲು ಬಂದಿವೆ. ಅದನ್ನು ಮನವೆಂಬ ಶಿಷ್ಯ ನಿರ್ಧರಿಸಬೇಕು. ಮನದಲ್ಲಿ ಗುರುವಾಗಬೇಕೆಂಬ ಬಯಕೆ ಹುಟ್ಟಬೇಕು, ಆಗ ಮನ ಅಂಗಕ್ಕೆ ಧರಿಸಿದ ಸಕಲ ಸುಳ್ಳು ವೇಷಗಳನ್ನು ಕಳಚುತ್ತದೆ. ತನಗೆ ತಾನೇ ಅರಿವಿನತ್ತ ಪಯಣಿಸಿ ಗುರುವಾಗುತ್ತದೆ. ಆಗ ಆ ಅಂಗಕ್ಕೆ ಸಕಲ ಅಂಗಗಳೂ ಗುರುದೇವನಿದ್ದ ಅಂಗಗಳಾಗಿ ಕಾಣುತ್ತವೆ. ಹೀಗಾಗಿ ತನಗೇ ತಾನೇ ಗುರುವಾದವನು ಯಾರಿಗೂ ಗುರುವಾಗುವುದಿಲ್ಲ.

**ಜಂಗಮ :** ಕಾವಿ ತೊಟ್ಟವ ಜಂಗಮನಲ್ಲ ; ಜಾತಿ ಜಂಗಮನೂ ಜಂಗಮನಲ್ಲ. ಮನದಿಂದಾಗಿ ಅಂಗಕ್ಕೆ ಆಪತ್ಕಾಲಗಳು ಬರುವುದು ಸಹಜ. ಗಂಡು ಹೆಣ್ಣನ್ನು ನೋಡಿ ಹೆಣ್ಣು

ಗಂಡನ್ನು ನೋಡಿ ಭೋಗದ ಆಸಕ್ತಿ ಹುಟ್ಟುತ್ತದೆ. ಮನದಲ್ಲಿ ಹಾದರ ಶುರುವಾಗುತ್ತದೆ. ಧರಿಸಿದ ಜಂಗಮನ ವೇಷಕ್ಕೆ ಭೋಗದ ಹಾದರವನ್ನು ತಡೆಯಲು ಸಾಧ್ಯವಾಗುವುದಿಲ್ಲ. ಜಂಗಮನ ವೇಷದೊಂದಿಗೆ ಅಂಗ ಮನದ ಮೂಲಕ ಭೋಗದ ಹಾದರಕ್ಕೆ ಒಳಗಾಗುತ್ತದೆ. ಅದು ಸುಖವೆನಿಸುವುದಿಲ್ಲ. ಗುಪ್ತವಾಗಿ ಯಾರಿಗೂ ಕಾಣದಂತೆ ಭೋಗದ ಸುಖ ಅನುಭವಿಸುತ್ತದೆ. ಯಾರೂ ನೋಡದಿದ್ದರೇನಾಯಿತು ಅನುಭವಕ್ಕೆ ಒಳಗಾದ ಅಂಗ ಸಾಕ್ಷಿಯಾಗುತ್ತದೆ. ವೇಷದ ಜಂಗಮನ ಅಂಗವನ್ನು ಯಾರೂ ನಿಂದಿಸಬೇಕಿಲ್ಲ. ಅಂಗದಲ್ಲಿಯೇ ಸಂಗಮವಾದ ಜಂಗಮ ನಿಂದಿಸದೇ ಇರುವುದಿಲ್ಲ.

ಜಂಗಮನಿಗೆ ವೇಷವೆಂದರೆ ಆಗುವುದಿಲ್ಲ. ವೇಷ ತೊಟ್ಟವನನ್ನು ಬೇತಾಳನಂತೆ ಬೆನ್ನು ಬಿದ್ದು ಚುಚ್ಚಿ ಚುಚ್ಚಿ ತಿವಿಯುತ್ತಾನೆ. ಈ ನರಕ ಯಾತನೆ ಯಾಕೆ ನನಗಾಗುತ್ತದೆ ಎಂದು ವೇಷ ಧರಿಸಿದ ಜಂಗಮನಿಗೆ ತಿಳಿಯುವುದಿಲ್ಲ. ತಿಳಿದರೆ ಸಾಕು ವೇಷ ಕಳಚುತ್ತಾನೆ; ನಿಜ ಜಂಗಮನಾಗಲು ಪ್ರಯತ್ನಿಸುತ್ತಾನೆ. ಕಣ್ಣು ಕಿವಿ ಮೂಗು ಚರ್ಮ ನಾಲಗೆಗೆ ಬಂದ ಆಪತ್ಕಾಲಗಳನ್ನು ಅಂಗದಲ್ಲಿಯೇ ಸಂಗಮವಾದ ಜಂಗಮ ಭೇದ ಮಾಡುತ್ತಾನೆ. ಅಂಗವನ್ನು ಅಂಗದಂತೆ ಲಿಂಗಾಂಗದಂತೆ ನೋಡುತ್ತಾನೆ. ಕಣ್ಣಿಗೆ ಬಂದ ಆಪತ್ಕಾಲವನ್ನು ಕಣ್ಣಿನ ಮೂಲಕವೇ ಕತ್ತರಿಸುತ್ತಾನೆ. ಜಂಗಮನೆಂದರೆ ತನಗೆ ತಾನೇ ಆಗಬೇಕು. ವೇಷ ನಿಷೇಧ.

**ಶಿವಭಕ್ತ :** ಶಿವಾಲಯ ಕಟ್ಟಿದವನು, ಆ ಆಲಯವನ್ನು ಸುತ್ತುವವನು, ಶಿವಲಿಂಗವನ್ನು ಕೊರಳಲ್ಲಿ ಕಟ್ಟಿದವನು, ಸದಾ ಶಿವನನ್ನು ಸ್ಮರಿಸುತ್ತಾ ಜಪತಪಗಳನ್ನು ಆಚರಿಸುವವನು , ಗುರು ಲಿಂಗ ಜಂಗಮನನ್ನು ಪೂಜಿಸಿ ತೀರ್ಥ ಪ್ರಸಾದ ಸ್ವೀಕರಿಸುವವನು ಶಿವಭಕ್ತನಲ್ಲ. ಇವನು ಆಚಾರದ ಮೂಲಕ ಸಕಲರಿಗೂ ಗೋಚರಿಸುವ ತೋರಿಕೆಯ ಶಿವಭಕ್ತ . ಶಿವಭಕ್ತನೆಂದರೆ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡಿದವನು. ಆ ಗುರುದೇವನೇ ಬ್ರಹ್ಮನೆಂದು ಭಕ್ತಿ ಮಾಡಿದವನು. ಆ ಅರಿವೆಂಬ ಗುರುದೇವನೇ ಸಾಕ್ಷಾತ್ ಪರಬ್ರಹ್ಮನೆಂದು ಭಕ್ತಿ ಮಾಡಿದವನು ಶಿವ ಭಕ್ತನು.

ಶಿವಭಕ್ತನಿಗೆ ಶಿವಾಲಯವೂ ಒಂದೇ ; ಆಲಯದೊಳಗಿದ್ದ ಶಿವನೂ ಒಂದೇ ; ಶಿವಾಲಯದ ಪೌಳಿಯೂ ಒಂದೇ ; ಶಿವಾಲಯದ ಶಿಖರವೂ ಒಂದೇ. ಸಕಲವೂ ಕಲ್ಲಾಗಿ ಕಾಣುತ್ತದೆ. ಅದು ನಿಜವೂ ಕೂಡಾ. ಕಲ್ಲು ಕೆತ್ತಿದರೆ ಅದು ಆಲಯ ಶಿಖರ ಪೌಳಿ ಶಿವನೆಂದು ಮಾರ್ಪಾಡಾಗುವುದು ಕಣ್ಣಿನ ಭ್ರಮೆಯಲ್ಲವೆ ? ಕಲ್ಲು ಕೆತ್ತಿದರೇನು ? ಕೆತ್ತದಿದ್ದರೇನು ಅದು ಕಲ್ಲು ಎಂದು ನಿರ್ಧರಿಸುವ ಕಣ್ಣು ನಿಜಕಣ್ಣು. ಅದು ಶಿವಭಕ್ತನಿಗೆ ಮಾತ್ರ ಸಾಧ್ಯ . ಚರ್ಮ ನೋಡಿ ಅದು ಹೆಣ್ಣು ಗಂಡು ಎಂದು ನಿರ್ಧರಿಸಿ ಭೋಗದ ಆಸಕ್ತಿಯ ಸಂದೇಶವನ್ನು ದೇಹಕ್ಕೆ ರವಾನಿಸುವ ಕಣ್ಣು ಕಣ್ಣಲ್ಲ; ಅದು ಭ್ರಮೆಯ ಕಣ್ಣು . ವೇಷದ ಶಿವ ಭಕ್ತನ ಕಣ್ಣು.

ಅರಿವೇ ಗುರು, ಆ ಗುರುದೇವನೇ ಬ್ರಹ್ಮ ವಿಷ್ಣು ಮಹೇಶ್ವರ ಸದಾಶಿವನೆಂದು ತನ್ನನ್ನು ತಾನೇ ಆರಾಧಿಸಿ ಪೂಜಿಸಿಕೊಳ್ಳುವವನೇ ಶಿವಭಕ್ತ . ಇವನಿಗೆ ಅಂಗವೆಂಬುದೇ ಲಿಂಗಾಂಗ. ಸಕಲ ಅಂಗಗಳೂ ಲಿಂಗಾಂಗಗಳೇ ಎಂದು ಶಿವಭಕ್ತನಿಗೆ ಗೊತ್ತಿರುತ್ತದೆ. ಇತರರಿಗೆ ಗೊತ್ತಿರುವುದಿಲ್ಲ ಅಷ್ಟೆ ಎಂದು ಆತ ತಿಳಿದಿರುತ್ತಾನೆ. ಶಿವಭಕ್ತನಾಗಬೇಕೆಂಬ ಬಯಕೆ ಆದ ಅಂಗಗಳಿಗೆ ನೀನು ಹೀಗೆ ಗುರು ಲಿಂಗ ಜಂಗಮ ಶಿವಭಕ್ತನು ಎಂಬ ಮಾಹಿತಿಯನ್ನು ಕೊಡುತ್ತಾನೆ.

**ನೀರು ತೀರ್ಥವಲ್ಲ ; ಕೂಳು ಪ್ರಸಾದವಲ್ಲ :**

ನೀರು ಉದಕ ಜಲ ಗಂಗೆ ಎಂದು ಅನೇಕ ಹೆಸರಿನಿಂದ ಕರೆಯಿಸಿಕೊಳ್ಳುತ್ತದೆ. ನೀರು

ನೀರೇ ಅಲ್ಲ. ಎರಡು ಪ್ರಮಾಣದ ಜಲಜನಕ ಒಂದು ಪ್ರಮಾಣದ ಆಮ್ಲಜನಕ ಕೂಡಿ ಜಲವಾಗಿದೆ. ಆಗ ಅದು ನೀರು ಎಂದು ಕರೆಯಿಸಿಕೊಂಡಿದೆ. ಈ ಕೂಡುವಿಕೆಗೆ ಬಯಲು ಸಾಕ್ಷಿಯಾಗಿದೆ. ಬಯಲಲ್ಲೇ ಇವೆರಡರ ಕೂಟ ಏರ್ಪಟ್ಟು ಬಯಲೇ ಇವೆರಡನ್ನೂ ಕೂಡಿಸಿ ಜಲವನ್ನಾಗಿ ಜೀವ ಜಲವನ್ನಾಗಿ ಮಾಡಿದೆ. ಈ ಜೀವಜಲ ಗಂಗೆ ಗರ್ಭದೊಳಗೆ ಪ್ರವೇಶ ಪಡೆದು ಆ ಗಂಗೆಯನ್ನೇ ಧರಿಸಿಕೊಂಡು ರಕ್ತವಾಗಿ ಮಾಂಸವಾಗಿ ಮೂಳೆಯಾಗಿ ಮಜ್ಜಾ ಮೇದಸ್ಸು ಆಗಿ ರೋಮ ನಖವಾಗಿ ಇವು ಯಾವೂ ಕೆಳಗೆ ಸೋರದಂತೆ ಚರ್ಮದ ಕವಚವಾಗಿ ಗಂಗೆಯನ್ನೇ ಧರಿಸಿಕೊಂಡು ಹೊರ ಬಂದಿದೆ. ಗರ್ಭದಿಂದ ಹೊರಬಂದ ಈ ಗಂಗೆ ಗಂಗಾಧರನಲ್ಲವೆ ?

ಸ್ವತಃ ತಾನೇ ಗಂಗಾಜಲವಾಗಿದ್ದು ಅದನ್ನು ಧರಿಸಿದ ತಾನು ಸ್ವತಃ ಗಂಗಾಧರನೇ ಆಗಿದ್ದು, ಅರಿಯದೇ ಗಂಗೆಯನ್ನೇ ತೀರ್ಥವೆಂದು ಕೊಡುತ್ತಾನೆ. ನೀರನ್ನು ತೀರ್ಥವೆಂದು ಕೊಡುವವನೂ ಅಜ್ಞಾನಿ, ತೆಗೆದುಕೊಳ್ಳುವವನೂ ಅಜ್ಞಾನಿ. ಇವರಿಬ್ಬರೂ ಗಂಗಾಧರರೇ ತಾವಾಗಿದ್ದುದನ್ನು ಮರೆತಿದ್ದಾರೆ. ಹೀಗಾಗಿ ತೀರ್ಥವನ್ನು ಕೊಡುವವನು ಗುರು ವೇಷ ಧರಿಸಿದ್ದಾನೆ. ತೆಗೆದುಕೊಳ್ಳುವವನು ಶಿವಭಕ್ತನ ವೇಷ ಧರಿಸಿದ್ದಾನೆ. ವೇಷ ಕಳಚಿಕೊಳ್ಳುವ ಬಯಕೆ ಇಬ್ಬರಿಗೂ ಇಲ್ಲ. ವ್ಯವಹಾರ ನಡೆದಿದೆ. ಇಬ್ಬರೂ ಅಂದರೆ ಗುರು ಶಿಷ್ಯರು ಮೋಸಕ್ಕೆ ಒಳಗಾಗಿದ್ದಾರೆ. ತಿಳಿಯದೆ ತಮ್ಮನ್ನು ತಾವೇ ಮೋಸ ಮಾಡಿಕೊಳ್ಳುತ್ತಿದ್ದಾರೆ. ಗಂಗಾಧರ ಕಣ್ಣು ತೆರೆಯಬೇಕು ಅಷ್ಟೆ. ಗಂಗಾಜಲವನ್ನು ವಿತರಿಸುವ ವ್ಯವಹಾರ ದಲ್ಲಿ ಸರಕಾರವೂ ಪಾಲ್ಗೊಂಡಿದೆ. ಕಣ್ಣಿದ್ದರೂ ಕುರುಡು ಕಣ್ಣಗಳಿವು. ಕಣ್ಣಿಗೆ ಕಣ್ಣೇ ಒಲಿಯಬೇಕು. ಬೇಡದ ಅಜ್ಞಾನದ ಕಣ್ಣನ್ನು ಬೇಡರ ಕಣ್ಣಪ್ಪ ಕಿತ್ತಿಕೊಂಡು ಗಂಗಾಧರನ ಜ್ಞಾನದ ಕಣ್ಣು ಪಡೆದಂತೆ ತನ್ನ ಜ್ಞಾನದ ಕಣ್ಣನ್ನು ತಾನೇ ಪಡೆಯಬೇಕು. ವೈಚಾರಿಕತೆಯನ್ನು ಮೆರೆಯಬೇಕು.

ಅಜ್ಞಾನದ ಕಣ್ಣಿಗೆ ಜ್ಞಾನದ ಕಣ್ಣು ಗೋಚರಿಸಿದರೆ ನೋಡಿದ ನೋಟವೆಲ್ಲ ಪ್ರಸಾದವಾಗುತ್ತದೆ. ಮುಟ್ಟಿದ ಸ್ಪರ್ಶವೆಲ್ಲ ಚರ್ಮಕ್ಕೆ ಪ್ರಸಾದವಾಗುತ್ತದೆ. ಮೂಸಿಸಿದ ವಾಸನೆಯೆಲ್ಲ ಮೂಗಿಗೆ ಪರಿಮಳವಾಗುತ್ತದೆ. ರುಚಿಸಿದ ಅನ್ನವೆಲ್ಲ ನಾಲಿಗೆಗೆ ಪ್ರಸಾದವಾಗುತ್ತದೆ. ಕೇಳಿದ ಶಬ್ದವೆಲ್ಲ ಕಿವಿಗೆ ಪ್ರಸಾದವಾಗುತ್ತದೆ. ಹಾಗೆ ಆಗಬೇಕು ಅಂಥವನನ್ನು ಪ್ರಸಾದಿ ಎಂದು ಕರೆದಿದ್ದಾರೆ ಶರಣರು. ಕೂಳು ಪ್ರಸಾದವಲ್ಲ.

ಹೀಗನ್ನದೆ ತೋರಿಕೆಯ ಆಚಾರವೇ ಸತ್ಯ ಎನ್ನುವವನ ಬಾಯ ಮೇಲೆ ಅರ್ಧ ಮಣದ ಪಾದರಕ್ಷೆಯ ತೆಗೆದುಕೊಂಡು ಮಾಸಿ ಕಡಮೆಯಿಲ್ಲದೆ ತೂಗಿ ತೂಗಿ ಟೊಕ ಟೊಕನೆ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ ಎಂದಿದ್ದಾರೆ ನಿಜ ಶರಣ ಅಂಬಿಗರ ಚೌಡಯ್ಯ .

**80**

**ಕಟ್ಟಿ ಕಳೆ ಪಾಪವ, ಬಿಟ್ಟು ಕಳೆ ಪುಣ್ಯವ.**
**ಒತ್ತು ರೋಷವ, ಸಮತೆಯ ಪಸರಿಸಾ.**
**ಎತ್ತಿದರ್ಥವನು ಬೈಚಿಟ್ಟು,**
**ಮನದಲ್ಲಿ ಚಕ್ಕನೆ ತೀವ್ರ ಪರಿಣಾಮವನು, ಇದು ಬಟ್ಟೆ,**
**ದೇವತತ್ವವ ಮುಟ್ಟಲುಪದೇಶವ ಕೊಟ್ಟನಂಬಿಗ ಚೌಡ ತನ್ನ ನೊಲಿವರಿಗೆ.**

ದೇಹವೆಂಬುದೇ ದೇವಾಲಯ. ಅಲ್ಲಿ ಅರಿವಿನ ದೇವರಿದ್ದಾನೆ. ದೇಹವನ್ನು ಆವರಿಸಿದ ಮನ ಅರಿವಿನ ದೇವರನ್ನು ಮರೆತದ್ದಕ್ಕಾಗಿ ಪಾಪ ಪುಣ್ಯವೆಂಬ ರೋಗ ಅಂಟಿಕೊಂಡಿದೆ. ದೇಹ ಮತ್ತೊಂದು ದೇಹಕ್ಕೆ ಕರುಣೆ ತೋರಿ ದಾನ ಮಾಡುವುದೇ ಪುಣ್ಯ . ಅರಿವಿನ ದೃಷ್ಟಿಯಿಂದ ನೋಡಿದರೆ ಇವೆರಡೂ ವರ್ಜ್ಯ. ದೇಹ ಮತ್ತೊಂದು ದೇಹಕ್ಕೆ ಕೇಡು ಬಗೆಯುವುದು ಪಾಪ. ಮನ ತನ್ನ ಸುಖಕ್ಕಾಗಿ ತಿಳಿಯದೆ ಕೇಡು ಬಗೆಯುತ್ತದೆ. ದೇಹ ಮತ್ತೊಂದು ದೇಹಕ್ಕೆ ದಾನ ಮಾಡಿ ತಾನು ದಾನಿ ಎಂದು ಬೀಗುವುದು,ಮತ್ತೊಂದನ್ನು ಭಿಕ್ಷುಕ ಎಂದು ಹೀಯಾಳಿಸುವುದು ಪಾಪವೇ ಆಗಿದೆ. ಇವೆರಡೂ ಅಂದರೆ ಪಾಪ-ಪುಣ್ಯವೆಂಬುದು ಕೂಡಾ ಅಜ್ಞಾ ನವೇ. ಇವೆರಡನ್ನು ದೇಹ ಕಳೆದುಕೊಳ್ಳಬೇಕಾಗಿದೆ. ಒಂದನ್ನು ಕಟ್ಟಿ ಕಳೆದುಕೊಳ್ಳಬೇಕು ಮತ್ತೊಂದನ್ನು ಮಾಡಿದೆನೆಂಬುದನ್ನು ಕೂಡಾ ಬಿಟ್ಟು ಕಳೆದು ಕೊಳ್ಳಬೇಕು.

'' ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ '' ಶಿವನ ಡಂಗುರವೆಂದರೆ ಅರಿವಿನ ಡಂಗುರ. ದೇಹವೆಂಬ ದೇವಾಲಯದಲ್ಲಿಯೇ ಅರಿವೆಂಬ ಶಿವನಿ ದ್ದಾನೆ. ಅವನು ಮನ ಮಾಡುವ ಪಾಪ-ಪುಣ್ಯಗಳೆರಡನ್ನು ಖಂಡಿಸುತ್ತಾನೆ.

ಮನ ತನ್ನ ಸುಖಕ್ಕಾಗಿ ದೇಹವನ್ನು ಬಳಸಿಕೊಂಡು ಮತ್ತೊಂದು ದೇಹಕ್ಕೆ ಕೇಡು ಬಗೆ ಯುತ್ತದೆ. ಹಾಗೆಯೇ ದೇಹವನ್ನು ಬಳಸಿಕೊಂಡು ಮತ್ತೊಂದು ದೇಹಕ್ಕೆ ದಾನ ಮಾಡುತ್ತದೆ. ದೇಹ ಅರಿವಿನ ದೇವರಿದ್ದ ದೇವಾಲಯ ಅಂದ ಮೇಲೆ ದೇಹ ಮತ್ತೊಂದು ದೇಹಕ್ಕೆ ಪಾಪ-ಪುಣ್ಯ ಮಾಡಲು ಬರುತ್ತದೆಯೆ ? ಬರುವುದಿಲ್ಲ.

**ಸಮತೆಯನು ಪಸರಿಸಾ. ಎತ್ತಿದರ್ಥವನು ಬೈಚಿಟ್ಟು ಒತ್ತು ರೋಷವ :**

ದೇಹವೆಲ್ಲ ಅರಿವಿನ ದೇವಾಲಯಗಳೇ ಆಗಿವೆ. ದೇಹವನ್ನು ಆವರಿಸಿದ ಮನ ಅರಿವಿನಿಂದ ಸಮತೆಯನ್ನು ಮೆರೆಯಬೇಕು. ಪಾಪ ಪುಣ್ಯವೆಂಬುದನು ಬೈಚಿಟ್ಟು ದೇಹ ಅರಿವಿನ ದೇವರಿದ್ದ ದೇವಾಲಯವೆಂಬ ಸಮತೆಯನ್ನು ಪಸರಿಸಬೇಕು. ಇದು ಸಹಜ ಅರಿವಿನ ಧರ್ಮ.

**ಮನದಲ್ಲಿ ಚಕ್ಕನೆ ತೀವ್ರ ಪರಿಣಾಮವನು, ಇದು ಬಟ್ಟೆ, ದೇವತತ್ತ್ವವ ಮುಟ್ಟಲುಪ ದೇಶವ ಕೊಟ್ಟನಂಬಿಗ ಚೌಡ ತನ್ನ ನೊಲಿದವರಿಗೆ :**

ದೇಹ ಮತ್ತೊಂದು ದೇಹಕ್ಕೆ ದುಃಖ ಕೊಟ್ಟು ಸುಖಿಸುತ್ತದೆ. ದೇಹ ಮತ್ತೊಂದು ದೇಹಕ್ಕೆ ದಾನ ಮಾಡಿ ಸುಖಿಸುತ್ತದೆ. ಇವೆರಡೂ ಕೆಲಸಗಳು ದೇಹವನ್ನು ಆವರಿಸಿದ ಮನದಿಂದಲೇ ತಕ್ಷಣ ಜರುಗುತ್ತವೆ. ಘಟನೆ ನಡೆದ ನಂತರ ಇದು ತಪ್ಪೆಂದು ಅರಿವಿಗೆ ಹೊಳೆಯುತ್ತದೆ. ಹೀಗೆ ಅರಿವಿಗೆ ಹೊಳೆದದ್ದೇ ಅಸಮತೆ, ಅಸಹಜತೆ.

'' ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಾ'' ದೇಹದ ಸಂಪತ್ತು ಅಂದರೆ ಜ್ಞಾನ. ಅದನ್ನು ಮರೆತದ್ದಕ್ಕಾಗಿ ದೇಹ ಸುಖಿಸುತ್ತದೆ ಇಲ್ಲ ದುಃಖಿಸುತ್ತದೆ. ಇವೆರಡೂ ದುಃಖಗಳೇ ಆಗಿವೆ. ದೇಹದ ನಿಜ ಸುಖವೆಂದರೆ ಸಹಜತೆ. ಇದನ್ನು ಮರೆತದ್ದಕ್ಕಾಗಿ ದೇಹ ಮತ್ತೊಂದು ದೇಹದಿಂದ ಸುಖ ದುಃಖಗಳಿಗೆ ಒಳಗಾಗಿದೆ. ಭಿಕ್ಷುಕನೆಂದು ದಾನಿಯೆಂದು ಆರೋಪಿಸಿಕೊಂಡಿದೆ. ಸಹಜವೆಂಬ ಸಹಜತೆಯನ್ನು ದೇಹ, ದೇಹದ ಗರ್ಭದಲ್ಲಿಯೇ ಉಳಿಸಿಕೊಂಡಿದೆ. ಅದನ್ನು ದೇಹವೇ ಅರಿವಿನಿಂದ ಬಳಸಿಕೊಳ್ಳಬೇಕಾಗಿದೆ.

ಇದು ಬಟ್ಟೆ, ಇದು ದೇವತತ್ವ, ಅದರತ್ತ ಪಯಣಿಸುವ ಹಾದಿಯ ಸೂತ್ರವೂ ಅಲ್ಲಿಯೇ ಇದೆ. ಅದನ್ನು ಯಾರಾದರೂ ಸೂಚಿಸಬಹುದು ಅಥವಾ ತನಗೇ ಹೊಳೆಯಬಹುದು. ಇದು

ಉಪದೇಶ. ಅಂದರೆ ಸಹಜತೆಯೊಂದಿಗೆ ವಾಸಿಸುವುದು. ಉಪ ಅಂದರೆ ಇರುವುದು. ದೇಶ ಅಂದರೆ ಬಯಲು. ಸಹಜತೆ ಎಂಬುದು ಬಯಲು ಮಾತ್ರ .ಬಯಲು ದೇಹವೆಂಬ ದೇಶದಲ್ಲಿ ಚುಳುಕಾಗಿದೆ. ಅದು ಕಾಣುವುದಿಲ್ಲ. ಸಹಜ ಕಣ್ಣಿಗೆ ಕಾಣದೇ ಇರುವುದಿಲ್ಲ.

ಬೇಡಿ ದುಃಖಕ್ಕೆ ಒಳಗಾದ ದೇಹ, ನೀಡಿ ದುಃಖಕ್ಕೆ ಒಳಗಾದ ದೇಹಗಳೆರಡೂ ಸಹಜತೆಯನ್ನು ಮರೆತಿವೆ. ಅಂಬಿಗನತ್ತ ಇವೆರಡೂ ದೇಹಗಳು ಪಯಣಿಸಿದರೆ ಹುಟ್ಟು ಹಾಕಿ ಮತ್ತೆ ಹುಟ್ಟಿಲ್ಲದಂತೆ ದಡ ತಲುಪಿಸುತ್ತಾನೆ.

**81**

**ಕಟ್ಟಿಗೆಯ ಹೊರೆಯ ಹೊತ್ತು**
**ಬಟ್ಟೆಯಲ್ಲಿ ಬಳಲಿ ಬರುವ ಮನುಜನಂ ಕಟ್ಟದಿರಿನಲ್ಲಿ ಕಂಡು,**
**ಆ ಹೊರೆಗೆತಲೆ ಗೊಟ್ಟವರಿಗೆ ಪುಣ್ಯವುಂಟು.**
**ಇದ್ದ.. ಭಕ್ತ ವಿರಕ್ತರಿಗೆ ಮುಟ್ಟಾಳಾಗಿ,**
**ಅವರ ಅನುವರಿತು ತಾ ನಡೆಯಬೇಕು**
**ನಡೆಯದಿರ್ದಡೆ ಹೋಗಲಿ ಅರ....ಯಿಷ್ಟ ಇಲ್ಲದೆ,**
**ಇದ ತನ್ನ ಕಟ್ಟು ಮಾಡಿಕೊಳ್ಳ ಹೇಳಿದವರಾರೋ ಎಂದು,**
**ತನ್ನ ನಷ್ಟಕ್ಕೆ ತಾನೇ ಎಯ್ದಿದ್ದಾನೆಂಬ ವಿಶ್ವಾಸಹೀನನ ಕೊರಳಲ್ಲಿ**
**ಶಿವಲಿಂಗವು ಕಟ್ಟಿರ್ದಡೇನಯ್ಯಾ ?**
**ಪಡುವಲದ ಕಾಯಿಗೆ ಕಲ್ಲ ಕಟ್ಟಿ ಇಳಿಯ ಬಿಟ್ಟಂತೆ**
**ಮೈತುಂಬ ವಿಭೂತಿಯನಿಟ್ಟು ಕೊಂಡಿರ್ದಡೇನಯ್ಯಾ**
**ಕೊಟ್ಟಿಗೆಯ ಮೇಗಣ ಕಗ್ಗುಂಬಳ ಕಾಯಂತೆ...ವೇನಯ್ಯಾ ?**
**ಹುತ್ತದೊಳಗಣ ನಿಧಾನದಂತೆ.**
**ಈ ಕೆಟ್ಟತನವುಳ್ಳ ಭಂಡರ ಕಂಡು**
**ಹೊಟ್ಟೆಯ ಹೊಯ್ದುಕೊಂಡು ನಗುತಿರ್ದ ಅಂಬಿಗ ಚೌಡಯ್ಯ.**

ಕಟ್ಟಿಗೆಯ ಹೊರೆ ಹೊತ್ತು ದಾರಿಯಲ್ಲಿ ಬಳಲಿ ಬರುವ ಮನುಜನನ್ನು ಕಟ್ಟದಿರಿನ ಇಕ್ಕಟ್ಟಿನಲ್ಲಿ ಕಂಡು ಆ ಮನುಜ ಹೊತ್ತ ಹೊರೆಯ ಭಾರಕ್ಕೆ ತಲೆ ಕೊಟ್ಟ ಮನುಜನಿಗೆ ಪುಣ್ಯವುಂಟು.

ಭಕ್ತ ವಿರಕ್ತರಿಗೆ ಆಳಾಗಿ ಅವರ ಅನುವರಿತು ನಡೆಯಬೇಕು. ಅಂತರಾಳಕ್ಕೆ ಹೋಗುವ ಸೂತ್ರವನು ಯಾವಾಗ ದಯಪಾಲಿಸುವನೋ ಎಂದು ಹಗಲಿರುಳು ಕಾಯಬೇಕು.

ಇವರೆಡೂ ಪಾಲಿಸದಿದ್ದರೂ ಅಡ್ಡಿಯಿಲ್ಲ. ಭಾರದ ಹೊರೆ ಹೊರಲು ಭಕ್ತ ವಿರಕ್ತನಾಗಲು ಹೇಳಿದವರಾರೋ ಎಂದು ಮೂದಲಿಸಿ ನುಡಿವ ಹೀನನ ಕೊರಳಲ್ಲಿ ಶಿವಲಿಂಗ ಕಟ್ಟಿರ್ದಡೇನು? ಪಡವಲ ಕಾಯಿಗೆ ಕಲ್ಲು ಕಟ್ಟಿ ಇಳಿ ಬಿಟ್ಟಂತೆ.

ಮೈತುಂಬ ವಿಭೂತಿಯ ಬಳಿದುಕೊಂಡರೇನು ಕೊಟ್ಟಿಗೆಯ ಮೇಲಣ ಕುಂಬಳ ಕಾಯಿಯಂತೆ, ಹುತ್ತದೊಳಗೆ ಅವಿತಿಟ್ಟ ಸಂಪತ್ತಿನಂತೆ. ಅರಿವಿನ ಸಂಪತ್ತು ಅಂಗದಲ್ಲಿ ಬಚ್ಚಿಟ್ಟುಕೊಂಡು ಅರಿಯದ ಭಂಡರ ಕಂಡು ಅಂಗದಲ್ಲಿಯೇ ಸಂಗಮ ವಾದ ಅಂಬಿಗ ನಗುತಿರ್ದ

ಎಂದಿದ್ದಾರೆ ಚೌಡಯ್ಯ ಶರಣರು.

82

**ಕಟ್ಟಿದ ಲಿಂಗವ ಕಿರಿದು ಮಾಡಿ,**
**ಬೆಟ್ಟದ ಲಿಂಗವ ಹಿರಿದು ಮಾಡುವ ಪರಿಯ ನೋಡಾ !**
**ಇಂತಪ್ಪ ಲೊಟ್ಟಿ ಮೂಳರ ಕಂಡರೆ**
**ಗಟ್ಟಿವುಳ್ಳ ಪಾದರಕ್ಷೆಯ ತೆಗೆದುಕೊಂಡು**
**ಲೊಟಲೊಟನೆ ಹೊಡೆಯೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಅಂಗದ ಕಣಕಣದಲ್ಲಿ ಅರಿವು ಸಂಗಮವಾಗಿದೆ. ಆ ಅರಿವು ಗುರುದೇವನೂ ಹೌದು, ಮಹಾದೇನೂ ಹೌದು, ಬ್ರಹ್ಮನೂ ಹೌದು, ವಿಷ್ಣುವೂ ಹೌದು. ಅಂಗದಲ್ಲಿ ಸಂಗಮವಾದ ಅರಿವೇ ಲಿಂಗ. ಹೀಗಾಗಿ ಅಂಗವನ್ನು ಶರಣರು ಲಿಂಗಾಂಗ ಎಂದು ಕರೆದರು.

ಅಂಗ ಗರ್ಭದಿಂದ ಹೊರ ಬರುವಾಗಲೇ ಲಿಂಗವೆಂಬ ಅರಿವನ್ನು ಕಟ್ಟಿಕೊಂಡೇ ಬಂದಿದೆ. ಅದಕ್ಕೆ ಪುನಃ ಲಿಂಗ ಕಟ್ಟಬೇಕಾಗಿಲ್ಲ. ಕಟ್ಟಿಕೊಂಡು ಬಂದ ಅರಿವನ್ನು ಕಂಡುಕೊಳ್ಳಬೇಕಾಗಿದೆ.

ಅಂಗವನ್ನು ಆವರಿಸಿದ ಮನ ಅಂಗದಲ್ಲಿ ಸಂಗಮವಾದ ಅರಿವನ್ನು ಹುಡುಕಿ ಅದನ್ನು ಧರಿಸಿಕೊಳ್ಳದೆ ಬೆಟ್ಟದ ಕಲ್ಲಿನಿಂದ ಕಟೆದ ಲಿಂಗವನ್ನು ಧರಿಸಿಕೊಳ್ಳುತ್ತದೆ. ಬೆಟ್ಟದಿಂದ ಆಯತ ಮಾಡಿಕೊಂಡ ಲಿಂಗವನ್ನು ಅಂಗದ ಮೇಲೆ ಧರಿಸಿಕೊಂಡು ಲಿಂಗಾಯತನಾಗಿದೆ. ಬೆಟ್ಟದ ಲಿಂಗವನ್ನೇ ಮನ ಹಿರಿದು ಮಾಡಿದೆ. ಗರ್ಭದಿಂದಲೇ ಧರಿಸಿಕೊಂಡು ಬಂದ ಲಿಂಗವನ್ನು ಕಿರಿದು ಮಾಡಿದೆ.

ಲಿಂಗ ಯಾವ ಅಂಗಕ್ಕೆ ಇಲ್ಲ ? ಲಿಂಗ ಇಲ್ಲದ ಅಂಗಗಳೇ ಇಲ್ಲ ಈ ಜಗದೊಳಗೆ ! ಅಂಗ ಪ್ರೌಢಾವಸ್ಥೆಗೆ ಬಂದ ನಂತರ ಅಂದರೆ ತಿಳಿಮುಖವಾದ ಕೂಡಲೇ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗವನ್ನು ಮನ ಅಂಗದಲ್ಲಿಯೇ ಹುಡುಕಬೇಕು. ಮನಕ್ಕೆ ಲಿಂಗ ದೊರೆತರೆ ಸಾಕು ಆ ಅಂಗವೇ ಲಿಂಗಾಂಗವೆಂದು ಮನಕ್ಕೆ ಹೊಳೆಯುತ್ತದೆ. ಇಲ್ಲದಿದ್ದರೆ ಬೆಟ್ಟದ ಕಲ್ಲಿನಿಂದ ತಯ್ಯಾರಾದ ಲಿಂಗವನ್ನು ಕಟ್ಟಿಕೊಂಡು ಲಿಂಗಾಯತನೆಂದು ಬೀಗುತ್ತದೆ.

ಇದು ಮನದ ಕೆಲಸವೆಂದು ಮನಕ್ಕೆ ಹೊಳೆಯಬೇಕು. ಹೊಳೆಯದಿದ್ದರೆ ಬಲ್ಲ ಜ್ಞಾನಿಯ ಕೇಳಿ ತಿಳಿಯಬೇಕು. ಗುರುವೆಂದು ಕರೆಯಿಸಿಕೊಳ್ಳುವಾತನೂ ಬೆಟ್ಟದ ಲಿಂಗ ಕಟ್ಟಿಕೊಂಡು ಲಿಂಗ ಕಟ್ಟುವ ವ್ಯವಹಾರದಲ್ಲಿ ನಿರತನಾಗಿದ್ದಾನೆ. ಲಿಂಗ ಕಟ್ಟುವ ಕಟ್ಟಿಸಿಕೊಳ್ಳುವವರಿಬ್ಬರೂ ಹುಟ್ಟಿನಿಂದಲೇ ಧರಿಸಿಕೊಂಡು ಬಂದ ಲಿಂಗವನ್ನು ಮರೆತು ಬೆಟ್ಟದ ಲಿಂಗವನ್ನೇ ಹಿರಿದು; ಮಾಡಿದ್ದಾರೆ. ನಂತರ ಕಟ್ಟಿಕೊಂಡ ಬೆಟ್ಟದ ಲಿಂಗ ಅಂಗಕ್ಕೆ ಪಾಠ ಮಾಡುವುದಿಲ್ಲ. ಅಂಗದಲ್ಲಿ ಸಂಗಮವಾದ ಲಿಂಗ ಅಂಗಕ್ಕೆ ಪಾಠ ಮಾಡದೇ ಬಿಡುವುದಿಲ್ಲ. ಕಟ್ಟುವುದು ಕಟ್ಟಿಸಿಕೊಳ್ಳುವುದು ಮನದ ವ್ಯವಹಾರ.

ಅಂಗ ಸೆರೆ ಕುಡಿಯುತ್ತದೆ, ಹಾದರ ಮಾಡುತ್ತದೆ. ಜೂಜು ಆಡುತ್ತದೆ. ಕಳವು ಮಾಡು ತ್ತದೆ. ವೇಷ ಹಾಕಿಕೊಂಡು ಗುರುವಿನಂತೆ ನಟನೆ ಮಾಡುತ್ತದೆ. ಅಧಿಕಾರಿ, ಶಾಸಕನಾದರೂ ಅಂಗದ ಚೇಷ್ಟೆಗಳು ನಿಲ್ಲುವುದಿಲ್ಲ. ಕಟ್ಟಿಕೊಂಡ ಲಿಂಗ ನಿಲ್ಲು ; ಹಾದರ ಸಲ್ಲದು ಎಂದು ಅಂಗವನ್ನು

ತಡೆಯುವುದಿಲ್ಲ. ಅಂಗದಲ್ಲಿ ಸಂಗಮವಾದ ಲಿಂಗ ಹಾಗಲ್ಲ. ಅಂಗ ತಪ್ಪಿನಲ್ಲಿ ಭಾಗಿಯಾಗುವ ಮುನ್ನ ಅರಿವೆಂಬ ಲಿಂಗ ಎಚ್ಚರಿಸುತ್ತದೆ. ಮಾಡಿದ ತಪ್ಪನ್ನು ಮತ್ತೆ ಮತ್ತೆ ಎಚ್ಚರಿಸಿ ತಪ್ಪು ಮಾಡದಂತೆ ಶಿಕ್ಷೆ ಕೊಡುತ್ತದೆ. ಎಂದೋ ಮಾಡಿದ ತಪ್ಪನ್ನ ನೆನಪಿಸುತ್ತದೆ. ನಿದ್ರೆ ಬಾರದಂತೆ ಮಾಡುತ್ತದೆ. ಈ ಶಿಕ್ಷೆ ಸಾಮಾನ್ಯವೆ ? ಹೀಗೆ ಎಚ್ಚರಿಸಿ ನೆನಪು ಮಾಡಿ ತಪ್ಪು ಮಾಡದಂತೆ ತನಗೆ ತನ್ನಲ್ಲಿಯೇ ಬೋಧಿಸುವ ಲಿಂಗ ಸಾಮಾನ್ಯವೆ ? ಹೀಗೆ ಅಂಗದಲ್ಲಿ ಸಂಗಮವಾದ ಲಿಂಗವನ್ನು ಮನ ಕಿರಿದು ಮಾಡಬಹುದೆ ? ತಾನೇ ಕಟ್ಟಿಕೊಂಡ ಬೆಟ್ಟದ ಲಿಂಗವನ್ನು ನಿರಂತರ ಹಿರಿದು ಮಾಡಿ ಪೂಜಿಸಬಹುದೆ ?

ಇದಕ್ಕೆಲ್ಲ ಕಾರಣ ಮನ. ಅದು ಪ್ರತಿಯೊಂದು ಅಂಗವನ್ನು ಆವರಿಸಿದ ಶನಿ. ಇದನ್ನು ಪೈಗಂಬರರು ಸೈತಾನ ಎಂದು ಕರೆದರು. ಏಸುಕ್ರಿಸ್ತ ಇದನ್ನು ದೆವ್ವ ಎಂದು ಕರೆದ. ಭಾರತ ದೇಶದ ಜ್ಞಾನಿಗಳು ಇದನ್ನು ಬ್ರಹ್ಮರಾಕ್ಷಸ ಎಂದು ಕರೆದರು. ಏಕೆಂದರೆ ಮನ, ಅಂಗದಲ್ಲಿ ಸಂಗಮವಾದ ಬ್ರಹ್ಮನೆಂಬ ಅರಿವನ್ನು ಹಾಗು ಅಂಗವನ್ನು ಆವರಿಸಿಕೊಂಡು ತನ್ನ ವಶದಲ್ಲಿಟ್ಟುಕೊಂಡಿದೆ. ಅಂಗಕ್ಕೆ ತನ್ನ ಮಾತು ಕೇಳುವ ಮತ್ತಿನ ಭ್ರಮೆಯನ್ನು ಚೆಲ್ಲಿದೆ. ಮನದ ಈ ಮತ್ತಿನಿಂದಾಗಿ ಅಂಗ ಲಿಂಗವನ್ನು ಮರೆತು ಮದದಿಂದ ಕೊಬ್ಬಿದೆ. ಇದಕ್ಕೆಲ್ಲ ಮನವೇ ಕಾರಣ. ಇಂತಪ್ಪ ಲೊಟ್ಟೆ ಮೂಳ ಮನವನ್ನು ಕಂಡರೆ ಗಟ್ಟಿವುಳ್ಳ ಪಾದರಕ್ಷೆ ತೆಗೆದುಕೊಂಡು ಲೊಟಲೊಟನೆ ಹೊಡೆಯೆಂದಾತನು ನಮ್ಮ ಅಂಬಿಗರ ಚೌಡಯ್ಯನು ಎಂದಿದ್ದಾರೆ ಚೌಡಯ್ಯ ಶರಣರು.

ಕತ್ತಲು ಬೆಳಕಿಗೆ ಮಾತ್ರ ಹೆದರುತ್ತದೆ. ಹಾಗೆಯೇ ಕತ್ತಲು ಬೆಳಕಿಗೆ ಹೆದರುವುದೇ ಇಲ್ಲ. ಏಕೆಂದರೆ ಕತ್ತಲು ಹುಟ್ಟಿದ್ದೇ ಬೆಳಕಿನಿಂದ ! ಕತ್ತಲೆಂದರೆ ಮನ. ಇದು ಬೆಳಕಿನ ಉಪಕರಣವೆಂಬ ಅಂಗವನ್ನು ಆವರಿಸಿದೆ. ಅರಿವೆಂದರೆ ಬೆಳಕು ; ಲಿಂಗ. ಇದು ಅಂಗದ ಕಣಕಣದಲ್ಲಿ ಸಂಗಮ ವಾಗಿದೆ. ಬೆಳಕಿನಿಂದಲೇ ಹುಟ್ಟಿದ ಕತ್ತಲು ಬೆಳಕನ್ನೇ ಆವರಿಸಿ ಬೆಳಕು ಮತ್ತು ಅದರ ಉಪ ಕರಣವನ್ನು ಕಾಣದಂತೆ ಮಾಡಿದೆ.

ಸೂರ್ಯನಿಂದ ಹುಟ್ಟಿದ ಕತ್ತಲು ಸೂರ್ಯನನ್ನೇ ಕಾಣದಂತೆ ಮಾಡಿದೆಯೋ ಹಾಗೆಯೇ ಅರಿವಿನ ಬೆಳಕಿನಿಂದ ಹುಟ್ಟಿದ ಮನ ಅರಿವನ್ನು,ಅರಿವನ್ನು ಬೆಳಗಿದ ಅಂಗವನ್ನು ಕಾಣದಂತೆ ಮಾಡಿದೆ. ಹೀಗೆ ಕಾಣದಂತೆ ಮಾಡಿದ ಲೊಟ್ಟೆ ಮೂಳ ಮನವನ್ನು ಗಟ್ಟಿ ಪಾದರಕ್ಷೆಯಿಂದ ಲೊಟಲೊಟನೆ ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗಯ್ಯನೇ ಹೊಡೆಯಬೇಕಾಗಿದೆ.

ಆದರೆ ಮನ ತನ್ನನ್ನು ಬೆಳಗಿ ತನ್ನಂತೆ ಮಾಡಿಕೊಳ್ಳುವ ಅರಿವೆಂಬ ಲಿಂಗಯ್ಯನನ್ನು ಕಿರಿದು ಮಾಡಿ, ಬೆಟ್ಟದ ಕಲ್ಲಿನ ಲಿಂಗವನ್ನು ಹಿರಿದು ಮಾಡಿಕೊಂಡು ಅಂಗದಲ್ಲಿ ಧರಿಸಿಕೊಂಡಿದೆ. ಲೊಳಲೊಟ್ಟೆ ಮನದ ಆಟ. ಮನ ತನ್ನ ಅಜ್ಞಾನದ ಆಟಕ್ಕೆ ಜಗದ ಸಕಲ ಅಂಗಗಳನ್ನು ಬಳಸಿ ಕೊಂಡಿದೆ.

**83**

**ಕಟ್ಟಿಹೆಬಿಟ್ಟಿಹೆನೆಂಬ ದಂದುಗ ನಿಮಗೇಕೆ ?**
**ತೆರನನರಿಯದೆ ಹಲವು ತಪ್ಪಲ ತರಿ ತಂದು ಮೇಲೊಟ್ಟಲೇಕೆ ?**
**ಜಂಗಮ ಬಂದರೆ ತೆರನರಿತು ಅರ್ಪಿಸಬಲ್ಲಡಲ್ಲಿ**
**ತಾನೆ ಶಿವನು ತೆರಹಿಲ್ಲದಿಪ್ಪನೆಂದಾತ ನಮ್ಮಂಬಿಗ ಚೌಡಯ್ಯ .**

ಲಿಂಗ ಕಟ್ಟಿಹೆನೆಂಬುದೊಂದು ದಂದುಗ ; ಜನಿವಾರ ಹಾಕಿಹೆನೆಂಬುದೊಂದು ದಂದುಗ. ಅಂಗಕ್ಕೆ ಯಾವುದೊಂದು ದಂದುಗದ ಅವಶ್ಯಕತೆಯೂ ಇಲ್ಲ. ಅದು ಕಟ್ಟಿಕೊಂಡೇ ಬಂದಿದೆ. ಅದನ್ನು ತಿಳಿದು ಅನುಭವಿಸಬೇಕು ಅಷ್ಟೆ.

ಅಂಗದ ಮೇಲೆ ಲಿಂಗ ಕಟ್ಟಿಕೊಂಡು ; ಆ ಲಿಂಗಕ್ಕೆ ಹಲವು ವಿಧದ ಪತ್ರೆ ಪುಷ್ಪಗಳನ್ನು ತರೆ ತರೆದು ತಂದು ಮೇಲೊಟ್ಟಿ ಪೂಜಿಸುತ್ತೇವೆ. ಯಾಕೆ ಪೂಜಿಸುತ್ತೇವೆ. ಈ ಪೂಜೆಯಿಂದ ಪೂಜಿಸಲ್ಪಡುವ ಲಿಂಗ ನನಗೆ ಯಾವುದಾದರೂ ಸಂದೇಶ ಕೊಟ್ಟಿತೆ ಹೇಗೆ ? ಅದರ ಪರಿಚಯ ನನಗಿಲ್ಲದಂತೆ , ನನ್ನ ಪರಿಚಯ ಅದಕ್ಕಿಲ್ಲದಂತೆ ನಡೆಯುವ ಪೂಜೆ ಪೂಜೆಯೆ ? ಅಂಗದ ಕಣಕಣದಲ್ಲಿ ಅರಿವು ಎಂಬ ಲಿಂಗ ತೆರಹಿಲ್ಲದಂತೆ ಭರಿತವಾಗಿದೆ. ಅಂಗಕ್ಕೆ ಎರೆದರೆ ಅರಿವೆಂಬ ಲಿಂಗ ತೊಯ್ಯುತ್ತದೆ. ಮರೆತರೆ ಅಂಗದೊಂದಿಗೆ ಬಾಡುತ್ತದೆ. ಅಂಗದ ಬಾಯಿ ಬೇರೆಂದು ಮೇಲೆ ಜಲ, ಪ್ರಸಾದ ಸುರಿದಡೆ ಪಾದದವರೆಗೂ ಪ್ರಸಾದದ ಆನಂದ ಪಸರಿಸುತ್ತದೆ. ಎರೆದರೆ ನೆನೆಯದ ಮರೆತರೆ ಬಾಡದ ಲಿಂಗ ಲಿಂಗವೊ ? ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗ ಲಿಂಗವೊ? ಪೂಜಿಸುವ ಮುನ್ನ ಆಲೋಚನೆ ಮಾಡುವ ಅರಿದರಿದು ಪೂಜಿಸುವ ಕ್ರಿಯೆ ಮರೆತು; ಮರೆತು ಮಾಡುವ ಪೂಜೆ ಸಂಪ್ರದಾಯವಾಗಿ ಅಂಗದ ಹೆಗಲು ಏರಿ ಕುಳಿತಿದೆ. ಈ ಸಂಪ್ರದಾಯವನ್ನು ಕೊಡವಿಕೊಂಡು, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗವನ್ನು ಕಂಡುಕೊಂಡು ಪೂಜಿಸಬೇಕಿದೆ.

ಅಂಗದಲ್ಲಿ ಸಂಗಮವಾದ ಲಿಂಗ ಪೂಜೆಗೆ ಪತ್ರಿ ಪುಷ್ಪ ಗಂಧ ದೀಪ ಧೂಪಗಳ ಅವಶ್ಯಕತೆಯಿಲ್ಲ. ಕಣ್ಣಿನಲ್ಲಿ ಸಂಗಮವಾದ ಲಿಂಗವನ್ನು ಕಣ್ಣಿನಿಂದಲೇ ನೋಡಿ ಪೂಜಿಸಬೇಕು. ಚರ್ಮದಲ್ಲಿ ಸಂಗಮವಾದ ಲಿಂಗವನ್ನು ಚರ್ಮದಿಂದಲೇ ಅರಿತು ಪೂಜಿಸಬೇಕು. ಕಿವಿ ಮೂಗು ನಾಲಗೆಯಲ್ಲಿ ಸಂಗಮವಾದ ಲಿಂಗವನ್ನು ಆಯಾ ಜಾಗದಲ್ಲಿಯೇ ಅರಿತು ಪೂಜಿಸಬೇಕು.

ಅಂಗದಲ್ಲಿ ಲಿಂಗವಿಲ್ಲದ ಜಾಗವೇ ಇಲ್ಲ. ಕಲ್ಲನ್ನು ನೋಡಿ ಕಲ್ಲೆಂದು ಹೇಳುವ ಕಣ್ಣಿಗೆ ಪೂಜೆಯ ಅವಶ್ಯಕತೆಯಿಲ್ಲ. ಏಕೆಂದರೆ ಕಣ್ಣು ನಿಚ್ಚಳವಾಗಿ ಕಾಣುತ್ತದೆ. ಆ ಕಣ್ಣಲ್ಲಿ ಪೂಜಿಸುವ ಕಣ್ಣು ಪೂಜೆಗೆ ಒಳಪಟ್ಟ ಅರಿವಿನ ಕಣ್ಣು ಒಂದಾಗಿದೆ. ಏಕೆಂದರೆ ಕಲ್ಲನ್ನು ಕಲ್ಲೆಂದು ಕಣ್ಣು ಸಹಜವಾಗಿ ನೋಡುತ್ತದೆ. ನನ್ನ ದೇವರೆಂಬ ಭಾವವಿಲ್ಲ ; ಅನ್ಯರ ದೇವರೆಂಬ ದುರ್ಭಾವವಿಲ್ಲ.ಕಣ್ಣನ್ನು ಆವರಿಸಿರುವ ಭಾವ ದುರ್ಭಾವಗಳೆರಡೂ ಕಣ್ಣಿನಲ್ಲಿಯೇ ಸಂಗಮವಾದ ನಿರ್ಭಾವದಲ್ಲಿ ಐಕ್ಯವಾಗಿವೆ. ಹೀಗಾಗಿ ಕಲ್ಲನ್ನು ಕಲ್ಲೆಂದು ಕಣ್ಣು ಸಹಜವಾಗಿ ನೋಡುತ್ತದೆ. ಈ ಕಣ್ಣು ಹುಟ್ಟುವಾಗಲೇ ಅರಿವಿನ ಲಿಂಗ ಕಟ್ಟಿಕೊಂಡೇ ಹೊರಗೆ ಬಂದಿದೆ. ಇದಕ್ಕೆ ಜಾತಿ ಮತ ಧರ್ಮವಿಲ್ಲ. ಬರಿ ಅರಿವು ಮಾತ್ರ !

ಕಲ್ಲು ಕೆತ್ತಿ ಮಸೀದೆ, ಚರ್ಚ್, ದೇವಾಲಯ ನಿರ್ಮಿಸಿದರೆ ಸಾಕು ಮುಸಲ್ಮಾನ, ಕ್ರೈಸ್ತ, ಹಿಂದು ಎಂಬ ಅಜ್ಞಾನ ಕಣ್ಣಲ್ಲಿ ಆಮಂತ್ರಣ ಮಾಡಿಕೊಂಡು ತನ್ನ ದೇವರೆಂದು ಪೂಜಿಸಿ ಭಾವಕ್ಕೆ ಒಳಗಾಗುತ್ತದೆ. ಕಲ್ಲು ಕೆತ್ತಿ ಮಸೀದೆ ಮಾಡಿದರೇನು ? ಚರ್ಚ್, ದೇವಾಲಯ ಮಾಡಿದರೇನು ? ಅವು ಕಲ್ಲಲ್ಲವೆ ? ಕಲ್ಲನ್ನು ಕಲ್ಲೆಂದು ಸಹಜವಾಗಿ ನೋಡುವ ಜ್ಞಾನ ಕಣ್ಣಲ್ಲಿಯೇ ಇದೆ. ಕೆತ್ತಿದ ಕಲ್ಲನ್ನು ಮಸೀದೆ ಚರ್ಚ್ ದೇವಾಲಯವೆಂದು ನೋಡುವ ಕಣ್ಣದೇಹವನ್ನುಆವರಿಸಿದೆ.

**ತೆರನನರಿಯದೆ ಹಲವು ತಪ್ಪಲ ತರಿತರಿದು ತಂದು ಮೇಲೊಟ್ಟಲೇಕೆ ? :**

ಕಲ್ಲನ್ನು ಕಲ್ಲೆಂದು ನೋಡಿ ತಿಳಿಯಲು ಕಣ್ಣು ಕುರಾನ್ ಪಠಿಸಬೇಕೆ ? ಬೈಬಲ್

ಭಗವದ್ಗೀತೆಗಳನ್ನು ಪಠಿಸಬೇಕೆ ? ಏನು ಹಲವು ವಿಧದ ಪತ್ರೆ ಫಲ ಪುಷ್ಪಗಳನ್ನು ತಂದು ಅವುಗಳ ಮೇಲೊಟ್ಟಬೇಕೆ ? ಕಣ್ಣು ನೋಡುವ ಕಾಯಕದಲ್ಲಿ ನಿರತವಾಗಿದೆ. ಆದರೆ ನೋಡುವುದನ್ನು ನೋಡುತ್ತಿಲ್ಲ. ಕಲ್ಲು ಕೆತ್ತಿದರೇನು, ಅದು ಕಲ್ಲಲ್ಲವೆ! ಮಸೀದೆಯೆ? ಚರ್ಚೆ? ದೇವಾಲಯವೆ?ಹೀಗೆ ನೋಡುವ ಕಣ್ಣನ್ನು ಆಚೆ ಸರಿಸಿ, ನಿಜ ಕಣ್ಣಿನಿಂದ ನೋಡಿದರೆ ಸಾಲದೆ ? ನಿಜಕಣ್ಣು ಕಣ್ಣಲ್ಲಿ ತೆರಹಿಲ್ಲದಂತೆ ಭರಿತವಾಗಿದೆ. ಕಟ್ಟಿಹೆ ಬಿಟ್ಟಿಹೆನೆಂಬ ದಂದುಗ ಬಿಟ್ಟು ಹುಟ್ಟುವಾಗಲೇ ಕಟ್ಟಿಕೊಂಡು ಬಂದ ನಿಜವಸ್ತುವಿನಿಂದ ನೋಡಿದರೆ ಸಾಲದೆ ? ಆ ನಿಜ ವಸ್ತುವಿನಿಂದಲೇ ಮುಟ್ಟಿ, ಮೂಸಿಸಿ, ಕೇಳಿ, ರುಚಿಸಿದರೆ ಸಾಲದೆ ?

**ಜಂಗಮ ಬಂದರೆ ತೆರನರಿದು ಅರ್ಪಿಸಬಲ್ಲಡಲ್ಲಿ ತಾನೆ ಶಿವನು ತೆರಹಿಲ್ಲದಿಪ್ಪನೆಂದಾತ ನಮ್ಮ ಅಂಬಿಗ ಚೌಡಯ್ಯ :**

ಕಲ್ಲನ್ನು ಕಲ್ಲು ಎಂದು ನೋಡಿದವನೇ ಕ್ರಿಷ್ಣ, ಕ್ರಿಸ್ತ, ಪೈಗಂಬರ, ಬುದ್ಧ, ಮಹಾವೀರ, ಬಸವಾದಿ ಶರಣ ದಾಸವರೇಣ್ಯರು. ಕಲ್ಲನ್ನು ನೋಡಿ ಕಲ್ಲೆಂದು ತಿಳಿ ಹೇಳಿದ ಜ್ಞಾನಿಗಳನ್ನು ಕಲ್ಲಿನಲ್ಲಿಯೇ ಕೆತ್ತಿ ಪೂಜಿಸುವ ಕಣ್ಣಿಗೆ ಏನೆನ್ನಬೇಕು ! ಕಲ್ಲನ್ನು ನೋಡಿ ಕಲ್ಲು ಎಂದು ಅರಿತರೆ ಆರಾಧಿಸಲಿಲ್ಲ. ಕಣ್ಣಿನ ಅಜ್ಞಾನ ಕಣ್ಣಿನ ಜ್ಞಾನಕ್ಕೆ ಅರ್ಪಣೆಯಾಯಿತು. ತಾನೆ ತನಗೆ ಶಿವನಾದ ಶಿವನಿಗೆ ಅಜ್ಞಾನ ಅರ್ಪಣೆಯಾಯಿತು.

**84**

**ಕತ್ತೆಯ ಮೇಲೆ ತಿತ್ತಿಯ ಮಾಡಿ ಕಳ್ಳು ಹೇರುವರು,**
**ಅದಕ್ಕದು ಸತ್ಯವಯ್ಯ .**
**ಎತ್ತಿನ ಮೇಲೆ ತಿತ್ತಿಯ ಮಾಡಿ ತೈಲ ತುಪ್ಪವ ಹೇರುವರು,**
**ಅದಕ್ಕದು ಸತ್ಯವಯ್ಯ .**
**ಆ ತಿತ್ತಿಯ ಒಳಗಣ ತೈಲ ತುಪ್ಪವ ತಂದು,**
**ನಿತ್ಯ ಗುರು-ಲಿಂಗ-ಜಂಗಮಕ್ಕೆ ನೀಡುವ**
**ಭಕ್ತನ ಭಕ್ತಿ ಎಂತಾಯಿತ್ತೆಂದಡೆ :**
**ಆ ಕತ್ತೆಯ ಮೇಲೆ ಹೇರುವ ಕಳ್ಳು ಗುಂಡಿಗಿಂದ ಕಡೆಯೆಂದಾತ**
**ನಮ್ಮ ಅಂಬಿಗ ಚೌಡಯ್ಯ .**

ಲಿಂಗ ಕಟ್ಟಿಹೆನೆಂಬುದೊಂದು ದಂದುಗ ; ಜನಿವಾರ ಹಾಕಿಹೆನೆಂಬುದೊಂದು ದಂದುಗ. ಅಂಗಕ್ಕೆ ಯಾವುದೊಂದು ದಂದುಗದ ಅವಶ್ಯಕತೆಯೂ ಇಲ್ಲ.ಅದು ಕಟ್ಟಿಕೊಂಡೇ ಬಂದಿದೆ. ಅದನ್ನು ತಿಳಿದು ಅನುಭವಿಸಬೇಕು ಅಷ್ಟೆ. ಚರ್ಮದ ಚೀಲದಲ್ಲಿ ಹೆಂಡ ತುಂಬಿ ಕತ್ತೆಯ ಮೇಲೆ ಹೇರಿ ಮಾರುವರು. ಹಾಗೆಯೇ ಚರ್ಮದ ಚೀಲದಲ್ಲಿ ಎಣ್ಣೆ-ತುಪ್ಪವ ತುಂಬಿ ಎತ್ತಿನ ಮೇಲೆ ಹೇರಿ ಮಾರುವರು. ಆ ಚೀಲ ದೊಳಗಣ ಎಣ್ಣೆ-ತುಪ್ಪವನು ತಂದು ನಿತ್ಯ ಗುರುಲಿಂಗ ಜಂಗಮಕ್ಕೆ ನೀಡುವರು. ಹಾಗೆ ನೀಡುವ ಭಕ್ತನ ಭಕ್ತಿ ಕತ್ತೆಯ ಮೇಲೆ ಹೊತ್ತು ತಂದ ಹೆಂಡದ ಚೀಲಕ್ಕಿಂತ ಕಡೆ ಎಂದಿದ್ದಾರೆ ಚೌಡಯ್ಯ ಶರಣರು.

ಇದು ಶರಣರು ಹೇಳುವ ಮಾತು ಕೂಡಾ ಹೌದು. ಅಜ್ಞಾನದ ನದಿಯನ್ನು ದಾಟಿಸಿ

ಪಾರು ಮಾಡುವ ಅಂತರಾಳದ ಅಂಬಿಗನ ಮಾತು ಕೂಡಾ ಹೌದು. ಚೀಲ ಒಂದೇ. ಒಂದು ತೊಗಲ ಚೀಲದಲ್ಲಿ ತುಪ್ಪ ; ಮತ್ತೊಂದು ತೊಗಲ ಚೀಲದಲ್ಲಿ ಹೆಂಡ ! ಎರಡು ವಸ್ತುಗಳಿಗೆ ಬಳಸಲಾಗಿದ್ದು ಮಾತ್ರ ತೊಗಲಿನ ಚೀಲ. ಹಾಗೆಯೇ ಮಾಂಸ ರಕ್ತ ಮೂಳೆ ಮಜ್ಜೆ ಮೇದಸ್ಸುಗಳು ಸೋರದಂತೆ ಚರ್ಮದಲ್ಲಿ ತುಂಬಿಕೊಂಡು ಅಂಗದ ಗರ್ಭದಿಂದ ಹೊರಬಂದಿದೆ. ಹೀಗೆ ಹೊರಬಂದ ಅಂಗ ಕಳ್ಳ, ರಾಜ, ಮಂತ್ರಿ , ಸೈನಿಕ, ಶಾಸಕ, ಪ್ರಧಾನಿ, ರಾಷ್ಟ್ರಪತಿ, ಹೆಣ್ಣು, ಗಂಡು , ಜಾತಿ, ಮತ, ಪಂಥಗಳಿಂದ ಗುರುತಿಸಿಕೊಂಡಿದೆ. ಪದಾರ್ಥ ಒಂದೇ. ಆ ಪದಾರ್ಥದಿಂದ ಬಂದ ಪದ ಒಂದೇ ಎಂದು ಖಚಿತವಾಗಿ ತಿಳಿದು ಆಚರಣೆಯಲ್ಲಿ ತಂದು ಕೊಂಡಾಡ ಅಂಗ ಬುದ್ಧ, ಬಸವ, ಮಹಾವೀರ, ಕ್ರಿಸ್ತ , ಕ್ರಿಷ್ಣ, ಪೈಗಂಬರ ಎಂದು ಗುರುತಿಸಿಕೊಂಡಿದೆ. ಇದು ಅಂಗದ ಅರಿವಿನ ಸಹಜ ಕಲೆ.

ತನ್ನಂಗದ ಸಹಜತೆಯನ್ನು ತಾನೇ ಬಳಸಿಕೊಳ್ಳಲು ಗುರು ಲಿಂಗ ಜಂಗಮಕ್ಕೆ ಭಕ್ತಿಯಿಂದ ಎಣ್ಣೆ-ತುಪ್ಪವ ನೀಡಿ ಪೂಜಿಸಿ ಆರಾಧಿಸಬೇಕಾಗಿಲ್ಲ. ಅವರು ಹೊರಗಿದ್ದಾರೆಂದು ತಿಳಿದು ಪೂಜಿಸುವಾತ ಭಕ್ತನಲ್ಲ. ಆತ ಗುರು ಲಿಂಗ ಜಂಗಮಕ್ಕೆ ಮಾಡುವ ಭಕ್ತಿಯೂ ಭಕ್ತಿಯಲ್ಲ. ಅಂಗದಲ್ಲಿಯೇ ಅರಿವು ಸಂಗಮವಾಗಿದೆ. ಆ ಅರಿವೇ ಗುರು. ಆ ಗುರುದೇವನ ಆದೇಶವನ್ನು ಪಾಲಿಸುವಾತನೆ ಜಂಗಮ. ಸರ್ವಾಂಗದಲ್ಲಿ ಅರಿವೆಂಬ ಲಿಂಗ ಸಂಗಮವಾಗಿದೆ. ಅದನ್ನು ಆರಾಧಿಸಿ ಆಚರಿಸುವ ಮನವೇ ಭಕ್ತ . ಅಂಗದಲ್ಲಿರುವ ಗುರು ಲಿಂಗ ಜಂಗಮರನ್ನು ಪೂಜಿಸುವ ಮನವೇ ಭಕ್ತ . ತನಗೆ ತಾನೇ ಭಕ್ತ . ತನಗೆ ತಾನೇ ಗುರು. ತನಗೆ ತಾನೇ ಲಿಂಗ, ತನಗೆ ತಾನೇ ಜಂಗಮ. ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನನ್ನು ತನುವನ್ನು ಆವರಿಸಿದ ಮನದಿಂದಲೇ ಪೂಜಿಸಬೇಕಾಗಿದೆ. ಇದು ಪೂಜೆ. ಇದು ಭಕ್ತನ ಭಕ್ತಿ .

**85**

**ಕರದಲ್ಲಿ ಲಿಂಗವ ಪಿಡಿದುಕೊಂಡು ಕಣ್ಣು ಮುಚ್ಚಿ ಸರಜಪಮಾಲೆಯ**
**ಬೆರಳಿಂದ ಎಳೆದೆಳೆದು ಎಣಿಸುತ್ತ ,**
**ಗುರುಮೂರ್ತಿಯ ಧ್ಯಾನಿಸುತ್ತ ಕಂಡೆನೆಂಬುತ್ತ ಇರುವರೆ ಮೂಳರಿರಾ ?**
**ನಿಮಗೆಲ್ಲಿಯದೊ ಗುರುಧ್ಯಾನ?**
**ವರ ಪರವಸ್ತುವಿಂಗೆ ಸರಿ ಎನಿಸಿಕೊಂಬ ಗುರುಸ್ವಾಮಿ**
**ನಿಮ್ಮ ನೆರೆಹೊರೆಯ ಸರಿಸಮೀಪ ಗ್ರಾಮದಲ್ಲಿರಲು**
**ಅವರನ್ನು ಲೆಕ್ಕಿಸದೆ, ಉದಾಸೀನವ ಮಾಡಿ ಕಂಡು**
**ನಿನ್ನ ಉಂಬ ಉಡುವ ಸಿರಿಸಂಪತ್ತಿನೊಳು ಅವರನು ಸತ್ಕರಿಸದೆ,**
**ಕರದಲ್ಲಿ ನೋಡಿ ಕಂಡಿಹೆನೆಂದು**
**ಶಿರವಂ ಬಿಗಿದು, ಕಣ್ಣನೆ ತೆರೆಯದೆ,**
**ಸ್ವರದಲಾಗ ಪಿಟಿಪಿಟಿ ಎನ್ನುತ್ತ ಅರಿವೆಂಬ ಅರಿವಿಂಗೆ ಶಿರದೂಗಿ ಬೆರಗಾಗಿ**
**ನಗುತಿರ್ದ ನಮ್ಮ ಅಂಬಿಗರ ಚೌಡಯ್ಯ .**

ಗುರುದೇವನನ್ನು ಹುಡುಕುವುದು ಸುಲಭದ ಕೆಲಸವಲ್ಲ. ಗುರುದೇವ ಯಾರೆಂದು ಹುಡುಕುವವನಿಗೆ ಸಿಗುವುದಿಲ್ಲ; ಹಾಗೆಯೇ ಗೊತ್ತು ಆಗುವುದಿಲ್ಲ. ವೇಷ ಧರಿಸಿದವನು

ಗುರುವಲ್ಲ. ಆತನಿಗೆ ವೇಷ ಬೇಕಾಗಿಲ್ಲ. ಗುರುದೇವ ಎದುರಿಗೆ ಬಂದರೂ ಈತನೇ ಗುರು ದೇವನೆಂದು ಗೊತ್ತಾಗುವುದಿಲ್ಲ. ಶಿಷ್ಯ ಗುರುವನ್ನು ಹುಡುಕುವಂತಿಲ್ಲ; ಬದಲಾಗಿ ಗುರು ದೇವನೇ ಶಿಷ್ಯನನ್ನು ಹುಡುಕುತ್ತಾನೆ. ಏಕೆಂದರೆ ತನ್ನಂತೆ ಮಾಡಿಕೊಳ್ಳಲು ಆತನಿಗೆ ಬಲು ತವಕ.

ಜಪ ಮಾಡುತ್ತ ಲಿಂಗ ಕೈಯಲ್ಲಿ ಹಿಡಿದು ಪೂಜಿಸುವವನಿಗೆ ಗುರು ಸಿಗುವುದು ದುರ್ಲಭ. ಅಂತಹವನನ್ನು ಚೌಡಯ್ಯ ಶರಣರು ಮೂಳರೆಂದು ಕರೆದಿದ್ದಾರೆ.

ಕಣ್ಣು ಮೂಗು ಕಿವಿ ಚರ್ಮ ನಾಲಗೆ ಹೀಗೆ ಸರ್ವಾಂಗದಲ್ಲಿ ಉಂಟಾಗುವ ಯಾತನೆ ಯನ್ನು ಕಂಡು ಕೊಂಡು ಹೀಗೇಕೆ ? ಇದರಿಂದ ನನಗೆ ಮುಕ್ತಿ ಇಲ್ಲವೆ ? ಅಂತರಂಗದಲ್ಲಿ ನುಡಿದು ಹೇಳುವ ಬೋಧೆ ಬಹಿರಂಗದ ಆಮಿಷಗಳಿಗೆ ಬಲಿಯಾಗುವ ತವಕ ; ಇದರಿಂದ ಮುಕ್ತಿಯಿಲ್ಲವೆ ? ಎಂದು ಚಿಂತನೆಗೆ ಒಳಗಾದ ಅಂಗದ ಮುಂದೆ ಗುರು ಪ್ರತ್ಯಕ್ಷನಾಗುತ್ತಾನೆ.

ಶಿಷ್ಯ ಗುರುದೇವನನ್ನು ಹುಡುಕುತ್ತಾನೆ ; ಗುರು ಶಿಷ್ಯನನ್ನು ಹುಡುಕುತ್ತಾನೆ. ಹೀಗೆ ಒಬ್ಬರನ್ನು ಒಬ್ಬರು ಹುಡುಕುವಾಗ ಸಂದಿಸುವ ಯೋಗವೇ ಸುಯೋಗ. ಹೂ ದುಂಬಿಯನ್ನು ಕರೆದು ತಂದಂತೆ. ದುಂಬಿ ಹೂವಿನ ಬಳಿಗೆ ಮಕರಂದ ಹೀರಲು ತೆರಳಿದಂತೆ ಹೂ ಮಕರಂದದ ಪರಿಮಳವನ್ನು ಗಾಳಿಯ ಮೂಲಕ ದುಂಬಿಯ ಹತ್ತಿರ ರವಾನೆ ಮಾಡಿ ದುಂಬಿಯನ್ನು ಹೂ ತನ್ನ ಬಳಿ ಕರೆದು ತಂದಂತೆ ! ಇದು ಅವಿನಾಭಾವ ಸಂಬಂಧ.

ಅಂಗದಲ್ಲಿ ಅರಿವೆಂಬ ಗುರುದೇವನು ಸಂಗಮವಾಗಿದ್ದಾನೆ. ಅಂಗವನ್ನು ಮನ ಆವರಿಸಿದೆ. ಆದರೂ ಮನ ಗುರುದೇವನನ್ನು ಹೊರಗೆ ಹುಡುಕುತ್ತದೆ. ಶಿಷ್ಯನ ಅಂಗ ಗುರು ದೇವನ ಅಂಗವೆಂದು ಎರಡು ಅಂಗಗಳು ಇರುವುದಿಲ್ಲ. ಒಂದಂಗದಲ್ಲಿಯೇ ಇಬ್ಬರಿದ್ದಾರೆ. ಈ ತಂತ್ರಗಾರಿಕೆ ಗೊತ್ತಾದ ಅಂಗವನ್ನು ಗುರುವೆಂದು ಭಾವಿಸಿದರೂ ; ಆ ಗುರುದೇವ ಭಾವಿಸಿದ ಅಂಗದಲ್ಲಿಯೇ ಗುರುದೇವನಿದ್ದಾನೆ ಎಂದು ಸೂಚಿಸುತ್ತಾನೆ. ಅಂಗದಲ್ಲಿ ಸಂಗಮವಾದ ಗುರುವೇ ನಿಜ ಗುರುವೆಂದು ತಿಳಿ ಹೇಳುತ್ತಾನೆ. ಗುರುದೇವ ತನ್ನ ಅಂಗದಲ್ಲಿಯೇ ಗುರುವನ್ನು ಕಂಡುಕೊಂಡ ಹಾಗೆಯೇ ಶಿಷ್ಯನಿಗೆ ಕೂಡಾ ಹಾಗೆ ಕಂಡುಕೊಳ್ಳಲು ಹೇಳಿದ. ಹೀಗೆ ನಿಜ ಸಂಗತಿಯನ್ನು ಸೂಚಿಸುವ ಮೂಲಕ ಬೋಧಿ ಸುವ ಗುರು ಸಿಗುವುದು ದುರ್ಲಭ. ಹಾಗೆಯೇ ಹುಡುಕುವುದೂ ದುರ್ಲಭ.

ಗುರುದೇವನನ್ನು ಹುಡುಕದೆ ಕೈಯಲ್ಲಿ ಲಿಂಗ ಹಿಡಿದು ಮಣಿಗಳನ್ನು ಲೆಕ್ಕ ಹಾಕುವವನು, ಗುರು ಸಿಕ್ಕ ಎಂದು ಮನದಲ್ಲಿ ಭ್ರಮಿಸುವವನು ಮೂಳ ಮನುಜನೆಂದು ಮೂದಲಿಸಿದ್ದಾರೆ.

**86**

**ಕರ್ಮೇಂದ್ರಿಯ ಕಾಯವ ಕೂಡಿಪ್ಪುದು,**
**ಭಾವೇಂದ್ರಿಯ ಜೀವವ ಕೂಡಿಪ್ಪುದು,**
**ಜ್ಞಾನೇಂದ್ರಿಯ ಪರಮನ**
**ಕಾಯ ಜೀವ ಪರಮನ ಕೂಡುವ**
**ಠಾವನರಿಯಬೇಕೆಂದನಂಬಿಗ ಚೌಡಯ್ಯ.**

ಕಾಯದೊಂದಿಗೆ ಏನಾದರೂ ಮಾಡಲೇಬೇಕೆನ್ನುವ ಇಂದ್ರಿಯಗಳು ಕಾಯವನ್ನು ಕೂಡಿಕೊಂಡಿವೆ. ಕಣ್ಣಿನೊಂದಿಗೆ ಕೂಡಿ ನೋಡಬಾರದ್ದನ್ನು ನೋಡಬೇಕೆನ್ನುವ ತವಕ. ಕಿವಿಯೊಂದಿಗೆ

ಕೂಡಿ ಕೇಳಬಾರದ್ದನ್ನು ಕೇಳುವ ತವಕ. ಚರ್ಮದೊಂದಿಗೆ ಕೂಡಿ ಮುಟ್ಟಬಾರದ್ದನ್ನು ಮುಟ್ಟಬೇಕೆನ್ನುವ ತವಕ. ನಾಲಗೆಯೊಂದಿಗೆ ಕೂಡಿಕೊಂಡು ರುಚಿಸಬಾರದ್ದನ್ನು ರುಚಿಸಬೇಕೆನ್ನುವ ತವಕ. ಕಾಯ ಈ ಐದೂ ಇಂದ್ರಿಯಗಳೊಂದಿಗೆ ಕೂಡಿದೆ. ಜ್ಞಾನೇಂದ್ರಿಯ ಈ ಐದೂ ಇಂದ್ರಿಯಗಳಲ್ಲಿ ಭರಿತವಾಗಿದೆ. ಜ್ಞಾನೇಂದ್ರಿಯಗಳನ್ನು ಮೈಮರೆಸಿ ಕರ್ಮೇಂದ್ರಿಯ ಸುಖ ದುಃಖ ಗಳೊಂದಿಗೆ ಕಾಯದ ಮೂಲಕ ಸಂಭ್ರಮಿಸುತ್ತದೆ. ಕರ್ಮೇಂದ್ರಿಯಕ್ಕೆ ಸುಖವೂ ಸಂಭ್ರಮ ; ದುಃಖವೂ ಸಂಭ್ರಮ.

ಕರ್ಮೇಂದ್ರಿಯ ವಸ್ತುವನ್ನು ನೋಡಿ, ಮುಟ್ಟಿ, ರುಚಿಸಿ, ಮೂಸಿಸಿ ಕಾಯದೊಂದಿಗೆ ಸಂಭ್ರಮಿಸುತ್ತದೆ. ನೋಡಿದ ವಸ್ತು ದಕ್ಕದಿದ್ದಾಗ ಕಾಯಕ್ಕೆ ದುಃಖವನ್ನು ಉಂಟು ಮಾಡಿ ತಾನು ಸಂಭ್ರಮಿಸುತ್ತದೆ. ಸುಖ ದುಃಖಗಳು ಉಂಟಾಗುವುದು ಭಾವದ ಮೂಲಕ. ಭಾವ ಜೀವವನ್ನು ಕೂಡಿದೆ. ಜೀವ ಭಾವ ಕಾಯ ಈ ಮೂರು ಗರ್ಭದಿಂದಲೇ ಹೊಲಿಗೆ ಹಾಕಿಕೊಂಡು ಬಂದಿವೆ. ಜ್ಞಾನೇಂದ್ರಿಯ ಮಾತ್ರ ಪರಮನ ಕೂಡಿಕೊಂಡಿದೆ. ಪರಮ ನೆಂದರೆ ವಿರಾಟ ಸ್ವರೂಪಿ. ಆತ ಜಗದಗಲ ಮುಗಿಲಗಲ ವಿಸ್ತರಿಸಿಕೊಂಡಾತ. ಮಿಗೆಯಗಲ ಅಂದರೆ ಪಂಚಭೂತಗಳನ್ನು ತನ್ನ ಗರ್ಭದಲ್ಲಿ ಇಟ್ಟುಕೊಂಡಾತ. ಆತನ ಶ್ರೀಚರಣ ಪಾತಾಳದಿಂದಲೂ ಅತ್ತತ್ತ .

ಪರಮನ ಶ್ರೀಮುಕುಟ ಬ್ರಹ್ಮಾಂಡದಿಂದಲೂ ಅತ್ತತ್ತ . ಆತ ಅಗಮ್ಯ; ಅಗೋಚರ ; ಅಪ್ರಮಾಣ. ಅಂತಹ ಪರಮ ಪುರುಷ ಅಂಗದಲ್ಲಿ ಬಂದು ಚುಳುಕಾಗಿದ್ದಾನೆ. ಲಿಂಗವೇ ತಾನಾಗಿ ಅಂಗದೊಂದಿಗೆ ಕೂಡಿ ಕೂಡಲ ಸಂಗಯ್ಯನೇ ತಾನಾಗಿದ್ದಾನೆ. ಇಂತಹ ಪರಮನನ್ನು ಜ್ಞಾನ ಕೂಡಿದೆ.

**ಕಾಯ-ಜೀವ ಪರಮನ ಕೂಡುವ ಠಾವನರಿಯಬೇಕೆಂದ ನಂಬಿಗ ಚೌಡಯ್ಯ :**

ಕರ್ಮೇಂದ್ರಿಯ ಭಾವೇಂದ್ರಿಯಗಳಿಂದ ಕ್ಷಣ ಕ್ಷಣಕ್ಕೆ ಸುಖ ದುಃಖಕ್ಕೆ ಒಳಗಾಗುವ ಕಾಯ-ಜೀವಗಳೆರಡೂ ಜಪತಪಗಳನ್ನು ಮಾಡಬೇಕಿಲ್ಲ. ಯಾವ ಆಚಾರಗಳನ್ನು ಮಾಡಬೇಕಿಲ್ಲ. ಜ್ಞಾನೇಂದ್ರಿಯ ಹೇಗೆ ಪರಮನನ್ನು ಕೂಡಿಕೊಂಡು ಚಲನೆ ಇಲ್ಲದೆ ನಿಶ್ಚಲವಾಗಿದೆಯೋ ಹಾಗೆಯೇ ಕಾಯ-ಜೀವಗಳೆರಡೂ ಪರ ಮನ ಕೂಡುವ ಠಾವನು ಅರಿಯಬೇಕು.

ಅಂಬಿಗರ ಚೌಡಯ್ಯ ಶರಣರು ಮಾನವ ಕುಲಕ್ಕೆ ದಯಪಾಲಿಸಿದ ಅದ್ಭುತವಾದ ಸರಳ ಸೂತ್ರವಿದು. ಕಾಯ ತನ್ನ ತೊಂದರೆಗಳನ್ನು ಕಳೆದುಕೊಂಡು ಕೈಲಾಸವೇ ತಾನಾಗುವ ಪರಮ ಸೂತ್ರವಿದು. ಪರಮಾತ್ಮನೇ ತಾನಾಗುವ ಪರಮ ಸೂತ್ರ !

**87**

**ಕರ್ಮೇಂದ್ರಿಯವಯಿದು,**
**ಭಾವೇಂದ್ರಿಯವಾರು,**
**ಜ್ಞಾನೇಂದ್ರಿಯ ಮೂರು.**
**ಅಯಿದು ಆರು ಮೂರನೊಂದು ಮಾಡಿ**
**ಬೇರೊಂದ ತಿಳಿಯಬೇಕೆಂದನಂಬಿಗ ಚೌಡಯ್ಯ.**

ದೇಹದ ಗುರಿ ಜೀವನ; ಉಪಜೀವನವಲ್ಲ. ಆದರೆ ಪ್ರಪಂಚದ ದೇಹಗಳೆಲ್ಲ ಉಪಜೀ ವನಕ್ಕೆ ಮಾರುಹೋಗಿವೆ. ಪ್ರಪಂಚದ ಸರಕಾರಗಳ ಗುರಿ ಕೂಡಾ ಉಪಜೀವನವೇ ಆಗಿದೆ.

ಹೀಗಾಗಿ ಉಪಜೀವನದ ಶ್ರೀಮಂತಿಕೆಯ ಗರ ದೇಹಗಳಿಗೆ ಬಡಿದಿದೆ. ವೈದ್ಯನಾಗಬೇಕು, ಅಭಿಯಂತರನಾಗಬೇಕು, ಅಧಿಕಾರಿಯಾಗಬೇಕು, ವ್ಯಾಪಾರಿಯಾಗಬೇಕು, ಶಿಕ್ಷಕ ಪ್ರಾಧ್ಯಾಪಕ ಉಪನ್ಯಾಸಕರಾಗಬೇಕು, ಶಾಸಕ, ಸಚಿವನಾಗಬೇಕೆಂಬ ಗುರಿ ದೇಹಕ್ಕೆ ಇದೆ. ಆದರೆ ಜ್ಞಾನಿಯಾಗಬೇಕು ಎಂಬ ಗುರಿ ಮಾತ್ರ ಇಲ್ಲ. ಈ ಬಯಕೆಯೂ ದೇಹಕ್ಕೆ ಹುಟ್ಟುವುದು ಕಡಿಮೆ.

ಹೀಗಾಗಿ ಯಾವ ದೇಶದ ದೇಹ ಕೂಡಾ ಸಮಾಧಾನಿ ಅಲ್ಲ. ಸದಾ ಸಂತೋಷದಿಂದ ನಗುನಗುತಾ ಇಲ್ಲ. ಜ್ಞಾನಿಯಾಗುವ ಬಯಕೆ ದೇಹದಲ್ಲಿ ಹುಟ್ಟಿದರೆ ಸಾಕು ; ಅದು ದೇಹದ ಲ್ಲಿಯೇ ಲಭ್ಯವಾಗುತ್ತದೆ. ದೇಹದಲ್ಲಿಯೇ ಸಂಗಮವಾದ ಜ್ಞಾನವನ್ನು ದೇಹವೇ ಪಡೆದು ಬಳಸುವ ಕಲೆ ದೇಹಕ್ಕೆ ಗೊತ್ತಾಗಬೇಕು. ಹಾಗೆ ಗೊತ್ತು ಮಾಡುವ ಎಷ್ಟೋ ಶಿಕ್ಷಕರು ಭಾರತದ ಈ ಭೂಮಿಯಲ್ಲಿ ಈಗಲೂ ಇದ್ದಾರೆ. ಇದಕ್ಕೆ ಹಣದ ಅವಶ್ಯಕತೆಯಿಲ್ಲ ; ಬಯಕೆಯ ಉತ್ಕಟ ಇಚ್ಛೆಯ ಅವಶ್ಯಕತೆ ಇದೆ. ಶಿಕ್ಷಕ, ಬಯಕೆಯಾದ ದೇಹಕ್ಕೆ ದೇಹದಲ್ಲಿಯ ಜ್ಞಾನವನ್ನು ದೇಹಕ್ಕೆ ಸೂಚಿಸಿ ಹಿಂದೆ ಸರಿಯುತ್ತಾನೆ. ಅದು ಬಲು ರಹಸ್ಯವಾದ ಸೂತ್ರ. ಇಂತಹ ಅದ್ಭುತವಾದ ರಹಸ್ಯ ಸೂತ್ರವನ್ನು ಅಂಬಿಗರ ಚೌಡಯ್ಯ ಶರಣರು ಆಸಕ್ತಿಯಿಂದ ಹುಡುಕುವ ಓದುಗರಿಗಾಗಿ ಬಹಿರಂಗವಾಗಿ ಬೆಡಗಿನ ಮೂಲಕ ರಚಿಸಿದ್ದಾರೆ.

ದೇಹದಲ್ಲಿ ಕರ್ಮೇಂದ್ರಿಯಗಳು ಐದು ಇವೆ. ದೇಹವನ್ನು ಆರು ಭಾವೇಂದ್ರಿಯಗಳು ಆವರಿಸಿವೆ. ಹಾಗೆಯೇ ಮೂರು ಜ್ಞಾನೇಂದ್ರಿಯಗಳೂ ಇವೆ. ದೇಹ ಒಂದು ; ಆದರೆ ಜ್ಞಾನೇಂದ್ರಿಯಗಳು ಮೂರು! ಇದು ಆಶ್ಚರ್ಯ! ಪರಮಾಶ್ಚರ್ಯ!

ದೇಹ ನೋಡಲು ಒಂದೇ ಕಾಣುತ್ತದೆ. ಆದರೆ ಆ ದೇಹದಲ್ಲಿ ಇನ್ನೆರಡು ದೇಹಗಳಿವೆ. ಕಂಡು ಬರುವ ದೇಹವನ್ನು ಸ್ಥೂಲ ದೇಹವೆಂದು ಕರೆದರು. ಕಾಣಲು ಬಾರದ ಆದರೆ ಅನುಭವಕ್ಕೆ ಮಾತ್ರ ಬರುವ ಇನ್ನೆರಡು ದೇಹಗಳಿವೆ. ಒಂದನ್ನು ಸೂಕ್ಷ್ಮ ದೇಹವೆಂದು ಮತ್ತೊಂದನ್ನು ಕಾರಣ ದೇಹವೆಂದು ಕರೆದಿದ್ದಾರೆ. ಈ ಜ್ಞಾನ ಬಹುತೇಕ ದೇಹಗಳಿಗೆ ಶಬ್ದದಿಂದ ಪರಿಚಯವಿದೆ. ಆದರೆ ಅನುಭವಕ್ಕೆ ಬರುವುದು ಕಡಿಮೆ. ಜ್ಞಾನಿ ಶಿಕ್ಷಕನೊಬ್ಬ ದೇಹಕ್ಕೆ ಲಭ್ಯವಾದರೆ ಆತ ಗುರುವಾಗದೆ ಜ್ಞಾನ ಬಯಸಿದ ದೇಹವನ್ನು ಶಿಷ್ಯನನ್ನಾಗಿಸಿಕೊಳ್ಳದೆ ; ದೇಹದಲ್ಲಿರುವ ಸಂಪತ್ತನ್ನು ದೇಹಕ್ಕೆ ತೋರಿಸಿ ಅನುಭವ ಮಾಡಿಸುತ್ತಾನೆ.

ಸ್ಥೂಲ ಸೂಕ್ಷ್ಮ ಕಾರಣ ದೇಹಗಳನ್ನು ವಿವರಿಸುತ್ತಾ, ದೇಹವನ್ನು ಮುಟ್ಟಿ ಪರಿಚಯ ಮಾಡಿಸುತ್ತಾ ಮೂರು ದೇಹಗಳಲ್ಲಿರುವ ಜ್ಞಾನ ಸಂಪತ್ತನ್ನು ದೇಹಕ್ಕೆ ವಿವರಿಸಿ ಅನುಭವ ಮಾಡಿಸುತ್ತಾನೆ. ಈ ಮೂರು ದೇಹಗಳನ್ನು ಈ ದೇಶದ ಪೂರ್ವಜರು ಅಂದರೆ ಜ್ಞಾನಿಗಳು, ಬೆಡಗಿನಿಂದ ಬ್ರಹ್ಮ, ವಿಷ್ಣು, ಮಹೇಶ್ವರನೆಂದು ಕರೆದರು. ಈ ಮೂರು ಜನ ಹೊರಗೆ ಇದ್ದದ್ದು ಸತ್ಯವಲ್ಲ. ಆದರೆ ದೇಹದಲ್ಲಿಯೇ ಸಂಗಮವಾದುದು ಸತ್ಯ. ದೇಹ ಪ್ರಯತ್ನ ಪಟ್ಟರೆ ದೇಹದ ಅನುಭವಕ್ಕೆ ಬರುವುದು ಕೂಡಾ ಸತ್ಯ. ಅಂಬಿಗರ ಚೌಡಯ್ಯ ಶರಣರು ಹೇಳುತ್ತಾರೆ : ಐದು ಆರು ಮೂರನು ಒಂದು ಮಾಡಿ ತಿಳಿಯುವ ಉತ್ಕಟ ಬಯಕೆಯಾದವನಿಗೆ ಮಾತ್ರ ತಿಳಿಯುತ್ತದೆ. ತಿಳಿದರೆ ಸಾಕು ; ಅಂದಿನಿಂದಲೇ ಆ ದೇಹ ದೇವಾಲಯ. ಹೀಗಾಗಿ ದೇಹವನ್ನು ಜ್ಞಾನೇಶ್ವರ ಎಂದು ಹೆಸರಿಟ್ಟು ಕರೆಯುತ್ತಾರೆ. ಪ್ರತಿ ದೇಹಕ್ಕೂ ಜ್ಞಾನದ ಬಯಕೆ ಹುಟ್ಟಲಿ ಎನ್ನು ಹಿರಿಯ ಆಸೆ ಹಿರಿಯರಿಗೆ.

ಕಣ್ಣು, ಕಿವಿ, ಮೂಗು, ಚರ್ಮ, ನಾಲಿಗೆ ಎಂಬ ಕರ್ಮೇಂದ್ರಿಯಗಳು ಐದು. ಭಾವ

ದಿಂದ ಹುಟ್ಟುವ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಇಂದ್ರಿಯಗಳು ಆರು. ಸ್ಥೂಲ ಸೂಕ್ಷ್ಮ ಕಾರಣ ದೇಹಗಳಲ್ಲಿ ಭರಿತವಾದ ಜ್ಞಾನೇಂದ್ರಿಯಗಳು ಮೂರು. ಐದು ಕರ್ಮೇಂದ್ರಿಯಗಳು, ಆರು ಭಾವೇಂದ್ರಿಯಗಳು, ಮೂರು ಜ್ಞಾನೇಂದ್ರಿಯಗಳು ಒಂದು ದೇಹದಲ್ಲಿಯೇ ಸಂಗಮವಾಗಿವೆ. ಆದರೂ ಒಂದಾಗಿಲ್ಲ. ಒಂದಕ್ಕೆ ಒಂದು ಸಂಬಂಧವಿಲ್ಲದಂತೆ ದೇಹವನ್ನು ಹದಗೆಡಿಸಿವೆ. ಇವುಗಳ ಕಲಸು ಮೇಲೋಗರದಿಂದಾಗಿ ದೇಹ ಜ್ಞಾನಿಯಾದರೂ ದೇಹದ ಜ್ಞಾನ ದೇಹಕ್ಕೆ ತಿಳಿಯುತ್ತಿಲ್ಲ.

ದೇಹದ ಜ್ಞಾನ ದೇಹ ತಿಳಿಯುವುದಕ್ಕಾಗಿ ಭಗವದ್ಗೀತೆ, ಬೈಬಲ್, ಕುರಾನ್‌ಗಳು ಹುಟ್ಟಿದವು. ದೇಹವೇ ಪ್ರಧಾನ. ದೇಹ ಪ್ರಧಾನವೆಂದು ದೇಹವೇ ತಿಳಿಯಲು ಕ್ರಿಷ್ಣ, ಕ್ರಿಸ್ತ, ಪೈಗಂಬರರು ಸೂತ್ರಗಳ ಮೂಲಕ ಸಾರಿದರು. ಆ ಸೂತ್ರಗಳನ್ನು ತಾಡೋಲೆ ಕಾಗದ ಕಲ್ಲುಗಳಲ್ಲಿ ಮೂಡಿಸಿದರು. ದೇಹಕ್ಕೆ ಬರೆದದ್ದೇ ಪ್ರಧಾನವಾಯಿತು ; ಬರೆದವರು ಪ್ರಧಾನರಾದರು. ಬರೆದ ಗ್ರಂಥಗಳನ್ನು, ಬರೆದವರನ್ನು ಪೂಜಿಸಿದರು. ಐದು ಆರು ಮೂರು ಒಂದು ಮಾಡಿಕೊಳ್ಳಲೇ ಇಲ್ಲ.

ಒಂದು ದೇಹದಲ್ಲಿದ್ದ ಸಂಪತ್ತು ತಿಳಿದ ಮತ್ತೊಂದು ದೇಹ ಸೂಚಿಸುವುದಕ್ಕಾಗಿ ಗುರುವೆಂದು ಕರೆದುಕೊಂಡಿತು. ಶಿಷ್ಯನೆಂದು ಕರೆಯಿತು. ಮಠ ಆಶ್ರಮ ಭವ್ಯವಾದ ಸಂಸ್ಥೆಗಳು ಹುಟ್ಟಿಕೊಂಡವು. ಮಕ್ಕಾ, ವ್ಯಾಟಿಕನ್, ಕಾಶಿ, ಕೇದಾರ, ಶ್ರೀಶೈಲ ಗುಹೆ ಬಸದಿ ಸ್ತೂಪಗಳಿಗೇನೂ ಲೆಕ್ಕವೇ ಇಲ್ಲ. ಆದರೆ ದೇಹ ಮಾತ್ರ ಒಂದಾಗಲಿಲ್ಲ. ಮಕ್ಕಾ, ಮಸೀದಿ, ಚರ್ಚ್, ವ್ಯಾಟಿಕನ್, ಕಾಶೀ, ಕೇದಾರ ಸ್ತೂಪಗಳಿಗೆ ಹೋಗುವುದು ಸುಲಭ. ಆದರೆ ದೇಹ ದೇಹದತ್ತಲೇ ಪಯಣಿಸಿ ದೇಹದಲ್ಲಿಯೇ ಒಂದಾಗುವುದು ಬಲು ಜಟಿಲ. ಒಂದಾಗಬೇಕೆಂಬ ಬಯಕೆ ಇಲ್ಲವೇ ಇಲ್ಲ.

ದೇಹದ ಧರ್ಮವೆಂದರೆ ಅರಿವಿನ ಧರ್ಮ. ಪ್ರಪಂಚದ ದೇಹಗಳೆಲ್ಲ ಒಂದೇ. ಐದು ಆರು ಮೂರು ಪ್ರಪಂಚದ ಸಕಲ ದೇಹಗಳಲ್ಲಿಯೂ ಇವೆ. ಆದರೂ ಒಂದಾಗುತ್ತಿಲ್ಲ! ಒಂದೆಂದು ಬೊಗಳುತ್ತವೆ ; ಆದರೆ ಒಂದನ್ನು ಕಂಡರೆ ಮತ್ತೊಂದು ದೇಹ ಸುಡುತ್ತದೆ. ದಕ್ಕದಿದ್ದರೆ ಕ್ರೋಧ! ದಕ್ಕಿದರೆ ಲೋಭ; ದೇಹದ ಮೇಲೆ ದೇಹಕ್ಕೆ ಬಲು ಮೋಹ ! ಅದು ಪರದೇಹದ ಪಾಲಾಗಬಾರದೆನ್ನುವ ಲೋಭ, ತನ್ನಲ್ಲಿ ಮಾತ್ರ ಉಂಟೆಂಬ ಮದ. ಇತರ ದೇಹಗಳ ಮೇಲೆ ದೇಹಕ್ಕೆ ಮತ್ಸರ. ಇದನ್ನು ತಿಳಿಯಲು ದೇಹಕ್ಕೆ ಗುರು ದೇಹವೊಂದು ಬೇಕೆ? ತಿಳಿಯಹೋದರೆ ದೇಹದಲ್ಲಿಯೇ ತಿಳಿ ಹೇಳುವ ಉಪಕರಣ ಒಂದಿದೆ. ಆ ಸುಳುಹು ಸುಳಿದರೆ ಸಾಕು ಐದು ಆರು ಮೂರು ಸೇರಿ ಆ ಒಂದರಲ್ಲಿ ಒಂದಾಗುತ್ತದೆ.

**88**

**ಕಲ್ಲದೇವರ ಪೂಜೆಯ ಮಾಡಿ,**
**ಕಲಿಯುಗದ ಕತ್ತೆಗಳಾಗಿ ಹುಟ್ಟಿದರು.**
**ಮಣ್ಣದೇವರ ಪೂಜಿಸಿ ಮಾನಹೀನರಾದರು.**
**ಮರನ ದೇವರೆಂದು ಪೂಜಿಸಿ ಮಣ್ಣ ಕೂಡಿದರು.**
**ದೇವರ ಪೂಜಿಸಿ ಸ್ವರ್ಗಕ್ಕೇರದೆ ಹೋದರು !**
**ಜಗದ್ಭರಿತವಾದ ಪರಶಿವನೊಳಗೆ**

**ಕಿಂಕರನಾದ ಶಿವಭಕ್ತನೆ ಶ್ರೇಷ್ಠನೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಜಗದ ತನುಗಳ ತುಂಬಾ ಅರಿವೆಂಬ ಪರಶಿವನು ಭರಿತವಾಗಿದ್ದಾನೆ. ಮನ, ಆ ಪರಶಿವನಿಗೆ ಕಿಂಕರನಾದರೆ ಸಾಕು ಆ ಮನವೇ ಶಿವಭಕ್ತನಾಗುತ್ತದೆ. ಕಿಂಕರನಾಗದಿದ್ದರೆ ಕಲ್ಲದೇವರ ಪೂಜೆಯ ಮಾಡಿ ಕಲಿಯುಗದ ಕತ್ತೆಯಾಗುತ್ತದೆ.

ಮಣ್ಣನ್ನು ಮಣ್ಣೆಂದು ತಿಳಿಯದೆ, ಮಣ್ಣಿನಿಂದಲೇ ಮಾಡಿದ ಗಣಪತಿ, ಪಾರ್ವತಿ, ಪರಮೇಶ್ವರ, ಭವಾನಿ ಮುಂತಾದ ದೇವರನ್ನು ಪೂಜಿಸುತ್ತಾ ಮನ ಮಾನಹೀನ ತನುವಾಗುತ್ತದೆ.

ಗಿಡ ಮರಗಳನ್ನು ದೇವರೆಂದು ಪೂಜಿಸುತ್ತಾ ಮನ ತನುವಿನೊಂದಿಗೆ ಮಣ್ಣು ಕೂಡುತ್ತದೆ. ದೇವರನ್ನು ಪೂಜಿಸಿದರೂ ದೇಹ ಸ್ವರ್ಗಕ್ಕೆ ಏರದೆ ಸತ್ತು ಹೋಗುತ್ತದೆ.

ದೇಹವೇ ದೇವಾಲಯ. ಪ್ರತಿ ದೇಹದಲ್ಲಿಯೂ ಅರಿವೆಂಬ ಗುರುದೇವನಿದ್ದಾನೆ. ಆತ ಮಹಾದೇವನೂ ಹೌದು ; ಮಹೇಶ್ವರನೂ ಹೌದು. ದೇಹವನ್ನು ಆವರಿಸಿದ ಮನದಿಂದಲೇ ದೇಹದೊಳಗೆ ಇದ್ದ ಅರಿವಿನ ದೇವರನ್ನು ಕಂಡುಕೊಳ್ಳಬೇಕು.

ಮನ ಆ ಅರಿವಿನ ದೇವರಿಗೆ ಕಿಂಕರನಾಗಬೇಕು. ಭಕ್ತನಾಗಬೇಕು. ಕಲ್ಲು ಮಣ್ಣು ಮರಕ್ಕೆ ಮಣಿದರೆ ಅವು ಯಾವ ಅರಿವಿನ ಸಂದೇಶವನ್ನು ದೇಹಕ್ಕೆ ಕೊಡುವುದಿಲ್ಲ. ಅರಿವಿನಿಂದ ದೇಹದೊಳಗಿದ್ದ ಅರಿವಿನ ಸಂಪತ್ತನ್ನು ದೇಹವೇ ಪಡೆದುಕೊಳ್ಳಬೇಕು.

ಜಗತ್ತು, ದೇಶ, ಪುರವೆಂದರೆ ಸ್ಪೇಸ್ ; ಬಯಲು ಆಗಿದೆ. ಆ ಬಯಲು ಚುಳುಕಾಗಿ ದೇಹದಲ್ಲಿ ಬಚ್ಚಿಟ್ಟುಕೊಂಡಿದೆ. ಬಯಲು ದೇಹದ ಒಳಗೂ ಇದೆ ; ಹೊರಗೂ ಇದೆ. ಒಳ ಹೊರಗೆನ್ನದಂತೆ ಸಂದಿಲ್ಲದೆ ದೇಹದಲ್ಲಿ ಭರಿತವಾಗಿದೆ. ಜಗದ್ಭರಿತ ಅರಿವಿನ ಪರಶಿವನಾಗಿದೆ. ಆ ಪರಶಿವನನ್ನು ಪರಸತಿಯ ಮೂಲಕ ಕಂಡುಕೊಳ್ಳಬೇಕಾಗಿದೆ. ಪರಸತಿಯೆಂದರೆ ಮನ ; ಹೆಣ್ಣು. ಪರ ಶಿವನೆಂದರೆ ಗಂಡು, ಶಿವ, ಮಹಾದೇವ, ಮಹೇಶ್ವರ.

ಪರಶಿವ-ಪರಸತಿಪರಮೇಶ್ವರಿ, ಇವರಿಬ್ಬರೂ ದೇಹವೆಂಬ ದೇವಾಲಯದಲ್ಲಿಯೇ ಇದ್ದಾರೆ. ಮನಕ್ಕೆ ತಿಳಿದರೆ ದೇಹವೆಂಬುದು ಸ್ವರ್ಗ. ತಿಳಿಯದಿದ್ದರೆ ದೇಹವೆಂಬುದೇ ನರಕ.

ಸ್ವರ್ಗಲೋಕ ಮರ್ತ್ಯ ಲೋಕವೆಂಬುದು ಬೇರಿಲ್ಲ ಕಾಣಿಭೋ, ಸತ್ಯ ನುಡಿವುದೇ ಸ್ವರ್ಗ ಲೋಕ ; ಮಿಥ್ಯವ ನುಡಿವುದೇ ಮರ್ತ್ಯಲೋಕ ! ಎಂತಹ ಸುಂದರವಾದ ಸತ್ಯ . ಜಗದ್ಭರಿತವಾದ, ದೇಹದಲ್ಲಿ ಭರಿತವಾದ ಸತ್ಯವನ್ನು ದೇಹವೇ ಅರಿಯದಿದ್ದಕ್ಕಾಗಿ ಸ್ವರ್ಗಕ್ಕೆ ಏರಲು ಸಾಧ್ಯವಾಗುತ್ತಿಲ್ಲ. ಸ್ವರ್ಗವನ್ನಾಗಿಸಲೂ ಸಾಧ್ಯವಾಗುತ್ತಿಲ್ಲ ಎಂಬ ಕಳವಳ ಚೌಡಯ್ಯ ಶರಣರದು.

**89**

**ಕಲಿತು ಹೇಳಿಹೆನೆಂಬ ಕರ್ಕಶ ಬೇಡ,**
**ಅರಿಕೆಯಾದೆನೆಂಬ ಅರುಹಿರಿಯತನ ಬೇಡ,**
**ಅರಿದು ಮರದೆನೆಂಬ ಸಂದೇಹ ಬೇಡ,**
**ದರ್ಪಣದಲ್ಲಿ ತೋರುವ ತನ್ನ ಒಪ್ಪಾದ ಬಿಂಬದಂತೆ,**
**ಅದ ನಿಶ್ಚಯವಾಗಿ ನಿಶ್ಚಯಿಸಿದಲ್ಲಿ ಬೇರೊಂದಿಪ್ಪುದಿಲ್ಲ,**
**ಎಂದ ನಂಬಿಗ ಚೌಡಯ್ಯ .**

ಕಲಿತು ಹೇಳಿಹೆನೆಂಬ ಕರ್ಕಶ ಬೇಡ,ಅರಿಕೆಯಾದೆನೆಂಬ ಅರುಹಿರಿಯತನ ಬೇಡ, ಅರಿದು ಮರದೆನೆಂಬ ಸಂದೇಹ ಬೇಡ : ದೇಹದ ಸಂಪತ್ತು ಪುಸ್ತಕಕ್ಕೆ ಅಕ್ಷರ ರೂಪದಲ್ಲಿ ಬಂದಿದೆ. ಪುನಃ ಅದನ್ನು ದೇಹ ಕಲಿಯು ವುದೆಂದರೇನು ? ಕಲಿತು ಅಹಂಕಾರಿಯಾಗುವುದೆಂದರೇನು? ಇದು ದೇಹದ ಸಂಪತ್ತು ದೇಹವೇ ಕಲಿತು ಕರ್ಕಶವಾದಂತಲ್ಲವೆ ? ಓದು ಬಂದರೆ ಒಮ್ಮೆ ಓದಿದರೆ ತಿಳಿಯುತ್ತದೆ. ಓದು ಬರಹ ಬಾರದಿದ್ದರೆ ಒಮ್ಮೆ ಕೇಳಿದರೆ ತಿಳಿಯುತ್ತದೆ.

ಓದಿ, ಕೇಳಿ, ನೋಡಿ, ಮುಟ್ಟಿ, ರುಚಿಸಿ ದೇಹ ತಿಳಿಯುತ್ತದೆ ಎಂದ ಮೇಲೆ ಆ ತಿಳುವಳಿಕೆ ದೇಹದಲ್ಲಿ ಇದೆಯೆಂದು ಅರ್ಥವಲ್ಲವೆ ? ಅರಿವಾಯಿತೆನ್ನುವ ಅರುಹಿನ ಹಿರಿತನವೂ ದೇಹಕ್ಕೆ

ಅಹಂಕಾರವಾಗಿ ಪರಿಣಮಿಸುತ್ತದೆ. ಓದಿ, ಕೇಳಿ, ನೋಡಿ ತಿಳಿದು, ಮುಟ್ಟಿ -ರುಚಿಸಿ-ಮೂಸಿಸಿ ತಿಳಿದು ತಿಳಿದೆನೆಂಬ ಅಹಂಕಾರ ಮನದಲ್ಲಿ ಮೂಡಿದರೆ ಅದನ್ನು ದೇಹ ಕಳೆದುಕೊಳ್ಳುವುದು ಕಷ್ಟ. ಏಕೆಂದರೆ ದೇಹ ಹೊರಗಿದ್ದುದನ್ನು ತನ್ನಲ್ಲಿ ಸಂಗ್ರಹಿಸಿಕೊಂಡುದ್ದಕ್ಕಾಗಿ ಅಹಂಕಾರ ಬಂದಿದೆ. ದೇಹದಲ್ಲಿ ಇದ್ದುದನ್ನು ಇದ್ದಂತೆ ಬಳಸಿದರೆ ಸಾಲದೆ. ಇದು ಸಹಜ ಕೆಲಸ ; ಬಳಸಿದಂತೆಲ್ಲ ಹೊರಬರುವಕೆಲಸ.

**ದರ್ಪಣದಲ್ಲಿ ತೋರುವ ತನ್ನ ಒಪ್ಪಾದ ಬಿಂಬದಂತೆ :**

ಕನ್ನಡಿಯಲ್ಲಿ ನೋಡಿದ ಮೇಲೆ ತನ್ನ ದೇಹ ತನಗೆ ಕಾಣಿಸುತ್ತದೆ. ದೇಹ ಸುಂದರವಾಗಿದೆ. ವಸ್ತ್ರ, ರೋಮ ತಿದ್ದಿಕೊಳ್ಳಬಹುದು. ದರ್ಪಣದಲ್ಲಿ ನೋಡಿ ದೇಹ ತಿದ್ದಿ ತೀಡಿಕೊಳ್ಳಲು ಬರುತ್ತದೆಯೇ ? ದರ್ಪಣದಿಂದ ದೇಹ ಸಿದ್ಧವಾಯಿತೋ ; ದೇಹದಿಂದಲೇ ದೇಹ ಸಿದ್ಧವಾಯಿತೋ ? ದೇಹದ ಗರ್ಭದಲ್ಲಿ ಜ್ಞಾನವಿದೆ. ಹೀಗಾಗಿ ಓದಿದರೆ, ನೋಡಿದರೆ, ಕೇಳಿದರೆ ತಿಳಿಯುತ್ತದೆ ; ಆನಂದವಾಗುತ್ತದೆ ಆದರೆ ಮನದಿಂದಾಗಿ ಓದಿದ ಪುಸ್ತಕದಲ್ಲಿ, ಕೇಳಿದ ಶಾಸ್ತ್ರದಲ್ಲಿ, ಹೇಳಿದ ದೇಹದಲ್ಲಿ ಅರಿವಿನ ಸಂಪತ್ತಿದೆಯೆಂದು ಭಾಸವಾಗುತ್ತದೆ.

ಮನ ಸಂಗ್ರಹ ಮಾಡಿಕೊಳ್ಳುತ್ತದೆ. ಪುನಃ ಅದನ್ನು ಸಂದರ್ಭಕ್ಕೆ ಅನುಸಾರವಾಗಿ ಬಿತ್ತರಿಸಿ ಶಾಸ್ತ್ರಿ ಪಂಡಿತನಾಗಿ ಬೀಗುತ್ತದೆ. ಹೀಗಾಗಿ ಅಂಬಿಗರ ಚೌಡಯ್ಯ ಶರಣರು ''ಕಲಿತು ಹೇಳಿಹೆನೆಂಬ ಕರ್ಕಶ ಬೇಡ '' ವೆಂದು ಫರ್ಮಾನು ಹೊರಡಿಸಿದ್ದಾರೆ.

ಅದ ನಿಶ್ಚಯವಾಗಿ ನಿಶ್ಚಯಿಸಿದಲ್ಲಿ ಬೇರೊಂದಿಪ್ಪುದಿಲ್ಲ: ಓದಿದರೆ ತಿಳಿಯುತ್ತದೆ ಅಂದ ಮೇಲೆ ಓದಿದ ಓದಿನಲ್ಲೇನಿದೆ ? ಕೇಳಿದರೆ ತಿಳಿಯುತ್ತದೆ ಅಂದ ಮೇಲೆ ಹೇಳಿದ ಮಾತಿನಲ್ಲೇನಿದೆ ?ಎಂದು ದೇಹವೇ ನಿಶ್ಚಯಿಸಬೇಕಲ್ಲ. ಓದಿದ ಶಬ್ದ ಗಳೆಲ್ಲ,ಕೇಳಿದ ಶಬ್ದಗಳೆಲ್ಲ ದೇಹದ ಉತ್ಪನ್ನಗಳೇ ಆಗಿವೆ ಅಂದ ಮೇಲೆ ದೇಹದಲ್ಲಿದ್ದುದನ್ನೇ ದೇಹ ಮತ್ತೊಂದು ದೇಹದ ಮೂಲಕ ಕೇಳಿತು, ನುಡಿದು ಹೇಳಿದ ಆ ದೇಹವನ್ನು ಗುರುವೆಂದು ಒಪ್ಪಿಕೊಂಡಿತು ; ತನ್ನಲ್ಲಿದ್ದುದನ್ನು ಮರೆತು ತಾನು ಆ ದೇಹಕ್ಕೆ ಶಿಷ್ಯನಾಯಿತು.

ದೇಹದಲ್ಲಿದ್ದ ಅರಿವಿನ ಸಂಪತ್ತನ್ನು ದೇಹವೇ ಮರೆತದ್ದಕ್ಕಾಗಿ ಕಲಿತು ಹೇಳಿಹೆನೆಂಬ ಕರ್ಕಶ ದೇಹದಲ್ಲಿ ಸಂಗ್ರಹವಾಗಿ ದೇಹ ಮತ್ತೊಂದು ದೇಹಕ್ಕೆ ಗುರುವಾಯಿತು. ಹಾಗೆಯೇ ಹೇಳಿದ್ದು ಅರಿಕೆಯಾಯಿತು ಎನ್ನುವ ಅಜ್ಞಾನ ದೇಹದಲ್ಲಿ ಸಂಗ್ರಹವಾದದ್ದಕ್ಕಾಗಿ ದೇಹವೇ ದೇಹಕ್ಕೆ ಶಿಷ್ಯನಾಯಿತು. ಇವೆರಡೂ ಅಜ್ಞಾನವೆಂದು ಗುರುದೇಹಕ್ಕೆ ಶಿಷ್ಯ ದೇಹಕ್ಕೆ ತಿಳಿಯಲೇ ಇಲ್ಲ. ತಮ್ಮ ದೇಹಕ್ಕಿಂತ ದರ್ಪಣವೇ ದೊಡ್ಡದಾಯಿತು. ದರ್ಪಣದಿಂದ ದೇಹ ಸಿದ್ಧವಾಯಿತು-ಎಂದು ದೇಹವೇ ನಿರ್ಧರಿಸಿತು.

ದರ್ಪಣದಿಂದಲೇ ದೇಹವಲ್ಲ ; ದರ್ಪಣದಲ್ಲಿ ದೇಹದ ಬಿಂಬ ಮೂಡಿದೆ. ಗುರುವಿಲ್ಲ ; ಶಿಷ್ಯನಿಲ್ಲ. ಅರಿವೆಂಬ ಗುರುದೇವನು ಎರಡೂ ದೇಹಗಳಲ್ಲಿ ಭರಿತವಾಗಿದ್ದಾನೆ. ಆತನಿಗೆ ದರ್ಪಣದ ಅವಶ್ಯಕತೆಯಿಲ್ಲ. ಸಕಲ ವೇದ ಆಗಮ ಪುರಾಣ ಉಪ ನಿಷತ್ತು ಭಗವದ್ಗೀತೆ ಬೈಬಲ್ ಕುರಾನ್‌ಗಳು ಆತನಿಂದಲೇ ಮುದ್ರಿಸಲ್ಪಟ್ಟಿವೆ. ಆತನಿಲ್ಲದ ದೇಹವೇ ಇಲ್ಲ. ಭಾಷೆ ಬೇರೆ ಬೇರೆ ಆದರೇನು ಅದನ್ನು ಬಳಸುವ ದೇಹವೊಂದೇ. ತಿಳಿಯುವ ಅರಿವು ಒಂದೇ. ಅದು ಗುರುದೇವನಾಗಿ, ದೇವರಾಗಿ, ಅಲ್ಲಾಹ, ಗಾಡ್ ಆಗಿ ಸಕಲ ದೇಹಗಳಲ್ಲಿ ಭರಿತವಾಗಿದೆ.

**90**

**ಕಲ್ಲಿನಲ್ಲಿ ಕಠಿಣ, ಖುಲ್ಲರಲ್ಲಿ ದುರ್ಗುಣ,**
**ಬಲ್ಲವರಲ್ಲಿ ಸುಗುಣ ಉಂಟೆಂದೆಲ್ಲರೂ ಬಲ್ಲರು.**
**ಇಂತೀ ಇವು ಎಲ್ಲರ ಗುಣ.**
**ಅಲ್ಲಿಗಲ್ಲಿಗೆ ಸರಿಯೆಂದು ಗೆಲ್ಲ ಸೋಲಕ್ಕೆ ಹೋರದೆ**
**ನಿಜವೆಲ್ಲಿತ್ತು ಅಲ್ಲಿಯೇ ಸುಖವೆಂದನಂಬಿಗ ಚೌಡಯ್ಯ .**

ಕಲ್ಲಿನಲ್ಲಿ ಕಠಿಣತೆಯಿದೆ. ಖುಲ್ಲರಲ್ಲಿ ದುರ್ಗುಣವಿದೆ. ಬಲ್ಲವರಲ್ಲಿ ಸುಗುಣ ಉಂಟೆಂಬುದನು ಎಲ್ಲರೂ ಬಲ್ಲರು. ಸಾತ್ವಿಕ, ರಾಜಸ, ತಾಮಸವೆಂಬುವು ಗುಣಗಳು. ಇದನ್ನು ಉತ್ತಮ ಮಧ್ಯಮ ಅಧಮವೆಂಬುದನು ಕೂಡಾ ಬಲ್ಲರು. ಇವು ಗುಣಗಳು ಮಾತ್ರ . ಗುಣಗಳಲ್ಲಿ ಬದಲಾವಣೆಯಿದೆ. ಸಾತ್ವಿಕ ರಾಜಸನಾಗಬಲ್ಲ. ರಾಜಸ ತಾಮಸಿಗನಾಗಬಲ್ಲ. ಗುಣಗಳು ಗುಣಗಳಿಂದಲೇ ಕೂಡಿವೆ. ಈ ಮೂರರಲ್ಲಿ ಗುಣಗಳು ಸುತ್ತುತ್ತಲೇ ಇರುತ್ತವೆ. ಅಲ್ಲಿಗಲ್ಲಿಗೆ ಸರಿ. ಒಮ್ಮೆ ಗೆಲುವು ; ಮತ್ತೊಮ್ಮೆ ಸೋಲು. ಗುಣಗಳೆಂಬುದೇ ನಿಜವಲ್ಲ. ಊಸರವಳ್ಳಿಯಿದ್ದಂತೆ. ಬದಲಾವಣೆಯೇ ಇದರ ಗುರಿ.

ನಿಜ ಹಾಗಲ್ಲ. ನಿಜ ನಿಜವೇ ಆಗಿದೆ. ನಿಜಕ್ಕೆ ಯಾವ ಗುಣವೂ ಇಲ್ಲ. ಅದು ನಿಜಗುಣ; ನಿರ್ಗುಣ. ಗುಣ ನಿರ್ಗುಣಿಯಾಗುವುದು ಸುಲಭದ ಮಾತಲ್ಲ. ತಾಮಸಿಗ ರಾಜಸಿಗನಾಗುವುದು ಸುಲಭ. ರಾಜಸಿಗ ಸಾತ್ವಿಕನಾಗುವುದು ಸುಲಭ. ಸಾತ್ವಿಕನು ರಾಜಸಿಗ-ತಾಮಸಿಗನಾಗುವುದೂ ಸುಲಭ. ಆದರೆ ಈ ಮೂರೂ ಗುಣಗಳು ಗುಣಗಳೇ ಆಗಿವೆ.

ಜ್ಞಾನಿಯ ದೃಷ್ಟಿಯಲ್ಲಿ ಸಾತ್ವಿಕನು ಒಳ್ಳೆಯವನಲ್ಲ.ನಏಕೆಂದರೆ ಅವನು ಸಾತ್ವಿಕ ಗುಣದಿಂದ ನಟನೆ ಮಾಡುತ್ತಾನೆ. ಅದು ನಿಜವಲ್ಲ ; ನಿರ್ಗುಣಿಯಲ್ಲ. ರಾಜಸ ಗುಣದವನೂ ಒಳ್ಳೆಯವನಲ್ಲ ; ಅವನು ಕೂಡಾ ಗುಣದ ಮುಖವಾಡ ಧರಿಸಿದ್ದಾನೆ. ಗುಣ ಎಂದರೆ ಬದಲಾವಣೆ ಉಳ್ಳದ್ದು. ನಿರ್ಗುಣವೆಂದರೆ ಸಹಜ ! ಬದಲಾವಣೆ ಇಲ್ಲದ್ದು !

ಸಾತ್ವಿಕ ರಾಜಸ ತಾಮಸ ಗುಣಗಳು ನಿರ್ಗುಣವಿದ್ದಲ್ಲಿಗೆ ಪಯಣಿಸಿ ಆ ನಿರ್ಗುಣದಲ್ಲಿ ಲೀನವಾದಾಗ ಆಗ ಗುಣ ತನ್ನ ಬದಲಾವಣೆಯ ಗುಣವನ್ನು ಕಳೆದುಕೊಂಡು ನಿರ್ಗುಣಿಯಾಗುತ್ತದೆ. ನಿಜಗುಣಿಯಾಗುತ್ತದೆ. ಸಹಜ ಸುಖವನ್ನು ಹೊಂದುತ್ತದೆ. ಸುಖ ದುಃಖಗಳನ್ನು ಶಾಶ್ವತವಾಗಿ ಕಳೆದುಕೊಳ್ಳುತ್ತದೆ.

ಉತ್ತಮನು ಉತ್ತಮನೊಂದಿಗೆ ಗೆಳೆತನ ಮಾಡುತ್ತಾನೆ. ಇವರಿಬ್ಬರು ಸಾತ್ವಿಕ ಗುಣದವರು.

ಸುಗುಣವುಳ್ಳವರು.ಗೆಳೆತನದಲ್ಲಿ ಕುಂದುಂಟಾದರೆ ತನ್ನ ಸಾತ್ವಿಕ ಗುಣ ಕಳೆದುಕೊಂಡು ದುರ್ಗುಣವಾಗಿ ಮಾರ್ಪಡುತ್ತದೆ. ಸಾತ್ವಿಕರಿಬ್ಬರೂ ದುರ್ಗುಣಿಗಳಾಗಿ ಗೋಚರಿಸತೊಡಗುತ್ತಾರೆ. ಹೀಗಾಗಿ ಗುಣಕ್ಕೆ ಬದಲಾವಣೆ ಉಂಟು. ನಿರ್ಗುಣಕ್ಕೆ ಬದಲಾವಣೆ ಇಲ್ಲ. ಅದು ಅಂಗದಲ್ಲಿ ಸಂಗಮವಾದ ಸಹಜ ಸುಖ. ಅದನ್ನು ಗುಣವೇ ಹುಡುಕಬೇಕು. ನಿರ್ಗುಣದಲ್ಲಿ ಲೀನವಾಗಬೇಕು.

**91**

**ಕಷ್ಟ ಜೀವನ ಮನುಜರಿರಾ, ನೀವು ಹುಟ್ಟಿದ ಮೊದಲು,**
**ಎಷ್ಟುಮಂದಿ ನಿಮ್ಮ ಕಣ್ಣ ಮುಂದೆ, ನಷ್ಟವಾಗಿ ಹೋದುದ ಕಂಡು ಕಂಡೂ**
**ಹೆಂಡಿರು ತನ್ನವರೆಂಬೆನೆ? ಮಿಂಡಿಯಾಗಿ ಹಲವರ ಬಯಸುವವಳ**
**ಮಕ್ಕಳ ತನ್ನವರೆಂಬೆನೆ? ಕೂಡುವಾಗ ದುಃಖ,**
**ಕೂಡಿದ ಒಡವೆಯ ಮಡಗುವಾಗ ದುಃಖ,**
**ಮಡಗಿದ ಒಡವೆಯ ತೆಗೆವಾಗ ದುಃಖ,**
**ಪ್ರಾಣವ ಬಿಡುವಾಗ ದುಃಖ,**
**ಹೊಲೆ ಸಂಸಾರವ ನೆಚ್ಚಿ ಕಾಲನ ಬಲೆಗೆ ಈಡಾಗದಿರೊ,**
**ಪತಿ ಭಕ್ತಿ , ಮುಕ್ತಿಯೆಂಬುದ ಗಳಿಸಿಕೊಳ್ಳಿರೊ,**
**ಸಟೆಯಂ ಬಿಡಿ, ದಿಟವಂ ಹಿಡಿ,**
**ಘಟವುಳ್ಳ ಕಾಲದಲ್ಲಿ ಶಿವಭಕ್ತಿಯ ನಟಿಸಿ ನಡೆ,**
**ಎಂದಾತ ನಮ್ಮ ಅಂಬಿಗರ ಚೌಡಯ್ಯ.**

ಸಂಪತ್ತು ಇದ್ದರೂ ಕಷ್ಟ, ಸಂಪತ್ತು ಇಲ್ಲದಿದ್ದರೂ ಕಷ್ಟ. ತನು ದುಃಖದಲ್ಲಿದ್ದು; ದುಃಖದಲ್ಲಿರುವ ಎಷ್ಟೋ ತನುಗಳನ್ನು ತನುವೇ ಕಂಡಿದೆ. ಸುಖಕ್ಕಾಗಿ ದುಃಖವನ್ನು ಹೇರಿಕೊಳ್ಳುವುದು; ಸುಖ ಅನುಭವಿಸದೆ ಮತ್ತೊಂದು ಸುಖಕ್ಕಾಗಿ ದುಃಖ ಪಡುವುದು ಕಾಯದ ಕಾಯವನ್ನು ಆವರಿಸಿದ ಮನದ ಕಾಯಕ. ಈ ಕಾಯಕದಲ್ಲಿ ಕಾಯ ಎಷ್ಟೋ ಕಾಲಗಳಿಂದ ದುಃಖಕ್ಕೆ ಈಡಾಗಿದೆ. ದುಃಖದಿಂದಲೇ ಇಹಲೋಕ ತ್ಯಜಿಸಿವೆ.

ಹೆಂಡಿರು ತನ್ನವರೆಂಬೆನೆ? ಮಿಂಡಿಯಾಗಿ ಹಲವರ ಬಯಸುವಳು.

ಕಾಯ ತನ್ನದಲ್ಲ. ಕಾಯವನ್ನು ಆವರಿಸಿದ ಮನವೂ ತನ್ನದಲ್ಲ. ಮನಕ್ಕೆ ಕಾಯದ ಚಿಂತೆ. ಕಾಯದೊಂದಿಗೆ ಮಿಂಡಿಯಾಗಿ ಹಲವರ ಭೋಗಿಸುವ ಚಿಂತೆ. ಕಾಯಕ್ಕೆ ಹುಟ್ಟಿದ ಮಕ್ಕಳೂ ತನ್ನವರಲ್ಲ. ಅವು ಮನದ ಸಂತಾನ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಮನದ ಹಾದರದಿಂದಾಗಿ ಕಾಯದಲ್ಲಿಯೇ ಹುಟ್ಟಿವೆ. ಅವು ಕಾಯದ ಮಾತು ಕೇಳುವುದೇ ಇಲ್ಲ. ಅಂದಮೇಲೆ ಅವುಗಳನ್ನು ಮಕ್ಕಳೆನ್ನಲು ಸಾಧ್ಯವೆ?

ಕೂಡುವಾಗ ದುಃಖ ಕೂಡಿದ ಒಡವೆಗಳ ಮಡಗುವಾಗ ದುಃಖ. ಮಡಗಿದ ಒಡವೆಯ ತೆಗೆಯುವಾಗಲೂ ದುಃಖ. ಕಾಯದ ಸಂಸಾರವಿದು ಹೊಲೆ ಸಂಸಾರ. ಕಾಲನ ಬಲೆಗೆ ಈಡಾದ ಕೇಡಿನ ಸಂಸಾರ. ಮನವೆಂಬ ಮಡದಿಗೆ ಅರಿವೆಂಬ ಪತಿಯ ಮೇಲೆ ಭಕ್ತಿ ಇಲ್ಲದಿರುವುದೇ ಇದಕ್ಕೆ ಕಾರಣ.

ಕಾಯ ಇರುವವರಿಗೆ ಕಾಯದ ಮಾಯೆಯಿಂದಲೇ ಹುಟ್ಟಿದ ಸಟೆಯನ್ನು

ಬಿಡಲೇಬೇಕು. ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಪತಿಯ ಮೇಲೆ ಭಕ್ತಿಯ ಮಾಡಿ ಆತನ ಪಾದ ಹಿಡಿಯಲೇಬೇಕು. ಘಟವಿರುವವರೆಗೆ ಕಾಯದ ಈ ಕಾಯಕ ನಡೆಯಲೇಬೇಕು. ಆಗ ಕಾಯವೇ ಕೈಲಾಸವಾಗುವುದು.

**92**

**ಕಷ್ಟನ ಮನೆಯಲ್ಲಿ ಸೃಷ್ಟಿಗೀಶ್ವರನುಂಬಾಗ**
**ಎತ್ತ ಹೋದವು ನಿಮ್ಮ ಶಾಸ್ತ್ರಂಗಳು ?**
**ಕೆತ್ತ ಮುಚ್ಚುಳು ಬೇಡಗಚ್ಚರಿದೆರೆವಾಗ**
**ಇಕ್ಕಿದ ಜನ್ನಿವಾರ ಭಿನ್ನವಾದವು.**
**ಮುಕ್ಕುಳಿಸಿದುದಕವ ತಂದೆರೆದಡೆ**
**ಎತ್ತಲಿದ್ದವು ನಿಮ್ಮ ವೇದಂಗಳು ?**
**ನಿಮ್ಮ ವೇದದ ದುಃಖ ಬೇಡೆಂದ ನಂಬಿಗ ಚೌಡಯ್ಯ.**

ಕಷ್ಟದ ಮನೆಯೆಂಬ ದೇಹದಲ್ಲಿ ಸೃಷ್ಟಿಗೆ ಒಡೆಯನಾದ ಈಶ್ವರನು ದೇಹವನ್ನೇ ದೇವಾಲಯವನ್ನಾಗಿ ಮಾಡಿಕೊಂಡು ಆ ದೇಹದಲ್ಲಿಯೇ ಸಂಗಮವಾಗಿದ್ದಾನೆ. ತನಗೆ ಬೇಕಾದ ದೇಹವನ್ನು , ತನ್ನತ್ತ ಬಯಕೆಯಾದ ದೇಹವನ್ನು ತನ್ನಂತೆ ಮಾಡಿಕೊಂಡು ಆ ದೇಹಕ್ಕೆ ಜ್ಞಾನದ ಊಟ ಮಾಡಿಸುತ್ತಾನೆ.

ವೇದ ಆಗಮ ಶಾಸ್ತ್ರ ಪುರಾಣ ಉಪನಿಷತ್ತುಗಳಲ್ಲಿ ಜ್ಞಾನ ಇದೆಯೆಂದು ಹಗಲಿರುಳೂ ಅವುಗಳನ್ನೇ ಉಂಡು ಅವುಗಳನ್ನೇ ತೇಗುವ ಜನಿವಾರದ ಕುಲಕ್ಕೆ ಅಂಬಿಗರ ಚೌಡಯ್ಯ ಶರಣರು ಪ್ರಶ್ನೆ ಮಾಡಿದ್ದಾರೆ.

ವೇದ ಆಗಮ ಶಾಸ್ತ್ರ ಪುರಾಣ ಉಪ ನಿಷತ್ತುಗಳನ್ನು ಅರಿಯದ ಬೇಡರ ಕಣ್ಣಪ್ಪನಿಗೆ ಈಶ್ವರ ಒಲಿದು ಅವನೊಂದಿಗೆ ಉಂಬುವಾಗ ಎತ್ತ ಹೋದವು ನಿಮ್ಮ ಶಾಸ್ತ್ರಂಗಳು ಎಂದು ಶರಣರು ಶಾಸ್ತ್ರಿಗಳನ್ನು ಪ್ರಶ್ನಿಸಿದ್ದಾರೆ.

ಅರಿವಿನಲ್ಲಿ ಉದಯಿಸಿ ಮರಹು ನಷ್ಟವಾಗಿದ್ದ ಶರಣನ ಪರಿಯನು ಅರಸಲುಂಟೆ ? ಗತಿಯನ್ನು ಅರಸಲುಂಟೆ ? ಶಿಶು ಕಂಡ ಕನಸಿನಂತಿಪ್ಪರು ಗುಹೇಶ್ವರಾ ನಿಮ್ಮ ಶರಣರು.

ಬೇಡರ ಕಣ್ಣಪ್ಪ ಬೇಡದ ಅಜ್ಞಾನದ ಕಣ್ಣನ್ನು ಅರಿವೆಂಬ ಶಿವನಿಗೆ ಕೊಟ್ಟ. ಶಿವ ತನ್ನ ಜ್ಞಾನದ ಕಣ್ಣನ್ನು ಕಣ್ಣಪ್ಪನಿಗೆ ಕೊಟ್ಟ. ಕಣ್ಣಪ್ಪನ ಅಜ್ಞಾನ ಶಿವ ಉಂಡ. ಶಿವನ ಜ್ಞಾನವನ್ನು ಕಣ್ಣಪ್ಪ ಉಂಡ. ಹಾಗೆ ಉಂಡ ಎಂಜಲಿನಿಂದ ಬಂದ ಶಾಸ್ತ್ರಗಳು ಅಂಗವನ್ನು ಆವರಿಸಿದ ಅಜ್ಞಾನವನ್ನು ಉಣ್ಣಲು ಸಾಧ್ಯವೇ ? ಅವೇನಿದ್ದರೂ ಜಡ. ಜ್ಞಾನವೊಂದೇ ಚೇತನ. ಆ ಜ್ಞಾನವನ್ನೇ ಜ್ಞಾನೇಶ್ವರನೆಂದು ಕರೆದಿದ್ದಾರೆ ಪುರಾತರು.

ಅಂಗದಲ್ಲಿ ಸಂಗಮವಾದ ಜ್ಞಾನವನ್ನು ಅಂಗವನ್ನು ಆವರಿಸಿದ ಮನವೆಂಬ ಶಿಷ್ಯನೇ ಉಣ್ಣಬೇಕು. ಹೀಗೆ ಉಣ್ಣುವಾಗ ತಾನೇ ಕಲಿತುಕೊಂಡ ಶಾಸ್ತ್ರ ಪುರಾಣಗಳು, ಹಾಕಿಕೊಂಡ ಜನಿವಾರ ಲಿಂಗ ಶಿಲುಬೆಗಳು ಪುಡಿ ಪುಡಿಯಾಗುತ್ತವೆ.

ವೇದ ಆಗಮ ಪುರಾಣ ಶಾಸ್ತ್ರಗಳಿಂದ ಸಿದ್ಧವಾದ ದೇವರುಗಳು ದೇವರಲ್ಲ. ಅವು ತನ್ನ

ಭ್ರಮೆಯಿಂದಲೇ ತಾನೇ ನಿರ್ಮಿಸಿ ತನ್ನಿಂದಲೇ ಪೂಜೆಗೆ ಒಳಗಾದವು. ತಾನು ಕೆರೆಯಲ್ಲಿ ಮಿಂದು ಮುಕ್ಕುಳಿಸಿ ಉಗುಳಿದ ಉದಕದಿಂದಲೇ ತೊಯ್ದವು. ಇದೇನಾಶ್ಚರ್ಯ ಅರಿದರೆ ಅರಿವೇ ಶ್ರೇಷ್ಟ. ಮರೆವಿನ ಅಜ್ಞಾನದಿಂದ ಮಾಡಿದ ಪೂಜೆ ಕನಿಷ್ಟ. ತನಗೆ ತಾನೇ ತನ್ನಿಂದಲೇ ತನ್ನಲ್ಲಿಯೇ ಸಿದ್ಧವಾದ ಜ್ಞಾನದ ಊಟ. ಹಾಗೆ ಈಶ್ವರ ತಾನು ಜ್ಞಾನದ ಊಟ ಉಂಬುವಾಗ ಎತ್ತ ಹೋದವು ಶಾಸ್ತ್ರಂಗಳು.

ಜ್ಞಾನಕ್ಕೆ ದಾರಿಯಾಗಬೇಕಾದ ಶಾಸ್ತ್ರಂಗಳು ಪೂಜೆಗೆ ಒಳಗಾದವು. ಶಾಸ್ತ್ರಂಗಳೇ ಶ್ರೇಷ್ಟವಾದವು. ಶಾಸ್ತ್ರಗಳನ್ನು ಸೃಷ್ಟಿ ಮಾಡಿದ ದೇಹವೇ ಕಡೆಯಾಯಿತು. ದಾಸ ಜ್ಞಾನಕ್ಕೆ ದಾಸು ಹೋದ. ಶರಣ ಜ್ಞಾನಕ್ಕೆ ಶರಣು ಹೋದ. ಇವರಿಬ್ಬರಿಗೂ ಶಾಸ್ತ್ರ ಬೇಕಾಗಲಿಲ್ಲ. ಜ್ಞಾನದ ಊಟ ಉಂಡು ಜ್ಞಾನವನ್ನೇ ತೇಗಿದರು. ಜ್ಞಾನವನ್ನೇ ಬೆಳೆದರು. ಅಂಗ ಜ್ಞಾನದ ಬೆಳೆ ಬೆಳೆಯುವ ಭೂಮಿ. ಅದಕ್ಕೆ ಲಿಂಗ ಜನಿವಾರ ಶಿಲುಬೆಗಳ ಬೇಲಿಯ ಅವಶ್ಯಕತೆಯಿಲ್ಲ. ಭಗವದ್ಗೀತೆ ಬೈಬಲ್ ಕುರಾನ್‌ಗಳ ಅವಶ್ಯಕತೆಯೂ ಇಲ್ಲ. ಅಂಗದಿಂದಲೇ ಸೃಷ್ಟಿಯಾದ ಶಾಸ್ತ್ರಂಗಳು ಅಂಗವನ್ನು ಬೆಳಗಿಸಬಲ್ಲುವೆ ?

ನಿತ್ಯ ನಿರಂಜನ ತಾನೆಂದು ಅರಿಯದೆ 'ತತ್ವಮಸಿ ' ಎಂದು ಹಾಡಿ ಸತ್ತಿತ್ತಲ್ಲ ಜಗವೆಲ್ಲ ನಾಯಿ ಸಾವ. ತಮ್ಮ ತಾವು ಅರಿಯದೆ ಸತ್ತವರು ಬರೆದ ಪತ್ರ ಓದಿದಡೆ ಎತ್ತಣ ಮುಕ್ತಿ ಗುಹೇಶ್ವರಾ.

ವ್ಯಾಸ, ವೇದ ಆಗವು ಪುರಾಣ ಶಾಸ್ತ್ರಗಳನ್ನು ಬರೆದು ಸತ್ತು ಹೋಗಿದ್ದಾನೆ. ಉಪನಿಷತ್ತುಗಳನ್ನು ಬರೆದು ಸತ್ತು ಹೋಗಿದ್ದಾರೆ. ಬರೆದು ಸತ್ತು ಹೋದ ಸತ್ತವರ ಪತ್ರಗಳು ಅವು. ಅವುಗಳನ್ನು ಓದಿದಡೆ ಎತ್ತಣ ಮುಕ್ತಿ ನಿನಗೆ ! ನೀನು ಸಾಕ್ಷಾತ್ ನಿತ್ಯ ನಿರಂಜನನೇ ಇರುವಿ . ನಿನ್ನಿಂದಲೇ ನಿನ್ನನ್ನು ನೀನೆ ತಿಳಿ. ನಿನ್ನಲ್ಲಿಯೇ ತತ್ವವು ಇದೆ. ಆ ತತ್ವವನ್ನು ನೀನೇ ಉಣ್ಣು !

**93**

**ಕಳವು ಪಾರದ್ವಾರಕ್ಕೆ ಪರಾಕುಂಟೆ ? ಅದು ತನ್ನ ಒಡಲಳಿವ ಇರವು.**
**ವರ್ಮ, ಧರ್ಮ, ವಚನಾನುಭವಂಗಳ ಮಾಡುವಲ್ಲಿ**
**ಪರಚಿಂತೆ ಪರಾಕು ಪರಿಭ್ರಮಣ-**
**ಈ ಗುಣ ತನ್ನರಿವಿಂಗೆ ಕೇಡೆಂದನಂಬಿಗ ಚೌಡಯ್ಯ .**

ಅಂಗದ ಕಣಕಣದಲ್ಲಿ ತತ್ವ ಸಂಗಮವಾಗಿದೆ. ತತ್ವವನ್ನೇ ಹೊತ್ತ ಅಂಗಕ್ಕೆ ಭಗವದ್ಗೀತೆ ಬೈಬಲ್ ಕುರಾನ್‌ಗಳ ಅವಶ್ಯಕತೆ ಇದೆಯೆ ? ಅದನ್ನು ಓದಿ ತಿಳಿದು ಬಹುಪರಾಕ್ ಅನ್ನಿಸಿ ಕೊಳ್ಳುವ ಹಂಬಲವಾದರೂ ಏಕೆ ?

ಅಂಗದಿಂದಲೇ ಹೊರಬಂದ ಪುಸ್ತಕಗಳನ್ನು ಕಳುವು ಮಾಡಿ ಅದರ ತತ್ವಗಳನ್ನು ಸಂಗ್ರಹ ಮಾಡಿಕೊಳ್ಳುವುದು ಸಮಂಜಸವೆ ? ತತ್ವ ತನ್ನ ಒಡಲೊಳಗಿರುವ ಇರುವು. ಓದಿ ತಿಳಿದು ಪುಸ್ತಕದ ಹೆಸರೇಳಿ ಶ್ಲೋಕದ ಸಂಖ್ಯೆ ತಿಳಿಸುತ್ತಾ ಅಲ್ಲಿಯೇ ವರ್ಮ, ಧರ್ಮ, ವಚನದ ಅನು ಭಾವಂಗಳ ಮಾಡುವಲ್ಲಿ ಪರಚಿಂತೆಯ ಮಾಡಿದಂತಲ್ಲವೆ ? ಇದು ಅಂಗದ ಪರಿಭ್ರಮಣ ವಲ್ಲವೆ ? ಈ ಗುಣವನ್ನು ಸುಗುಣವೆನ್ನಬಹುದೆ? ಇದು ತನ್ನಲ್ಲಿಯೇ ತನ್ಮಯವಾದ ಅರಿವಿಂಗೆ ಕೇಡು ಬಗೆದಂತಲ್ಲವೆ ?

ಕಳುವು ಪಾರದ್ವಾರಕ್ಕೆ ಪರಾಕುಂಟೆ ? ಎಂದು ಚೌಡಯ್ಯ ಶರಣರು ಕೇಳಿದರೆ ; ಬಸವಣ್ಣ

ನವರು ಕಳಬೇಡ ಎಂದರು. ಜ್ಞಾನವೆಂಬುದು ಅಂಗದಲ್ಲಿಯೇ ಸಂಗಮವಾಗಿರುವಾಗ, ಅಂತಹ ಜ್ಞಾನವನ್ನು ಭಗವದ್ಗೀತೆ ಬೈಬಲ್ ಕುರಾನ್ ದಾಸರ ತತ್ವಗಳು ಶರಣರ ವಚನಗಳನ್ನು ಕದ್ದು ಅಂಗದಲ್ಲಿ ಇಟ್ಟುಕೊಂಡು ಅವುಗಳನ್ನು ವರ್ಣನೆ ಮಾಡುವ ಅವಶ್ಯಕತೆ ನಿನಗೆ ಇದೆ ಯೆ ? ಅವರು ತಿಳಿದರೆ ಅದು ಅವರ ಸಂಪತ್ತಾಯಿತು. ಅದರಿಂದ ನಿನಗೆ ಬಂದ ಲಾಭವೇನು ? ನೀನು ಅವುಗಳನ್ನು ಕಳುವು ಮಾಡಿ ನಿನ್ನಲ್ಲಿಯೇ ಇದ್ದ ಜ್ಞಾನವನ್ನು ಕಳವು ಮಾಡಿ ನಿನ್ನಲ್ಲಿ ಸಂಗ್ರಹಿಸಿಕೊಳ್ಳಬೇಡ. ನಿನ್ನಲ್ಲಿಯೇ ಇದ್ದ ಜ್ಞಾನವನ್ನು ಬಳಸದೇ ಕೊಲ್ಲಬೇಡ ! ನಿನ್ನ ಜ್ಞಾನ ನಿನ್ನ ಅಂತರಂಗವನ್ನು ನಿನ್ನ ಬಹಿರಂಗವನ್ನು ಶುದ್ಧಿ ಮಾಡುತ್ತದೆ.

ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ, ಇವು ಜಗಕ್ಕೆ ಇಕ್ಕಿದ ವಿಧಿ. ಇವುಗಳನ್ನು ಕಳುವು ಮಾಡುವುದು ಕಳುವಲ್ಲ. ಏಕೆಂದರೆ ಇವು ಯಾರ ವಸ್ತುಗಳೂ ಅಲ್ಲ. ಭ್ರಮೆಯಿಂದಾಗಿ ನನ್ನ ವಸ್ತುವೆಂದು ನನ್ನಲ್ಲಿ ಇಟ್ಟುಕೊಂಡಿದ್ದೇನೆ. ಇದು ವಿಧಿಯ ಆಟ. ಈ ಆಟ ಜಗದ ಜನರನ್ನೆಲ್ಲ ಕಾಡುತ್ತಲಿದೆ. ಹೀಗಾಗಿ ಭೂಮಿ, ಹೇಮ, ಕಾಮಿನಿಯನ್ನು ನಂಬಿ ಜಗತ್ತೇ ಕೆಟ್ಟಿದೆ.

ನಿನ್ನದೆಂಬುದು ಜ್ಞಾನರತ್ನ. ಅದನ್ನು ಕೆಡಗೊಡದೆ ಅಲಂಕರಿಸಿದೆಯಾದಡೆ ನಿನ್ನಂತಹ ಸಿರಿವಂತರು ಯಾರೂ ಇಲ್ಲ ಎಲೆ ಮನವೆ ಎಂದು ಅಲ್ಲಮ ಪ್ರಭುಗಳು ಹೇಳುತ್ತಾರೆ.

ಮನಸ್ಸು ಭೂಮಿ, ಹೇಮ ವಿಷಯಾಸಕ್ತಿಯೆಡೆಗೆ ವಾಲುತ್ತದೆ. ಅದೆಂದರೆ ಮನಕ್ಕೆ ಬಲು ಇಷ್ಟ. ಅಂಗದಲ್ಲಿಯೇ ಸಂಗಮವಾದ ಜ್ಞಾನವೆಂದರೆ ಮನಕ್ಕೆ ಬಲು ಕಷ್ಟ ಅಂಗದಲ್ಲಿರುವ ಜ್ಞಾನದಿಂದ ಭೂಮಿ ಹೇಮ ವಿಷಯಂಗಳನ್ನು ನೋಡಿದರೆ ಅವು ತೃಣವಾಗಿ ಕಾಣುತ್ತದೆ. ತನ್ನ ಜ್ಞಾನ ತನಗೆ ಘನವಾಗಿ ಕಾಣುತ್ತದೆ. ಹೀಗಾಗಿ ಮನಕ್ಕೆ ತಿಳಿ ಹೇಳಿದ್ದಾದರೆ ಪ್ರಭುಗಳು : ಎಲೆ ಮನವೆ ನಿನ್ನದೆಂಬುದು ಜ್ಞಾನರತ್ನ ! ಅದನ್ನು ಕೆಡಗೊಡದೆ ಅಲಂಕರಿಸಿಯಾದಡೆ ನಿನ್ನಂತಹ ಸಿರಿವಂತರು ಯಾರೂ ಇಲ್ಲ ಎಂದಿದ್ದಾರೆ.

ಕಳುವು ಪಾರದ್ವಾರಕ್ಕೆ ಫರಾಕುಂಟೆ ? ಅದು ತನ್ನ ಒಡಲೊಳಿರುವ ಅರಿವಿನ ಇರುವು ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ, ಮುನಿಯ ಬೇಡ ಅನ್ಯರಿಗೆ ಅಸಹ್ಯ ಪಡಬೇಡ ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ಕೂಡಲಸಂಗಮ ದೇವರನು ಒಲಿಸುವ ಪರಿ.ತನ್ನ ಜ್ಞಾನ ತನಗೆ ಲಭ್ಯವಾದಾಗ ಮೇಲಿನ ಕೆಲಸಕ್ಕೆ ಮನ ಕೈಹಾಕುವುದಿಲ್ಲ. ವಸ್ತುವನ್ನು ವಸ್ತುವಿನಂತೆ ನೋಡಿ ಉದಾಸೀನನಾಗುವ ಜ್ಞಾನ ಮನಕ್ಕೆ ಒಲಿಯುತ್ತದೆ.

**94**

**ಕಳ್ಳ, ಹಾದರಿಗ, ಸೂಳೆಗಾರ, ತಳವಾರನಲ್ಲಿ ಮಿಥ್ಯವಿಲ್ಲದಿರಬೇಕು.**
**ಸತ್ಯಸದಾಚಾರಿಗಳಲ್ಲಿ ಸದ್ಭಕ್ತ ಮಿಥ್ಯತಥ್ಯವಿಲ್ಲದಿರಬೇಕು**
**ಈ ಗುಣ ನಿತ್ಯ ನಿಜೈಕ್ಯನ ಯುಕ್ತಿ ಯೆಂದನಂಬಿಗಚೌಡಯ್ಯ.**

''ಕಳ್ಳ, ಬಂದಿಕಾರ, ಹಾವಾಡಿಗ ಹಾದರಿಗ, ಬಂಟನೋಲೆಯಕಾರನೆಂದೆ ನಾದಡೆ ; ನೀ ಮುಂತಾಗಿ ಬಂದ ಭಕ್ತರ ನೀ ಎನ್ನದಿದ್ದಡೆ, ಅದೆ ದ್ರೋಹ ! ನಡೆ ನುಡಿ ಹುಸಿಯುಂಟಾದಡೆ, ಕೂಡಲಸಂಗನ ತೋರಿದ ಚೆನ್ನಬಸವಣ್ಣ ನಾಣೆ !'' ಅಂಬಿಗರ ಚೌಡಯ್ಯ ಶರಣರದು,

ಬಸವಣ್ಣನವರದು ಒಂದೇ ನಿಲುವು; ಒಂದೇ ತತ್ವ, ಸತ್ಯ ಒಂದೇ ಇರುವುದರಿಂದ ಯಾವ ಜ್ಞಾನಿ ಹೇಳಿದರೂ ಅದು ಸತ್ಯವೇ ಆಗಿದೆ. ಸಾಹಿತಿ ಸಂಶೋಧಕನ ಸೃಷ್ಟಿಯಲ್ಲಿ ಅದು ಅನುಕರಣೆ . ಅವರಿಗೆ ಹೊಳೆಯುವುದೇ ಅಷ್ಟು.

ಕಳ್ಳ, ಹಾದರಿಗ, ಸೂಳೆಗಾರ, ತಳವಾರನು ಸುಳ್ಳು ಹೇಳುವುದಿಲ್ಲ. ಅವನು ತನ್ನನ್ನು ತಾನು ಹಾಗೆಂದು ವೃತ್ತಿಯ ಮೂಲಕ ಪರಿಚಯಿಸಿಕೊಳ್ಳುತ್ತಾನೆ. ಆದರೆ ಅವರನ್ನು ನೋಡುವವನು ಹಾಗಿದ್ದೂ ಅವರಂತೆ ಪರಿಚಯಿಸಿಕೊಳ್ಳುವುದಿಲ್ಲ. ಕಳ್ಳನನ್ನು ಕಳ್ಳ ಎನ್ನುತ್ತಾನೆ ; ತಾನು ಮುಖವಾಡದ ಕಳ್ಳನೇ ಆಗಿರುತ್ತಾನೆ. ಹಾದರಿಗನನ್ನು ಹಾದರಿಗ ಎನ್ನುತ್ತಾನೆ. ಮುಖವಾಡ ಧರಿಸಿ ಹಾದರ ಮಾಡುತ್ತಾನೆ. ಸೂಳೆಗಾರನ ವೇಷ ಮಾತ್ರ ಇಲ್ಲ; ಹಾಗೆಂದು ಕರೆಯಿಸಿಕೊಳ್ಳುವುದಿಲ್ಲ ; ಆದರೆ ಕಣ್ಣಿನಿಂದ ನೋಡಿ ಸೂಳೆಗಾರನಾಗುತ್ತಾನೆ. ಮನದಲ್ಲಿ ಹಾದರ ಹುಟ್ಟಿ ಮನದೊಂದಿಗೆ ಭೋಗಿಸುತ್ತಾನೆ. ಸೂಳೆಗಾರ ಹಾಗಲ್ಲ ; ವೃತ್ತಿಯೇ ಅವನದು. ಅವನು ಹಾಗೆಂದೇ ಕರೆಯಿಸಿಕೊಳ್ಳುತ್ತಾನೆ. ತಳವಾರನದು ಓಲೆ ಅಥವಾ ಸುದ್ದಿ ಮುಟ್ಟಿಸುವ ಕೆಲಸ. ಸತ್ಯ ಸುದ್ದಿಗಳನ್ನು ಮಾತ್ರ ಹೇಳುತ್ತಾನೆ. ಅವನಲ್ಲಿ ಲವಲೇಶದಷ್ಟೂ ಸುಳ್ಳು ಇರುವುದಿಲ್ಲ.

ಓಲೆಕಾರನಲ್ಲದಿದ್ದರೂ ಇತರರು ಓಲೆಕಾರನಂತೆ ತನಗೆ ತಿಳಿದದ್ದು ತಾನು ಕೇಳಿದ ಸುದ್ದಿಗಳಿಗೆ ಉಪ್ಪು ಖಾರ ಬೆರಸಿ ಸುಳ್ಳು ಸುದ್ದಿ ಹಬ್ಬಿಸುತ್ತಾರೆ. ಅವರನ್ನು ವೃತ್ತಿಯಿಂದ ಹಾಗೆಂದೇ ಗುರುತಿಸುತ್ತಾರೆ. ಇತರರು ಹಾಗಿದ್ದರೂ ಅವರ ವೃತ್ತಿ ಬೇರೆ ಬೇರೆ ! ಗೌರವದ ವೃತ್ತಿಯಿಂದ ಕೂಡಿರುತ್ತಾರೆ.

ಇದಕ್ಕೆಲ್ಲ ಮನವೇ ಕಾರಣ. ಕಳ್ಳತನ ಮಾಡಿದವನು ಕಳ್ಳನೆಂದು ಗುರುತಿಸಿಕೊಳ್ಳುತ್ತಾನೆ. ಶ್ರೀಮಂತನಾದವನು ಶ್ರೀಮಂತನೆಂದು ಗುರುತಿಸಿಕೊಳ್ಳುತ್ತಾನೆ. ವ್ಯಾಪಾರದ ಮೂಲಕ ಕಳ್ಳತನ ಮೋಸ ಮಾಡಿ ಹಣ ಒಡವೆಗಳನ್ನು ಸಂಗ್ರಹಿಸಿದ ಶ್ರೀಮಂತ ಎಂದು ಕರೆಯಿಸಿಕೊಂಡ ಶ್ರೀಮಂತ, ಸಂಗ್ರಹಿಸಿದ ಹಣ ಒಡವೆ ಕದ್ದು ಕಳ್ಳ ಎನ್ನಿಸಿಕೊಂಡ ಇಬ್ಬರದೂ ಒಂದೇ ವೃತ್ತಿ . ಒಬ್ಬ ಸುಳ್ಳು ಹೇಳದೆ ಕಳ್ಳ ಎಂದು ಕರೆಯಿಸಿಕೊಂಡ. ಮತ್ತೊಬ್ಬ ಕಳ್ಳನಾದರೂ ಶ್ರೀಮಂತ ಎಂದು ಕರೆಯಿಸಿಕೊಂಡ. ಇವನದು ಮುಖವಾಡದ ಭಕ್ತನ ವೇಷ!

ಕಳ್ಳ, ಹಾದರಿಗ, ಸೂಳೆಗಾರ, ತಳವಾರನಲ್ಲಿ ಮಿಥ್ಯವಿಲ್ಲ. ಸದಾಚಾರಿಗಳೆಂದು ಕರೆಯಿಸಿಕೊಳ್ಳುವ ಮುಖವಾಡದ ಭಕ್ತರಲ್ಲಿ ಬರೀ ಮಿಥ್ಯ ! ಅವರ ವೇಷ ಒಂದಾದರೆ, ಅವರ ಇರುವಿಕೆ ಮತ್ತೊಂದು ಅವರು ಕರೆಯಿಸಿಕೊಳ್ಳುವಿಕೆಯೇ ಬೇರೆ!

**ಸತ್ಯ ಸದಾಚಾರಿಗಳಲ್ಲಿ ಸದ್ಭಕ್ತ ಮಿಥ್ಯತಥ್ಯವಲ್ಲದಿರಬೇಕು :**

ಸತ್ಯ ತಿಳಿದ ತಂತ್ರಜ್ಞಾನಿ ಕಳ್ಳನನ್ನು ಕಳ್ಳ ಎನ್ನುವುದಿಲ್ಲ, ಹಾದರಿಗನನ್ನು ಹಾದರಿಗ ಎನ್ನುವುದಿಲ್ಲ, ಸೂಳೆಗಾರ, ತಳವಾರನನ್ನು ಹಾಗೆಂದು ಕರೆಯುವುದಿಲ್ಲ. ಸಕಲರನ್ನು ಗೌರವದಿಂದ ಶರಣೆಂದು ಮಾತನಾಡಿಸುತ್ತಾನೆ. ಆಯಾ ದೇಹಗಳಿಗೆ ಕಾರಣವಾದದ್ದು ಹಾಗೆಂದು ಕರೆಯಿಸಿಕೊಳ್ಳಲು ಪ್ರೇರಣೆ ನೀಡಿದ್ದು ಮನವೇ ಹೊರತು ಅರಿವಲ್ಲ.

ಸಕಲ ಕಾಯಗಳಲ್ಲಿ ಅರಿವು ಭರಿತವಾಗಿದೆ. ಆ ಅರಿವೇ ಗುರು. ಹೀಗಾಗಿ ಸಕಲ ಕಾಯಗಳು ಗುರುದೇವನ ಕಾಯಗಳು. ಅರಿವು ಭರಿತವಾದ ಕಾಯಗಳು ಹೀಗಾಗಿ ಬಸವಣ್ಣನವರು ಕಾಯದ ರಹಸ್ಯವನ್ನು ಬಿಚ್ಚಿ ಕಾಯಕ್ಕೆ ಗೌರವ ಸಲ್ಲಿಸಿ ಈ ಕೆಳಗಿನಂತೆ ನುಡಿದಿದ್ದಾರೆ.

ಕಳ್ಳ ಬಂದಿಕಾರ ಹಾವಾಡಿಗ ಹಾದರಿಗ ಬಂಟನೋಲೆಯಕಾರನೆಂದೆ ನಾದಡೆ ; ನೀ

ಮುಂತಾಗಿ ಬಂದ ಭಕ್ತರ ನೀ ಎನ್ನದಿದ್ದಡೆ, ಅದೆ ದ್ರೋಹ! ನಡೆ ನುಡಿಯಲ್ಲಿ ಹುಸಿಯುಂಟಾದಡೆ, ಕೂಡಲ ಸಂಗನ ತೋರಿದ ಚೆನ್ನ ಬಸವಣ್ಣನಾಣೆ !

ಕಾಯದ ರಹಸ್ಯವನ್ನು ಕಾಯ ತಿಳಿಯಲೇ ಬೇಕು. ಕಲ್ಯಾಣವೆಂಬುದು ಕಾಯದ ರಹಸ್ಯ ತಿಳಿಯುವ ವಿಶ್ವವಿದ್ಯಾಲಯವಾಗಿತ್ತು . ಒಬ್ಬೊಬ್ಬರು ಒಂದೊಂದು ರಹಸ್ಯವನ್ನು ಬಿಚ್ಚಿಟ್ಟರು. ಹಾಗೆ ಬಿಚ್ಚಿಟ್ಟ ರಹಸ್ಯಗಳ ಸಂಖ್ಯೆ ಇಪ್ಪತ್ತೆರಡು ಸಾವಿರ ವೆಂದು ಸಂಶೋಧಕರು ಹೇಳುತ್ತಾರೆ. ಶರಣರ ಹುಟ್ಟು ಅವರ ಕಾಯಕ ಜಾತಿ ಅವರು ಬರೆದ ವಚನಗಳ ಸಂಖ್ಯೆ ಮುಖ್ಯವಲ್ಲ. ಬುದ್ಧನಂತೆ, ಮಹಾವೀರನಂತೆ ಕಾಯದ ರಹಸ್ಯ ತಿಳಿದು ಕೊಂಡದ್ದಕ್ಕಾಗಿ ಅವರ ಕಾಯ ಹಾಗೆ ನುಡಿಯಲು ಕಾರಣವಾಯಿತು. ನುಡಿದಂತೆ ನಡೆಯಲು ಕಾರಣವಾಯಿತು.

ಈ ದೇಶದ, ಈ ನಾಡಿನ ಸಾಹಿತಿಗಳು ಸಂಶೋಧಕರಾದವರು ಕೃಷ್ಣ, ಕ್ರಿಸ್ತ, ಪೈಗಂಬರರು ಬರೆದ ವಚನಗಳು, ಶರಣರು ಬರೆದ ವಚನಗಳ ರಹಸ್ಯವನ್ನು ಬೇಧಿಸುವ ಕಾಯಕದಲ್ಲಿ ತೊಡಗುವ ಅವಶ್ಯಕತೆಯಿದೆ. ಕಾಯದ ರಹಸ್ಯ ಕಾಯಕ್ಕೆ ತಿಳಿದರೆ ಕಾಯವೇ ಕೈಲಾಸವಾಗುತ್ತದೆ. ಕಾಯಕ್ಕೆ ಕಾಯವೇ ಅಂಟಿಸಿಕೊಂಡ ಜಾತಿ ಮತ ಧರ್ಮ ಪಂಥ ಪಂಗಡಗಳು ನಿರ್ನಾಮವಾಗುತ್ತವೆ. ಹೆಣ್ಣು ಗಂಡು ಶ್ರೀಮಂತ ಬಡವ ರಾಜ ಕಾಲಾಳು ಎನ್ನುವ ಅಜ್ಞಾನ ನಾಶವಾಗುತ್ತದೆ. ಜಗದ್ಗುರು ಮೌಲ್ವಿ ಪೋಪ್ ಎನ್ನುವ ಅಜ್ಞಾನವೂ ಇಲ್ಲವಾಗಿ ಗುರು ಶಿಷ್ಯ ಸಂಪ್ರದಾಯಗಳು ಮಠ ಮಂದಿರ ಚರ್ಚ್ ಮಸೀದಿಗಳು ತಂತಾನೆ ಉದುರಿಬಿದ್ದು ಮಣ್ಣಲ್ಲಿ ಮಣ್ಣಾಗಿ ಸೇರುತ್ತವೆ.

ಕಾಯ, ಸಕಲ ಕಾಯಗಳನ್ನೂ ಕೈಲಾಸದಂತೆ ನೋಡುತ್ತದೆ. ಕಾಯದ ರಹಸ್ಯ ಕಾಯಕ್ಕೆ ಹೊಳೆಯುವ ಶಿಕ್ಷಣವನ್ನು ಕಾಯವೇ ಕಟ್ಟಿಕೊಳ್ಳಬೇಕು. ಹಾಗೆ ಗಟ್ಟಿಗೊಂಡವರು ಕಾಯಕ್ಕೆ ನೆರವಾಗಬೇಕು. ಕಾಯದ ರಹಸ್ಯ ಕಾಯಕ್ಕೆ ತಿಳಿಯುವ ಶಿಕ್ಷಣಕ್ಕಾಗಿ ಸರಕಾರ ಕೈ ಜೋಡಿಸಬೇಕು.

**95**

**ಕಾಬ ಕಾಬರೆಲ್ಲರು ಆತ್ಮ ಹಲವೆಂದಡೆ ಹಲವಾದುದುಂಟೆ ?**
**ಒಂದು ಕುಂಭದ ನೀರು ಹಲವು ಓಡೆಯಲ್ಲಿ ಒಸರುವಂತೆ,**
**ಅದು ಕುಂಭದ ಭೇದವೋ, ನೀರಿನ ಭೇದವೊ ?**
**ಉಭಯದಂದವ ತಿಳಿದು ಸ್ವಸ್ಥದಲ್ಲಿ ನಿಂದು ನೋಡಲಾಗಿ**
**ವಾಯುಗುಣವೊಂದೆಯೆಂದನಂಬಿಗ ಚೌಡಯ್ಯ .**

ಸಕಲ ದೇಶಗಳಲ್ಲಿರುವ ದೇಹಗಳೆಲ್ಲ ಒಂದೇ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಸಕಲ ದೇಶಗಳಲ್ಲಿರುವ ದೇಹಗಳಲ್ಲಿ ಒಂದೇ ಕೆಲಸ ಮಾಡುತ್ತವೆ. ಹಾಗೆಯೇ ದೇಹಗಳಲ್ಲಿರುವ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಕೂಡಾ ಒಂದೇ ತರಹ ಕಾರ್ಯ ನಿರ್ವಹಿಸುತ್ತವೆ. ಭಾಷೆ ಬೇರೆ ಬೇರೆಯಾಗಿರಬಹುದು; ದೇಹದ ಜ್ಞಾನ ಒಂದೇ. ದೇಹವನ್ನು ಆವರಿಸಿದ ಮನ ಕೂಡಾ ಒಂದೇ.

ಒಂದು ಕುಂಭದಲ್ಲಿ ನೀರು ಹಾಕಿದಡೆ ಅದು ಹಲವು ಕಡೆ ಒಸರುತ್ತದೆ. ಅದು ಕುಂಭದ ಭೇದವೊ, ನೀರಿನ ಭೇದವೊ? ಎಂದು ಅರಿವಿನಿಂದ ನೋಡಲಾಗಿ ವಾಯುಗುಣ ಒಂದೇ.

ಸಕಲ ದೇಹಗಳಲ್ಲಿ ಮನ ವಾಯುವಿನಂತೆ ಹರಿದಾಡುತ್ತದೆ. ಜಲಜನಕದಿಂದ

ಆಮ್ಲಜನಕದಿಂದ ಜಲ ಉತ್ಪನ್ನವಾಗಿದೆ. ಜಲ ಗಟ್ಟಿಯಾಗಿ ಮಣ್ಣಾಗಿದೆ. ಮಣ್ಣು ಜಲ ಬೆರೆತು ಕುಂಭವಾಗಿದೆ. ಕುಂಭದಲ್ಲಿ ಮಣ್ಣು ಜಲ ಅಗ್ನಿ ಸಂಗಮವಾಗಿದೆ. ಜೀವ ಜಲಬಿಂದುವೆ ಗರ್ಭ ಹೊಕ್ಕು ಅಂಗದ ಗರ್ಭದಿಂದ ಹೊರಬಂದು ಅಂಗವಾಗಿದೆ.ಅಂಗದಲ್ಲಿ ಆತ್ಮ, ಆತ್ಮದ ಬೆಳಕಿನ ಕಿರಣದಿಂದ ಹುಟ್ಟಿದ ನೆರಳು ಮನವೆಂದು ಹೆಸರು ಪಡೆದು ಅಂಗವನ್ನು ಆವರಿಸಿದೆ.

ಅಂಗದಲ್ಲಿ ಸಂಗಮವಾದ ಜೀವಜಲವೇ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಇವು ಚೆಲ್ಲದಂತೆ ಚರ್ಮದ ಕವಚವಾಗಿ ಅಂಗವನ್ನು ಹೊಲಿದುಕೊಂಡಿದೆ. ಅದಕ್ಕೆ ಉಗುರು ಬೆಳೆದು ಅಂಗದ ತುಂಬಾ ರೋಮ ಸಸ್ಯಕಾಶಿಯಂತೆ ಹಬ್ಬಿದೆ. ಹೀಗಾಗಿ ಸಕಲ ದೇಶಗಳ ದೇಹವೊಂದೇ; ದೇಹದಲ್ಲಿ ಸಂಗಮವಾದ ಆತ್ಮ ಒಂದೇ ; ದೇಹವನ್ನು ಆವರಿಸಿದ ಮನ ಒಂದೇ. ರಕ್ತ ಮೂಳೆ ಮಾಂಸ ಮಜ್ಜಾ ಮೇದಸ್ಸು ಒಂದೇ. ಇವುಗಳನ್ನು ತನ್ನ ಗರ್ಭದಲ್ಲಿ ಹೊಲಿದುಕೊಂಡ ಚರ್ಮ ಒಂದೇ !

ಸಕಲ ಪದಾರ್ಥಗಳು ಚೆಲ್ಲದಂತೆ ಹೊಲಿದುಕೊಂಡ ಚರ್ಮದ ಆವರಣವಿರುವ ಅರಿವುಳ್ಳ ವಸ್ತುವನ್ನು ಅಂಗ ಎಂದು ಕರೆಯಲ್ಪಟ್ಟಿದೆ. ಶರಣರು ಇದನ್ನು ತಮ್ಮ ಬೆಡಗಿನ ಭಾಷೆಯಿಂದ ಕುಂಭ, ಕೊಡ, ಮಡಕೆ ಎಂದು ಕರೆದರು. ಸಕಲ ದೇಶದ ದೇಹಗಳೆಲ್ಲ ಒಂದೇ ರೀತಿಯಲ್ಲಿದ್ದರೂ ದೇಹದೊಳಗಿದ್ದ ಪದಾರ್ಥ, ದೇಹವನ್ನು ಆವರಿಸಿದ ಚರ್ಮ, ದೇಹದಲ್ಲಿ ಭರಿತವಾದ ಆತ್ಮ ಒಂದೇ ಆಗಿದ್ದರೂ, ಮನದ ಭೇದದಿಂದಾಗಿ ದೇಹ ಹೆಣ್ಣು ಗಂಡು ಎಂದು, ಧರ್ಮ ಜಾತಿ ಮತ ಪಂಗಡ ಭಾಷೆ ಎಂದು ತನ್ನನ್ನು ತಾನೇ ವಿಂಗಡಿಸಿಕೊಂಡಿದೆ.

ದೇಹ ಒಂದೇ ಎಂದು ತಿಳಿಯುವ ಅರಿವು ದೇಹದಲ್ಲಿ ಸಂಗಮವಾಗಿದೆ. ದೇಹ ಬೇರೆ ಬೇರೆ ಎನ್ನುವ ಮನ ದೇಹವನ್ನು ಆವರಿಸಿದೆ. ಈ ಎರಡನ್ನೂ ತಿಳಿದು ಅರಿವಿನಿಂದ ನಿಂತು ನೋಡಲಾಗಿ ವಾಯು ಗುಣವೊಂದೇ! ಹೀಗಾಗಿ ಆತ್ಮ ಹಲವಲ್ಲ; ದೇಹವೂ ಹಲವಲ್ಲ; ಅದನ್ನು ಆವರಿಸಿದ ಮನವೂ ಹಲವಲ್ಲ; ಅದರಲ್ಲಿರುವ ಪದಾರ್ಥಗಳೂ ಹಲವಲ್ಲ ; ಅದರಲ್ಲಿ ಸುಳಿದು ಬೀಸುವ ಗಾಳಿಯೂ ಹಲವಲ್ಲ. ಇದೆಲ್ಲವನ್ನು ತಿಳಿಯುವ ತಾನೂ ಹಲವಲ್ಲ. ಆತ್ಮದಿಂದ ಸಕಲವೂ ಸಿದ್ಧವಾಗಿದೆ. ಆ ಆತ್ಮವನ್ನು ಪರಮಾತ್ಮ ಎಂದೂ ಅಲ್ಲಾ, ಗಾಡ್ ಎಂದೂ, ಶರಣರು ಬಯಲು ಎಂದೂ ಕರೆಯುತ್ತಾರೆ.

ಬಯಲಲ್ಲಿ ಬಯಲಾಗಿ ಬೆರೆತ ಆಮ್ಲಜನಕವನ್ನು ಜಲಜನಕವನ್ನು ಒಂದು ಮಾಡಿ, ಬಯಲು ಅದರಲ್ಲಿ ಬೆರೆತು ಆತ್ಮವಾಗಿ, ಜೀವಜಲವಾಗಿ ಬಯಲ ಬೀಜವಾಗಿ ಗರ್ಭದಲ್ಲಿ ಹೊಕ್ಕು ದೇಹವಾಗಿದೆ. 'ಬಯಲು ಬಯಲನೇ ಬಿತ್ತಿ , ಬಯಲು ಬಯಲನೆ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ಬಯಲು ಜೀವನ ಬಯಲು ಭಾವನೆ ಬಯಲು ಬಯಲಾಗಿ ಬಯಲಾಯಿತ್ತಯ್ಯಾ . ಪೂಜಿಸಿದವರು ಮುನ್ನವೇ ಬಯಲಾದರು ನಾ ನಿಮ್ಮ (ಬಯಲ) ನಂಬಿ ಬಯಲಾದೆ ಗುಹೇಶ್ವರಾ.' ಇದು ಸಕಲ ದೇಶಗಳ ದೇಹಗಳು ಒಂದಾಗುವ ಸೂತ್ರ ! ತಂತ್ರಗಾರಿಕೆ! ಈ ಅರಿವು ಕೂಡಾ ಸಕಲ ದೇಹಗಳ ಗರ್ಭದಲ್ಲಿ ಸಂಗಮವಾಗಿದೆ. ಆ ಅರಿವನ್ನು ಆ ದೇಹವೇ ಅರಿಯ ಬೇಕು ಅಷ್ಟೆ !

**96**

**ಕಾಮವ ಕಳೆದು, ಕ್ರೋಧವ ದಾಂಟಿ,**
**ಲೋಭವ ಹಿಂಗಿ, ಮೋಹಾದಿಗಳಲ್ಲಿ ಮನವಿಕ್ಕದೆ,**
**ಆ ಕಾಮವ ಲಿಂಗದಲ್ಲಿ ಮರೆದು,**

**ಕ್ರೋಧವ ಕರಣಂಗಳಲ್ಲಿ ಬೈಚಿಟ್ಟು,**
**ಲೋಭವ ಸರ್ವೇಂದ್ರಿಯಂಗಳಲ್ಲಿ ಸಂಬಂಧಿಸಿ,**
**ಮೋಹಾದಿ ಗುಣಂಗಳ ಸ್ವಯ ಚರಪರದಲ್ಲಿ ಗರ್ಭೀಕರಿಸಿ,**
**ನಿಜವಾಸಿಯಾಗಿ ನಿಂದಾತನ ಅಡಿಗೆರಗುವೆಯೆಂದನಂಬಿಗ ಚೌಡಯ್ಯ.**

ಕಾಮ ಕ್ರೋಧ ಲೋಭ ಮೋಹ ; ಇವು ನಾಲ್ಕು ಅಂಗದಲ್ಲಿಯೇ ಹುಟ್ಟಿವೆ. ಅಂಗದಲ್ಲಿ ಸಂಗಮವಾದ ಅರಿವಿನಿಂದಲೇ ಸಾಯುತ್ತವೆ. ಎಂಬ ರಹಸ್ಯವನ್ನು ಈ ವಚನದ ಸೂತ್ರದ ಮೂಲಕ ಅಂಬಿಗರ ಚೌಡಯ್ಯ ಶರಣರು ಸಕಲ ಓದುಗರಿಗೂ ಕರುಣಿಸಿದ್ದಾರೆ.

**ಕಾಯದಲ್ಲಿ ಹುಟ್ಟಿದ ಕಾಮವನ್ನು ಕಾಯದ ಅರಿ (ಲಿಂಗ)ವಿನಿಂದಲೇ ಮರೆಯಬೇಕು :**

ಕಣ್ಣು ತಾನು ಹೆಣ್ಣಾಗಿ ಗಂಡನ್ನು ನೋಡಿ ಕಾಯದಲ್ಲಿ ಕಾಮ ಸೃಷ್ಟಿ ಮಾಡುತ್ತದೆ. ಕಣ್ಣು ತಾನು ಗಂಡಾಗಿ ಹೆಣ್ಣನ್ನು ನೋಡಿ ಕಾಯದಲ್ಲಿ ಕಾಮ ಸೃಷ್ಟಿ ಮಾಡಿ ಕಾಯಕ್ಕೆ ಭೋಗದ ಆಸೆಯನ್ನು ಕೆರಳಿಸುತ್ತದೆ.ಅರಿವಿನಿಂದ ನೋಡಿದರೆ ನೋಡುವ ಕಣ್ಣು ಹೆಣ್ಣಲ್ಲ ಗಂಡೂ ಅಲ್ಲ ! ಆದರೂ ಕಣ್ಣು ತಾನು ತನ್ನ ಕಾಯವನ್ನು ಹೆಣ್ಣೆಂದು ಆರೋಪಿಸಿಕೊಂಡು ಗಂಡನ್ನು ನೋಡಿ ಭೋಗದ ಆಸೆಯನ್ನು ಕೆರಳಿಸಿಕೊಳ್ಳುತ್ತದೆ. ಗಂಡೆಂದು ಆರೋಪಿಸಿಕೊಂಡು ಹೆಣ್ಣನ್ನು ನೋಡಿ ಕಾಯದಲ್ಲಿ ಭೋಗದ ಆಸೆ ಕೆರಳಿಸುತ್ತದೆ.

ನೋಡುವ ನೋಡಲ್ಪಡುವ ಚರ್ಮ ಕೂಡಾ ಹೆಣ್ಣಲ್ಲ ಗಂಡೂ ಅಲ್ಲ.ಉಭಯ ಚರ್ಮದೊಳಗಿದ್ದ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಕೂಡಾ ಹೆಣ್ಣಲ್ಲ ಗಂಡಲ್ಲ. ಉಗುರು ರೋಮಗಳು ಕೂಡಾ ಹೆಣ್ಣಲ್ಲ ಗಂಡಲ್ಲ. ಮತ್ತೊಂದು ಕಾಯದ ಸೃಷ್ಟಿಯ ಬಯಕೆ ಇಲ್ಲದಿದ್ದರೂ ಕೂಡಾ ಕಾಯದಲ್ಲಿ ಕಾಮ ಹುಟ್ಟುತ್ತದೆ. ಇದಕ್ಕೆ ಕಾರಣ ಮನ, ಮನದ ಅಜ್ಞಾನದಿಂದಾಗಿ ಕಾಯದಲ್ಲಿ ಕಾಮ ಹುಟ್ಟುತ್ತದೆ.

ಕಾಯ ಮತ್ತೊಂದು ಕಾಯವನ್ನು ನೋಡಿ, ಕೇಳಿ, ಮುಟ್ಟಿ, ಮೂಸಿಸಿ, ರುಚಿಸುತ್ತದೆ. ಕಾಮದ ದ್ರವ್ಯವನ್ನು ಕಳೆದುಕೊಂಡು ಕಾಯದಿಂದಲೇ ಸುಖವಾಯಿತು ಎಂದು ಕಾಯ ಹಿಂದೆ ಸರಿಯುತ್ತದೆ. ಇದು ಮನ ಸೃಷ್ಟಿ ಮಾಡಿದ ಭ್ರಮೆ ಎಂದು ಮನಕ್ಕೇ ತಿಳಿಯುವುದಿಲ್ಲ. ಹೀಗಾಗಿ ಕಾಯ ಮುಪ್ಪಾದರೂ ಕಾಯವನ್ನು ಆವರಿಸಿದ ಕಾಮ ಅಳಿಯುವುದಿಲ್ಲ. ಏಕೆಂದರೆ ಕಾಯ ಇರುವವರೆಗೆ ಕಾಯದೊಂದಿಗೆ ಮನ ಸುಖಿಸುತ್ತದೆ !

ಕಾಯದಲ್ಲಿ ಅರಿವು ಸಂಗಮವಾಗಿದೆ. ಆ ಅರಿವು ಮನಕ್ಕೆ ಗೊತ್ತಾಗುವುದಿಲ್ಲ. ಹೀಗಾಗಿ ಮನ ಕಾಮ, ಕ್ರೋಧ ಲೋಭ ಮೋಹದೊಂದಿಗೆ ಕಾಯದ ಮೂಲಕ ಸದಾ ಸುಖಿಸುತ್ತದೆ. ಕಾಯವನ್ನು ವ್ಯರ್ಥ ಮುಪ್ಪು ಮಾಡುತ್ತದೆ.

ಕಾಯದಲ್ಲಿರುವ ಅರಿವಿನ ಮೂಲಕ ಕಾಯದಲ್ಲಿ ಉಂಟಾದ ಕಾಮವನ್ನು ಮನ ನೋಡಿಕೊಂಡರೆ ಅದಕ್ಕದೆ ನಾಚಿ ನೀರಾಗುತ್ತದೆ. ಮತ್ತೆ ಕಾಯದಲ್ಲಿ ಕಾಮ ಹುಟ್ಟುವುದಿಲ್ಲ ; ಬದಲಾಗಿ ಅರಿವಿನ ಪ್ರೇಮ ಹುಟ್ಟುತ್ತದೆ. ಕಾಯವನ್ನು ತನ್ನ ಕಾಯದಂತೆ ನೋಡುತ್ತದೆ.

ಕಾಯವನ್ನು ತಾನು ಗಂಡು ಎಂದು ಆರೋಪಿಸಿಕೊಂಡ ಮನ , ಹೆಣ್ಣು ಕಾಯವನ್ನು ನೋಡುತ್ತದೆ. ನೋಡುವ ಮನದಲ್ಲಿ ರತಿ ಹುಟ್ಟಿ ಕಣ್ಣು ಕಿವಿ ಮೂಗು ಚರ್ಮ ನಾಲಗೆಗಳು ಕಾಮದಿಂದ ಕಂಪಿಸುತ್ತವೆ. ಕಾಮದ ದ್ರವ್ಯ ತುತ್ತತುದಿಗೆ ಬರುತ್ತದೆ. ಕಾಯದ ನಿರಿಗೆ ಸಡಲಿದರೆ ಸಾಕು ಗಂಡು ಕಾಯಕ್ಕೆ ಹೆಣ್ಣು ಕಾಯ ತಾಕದಿದ್ದರೂ ; ಕಾಯದ ಕಾಮದ ದ್ರವ್ಯ ದೇವಾಂಗದ

ಮೂಲಕ ಹೊರಗೆ ಚಿಮ್ಮುತ್ತದೆ. ಮನಕ್ಕೆ ಸುಖವಾಗುತ್ತದೆ. ಕಾಯದ ಸರ್ವೇಂದ್ರಿಯಗಳಲ್ಲಿ ತುಂಬಿಕೊಂಡ ಕಾಮ ಸರ್‍ರನೆ ಹಿಂದೆ ಸರಿಯುತ್ತದೆ. ಕಾಯ ಕಾಯಕ್ಕೆ ತಾಕಲಿಲ್ಲ ; ಕಾಯ ಕಾಯದೊಂದಿಗೆ ಕಾಮದ ಕ್ರೀಡೆ ಆಡಲಿಲ್ಲ ಆದರೂ ಕಾಯಕ್ಕೆ ಸುಖವಾಯಿತು !

ಕಾಯ ಅನ್ಯ ಕಾಯದೊಂದಿಗೆ ಸಂಗ ಮಾಡದಿದ್ದರೂ ಕಾಯಕ್ಕೆ ಕಾಮದ ಸುಖ ಹಿಂಗಿತಲ್ಲ. ಕಾಮದ ಸುಖ ತನ್ನ ಕಾಯದಲ್ಲಿತ್ತೋ, ಅನ್ಯ ಕಾಯದಲ್ಲಿತ್ತೋ ? ತನ್ನ ಕಾಯದಲ್ಲಿದ್ದ ಸುಖದ ದ್ರವ್ಯ ತಾನೇ ಹೊರಚೆಲ್ಲಿ ಅನ್ಯ ಕಾಯದೊಂದಿಗೆ ತನಗೆ ಸುಖವಾಯಿತೆಂದು ಸುಳ್ಳು ಭ್ರಮೆಯಲ್ಲಿದ್ದ ಮನಕ್ಕೆ ನಾಚಿಕೆಯಾಗುತ್ತದೆ. ಈ ಅರಿವಿನ ರಹಸ್ಯ ಹೇಳಿಕೊಟ್ಟ ಗುರುವಿಗೆ ಮನ ನಮಿಸುತ್ತದೆ. ಕಾಯದ ಅರಿವಿಗೆ ಮೊರೆ ಹೋಗಿ ಮನ ಆ ಅರಿವಿನ ಸಂಗ ಮಾಡುತ್ತದೆ. ಆ ಅರಿವೇ ತಾನಾಗಿ ಮನ ಘನಮನವಾಗುತ್ತದೆ.

ಕಾಮವೇಕೊ, ಲಿಂಗಪ್ರೇಮಿಯೆನಿಸುವಂಗೆ ? ಕ್ರೋಧವೇಕೊ, ಶರಣ ವೇದ್ಯನೆನಿಸುವಂಗೆ? ಲೋಭವೇಕೊ, ಭಕ್ತಿಯ ಲಾಭವ ಬಯಸುವಂಗೆ ? ಮೋಹವೇಕೋ, ಪ್ರಸಾದ ವೇದ್ಯನೆನಿಸುವಂಗೆ ? ಮದ ಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೊ? ಹದುಳಿಗರಾದಲ್ಲಿಪ್ಪ ನಮ್ಮ ಕೂಡಲಸಂಗಮದೇವಾ !

ಅರಿವನ್ನು ಪ್ರೇಮ ಮಾಡುವ ಕಾಯದ ಮನದಲ್ಲಿ ಕಾಮ ಹುಟ್ಟುವುದಿಲ್ಲ. ಏಕೆಂದರೆ ತನ್ನಾಶ್ರಯದ ರತಿ ಸುಖದಲ್ಲಿ ಮನ ಮಗ್ನವಾಗಿದೆ. ತಾನುಂಬ ಪ್ರೇಮದ ಊಟದಲ್ಲಿ ಮನ ಮಗ್ನವಾಗಿದೆ. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಸಂಗಯ್ಯನೊಂದಿಗೆ ಮನ ಸಂಗ ಮಾಡಿದಾಗ ಆ ಅಂಗಕ್ಕೆ ಕಾಮವಿಲ್ಲ,ಕ್ರೋಧವಿಲ್ಲ, ಲೋಭವಿಲ್ಲ, ಮೋಹ, ಮದ, ಮತ್ಸರಗಳಿಲ್ಲ. ಇವು ಮನದಲ್ಲಿ ಹುಟ್ಟಿದವು. ಮನ ಮಹಾದೇವನೆಂಬ ಅರಿವಿನಲ್ಲಿ ಲೀನವಾದಾಗ ಮನದೊಂದಿಗೆ ಅಳಿದು ಘನಮನವಾದವು. ಹದುಳಿಗರಾದವು !

**97**

**ಕಾಯ ಜೀವ ಎಂಬ ಹೆಚ್ಚು ಕುಂದನರಿಯದೆ**
**ಕ್ರೀ ಜ್ಞಾನ.. ನಾ ನೀನೆಂಬ ಭಾವದ ಭ್ರಮೆಯು**
**ಆರಿಗೆಂದನಂಬಿಗ ಚೌಡಯ್ಯ .**

ಕಾಯ-ಜೀವವೆಂಬುದು ಅರಿವಿನ ಮಹಾ ಸಂಕೇತ. ಕಾಯ ನವರತ್ನಗಳ ಮೂಲಕ ಅರಿವಿನ ಪರಿಮಳವನ್ನು ಬೀರುವ ಕಲ್ಪವೃಕ್ಷ. ಒಂದು ಜಾತಿಯ ಅಧಿಕ ಪರಿಮಳ ಬೀರುವ ಮಲ್ಲಿಗೆ. ಇಂತಹ ಕುಬೇರನ ಕುಂದನರಿಯದೆ ಕ್ರೀ-ಜ್ಞಾನ, ನಾ-ನೀನೆಂಬ ಭಾವದ ಭ್ರಮೆ ಹೋಗುವುದಿಲ್ಲ. ಸೂಕ್ಷ್ಮಾತಿ ಸೂಕ್ಷ್ಮವಾದ ಅಜ್ಞಾನ ಕಳೆದುಕೊಳ್ಳಲು ಸಾಧ್ಯವಾಗುವುದೇ ಇಲ್ಲ.

ಕುಂದ ಎಂದರೆ ಕುಬೇರನ ನವನಿಧಿಗಳಲ್ಲಿಯ ಒಂದು ನಿಧಿ. ಮಹಾಪದ್ಮ, ಪದ್ಮ, ಶಂಕ, ಮಕರ,ಕಚ್ಛಪ, ಮುಕುಂದ, ಕುಂದ, ನೀಲ,ವರ ಎನ್ನುವ ನವನಿಧಿಗಳು. ವಿವೇಕವಿಲ್ಲದ್ದಕ್ಕಾಗಿ ಕುಬೇರನೆನ್ನುವುದು ಕಾಯಕ್ಕೆ ತಿಳಿಯದಾಗಿದೆ. ಕುಂದದೆ ಕೊಂದುದಯ್ಯ ಲಿಂಗ ತಂದೆ ಎಂದು ಬಸವಣ್ಣನವರು ಕಾಯವನ್ನು ಆವರಿಸಿದ ಮಾಯವನ್ನು ಕುರಿತು ಹಾಡಿದ್ದಾರೆ.

ನೋಡುವ ಕಣ್ಣುಗಳೆರಡು ಮಹಾಪದ್ಮಗಳಲ್ಲದೆ ಮತ್ತೇನು ? ಕೇಳುವ ಕಿವಿಗಳೆರಡು

ಶಂಕಗಳಲ್ಲದೆ ಮತ್ತೇನು ? ಎರಡು ಹೊರಳೆಗಳುಳ್ಳ ಮೂಗು, ಒಂದು ಬಾಯಿ, ಉಂಡ ಅನ್ನವನ್ನು ರುಬ್ಬಿ ಕಾಯಕ್ಕೆ ಚಿಮ್ಮಿ ಉಳಿದುದನ್ನು ಅಮೃತ ರೂಪದಲ್ಲಿ ಹೊರಚೆಲ್ಲುವ ಗುದದ್ವಾರ ಕಾಯದ ಒಂದು ನಿಧಿಯಲ್ಲವೆ ? ಕಾಯಕ್ಕೆ ಜನ್ಮ ನೀಡುವ ಕಾಯದ ದೇವಾಂಗ ಸೃಷ್ಟಿಕರ್ತನೆಂಬ ನಿಧಿಯಲ್ಲವೆ ? ಅದನ್ನು ಮಾಯೆಯೆಂಬ ಅಜ್ಞಾನ ಬಚ್ಚಲು ಕುಣಿಯನ್ನಾಗಿಸಿಕೊಂಡಿದೆ.

ಕುಬೇರನ ನವನಿಧಿಗಳುಳ್ಳ ಕಾಯ ಕುಬೇರನಂತೆ ಶ್ರೀಮಂತ ಕಾಯವಾಗಿದೆ. ಹೀಗಾಗಿ ದೇವಾನುದೇವತೆಗಳೆಲ್ಲ ತಿಳಿದ ಕಾಯವನ್ನು ಕುಬೇರನೆಂದು ಕರೆದರು. ತಿಳಿಯದ ಕಾಯವನ್ನು ಅಂದರೆ ಕಾಯದ ಸಂಪತ್ತನ್ನು ಸದ್ಬಳಕೆ ಮಾಡದ ಕಾಯವನ್ನು ರಾವಣ ಎಂದು ಕರೆದರು.

ಕುಬೇರ ಮತ್ತು ರಾವಣರಿಬ್ಬರಿಗೆ ಕಾಯ ಕಾಯದಲ್ಲಿಯೇ ಆಶ್ರಯ ನೀಡಿದೆ. ಮನ ರಾವಣನಾಗುವುದಕ್ಕೆ ಹಾತೊರೆಯುತ್ತದೆ. ಕುಬೇರನಾಗುವುದಕ್ಕೆ ಒಲ್ಲದು. ಕ್ರೀ-ಜ್ಞಾನ, ನಾ- ನೀನೆಂಬ ಭಾವದ ಭ್ರಮೆ ಕಾಯವನ್ನೇ ಕಿತ್ತು ತಿನ್ನುತ್ತಲಿದೆ.

ಕಾಯದಲ್ಲಿರುವ ಸಂಪತ್ತನ್ನು ಮನ ಕಾಯದ ಮೂಲಕವೇ ಬಳಸಿ ಕುಬೇರನಾಗುವುದನ್ನು ಬಿಟ್ಟು ಕಾಯದಿಂದ ಹೊರಬಂದ ಜ್ಞಾನವನ್ನು ಸಂಪತ್ತೆಂದು ಭಾವಿಸಿ ಎಂಜಲನ್ನು ಸಂಗ್ರಹಿಸಿ ಕೊಳ್ಳುತ್ತದೆ. ಭಗವದ್ಗೀತೆ ಬೈಬಲ್ ಕುರಾನ್‌ಗಳು ಕಾಯದಿಂದ ಬಂದ ಎಂಜಲು. ಪುನಃ ಅವುಗಳನ್ನು ಕಾಯ ಸಂಗ್ರಹಿಸಿಕೊಂಡರೆ ಜ್ಞಾನದಿಂದ ನುಡಿಯಲು ಬರುತ್ತದೆಯೇ ಹೊರತು; ಜ್ಞಾನದಿಂದ ನಡೆಯಲು ಬರುವುದಿಲ್ಲ. ಏಕೆಂದರೆ ಆ ಜ್ಞಾನದ ಸಂಪತ್ತು ತನ್ನ ಕಾಯದ್ದಲ್ಲ. ತನ್ನ ಕಾಯ ದಲ್ಲಿರುವ ಜ್ಞಾನ ಕಾಯದಲ್ಲಿಯೇ ಉಳಿಯಿತು. ಕಾಯದಲ್ಲಿರುವ ಜ್ಞಾನ ನಡೆಯಲು ಹೇಳುತ್ತದೆ. ನುಡಿದಂತೆ ನಡೆಯಲು ಬಾರದಿದ್ದರೆ ಛೀ ಎನ್ನುತ್ತದೆ.

ತನ್ನ ತಾ ನೋಡದಾತ ಕುರುಡ. ತನ್ನ ತಾ ಕೇಳದಾತ ಕಿವುಡ. ಕಾಯದಲ್ಲಿರುವ ಜ್ಞಾನವನ್ನೇ ಬಳಕೆ ಮಾಡಿ ಕ್ರೀಯಲ್ಲಿ ತರಬೇಕು. ನಾ-ನೀ ನೆಂಬ ಭಾವದ ಭ್ರಮೆಯನ್ನು ನಾನೇ ಕಳೆದು ಕೊಳ್ಳಬೇಕು. ಕಾಯದಲ್ಲಿ ಸಂಗಮವಾದ ಸಹಜ ಜ್ಞಾನವನ್ನು ಬಳಸಿ ಸಹಜನಾಗಬೇಕು. ಇದು ಅಂಬಿಗರ ಚೌಡಯ್ಯ ಶರಣರ ರಹಸ್ಯಮಯ ಸೂತ್ರ !

**98**

**ಕಾಯದ ಶೃಂಗಾರ ಕಾಮಿನಿಯರ ಕೂಟಕ್ಕೊಳಗು,**
**ಜೀವನ ಬಾಳುವೆ ಸಕಲ ಜೀವಂಗಳಲ್ಲಿ ಸಾಧನ.**
**ಕಾಯದ ಶೃಂಗಾರ, ಜೀವನಭವ-**
**ಎರಡರ ತಾವನರಿಯಬೇಕೆಂದನಂಬಿಗಚೌಡಯ್ಯ .**

ಕಾಯದ ಅರಿವು ಕಾಯಕ್ಕೆ ಬಳಕೆಯಾದರೆ, ಕಾಯಕ್ಕೆ ಕಳಶವಿಟ್ಟಂತೆ. ಅರಿವಿನ ಕಾಯವದು ಗುರುದೇವನ ಕಾಯ, ಮಹಾದೇವನ ಕಾಯ, ಸಾಕ್ಷಾತ್ ಪರಬ್ರಹ್ಮನ ಕಾಯ.

ಕಾಯ ಅಷ್ಟಾವಕ್ರವಾದರೇನು ; ಕಾಯ ರತಿ-ಮನ್ಮಥನದಾದರೇನು ? ಕಾಯ ಕಾಯವೇ ಆಗಿದೆ. ಕಾಯ, ಜ್ಞಾನ ಮತ್ತು ಮನಕ್ಕೆ ಬಳಕೆಯಾಗುವ ಒಂದು ಉಪಕರಣ.

ರತಿ-ಮನ್ಮಥ,ದೇವೇಂದ್ರರಿಗೆ ಕಾಯ ಬಳಕೆಯಾಗಿ ಕಾಮಿನಿಯರ ಕೂಟಕ್ಕೆ ಒಳಗಾಯಿತು. ಅಷ್ಟಾವಕ್ರನಿಗೆ ಬಳಕೆಯಾಗಿ ಮಹಾಜ್ಞಾನಿ ಎನ್ನಿಸಿ ಕೊಂಡಿತು. ಆ ಮಹಾಕಾಯದ

ಜೀವನ, ಅದರ ಜ್ಞಾನದ ಬಾಳುವೆ ಸಕಲ ಕಾಯಗಳಿಗೆ ಸಾಧನವಾಯಿತು.

ಕಾಯದ ಶೃಂಗಾರದ ಬಯಕೆ, ಕಾಮಿನಿಯರ ಕೂಡಬೇಕೆಂಬ ಕೂಟದ ಬಯಕೆ ಕಾಯವನ್ನು ಆವರಿಸಿದೆ. ಇವೆರಡೂ ಕಾಯಕ್ಕೆ ಜೀವಕ್ಕೆ ಮರಣವನ್ನುಂಟು ಮಾಡುತ್ತದೆ. ಇವೆರಡರ ರಹಸ್ಯವನ್ನು ಅರಿಯುವ ಕಾಯಕವೇ ಕಾಯದ ಕಾಯಕವಾಗಬೇಕು. ಈ ಕಾಯಕ ಕಾಯಕ್ಕೆ ಬಲುಶೋಭೆ ತರುತ್ತದೆ. ಕಾಯದ ಜ್ಞಾನ ಕಾಯವನ್ನು ಕೈಲಾಸದತ್ತ ಕೊಂಡೊಯ್ಯುತ್ತದೆ .

ಕಾಯದಿಂದಲೇ ಕಾಯವನ್ನು ಕಾಮಿಸುವುದು ; ಕಾಯದಿಂದಲೇ ಇಲ್ಲದ ಕಾಯವನ್ನು ಧ್ಯಾನಿಸುವುದು ಇವೆರಡೂ ಕಾಯದಲ್ಲಿ ಹುಟ್ಟಿದ ಭ್ರಮೆ.

''ಕಾಮಿಸುವ ಕಲ್ಪಿಸುವ ಬ್ರಹ್ಮನೆಂಬವ ವ್ರತಗೇಡಿ, ವಿಷ್ಣುವೆಂಬವ ಸತ್ತುಬಿದ್ದ, ರುದ್ರನೆಂಬವ ಅಬದ್ಧ ವಿಚಾರಿ ! ಅವಿಚಾರದಲ್ಲಿ ಎಲ್ಲರ ಕೊಂದ ಕೊಲೆ, ನಿಮ್ಮ ತಾಗುವುದು ಗುಹೇಶ್ವರಾ ''

ಕಾಯದಲ್ಲಿ ಸಂಗಮವಾದ ಕಾಯದ ಜ್ಞಾನದಿಂದಲೇ ಕಾಯವನ್ನು ನೋಡುತ್ತ ಹೋದಾಗ : ಕಾಯದಲ್ಲಿಯೇ ಕಾಮ ಹುಟ್ಟುತ್ತದೆ. ಕಾಯದಿಂದಲೇ ಕಾಮದ ದ್ರವ್ಯ ಚಿಮ್ಮುತ್ತದೆ. ಕಾಯಕ್ಕೆ ಸುಖವಾಗುತ್ತದೆ. ಇದು ಕಾಯದ ಭ್ರಮೆ.ಅನ್ಯ ಕಾಯದಿಂದ ಕಾಯಕ್ಕೆ ಸುಖವಾಗಲಿಲ್ಲ. ಅದು ಕಾಯದ ಕಲ್ಪನೆಯ ಭ್ರಮೆ ! ಕಾಯ ಕಾಯವನ್ನು ಕಾಮಿಸುವ ಕಲ್ಪಿಸುವ ಭ್ರಮೆ! ಈ ಭ್ರಮೆ ತೊಲಗಿದರೆ ಬ್ರಹ್ಮ. ಕಲ್ಪಿಸುವ ಭ್ರಮೆಯೆಂಬ ವ್ರತಗೇಡಿ ಬ್ರಹ್ಮನಿಂದಲೇ ಸತ್ತ . ವ್ರತಕ್ಕೆ ಒಳಗಾದ. ಬ್ರಹ್ಮ ತನ್ನ ಅರಿವಿನಿಂದಲೇ ಸತ್ತ . ಅಜ್ಞಾನವನ್ನು ಕೊಲ್ಲುವ ಕಾಯದಲ್ಲಿದ್ದ ರುದ್ರ ತನ್ನ ಅರಿವಿಗೆ ಪರಿಚಯವಾದ. ಪರಿಚಯವಾದ ಆ ಅರಿವಿನಿಂದಲೇ ರುದ್ರ ಸತ್ತ . ತನ್ನರಿವು ಮಾತ್ರ ಕಾಯದಲ್ಲಿ ಉಳಿಯಿತು. ಕಾಯದ ರಕ್ಷಣೆಗಾಗಿ ನಿಂತ ವಿಷ್ಣುವೂ ಸತ್ತ . ತನ್ನರಿವೇ ತನ್ನ ಕಾಯಕ್ಕೆ ಪ್ರಧಾನವಾಯಿತು. ಕಾಯದಲ್ಲಿ ವಾಸ ಮಾಡಿದ ಕಾಮ, ಕಲ್ಪನೆಯ ಬ್ರಹ್ಮ ವಿಷ್ಣು ರುದ್ರರು ಸತ್ತು ಬಿದ್ದರು. ಇವರೆಲ್ಲರನ್ನು ಕೊಂದ ಕೊಲೆಯ ಅಪವಾದ ಕಾಯದಲ್ಲಿಯೇ ಸಂಗಮವಾದ ಜ್ಞಾನವೆಂಬ ಗುಹೇಶ್ವರನಿಗೆ ತಾಗಿತು.

ಅಂಬಿಗರ ಚೌಡಯ್ಯ ಶರಣರ, ಅಲ್ಲಮಪ್ರಭುಗಳ ರಹಸ್ಯಮಯವಾದ ಈ ಸೂತ್ರ ಮಾನವ ಕುಲಕ್ಕೆ ಬೇಕೇಬೇಕು. ಕಾಯ ಆಪತ್ಕಾಲಕ್ಕೆ ಸಿಲುಕಿದೆ. ಬ್ರಹ್ಮ ವಿಷ್ಣು ರುದ್ರ ತಾನೇ ಆದರೂ ಕಾಯದಲ್ಲಿ ಹುಟ್ಟಿದ ಕಾಮ ಕಾಯವನ್ನೇ ಕಿತ್ತು ತಿನ್ನುತ್ತಲಿದೆ. ಕಾಯದಲ್ಲಿರುವ ಜ್ಞಾನದ ಸಂಪತ್ತು ಕಾಯಕ್ಕೆ ಲಭ್ಯವಾಗದೆ ಕಾಯ ಮೌಢ್ಯಕ್ಕೆ ಬಲಿಯಾಗಿದೆ. ಕಾಯದ ಜ್ಞಾನ ಕಾಯಕ್ಕೆ ಒಲಿಯಬೇಕು. ಕಾಯದ ಕಲ್ಪನೆ ಕಾಯದಿಂದಲೇ, ಕಾಯದ ಜ್ಞಾನದಿಂದಲೇ ಸುಟ್ಟು ಬೂದಿಯಾಗಬೇಕು. ಕಣ್ಣಲ್ಲಿ ಅಡಗಿದ ಜ್ಞಾನ ಕಾಯದಲ್ಲಿ ಅಡಗಿದ ಕಾಮವನ್ನು ಸುಡಲಿಲ್ಲವೆ ? ಹಾಗೆ !

ಕಾಮದ ಕಣ್ಣು, ಮುಕ್ಕಣ್ಣನ ಕಣ್ಣು ,ಕಣ್ಣಲ್ಲಿಯೇ ಇದೆ. ಒಂದು ಕಣ್ಣು ಅಜ್ಞಾನವಾದರೆ ಮತ್ತೊಂದು ಜ್ಞಾನ. ಜ್ಞಾನದ ಕಣ್ಣಿನಿಂದಲೇ ಅಜ್ಞಾನದ ಕಣ್ಣನ್ನು ಸುಟ್ಟುಕೊಳ್ಳಬೇಕು. ಸುಡುವುದಕ್ಕೆ ಶಿವನಿಲ್ಲ ; ಕಾಯ ಶವವಾಗುವ ಮುನ್ನ ಕಲ್ಪನೆಯ ಕಾಮ, ಕಲ್ಪನೆಯ ಶೃಂಗಾರ ಸಾಧನವಾದ ಜ್ಞಾನದ ಬೆಂಕಿಯಿಂದಲೇ ಸುಟ್ಟುಕೊಳ್ಳಬೇಕು. ಸುಡುವುದೆಂದರೆ ತಿಳಿಯುವುದು. ಕಾಯದ ಶೃಂಗಾರ, ಕಾಮಿನಿಯರ ಕೂಟ ಕಾಯದ ಜ್ಞಾನದಿಂದಲೇ ತಿಳಿಯುವುದು.

**99**

**ಕಾಯದಿಂದ ಕಂಡೆಹೆನೆಂದಡೆ ಬ್ರಹ್ಮನ ಹಂಗು,**

**ಜೀವದಿಂದ ಕಂಡೆಹೆನೆಂದಡೆ ವಿಷ್ಣುವಿನ ಹಂಗು,**
**ಅರಿವಿನಿಂದ ಕಂಡೆಹೆನೆಂದಡೆ ರುದ್ರನ ಹಂಗು .**
**ಕಾಬ ಕಾಬಲ್ಲಿ ಕಂಡೆಹೆನೆಂದಡೆ ನಾಡೆಲ್ಲರ ಹಂಗು.**
**ಇವನೆಲ್ಲವನಲ್ಲಾ ಎಂದು ನಿಲಿಕಿ ನೋಡಿ ಕಂಡ**
**ಅಂಬಿಗ ಚೌಡಯ್ಯ .**

ಕಾಯದಲ್ಲಿರುವ ಕಾಯದ ಸಂಪತ್ತು ಕಾಯವೇ ಕಂಡುಕೊಳ್ಳಬೇಕಾದರೆ ಬ್ರಹ್ಮ ಬೇಕೆ ? ವಿಷ್ಣು ಬೇಕೆ ? ಏನು ರುದ್ರ ಬೇಕೆ ? ಕಾಬ ಕಾಬಲ್ಲಿ ಅಂದರೆ ಕಂಡವರಲ್ಲಿ ಕಾಣ ಹೋದರೆ ನಾಡ ಜನರ ಹಂಗು. ಇದೆಲ್ಲವನ್ನು ಆಚೆ ಸರಿಸಿ ಕಾಯದಲ್ಲಿರುವ ಕೈಲಾಸವನ್ನು ಕಾಯವನ್ನು ಆವರಿಸಿದ ಮನದಿಂದಲೇ ಕಾಣಲು ಹೋದರೆ ಅಲ್ಲಿಯೇ ಇದ್ದಾನೆ ಕೈಲಾಸಪತಿ. ಕಾಯದ ಸಂಪತ್ತು ಕಾಯದಲ್ಲಿಯೇ ಇದೆ. ಅದನ್ನು ಪಡೆಯಲು ಬ್ರಹ್ಮ ವಿಷ್ಣು ರುದ್ರನ ಹಂಗು ಬೇಕಾಗಿಲ್ಲ. ನಾಡಜನರ ಹಂಗಿನ ಅವಶ್ಯಕತೆಯೂ ಇಲ್ಲ.

ಕಾಯದಲ್ಲಿ ಅದ್ಭುತವಾದ ಅರಿವಿನ ರಹಸ್ಯ ಅಡಗಿದೆ. ಕಾಯ ಇರುವುದರೊಳಗಾಗಿ ಕಂಡುಕೊಂಡು ಅದನ್ನು ಕಾಯದಿಂದಲೇ ಬಳಸಬೇಕು. ಬ್ರಹ್ಮ ವಿಷ್ಣು ರುದ್ರ ಎಂಬುವವರು ಹೊರಗಿಲ್ಲ. ಕಾಯದಲ್ಲಿಯೇ ಸಂಗಮವಾಗಿದ್ದಾರೆ. ಹರಿಯುವ ಮೂರು ನದಿಗಳು ತಮ್ಮ ಹೆಸರು ಕಳೆದುಕೊಂಡು ಒಂದೆಡೆ ಕೂಡಿದ ಕ್ಷೇತ್ರಕ್ಕೆ ಸಂಗಮ ಎಂದು ಕರೆಯುತ್ತಾರೆ. ಕೂಡಿದ ಆ ಜಲಕ್ಕೆ ಕೃಷ್ಣೆ ಎನ್ನಲು ಬರುವುದಿಲ್ಲ ; ಘಟಪ್ರಭ ಎನ್ನಲು ಬರುವುದಿಲ್ಲ ; ಮಲಪ್ರಭ ಎನ್ನಲು ಬರುವುದಿಲ್ಲ. ಮೂರು ನದಿಗಳು ಹೆಸರು ಕಳೆದುಕೊಂಡು ಸಂಗಮನಾಥನಾದವು. ಹಾಗೆಯೇ ಕಾಯವನ್ನು ಆವರಿಸಿದ ಮನ ಬ್ರಹ್ಮನೆಂಬ ಹೆಸರು ಪಡೆಯಿತು. ಕಾಯ ವಿಷ್ಣು ವೆಂಬ ಹೆಸರನ್ನು ಪಡೆಯಿತು. ಕಾಯದಲ್ಲಿ ಸಂಗಮವಾದ ಜ್ಞಾನ ರುದ್ರನೆಂಬ ಹೆಸರು ಪಡೆಯಿತು. ಕಾಯಕ್ಕೆ ಅರಿವಾಗದಿದ್ದರೆ ಕಾಯ ಈ ಮೂವರನ್ನು ದೇವರೆಂದು ಹೊರಗೆ ಆಲಯ ನಿರ್ಮಿಸಿ ಆರಾಧಿಸುತ್ತದೆ. ತಿಳಿದರೆ ಅವರು ಕಾಯದಲ್ಲಿಯೇ ಇದ್ದಾರೆ.

ಕಾಯದಲ್ಲಿ ಸಂಗಮವಾದ ಅರಿವನ್ನು ತಿಳಿಯಲು ಬ್ರಹ್ಮ ವಿಷ್ಣು ರುದ್ರರ ಸಹಾಯ ಬೇಕಿಲ್ಲ. ಅನ್ಯ ಕಾಯದ ಹಂಗಿನ ಅವಶ್ಯಕತೆಯೂ ಇಲ್ಲ.

''ಕಾಯದ ಕರಣದ ಕೈಯಲು ಪದಾರ್ಥವ ಹಿಡಿವಲ್ಲಿ ನಿಮಗೆ ಕೊಡುವ ಭರದ ಭೀತಿಯಿಂದಾನರಿಯದಿಪ್ಪೆನಾಗಿ, ಎನ್ನ ನೀನರಿದು ಸಲಹುತಿಪ್ಪೆಯಯ್ಯಾಕೂಡಲಸಂಗಮ ದೇವಾ''

ಬಸವಣ್ಣನವರ ಈ ವಚನ ಅತಿ ರಹಸ್ಯವಾದುದು. ಅರಿದಂತೆಲ್ಲಾ ಅರಿವಿನ ಅಮೃತದ ಬುಗ್ಗೆಯಾಗಿ ಧಾರಾಕಾರವಾಗಿ ತನ್ನ ಬಾಯಲ್ಲಿಯೇ ಸುರಿವುದು. ಈ ರಹಸ್ಯ ಯಾವ ಕವಿ-ಸಾಹಿತಿ ಮಾನ್ಯರಿಗೆ ಕೂಡಾ ನಿಲುಕದು.

ಕಾಯದ ಇಂದ್ರಿಯಗಳನ್ನು ಮನ ಆವರಿಸಿದೆ. ಆವರಿಸಿದ ಮನಕ್ಕೆ ಸುಖಬೇಕು. ಆ ಸುಖವನ್ನು ಮನ ಕಾಯದಿಂದಲೇ ಭೋಗಿಸುತ್ತದೆ. ಕಾಯ ಅರಿವಿನ ಸಂಪತ್ತು . ಕೂಡಲ ಸಂಗಯ್ಯನೆಂಬ ಅರಿವಿನ ಸಂಪತ್ತು . ಅರಿವು ಮನಗಳೆರಡು ಕಾಯದಲ್ಲಿಯೇ ಸಂಗಮವಾಗಿವೆ. ಇಂದ್ರಿಯ ಗಳಿಗೆ ಪದಾರ್ಥ ಬೇಕು. ಕಾಯದಲ್ಲಿಯ ವಾಸಮಾಡಿದ ಅರಿವಿನ ಸಂಗಯ್ಯನಿಗೆ ಪದಾರ್ಥವ ಹಿಡಿದು ಕೊಡುವ ಭರದ ಭೀತಿಯಿಂದಾಗಿ ನಿಮ್ಮ (ಅರಿವ)ನ್ನು ಅರಿಯಲು

ಸಾಧ್ಯವಾಗಲಿಲ್ಲ. ಹಾಗಾದರೇನಂತೆ ನೀನು ಎನ್ನನು ಅರಿದು ಸಲಹುತ್ತಿರುವೆಯಲ್ಲ! ಓ ದೇವರ ದೇವನಾದ , ಕಾಯದಲ್ಲಿಯೇ ಕೂಡಿ ಸಂಗಮವಾದ ಸಂಗಯ್ಯನೆ !

ಕಾಯದಲ್ಲಿದ್ದು ಕಾಯಕ್ಕೆ ಕರಣಂಗಳನ್ನು ಸೃಷ್ಟಿಸಿದೆ. ಆ ಕರಣಂಗಳಿಂದ ಬೇಡುವಂತೆ ಮಾಡಿದೆ. ಬೇಡಿ ಬಂದ ಆ ಪದಾರ್ಥವನ್ನು ಉಣ್ಣುವುದರಲ್ಲಿಯೇ ತನ್ಮಯನನ್ನಾಗಿ ಮಾಡಿದೆ. ಬೇಡಿ ಕಾಡಿ ಕೂಡದಂತೆ ಮಾಡುವ ಲೀಲೆ ನಿನ್ನದು. ಆದರೂ ಕಾಯದಲ್ಲಿ ಅಗಲದಂತೆ ಕೂಡಿ, ಕಾಯವನ್ನೇ ಕಾಡುವ ನಿನ್ನ ಲೀಲೆ ಆಶ್ಚರ್ಯ ! ಅದ್ಭುತ ! ಪರಮಾಶ್ಚರ್ಯ !

**100**

**ಕಾಲ ವೇಳೆಯನರಿತು ಕೂಗಿದ ಕೋಳಿಯ ಕಂಡು**
**ಊರೆಲ್ಲರು ಬೆಳಗಾಯಿತ್ತೆಂದು ಏಳುವರಿಂದ ಕಡೆಯೆ ?**
**ಹೇಳುವ, ಕೇಳುವ ಮಾತ ಕೇಳಿ ಆರಮರೆದು ಮೂರನರಿದು**
**ಈರೈದ ಕಂಡು ಬೇರೈದರಲ್ಲಿ ಗಾರಾಗದೆ,**
**ಸಾರಿದೆ, ಕೆಡಬೇಡೆಂದನಂಬಿಗ ಚೌಡಯ್ಯ .**

ಕತ್ತಲೆ ಕಳೆದು ಬೆಳಗಾಯಿತೆಂದು ಕೋಳಿಗೆ ಅನುಭವಕ್ಕೆ ಬಂದ ಮೇಲೆ ಅದು ಕೂಗುತ್ತದೆ. ಊರ ಜನ ಕೋಳಿ ಕೂಗಿದುದನ್ನು ಕೇಳಿ ಅನುಭವಕ್ಕೆ ತಂದುಕೊಂಡು ಏಳುತ್ತಾರೆ. ಕೋಳಿ ಕೂಗಿದರೆ ಬೆಳಗಾಗುವುದೆಂದು ನಂಬುವುದೆ? ತನುವಿನ ಅನುಭವವೆತ್ತ , ಕೋಳಿಯ ಅನುಭವವೆತ್ತ? ತನುವಿನಲ್ಲಿ ತನ್ಮಯವಾದ ಅನುಭವವನ್ನು ಮರೆತು ಕೋಳಿ ಕೂಗಿದುದನೇ ಕೇಳಿ ತನುವಿಗೆ ಎಚ್ಚರವಾಯಿತಲ್ಲ.

ಹೇಳುವ ಕೇಳುವ ಮಾತ ಕೇಳಿ ತನುವಿನಲ್ಲಿರುವ ಅರಿವಿನ ಅನುಭವವನ್ನೇ ತನು ಮರೆತು ಕೆಟ್ಟಿತಲ್ಲ. ಬೆಳಗಿಂಗೆ ಬೆಳಗಾಗಿ ಬೆಳಗುವ ಅರಿವಿನ ಅನುಭವ ತನುವಿನಲ್ಲಿ ಸದಾ ನುಡಿದು ಹೇಳುತ್ತದೆ. ತನು ಅದನ್ನು ಆಲಿಸದೆ ಕೋಳಿಗಿಂತ ಕಡೆಯಾಗುವುದೆ ?

ಅನ್ಯ ಮಾತು ಕೇಳುವುದಕ್ಕಿಂತ ತನುವಿನಲ್ಲಿ ತನ್ಮಯವಾದ ಅರಿವಿನ ಅನುಭವದ ಮಾತು ಕೇಳು, ಅದರಂತೆ ನಡೆ, ನಡೆಯಲ್ಲಿ ತಪ್ಪಿದಾಗ ನುಡಿದು ಹೇಳುವುದನ್ನು ಕೇಳು. ಇದು ತನುವಿನಲ್ಲಿಯೇ ನಡೆಯುವ ಪಾಠ. ಈ ಉಪನ್ಯಾಸ ರಾಮಾಯಣ ಮಹಾ ಭಾರತದಂತಲ್ಲ. ವೇದ ಆಗಮ ಪುರಾಣ ಉಪ ನಿಷತ್ತುಗಳಂತಲ್ಲ. ನುಡಿದು, ನುಡಿದಂತೆ ನಡೆಯಲು ಬಾರದಿದ್ದಾಗ ಅಂತರಾಳದಲ್ಲಿಯೇ ಕೊಡುವ ಪೆಟ್ಟು.

ಅಂಗದಲ್ಲಿಯೇ ನುಡಿದು ಹೇಳುವ ಲಿಂಗಯ್ಯನ ಉಪನ್ಯಾಸದಿಂದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಅರಿಷಡ್ವರ್ಗಗಳು ತೊಲಗುತ್ತವೆ. ಸಾತ್ವಿಕ ರಾಜಸ ತಾಮಸವೆಂಬ ಮೂರು ಗುಣಗಳು ಅಳಿದು ಅಂಗ ನಿರ್ಗುಣಿ ಯಾಗುತ್ತದೆ.

ಮಹಾಜ್ಞಾನದ ಪಂಚ ಜ್ಞಾನೇಂದ್ರಿಯಗಳನ್ನು ಕಂಡು ಐದಿಂದ್ರಿಯಗಳ ಗೊಡವೆಗೆ ಹೋಗಿ ಗಾರಾಗದೆ ಅಂದರೆ ತಪ್ಪಿತಸ್ಥನಾಗದೆ, ವ್ಯರ್ಥ ಕೆಡಬೇಡವೆಂದು ಚೌಡಯ್ಯ ಶರಣರು ಮನಕ್ಕೆ ಉಪದೇಶ ಮಾಡಿದ್ದಾರೆ.

**ಈರೈದು ಕಂಡು ಬೇರೈದರಲ್ಲಿ ಗಾರಾಗದೆ ಸಾರಿದೆ :**

ಕಣ್ಣು ಕಿವಿ ಮೂಗು ಚರ್ಮ ನಾಲಿಗೆ ಇವು ಐದು ಜ್ಞಾನೇಂದ್ರಿಯಗಳು. ಕಣ್ಣಿನಲ್ಲಿ ಜ್ಞಾನವಿದೆ. ನೋಡಿ ಕೆಡುವ ಅಜ್ಞಾನವೂ ಇದೆ. ಕಣ್ಣಿನ ಜ್ಞಾನ ಕಣ್ಣಿನಿಂದಲೇ ಅರಿತು ,ಕಣ್ಣಿನ ಜ್ಞಾನದಿಂದಲೇ ಕಣ್ಣಿನ ಅಜ್ಞಾನವನ್ನು ಕೊಂದು, ಸಾಧ್ಯವಾದರೆ ಕಣ್ಣಿನಿಂದಲೇ ಸಾರಿ ಹೇಳು. ನನ್ನ ಕಣ್ಣಿನ ಅಜ್ಞಾನವನ್ನು ನಾನೇ ಕೊಂದೆನೆಂದು ವ್ಯರ್ಥ ಕೆಡಬೇಡ ಎಲೆ ಮನವೆ.

ಕಿವಿ,ಮೂಗು,ಚರ್ಮ, ನಾಲಗೆಯಲ್ಲಿ ಜ್ಞಾನ ಭರಿತವಾಗಿದೆ. ಹಾಗೆಯೇ ಅಜ್ಞಾನವೂ ಆವರಿಸಿಕೊಂಡಿದೆ. ಜ್ಞಾನದಿಂದಲೇ ಅಲ್ಲಲ್ಲಿಯೇ ಹುಟ್ಟಿದ ಅಜ್ಞಾನವನ್ನು ಕೊಂದು ಆಯಾ ಜಾಗದಿಂದಲೇ ಸಾರಿ ಹೇಳಬೇಕಾಗಿದೆ. ವ್ಯರ್ಥ ಕೆಡುವುದು ಉಚಿತವಲ್ಲ.

ಹೇಳುವ ಕೇಳುವ ಮಾತಿನಿಂದ ಅಜ್ಞಾನ ತೊಲಗುವುದಿಲ್ಲ. ಅದು ಅವರವರ ಅನುಭವ. ಕೇಳಿದರೆ ಹೇಳಲು ಬರುತ್ತದೆಯೇ ಹೊರತು ಇರಲು ಬರುವುದಿಲ್ಲ. ಅಂಗ ಲಿಂಗಾಂಗವಾಗಿ ಜ್ಞಾನದಿಂದ ಇರಲು ಬಂದಿದೆ. ನುಡಿದು ಹೇಳಲು ಅಲ್ಲ!

**101**

**ಕಾಶಿಯಾತ್ರೆಗೆ ಹೋದೆನೆಂಬ ಹೇಸಿ ಮೂಳರ ಮಾತ ಕೇಳಲಾಗದು !**
**ಕೇದಾರಕ್ಕೆ ಹೋದೆನೆಂಬ ಹೇಸಿ ಹೀನರ ನುಡಿಯ ಲಾಲಿಸಲಾಗದು !**
**ಸೇತುಬಂಧ ರಾಮೇಶ್ವರಕ್ಕೆ ಹೋದೆನೆಂಬ ಸರ್ವಹೀನರ ಮುಖವ ನೋಡಲಾಗದು !**
**ಪರ್ವತಕ್ಕೆ ಹೋದೆನೆಂಬ ಪಂಚ ಮಹಾ ಪಾತಕರ ಮುಖವ ನೋಡಲಾಗದು !**
**ಅದೆಂತೆಂದಡೆ : ಕಾಯವೆ ಕಾಶಿ, ಒಡಲೆ ಕೇತಾರ,**
**ಮಾಡಿ ನೀಡುವ ಹಸ್ತವೇ ಸೇತುಬಂಧ ರಾಮೇಶ್ವರ,**
**ಮಹಾಲಿಂಗವ ಹೊತ್ತಿರುವ ಶಿರಸ್ಸೇ ಶ್ರೀಶೈಲ ಪರ್ವತ ನೋಡಾ.**
**ಇಂತಿವನರಿಯದೆ ಪರ್ವತಕ್ಕೆ ಹೋಗಿ, ಪಾತಾಳ ಗಂಗೆಯ ಮುಳುಗಿ,**
**ತಲೆಯ ಬೋಳಿಸಿಕೊಂಡು, ಗಡ್ಡವ ಕೆರೆಸಿಕೊಂಡು, ಮೀಸೆಯ ತರಿಸಿಕೊಂಡು,**
**ಗಂಗೆಯೊಳು ಕೋಣನ ಹಾಂಗೆ ಮೈಗೆಟ್ಟು ಫಕ್ಕನೆ ಮುಳುಗಿ,**
**ಅಲ್ಲಿಂದ ಬಂದು ಅನ್ನ ವಸ್ತ್ರವಂ ಕಾಸು ವೀಸವಂ ಕೊಟ್ಟು,**
**ಪಾಪ ಹೋಯಿತ್ತೆಂದು**
**ಅಲ್ಲಿಂದ ಬಂದು ಲಿಂಗವಡಿಗಡಿಗೆ ಹಾಯ್ದು,**
**ಬಾರದ ಪಾಪವ ತಾವಾಗ ಬರಸಿಕೊಂಡು, ತಗರ ಜನ್ಮದಲ್ಲಿ ಹುಟ್ಟುವರಯ್ಯಾ .**
**ಕೋಲು ಪುಟ್ಟಿಯಂ ಕೊಟ್ಟು ಅಟ್ಟಿಸಿ ಬಿಟ್ಟ ಬಳಿಕ,**
**ಅಲ್ಲಿಂದ ಬಂದವರಿಗೆ ಇಲ್ಲಿದ್ದವರು ಹೋಗಿ ಇದಿರುಗೊಂಡು ಕರೆತರುವುದಕ್ಕೆ !**
**ಕತ್ತೆ ಮೂಳ ಹೊಲೆಯರಿರಾ, ನೀವು ಕೇಳಿರೋ, ಅದೆಂತೆಂದಡೆ :**
**ಶ್ರೀ ಮಹಾಪರ್ವತಕ್ಕೆ ಹೋದವರು ತಿರುಗಿ ಬಪ್ಪರೆ ?**
**ಶ್ರೀ ಮಹಾ ಮೇರುವಿಗೆ ಹೋದವರು ಮರಳಿ ಬಪ್ಪರೆ ?**
**ಛಿ ! ಛಿ ! ನೀಚ ಮೂಳ ದಿಂಡೆಯ ನೀಳ ಹೊಲೆಯರೆಂದಾತ**
**ನಮ್ಮ ದಿಟ್ಟ ವೀರಾಧಿವೀರನಂಬಿಗರ ಚೌಡಯ್ಯನು.**

ಮನ ಕಾಯವನ್ನು ಕಾಶಿ, ಕೇದಾರ, ಸೇತುಬಂಧ ರಾಮೇಶ್ವರ, ಶ್ರೀಶೈಲ ಪರ್ವತಕ್ಕೆ ಕರೆದುಕೊಂಡು ಹೋಗುತ್ತದೆ. ಕಾಯವೇ ಕಾಶಿ, ಒಡಲೇ ಕೇದಾರ, ಹಸ್ತವೇ ಸೇತುಬಂಧ ರಾಮೇಶ್ವರ, ಶಿರವೇ ಶ್ರೀಶೈಲ ಪರ್ವತ ಎಂದು ಮನ ಅರಿಯುವುದಿಲ್ಲ.

ಮೀಸೆ ಗಡ್ಡ ತಲೆಯ ಬೋಳಿಸಿಕೊಂಡು, ಕೋಣದ ಹಾಗೆ ಗಂಗೆಯೊಳಗೆ ಮುಳುಗಿ ಅನ್ನ ವಸ್ತ್ರ ಕಾಸು ದಾನ ಮಾಡುತ್ತ ಪಾಪ ಹೋಯಿತೆಂದು ಭಾವಿಸಿ ಪುನಃ ಪ್ರಯಾಣ ಮಾಡುತ್ತ ಮನ ಕಾಯದ ಆಯಸ್ಸು ಕಳೆಯುತ್ತದೆ.

ಕಾಯವನ್ನು ಹೀಗೆ ಹಗಲಿರುಳೆನ್ನದೆ ಕಾಡುವ ಮನವನ್ನು ಕತ್ತೆ ಮೂಳ ಎಂದು ಜರಿದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಮಹಾ ಮೇರುವುಗೆ ಹೋದವರು ಮತ್ತೆ ಬರುವರೆ ? ಜ್ಞಾನದ ತುತ್ತ ತುದಿಗೆ ಹೋದ ಕಾಯ ಪುನಃ ಅಜ್ಞಾನದತ್ತ ಜಾರುವುದೆ ?

ಶಿರವೆಂಬುದು ಶ್ರೀಶೈಲ ಪರ್ವತ. ಕಾಯವೆಂಬುದೇ ಕೈಲಾಸ ; ಕಾಶೀಕ್ಷೇತ್ರ. ಅಲ್ಲಿ ಸಾಕ್ಷಾತ್ ಶಿವನೇ ನೆಲೆಸಿದ್ದಾನೆ. ಆ ಶಿರವನ್ನು ಕಂಡು ಕೊಂಡ ಮನ ಪುನಃ ಅಜ್ಞಾನದತ್ತ ಜಾರಬಹುದೆ ?

ಕಂಗಳ ಮುಂದಿನ ಕತ್ತಲೆ ಇದೇನೊ ? ಮನದ ಮುಂದಣ ಮರವೆ ಇದೇನೊ? ಒಳಗಣ ರಣರಂಗ ಹೊರಗಣ ಶೃಂಗಾರ ! ಬಳಕೆಗೆ ಬಂದ ಬಟ್ಟೆ ಇದೇನೊ ಗುಹೇಶ್ವರಾ ?

ಕಾಯದೊಳಗೆ ಕಾಶೀ ರಾಮೇಶ್ವರ ಶ್ರೀಶೈಲ ಕ್ಷೇತ್ರವನ್ನು ಕಾಣದೆ ಮನ ಆಯಾ ಕ್ಷೇತ್ರ ಗಳಿಗೆ ಕಾಯವನ್ನು ಅಲೆದಾಡಿಸುತ್ತದೆ. ಮನದ ಮರೆವು ಮೈಯ ಅರಿವನ್ನೇ ಮರೆಯಿಸಿದೆ. ಮೈಯೊಳಗೆ ರಣರಂಗವನ್ನು ಸೃಷ್ಟಿಸಿ ಹೊರಗಡೆ ಶೃಂಗಾರವನ್ನು ತೋರಿಸುತ್ತಲಿದೆ.

ಕಾಯ ಅರಿವಿನ ಬಳಕೆಗಾಗಿ ಬಂದ ಅರಿವಿನ ಉಪಕರಣ ; ದಾರಿ ! ಅರಿವಿನ ದಾರಿಯನ್ನೇ ಮರೆತು ಮರವೆಯಿಂದ ಕಾಯವನ್ನು ಕಾಶಿ ರಾಮೇಶ್ವರ ಕೇದಾರ ಶ್ರೀಶೈಲಕ್ಕೆ ಕರೆದು ಕೊಂಡು ಹೋಗಿ ಇನ್ನು ಪವಿತ್ರನಾದೆನೆಂದು ಮೈಮರೆಸುತ್ತದೆ. ಪುನಃ ಕಾಯವನ್ನು ಅಜ್ಞಾನದ ಕಾಯಕಕ್ಕೆ ಕರೆದೊಯುತ್ತದೆ. ಜ್ಞಾನದ ತುತ್ತ ತುದಿಗೆ ಹೋದ ಕಾಯ ಪುನಃ ಅಜ್ಞಾನಕ್ಕೆಳೆಸುವುದೆ ?

ಪುಣ್ಯ ಕ್ಷೇತ್ರಗಳು ಹೊರಗಿಲ್ಲ. ಕಾಯವೇ ಒಂದು ಪುಣ್ಯಕ್ಷೇತ್ರ . ಹೀಗಾಗಿ ಅರಿವೆಂಬ ಶಿವನೇ ಕಾಯದಲ್ಲಿ ಸಂಗಮವಾಗಿ ಅದನ್ನು ಕೈಲಾಸವನ್ನಾಗಿಸಿದ್ದಾನೆ. ಮನಕ್ಕೆ ಮರೆವು ಆವರಿಸಿರುವುದರಿಂದಾಗಿ ಒಡಲೊಳಗಿದ್ದು ಒಡಲಿಂಗೆ ಆಧಾರವಾಗಿದ್ದು ಒಡಲನ್ನು ಸೋಂಕದೆ ಒಡಲನ್ನೇ ಬೆಳಗುವ ಬೆಳಕು ಮನಕ್ಕೆ ಕಾಣುವುದಿಲ್ಲ, ಕಂಗಳ ಮುಂದೆ ಕಾಣುವ ಕತ್ತಲೆಯನ್ನೇ ಬೆಳಕೆಂದು ಭ್ರಮಿಸಿ ಮನ ಕಾಯವನ್ನು ಅಜ್ಞಾನವೆಂಬ ಕತ್ತಲೆಯತ್ತ ಕರೆದೊಯ್ಯುತ್ತದೆ.

ಕಾಯದಲ್ಲಿ ಸಂಗಮವಾದ ಬೆಳಕು ಕಾಯಕ್ಕೆ ಪರಿಚಯವಾದರೆ ಸಾಕು ಕಾಯವೇ ಕೈಲಾಸ!

**102**

**ಕಾಷ್ಟದಲ್ಲಿ ನಿಂದಗ್ನಿ ಮಥನ**
**ಘಟವಾರಿಯಿಂದ ಅಡಗಿ ಸುಡುವುದು, ಅದರ ಭೇದ.**
**ಇಂತಿ ಚತುಷ್ಟಯವನರಿದು ಕಂಡಲ್ಲಿ**
**ಪ್ರಾಣಲಿಂಗಿಯೆಂದನಂಬಿಗ ಚೌಡಯ್ಯ .**

ಕಟ್ಟಿಗೆಯಲ್ಲಿ ಅಗ್ನಿ ಸಂಗವುವಾಗಿ ಕಟ್ಟಿಗೆಯನ್ನೇ ಸುಡುವುದು. ಒಡಲಲ್ಲಿ ವಾರಿ(ಮಂಜುಗಡ್ಡೆ) ಅಡಗಿ ವಡವಾಗ್ನಿಯಾಗಿ ಸುಡುವುದು. ಅಗ್ನಿ ಕಟ್ಟಿಗೆಯನ್ನು ಪೋಷಿಸುತ್ತದೆ. ಕಟ್ಟಿಗೆಯಲ್ಲಿಯೇ ಅಡಗಿ ಕಟ್ಟಿಗೆಯನ್ನೇ ತಿನ್ನುತ್ತದೆ. ಉದಕ ಒಡಲನ್ನು ಪೋಷಿಸುತ್ತದೆ. ಒಡಲು ಉದಕದಿಂದಲೇ ಭರಿತವಾಗಿದೆ. ಉದಕವೇ ರಕ್ತವಾಗಿದೆ. ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿದೆ. ಅವು ಯಾವೂ ಸೋರದಂತೆ ಚರ್ಮದ ಕವಚವೂ ಆಗಿ ಒಡಲನ್ನು ಕಾಂತಿಯುತವನ್ನಾಗಿ ಮಾಡಿದೆ. ಉದಕದಿಂದಲೇ ನಿರ್ಮಾಣವಾದ ಒಡಲು ಉದಕದಿಂದಲೇ ಸುಡುತ್ತದೆ.

'ಉದಕ ದೊಳಗೆ ಬಯಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು. ಸಸಿಯೊಳಗಣ ರಸದ ರುಚಿಯಂತಿದ್ದಿತ್ತು. ನನೆಯೊಳಗಣ ಪರಿಮಳದಂತಿದ್ದಿತ್ತು. ಕೂಡಲಸಂಗಮದೇವಾ ನಿಮ್ಮ ನಿಲುವು ಕನ್ಯೆಯೊಳಗಣ ಸ್ನೇಹದಂತಿದ್ದಿತ್ತು' ಎಂದು ರಹಸ್ಯದ ಮಾತು ಗಳನ್ನಾಡಿದ್ದಾರೆ ಬಸವಣ್ಣನವರು.

ಒಡಲಲ್ಲಿ ಬಚ್ಚಿಟ್ಟುಕೊಂಡ ಉದಕ ಬಯಕೆಯ ಕಿಚ್ಚಾಗಿದೆ. ಹದವರಿತು ಒಡಲಿಗೆ ಬೆಚ್ಚನೆಯ ಕಾವು ಕೊಡುತ್ತ ಕಿಚ್ಚು ಒಡಲಲ್ಲಿಯೇ ಬಚ್ಚಿಟ್ಟುಕೊಂಡಿದೆ. ಅರಿತರೆ ಒಡಲು; ಮರೆತರೆ ಒಡಲಾಗ್ನಿ ಒಡಲನ್ನೇ ಸುಡುತ್ತದೆ. ಏನೀ ರಹಸ್ಯ. ಉದಕ ಒಡಲಾಗಿ, ಅನುಭವಕ್ಕೆ ಬಂದು ಅರಿವಿನ ಪರಮಾನಂದ ಒಡಲಲ್ಲಿ ಉಂಟು ಮಾಡಿ, ಒಡಲನ್ನೇ ಮರೆಯಿಸಿ, ಒಡಲಲ್ಲಿರುವ ಉದಕವನ್ನು ಮರೆಯಿಸಿ, ಮಂದಾಗ್ನಿಯನ್ನು ಮರೆಯಿಸಿ, ಒಡಲೆಂದು ಹೆಸರು ಪಡೆದಿದೆ.

ಉದಕದಲ್ಲಿ ಅಗ್ನಿ ಅರಿವು ಮರೆವು ಬೆರೆತಿದೆ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಅಡಗಿವೆ. ಅದರಲ್ಲಿ ಬೆರೆತ ಭೇದ ಅದೇ ತಿಳಿಯದಂತೆ ಒಡಲಾಗಿದೆ. ಉದಕ ಒಡಲಲ್ಲಿ ಅಡಗಿ ಒಡಲನ್ನೇ ಸುಡುತ್ತದೆ.

ಉದಕ ಕಬ್ಬಿನ ಸಸಿಯಲ್ಲಿ ಅಡಗಿ ಸಿಹಿಯಾಗಿದೆ. ಮೊಗ್ಗಿನಲ್ಲಿ ಅಡಗಿ ಅರಳಿ ಪರಿಮಳವಾಗಿದೆ. ಕನ್ಯೆಯೊಳಗೆ ಅಡಗಿ ಸ್ನೇಹದ ಪ್ರೇಮವಾಗಿದೆ. ಮರೆತರೆ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವಾಗುತ್ತದೆ.

ಕಾಷ್ಠದಲ್ಲಿ, ಘಟದಲ್ಲಿ ಅಡಗಿದ ವಾರಿಯನ್ನು ವರ್ಣಿಸಲು ಅಸಾಧ್ಯ. ''ಉದಕದಲುತ್ಪತ್ಯವಾದ ಶತಪತ್ರದಂತೆ ಸಂಸಾರ ಸಂಗವ ತಾ ಹೊದ್ದದಿರಬೇಕು. ಕಾಯವೇ ಪೀಠ, ಮನವೇ ಲಿಂಗವಾದಡೆ, ಕೊರಳಲ್ಲಿ ನಾಗವತ್ತಿಗೆ ಏಕೋ ಶರಣಂಗೆ - ಗುಹೇಶ್ವರಾ''

ಉದಕ ಮಣ್ಣಾಗಿ, ಕೆಸರಾಗಿ, ಅದರಲ್ಲಿಯ ಕಮಲವೂ ತಾನೇ ಆಗಿ ಮತ್ತೆ ಉದಕದ ಮೇಲೆ ಹೂವಾಗಿ ಅರಳಿದೆ. ಉದಕದಿಂದ ಹುಟ್ಟಿದ ಪತ್ರ ಉದಕವನ್ನೇ ಉಂಡು ಉದಕವನ್ನು ತಾಗಿಸಿಕೊಳ್ಳದೆ ಉದಕದ ಮೇಲೆ ನಿಂತಿದೆ. ಏ ಉದಕವೇ ಏನೀ ನಿನ್ನ ಚಿತ್ರ - ವಿಚಿತ್ರ; ವರ್ಣಿಸಲಸದಳ !

ಅಂತೆಯೇ ಉದಕ ಕಾಯವಾಗಿದೆ. ಕಾಯ ಕಾಯದೊಂದಿಗೆ ಬೆರೆತು ಸಂಸಾರವಾಗಿದೆ. ಹುಟ್ಟಿಸಿದ ಉದಕವನ್ನೇ ಮರೆತು ಕಾಯಕ್ಕೆ ಮಾರಿಯಾಗಿದೆ. ಕಾಯ ಗುರುವಾಗಿದೆ; ಕಾಯ ಶಿಷ್ಯನಾಗಿದೆ. ಕಾಯ ಕಾಯವನ್ನೇ ಮರೆತು ಅದಕ್ಕೊಂದು ಪೀಠ ಮಾಡಿಕೊಂಡು ತನ್ನಂತೆಯೇ ಇರುವ ಕಾಯವನ್ನೇ ಯಾಮಾರಿಸುತ್ತದೆ. ಕಾಯ ಮಾಡಿದ ದೇವರನ್ನು ಉದಕದಿಂದಲೇ ಪೂಜಿಸಿ ಉದಕ ಉದಕವನ್ನೇ ಮರೆತಿದೆ. ಕಾಯ ಒಂದು ಅರಿವಿನ ಪೀಠ; ಅದಕ್ಕೆ ಮತ್ತೊಂದು ಪೀಠ ಬೇಕೆ? ಉದಕದಿಂದ ಹುಟ್ಟಿದ ಕಾಯ ಉದಕವನ್ನೇ ಯಾಮಾರಿಸಿದೆ.

ಉದಕ ಉದಕವಲ್ಲ ಎನ್ನುವುದನ್ನು ಉದಕ ತಿಳಿಯಬೇಡವೆ? ಉದಕಕ್ಕೆ ಜನ್ಮ ಕೊಟ್ಟಿದ್ದು ಆಮ್ಲಜನಕ ಜಲಜನಕ. ಇವೆರಡರ ವಾಸ ಬಯಲಲ್ಲಿ. ಬಯಲು ಆಮ್ಲಜನಕಕ್ಕೂ ಜಲಜನಕಕ್ಕೂ

ಜನ್ಮ ಕೊಟ್ಟು ತನ್ನ ಬಯಲ ಗರ್ಭದಲ್ಲಿ ಬಂಧಿಸಿಕೊಂಡಿತು. ತನಗೆ ಬೇಕಾದಾಗ ಅವೆರಡನ್ನೂ ಕೂಡಿಸಿ ಒಂದನ್ನಾಗಿ ಬೆರೆಸಿತು. ನೀನು ಜಲವಾಗಿ ಪ್ರಪಂಚಕ್ಕೆ ಜನ್ಮ ನೀಡು ಎಂದು ಹರಸಿ ತನ್ನಿಂದಾಚೆ ತಳ್ಳಿತು. ಆ ಜಲದಲ್ಲಿ ತಾನೂ ಒಂದಾಯಿತು. ಆ ಜಲವೇ ಜೀವ ಜಲವಾಗಿ ನೆಲವಾಯಿತು. ಸಸ್ಯರಾಸಿಗೆ  ಜನ್ಮ ನೀಡಿತು. ಪಶು ಪಕ್ಷಿ ಪ್ರಾಣಿ, ಕ್ರಿಮಿ ಕೀಟ ., ಗಿಡ ಮರ ಬಳ್ಳಿ  ಜಲಚರ ಉರುಗಗಳು ಹುಟ್ಟಿಕೊಂಡವು. ಇದೆಲ್ಲವನ್ನು ತಿಳಿಯುವ ಅರಿವಿನ ಮನುಷ್ಯ ಗಂಗೆಯನ್ನೇ ಧರಿಸಿ, ಗಂಗೆಯಿಂದಲೇ ಜನ್ಮ ಪಡೆದು ಗಂಗಾಧರನೆನ್ನಿಸಿಕೊಂಡ.

''ರಸದ ಬಾವಿಯ ತುಡಕಬಾರದು,ಕತ್ತರಿವಾಣಿಯ ದಾಂಟಿದವಂಗಲ್ಲದೆ. ಪರುಷವಿದೆ ಕಬ್ಬುನವಿದೆ ಸಾಧಿಸಬಲ್ಲವಂಗೆ, ಶ್ರೀಶೈಲದುದಕವ ಧರಿಸಬಾರದು  ಗುಹೇಶ್ವರಾ ನಿಮ್ಮ ಶರಣಂಗಲ್ಲದೆ ''

ಉದಕ ಕಾಯಕ್ಕೆ ಜನ್ಮ ನೀಡಿ ಅಮೃತಮಯವಾದ ರಸದ ಬುಗ್ಗೆಯ ಬಾವಿಯೇ ಆಗಿದೆ. ಸಾಧಿಸಬಲ್ಲವಂಗೆ ಕಾಯ ಪರುಷವೂ ಹೌದು ; ಸಾಧಿಸಲು ಅರಿಯದವಂಗೆ ಕಬ್ಬಿಣವೂ ಹೌದು. ಅರಿತರೆ ಪರುಷ! ಮರೆತರೆ ಕಬ್ಬಿಣ.

ಕಾಯಕ್ಕೆ ಜನ್ಮ ನೀಡಿದ ಉದಕಕ್ಕೆ ಅರಿವು ಇದೆ. ಮರೆವಿನ ಪೊರೆ ಕಾಯವನ್ನು ಆವರಿಸಿಕೊಂಡಿದೆ. ಉದಕದಲ್ಲಿ ಹುಟ್ಟಿದ ಅರಿವಿನ ಅಮೃತ (ಕಾಯವನ್ನು ಧರಿಸಿದ) ಉದಕಕ್ಕೆ ಎಟಕಿದಾಗ ಅದು ಬರೀ ಜಲವಲ್ಲ; ಗಂಗೆಯನ್ನೇ ಧರಿಸಿ  ಜನ್ಮ ತಳೆದ ಗಂಗಾಧರ. ಗಂಗೆ ಗಂಗಾಧರರ ಸಂಗಮ! ಅರಿವಿನ ಆನಂದದ ನಿಲಯ.

ಘಟ, ಘಟದ  ಭೇದವನ್ನು ಘಟದಿಂದಲೇ ಅರಿತು ಅರಿವಿನ ಪ್ರಾಣವಾಯಿತು. ಅರಿವಿನ ಪ್ರಾಣಲಿಂಗವಾಯಿತು.!

**103**

**ಕಾಸಿನ ಕಲ್ಲ ಕೈಯಲ್ಲಿ ಕೊಟ್ಟು ಹೇಸದೆ ಕೊಂದ**
**ಗುರುವೆಂಬ ದ್ರೋಹಿ.**
**ಬಿಟ್ಟಡೆ ಸಮಯ ವಿರುದ್ಧ,**
**ಹಿಡಿದಡೆ ಜ್ಞಾನವಿರುದ್ಧ,**
**ಇದೆಂತೆಂಬೆನಯ್ಯಾ ಅಂಬಿಗರ ಚೌಡಯ್ಯ.**

ಕಾಯದ ಕಾಯಕವೇ ವಿಚಿತ್ರ . ಕಾಯದಲ್ಲಿ ಅರಿವು ಹುಟ್ಟಿ, ಆ ಅರಿವೇ ಕಾಯದ ರೂಪುಧರಿಸಿ, ಆ ಅರಿವೇ ಕಾಯಕ್ಕೆ ಗುರುವಾಗಿ, ಕಾಸಿನ ಕಲ್ಲನ್ನು ಚಲಾವಣೆಗಾಗಿ ಕಾಯದ ಕೈಯಲ್ಲಿ ಕೊಟ್ಟು ಕಾಯ ಕಾಯದೊಂದಿಗೆ ಹೇಸದೆ ಜಗಳ ಹಚ್ಚಿ ಕಾಯ ಕಾಯವನ್ನೇ ಕೊಂದ ಗುರುವೆಂಬ ದ್ರೋಹಿ.

ಕಾಸು ಬಿಟ್ಟಡೆ ಸಮಯ ವಿರುದ್ಧ. ಕಾಸು ಹಿಡಿದಡೆ ಕಾಯದಲ್ಲಿ ಸಂಗಮವಾದ ಜ್ಞಾನ ವಿರುದ್ಧ. ಇದ್ದಂತೆ ಇರಬಲ್ಲ ಕಾಯವೇ ಅರಿವೆಂಬ ಗುರುವಿನ ಕಾಯ. ಕಾಯಕ್ಕೆ ಕಾಸು ಬೇಕೆ? ಇತರ ಪ್ರಾಣಿಗಳು ಕಾಯಕ್ಕೆ ಬೇಕಾದ ವಸ್ತುಗಳನ್ನು ಮೂಸಿಸಿ ಅವು ಯಾರಿಗೂ ಬೇಡವೆಂದು ಮೂತ್ರ ಮಾಡುತ್ತವೆ. ಕಾಯ ಮಾತ್ರ ಹಾಗಲ್ಲ. ಕಾಯದಿಂದಲೇ ಹುಟ್ಟಿದ ಕಲ್ಲಿನ ಕಾಸು ಕಾಯಕ್ಕೆ

ಬಲು ಇಷ್ಟ ಆ ಕಾಸಿಗಾಗಿ ಕಾಯ ಕಾಯದೊಂದಿಗೆ ಯುದ್ಧ. ಕಾಯದಿಂದ ನಿರ್ಮಾಣವಾದ ಕಾಸು ಕಾಯದ ಹೆಗಲೇರಿ ಕಾಯವನ್ನೆ ಕೊಲ್ಲುತ್ತದೆ.

ಕಾಯವನ್ನೇ ಕಾಯ ಅರಿವಿನ ದಾರಿಗೆ ತರುವುದಕ್ಕಾಗಿ ಗುರುವಾಗುತ್ತದೆ. ಕಾಯ ಕಾಯದಿಂದ ಕಾಸು ಪಡೆದು ಅರಿವಿನ ಕತೆ ಹೇಳುತ್ತದೆ. ಕತೆ ಕೇಳಿದ ಕಾಯ ಕಾಯವನ್ನೇ ಗುರುವೆಂದು ಭಾವಿಸಿ ಕಾಸು ಕೊಟ್ಟು ಧನ್ಯತೆಯನ್ನು ಮೆರೆಯುತ್ತದೆ.

ಕಾಸೆಂಬ ಕಲ್ಲು ಪಡೆದ ಕಾಯ ಗುರುಕಾಯವಾಗಲು ಸಾಧ್ಯವೆ? ಕಲ್ಲು ಪಡೆದು ಕಾಯಕ್ಕೆ ಅರಿವು ಕೊಡಲು ಸಾಧ್ಯವೆ? ಪಡೆದ ಕಾಯ ಎಂದಾದರೂ ಕೊಡುವುದೆ? ಕೊಡುವ ಕಾಯ ಎಂದಾದರೂ ಪಡೆಯುವುದೆ? ಕೊಡಕೊಳ್ಳುವುದು ಕಾಯದ ಕಾಸಿನ ರೋಗ.

ಕಾಯ ಇರುವಾಗಲೇ ಕಾಯ ಸತ್ತು ಕಾಸಿನ ಮಾಯ ಕಾಯದಲ್ಲಿ ಉಳಿದಾಗ ಕಾಯ ಕಾಯದ ಅರಿವಿನ ಗಮನಕ್ಕೆ ಬರಲೊಲ್ಲದು. ಕಾಯ ಕಾಯಕ್ಕಂಟಿದ ಕಾಸಿನ ಮಾಯವನು ಅದರ ಸುಖ ದುಃಖವನ್ನು ಕಾಯದಿಂದಲೇ ಅರಿಯಬೇಕು. ಅರಿಯಬೇಕೆಂದು ಕಾಯಕ್ಕೆ ಅರಿವು ಹೇಳುವ ಕಾಯವೂ ಕಾಸು ಪಡೆದು ಅರಿವು ಹೇಳಲು ತೊಡಗಿದೆ. ಅರಿವು ಅರಿತ ಹಿರಿಯರೆಲ್ಲಾ ಅರಿವನು ಕಾಯದಲ್ಲಿಯೇ ಇರಿಸಿಕೊಂಡು ವೃಥಾ ಸಾಯುತ್ತಿದ್ದಾರೆ. ಕಾಯಕ್ಕಂಟಿದ ಕಾಸಿನ ಮಾಯೆಯ ಕಳೆಯಲು ಮಾತ್ರ ಅರಿಯರು. ಹಿಡಿದಡೆ ಜ್ಞಾನ ವಿರುದ್ಧ ; ಬಿಟ್ಟಡೆ ಸಮಯ ವಿರುದ್ಧ!

**104**

**ಕಾಳೆಗದಲ್ಲಿ ಹೋಗದಿರಯ್ಯ ,ಕೋಲು ಬಂದು ನಿಮ್ಮ ತಾಗುದು.**
**ಆರು ದರುಶನಕ್ಕೆ ತೋರದಿರಿ, ಸೂರೆಗೊಂಡೆಹವು ನಿಮ್ಮುವ.**
**ನಾಲ್ಕು ವೇದ ಹದಿನಾರು ಶಾಸ್ತ್ರವೆಂಬರ ಬೆನ್ನು ಹತ್ತದಿರು,**
**ಬೇರೆ ತೀರ್ಥ ಜಾತ್ರೆಯೆಂಬವರ ಕೊಂಡು ಆರಡಿತನ ಬೇಡ,**
**ಪುಣ್ಯಪಾಪವೆಂಬೆರಡು ಭಂಡವ ಬೆನ್ನಲಿಕ್ಕಿಕೊಂಡು ಬಾರದಿರು.**
**ನಿನ್ನಾತ್ಮನ ನೀ ತಿಳಿ, ಜಗನಿನ್ನೊಳಗೆಂದನಂಬಿಗ ಚೌಡಯ್ಯ .**

ದೇಹದಲ್ಲಿ ಜ್ಞಾನವೆಂಬುದೊಂದು ದೇಹವಿದೆ. ಮನವೆಂಬುದು ಒಂದು ದೇಹವಿದೆ. ಜ್ಞಾನ ಮತ್ತು ಮನವೆಂಬ ದೇಹಗಳೆರಡು ದೇಹವನ್ನು ಉಪಕರಣ ಮಾಡಿಕೊಂಡಿವೆ. ಜ್ಞಾನ ಮತ್ತು ಮನದ ಸಂಭಾಷಣೆಯನ್ನು ಅಂಬಿಗರ ಚೌಡಯ್ಯ ಶರಣರು ಓದುಗರಿಗೆ ಸರಳವಾಗಲೆಂದು ಈ ವಚನದ ಮೂಲಕ ನೀಡಿದ್ದಾರೆ.

**ಕಾಳಗದಲ್ಲಿ ಹೋಗದಿರಯ್ಯ , ಕೋಲು ಬಂದು ನಿಮ್ಮ ತಾಗುವುದು:**

ವೇದ ಆಗಮ ಉಪನಿಷತ್ತು ಶಾಸ್ತ್ರ ಪುರಾಣ ಭಗವದ್ಗೀತೆ ಬೈಬಲ್ ಕುರಾನ್‌ಗಳ ಮಾತಿನ ಕಾಳಗದಲ್ಲಿ ಹೋಗದಿರು ಮನವೆ. ಅವೇನಿದ್ದರೂ ನೀನು ನಿನ್ನ ಜ್ಞಾನದ ಮೇರು ಪರ್ವತಕ್ಕೆ ಏರುವ ಏಣಿಗಳು. ಅವುಗಳನ್ನು ನಿಚ್ಚಣಿಕೆ ಮಾಡಿಕೊಂಡು ನಿನ್ನ ಕುತ್ಸಿತ ಬುದ್ಧಿಯನ್ನು ಕಳೆದು ಕೊಳ್ಳಬಹುದು. ಆ ಗ್ರಂಥಗಳು ನಿನಗೆ ಸಾಧನೆಯಾಗಲಿ. ನಿನ್ನ ಕುತ್ಸಿತ ಬುದ್ಧಿಗೆ ಅವು ತಾಗಿದರೆ ನೀನು ಶಾಸ್ತ್ರಿ ಪಂಡಿತನಾಗುವೆ. ವಾದದ ಕಾಳಗದಲ್ಲಿ ನೀನು ನಿರತನಾಗುವಿ. ಜೀವನ ಪರ್ಯಂತ ನಿನ್ನನ್ನು ಪಂಡಿತನನ್ನಾಗಿಸಿ, ಶಾಸ್ತ್ರಿಯನ್ನಾಗಿಸಿ ಸೋಲು ಗೆಲುವುಗಳ ಮೂಲಕ ಶಾಸ್ತ್ರ ನಿನ್ನನ್ನು ಕೊಲ್ಲುವವು.

ಎಲೆ ಮನವೆ, ನೀ ಸತ್ತರೆ ನಿನ್ನೊಂದಿಗೆ ನಿನ್ನ ಕಾಯ, ನಿನ್ನ ಜ್ಞಾನವೂ ಸಾಯು ವುದು. ವೇದ ಶಾಸ್ತ್ರ ಪುರಾಣಗಳು ವಾದ ವಿವಾದಗಳಿಗಾಗಿ ಅಲ್ಲ. ಅವುಗಳ ಮೂಲಕ ಕಾಳಗ ಮಾಡುವುದು ಸಲ್ಲದು. ಆ ಕೋಲು ಬಂದು ನಿನ್ನನ್ನೇ ಕೊಲ್ಲುವುದು. ಮಾತುಗಳ ಪೆಟ್ಟು, ಮಾತುಗಳನ್ನು ಹೊರ ಹಾಕಿದ ಕಾಯಕ್ಕೆ ಕೋಲಾಗಿ ಬಡಿಯುವುದು. ಕೇಳಿದ ಮಾತು ಆಡಿದ ಮಾತು ಕಾಯದಲ್ಲಿ ಶಸ್ತ್ರಗಳಾಗಿ ಚುಚ್ಚುವವು.

**ಆರು ದರುಶನಕ್ಕೆ ತೋರದಿರಿ, ಸೂರೆಗೊಂಡಿಹವು ನಿಮ್ಮುವ :**

ಕಾಯದಲ್ಲಿ ಸೂರೆಗೊಂಡು ಕಾಯದಿಂದಲೇ ಹೊರಬಂದ ದರ್ಶನಗಳನ್ನು ಕಾಯ ಮಾತಿನ ಕಾಳಗಕ್ಕಾಗಿ ಬಳಕೆ ಮಾಡುವುದು ಸೂಕ್ತವೆ ? ನಿತ್ಯ ನಿರಂಜನ ನೀನು ! ಸತ್ತವರು ಬರೆದಿಟ್ಟು ಹೋದ ಪತ್ರಗಳು ಅವು ! ನೀನೆತ್ತ ನಿನ್ನಿಂದಲೇ ಹೊರಬಂದು ನಿನ್ನನ್ನೇ ಮಾತಿನ ಕಾಳಗಕ್ಕೆ ಅಣಿಗೊಳಿಸಿದ ವೇದಗಳೆತ್ತ ? 'ತತ್ತ್ವಮಸಿ ' ನೀನು. ನಿನ್ನ ಗರ್ಭದಲ್ಲಿ ತತ್ತ್ವವಿದೆ. ನೀನೇ ಅದನ್ನು ತಿಳಿದು ನಿನ್ನಿಂದಲೇ ಅವುಗಳನ್ನು ಹೊರ ಹಾಕಿರುವೆ. ವೇದ ಆಗಮ ಉಪ ನಿಷತ್ತು ಪುರಾಣ ಶಾಸ್ತ್ರಗಳ ಹೆಸರಿನ ರೂಪ ಪಡೆದು ನಿನ್ನಿಂದಲೇ ಬದುಕಿಕೊಂಡಿವೆ. ನಿನ್ನಿಂದ ಹೊರಬಂದ ಗ್ರಂಥಗಳು ನಿನ್ನನ್ನೇ ಮಾತಿನ ಕಾಳಗಕ್ಕೆ ಸಿದ್ಧ ಮಾಡಿವೆ. ನಿನ್ನಲ್ಲೇ ಆಶ್ರಯ ಪಡೆದಿದ್ದವೆಂಬುದನ್ನು ನಿನಗೆ ಮರೆವು ಮಾಡಿವೆ. ನಿನ್ನಿಂದ ಹೊರಬಂದು ನಿನ್ನನ್ನೇ ಕಾಳಗಕ್ಕೆ ಅಣಿ ಮಾಡಿವೆ. ನಿನ್ನನ್ನೇ ಕಿರಿದುಗೊಳಿಸಿ ಅವು ಹಿರಿದಾಗಿ ನಿನ್ನ ಹೆಗಲು ಏರಿ ನರ್ತನ ಮಾಡುತ್ತಲಿವೆ. ವೇದ ಶಾಸ್ತ್ರಗಳ ಬೆನ್ನ ಹತ್ತದಿರು ಎಲೆ ಮನವೆ.

**ಬೇರೆ ತೀರ್ಥ ಜಾತ್ರೆಯೆಂಬವ ಕೊಂಡು ಆರಡಿತನ ಬೇಡ :**

ನಿನ್ನ ಕಾಯ ಜಲದಿಂದ ಭರಿತವಾಗಿದೆ. ಜೀವಜಲ ಬಿಂದುವಾಗಿದ್ದ ನೀನು ಗರ್ಭದಲ್ಲಿ ಹೊಕ್ಕು ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ, ಅವು ಸೋರದಂತೆ ಚರ್ಮದ ಕವಚವಾಗಿ ಹೊರಬಂದಿರುವೆ ! ಇಡೀ ನಿನ್ನ ಕಾಯವೇ ಜಲ ; ಗಂಗೆ ! ಆ ಗಂಗೆಯನ್ನು ಧರಿಸಿದ ನೀನು ಗಂಗಾಧರ ! ನಿನ್ನ ಕಾಯವೇ ತೀರ್ಥ ಕ್ಷೇತ್ರವಾಗಿರುವಾಗ ಪುನಃ ನೀನು ಬೇರೆ ತೀರ್ಥ ಕ್ಷೇತ್ರಗಳಿಗೆ ಹೋಗಬೇಕೆ ? ಜಾತ್ರೆಗೆ ಹೋಗಬೇಕೆ ? ಅಲ್ಲಿ ಬರೀ ಗದ್ದಲ. ನಿನ್ನ ಕಾಯದಲ್ಲೂ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳ ಗದ್ದಲ. ನಿನ್ನ ಗದ್ದಲವನ್ನು ನಿನ್ನ ಜ್ಞಾನದಿಂದ ಕಳೆದುಕೋ. ನಿನ್ನಲ್ಲಿ ನೀನೆ ಜಾತ್ರೆ ಮಾಡಿಕೋ.

**ಪುಣ್ಯಪಾಪವೆಂಬೆರಡು ಭಂಡವ ಬೆನ್ನಲಿಕ್ಕಿಕೊಂಡು ಬಾರದಿರು. ನಿನ್ನಾತ್ಮ ನೀ ತಿಳಿ, ಜಗನಿನ್ನೊಳಗೆ ಎಂದನಂಬಿಗ ಚೌಡಯ್ಯ :**

ಕಾಯವೆಂಬುದು ಜ್ಞಾನದ ಕೊಡ. ಕಾಯದ ಮೂಲಕ ಸಿದ್ದಾರ್ಥ ಬುದ್ಧನಾದ. ವರ್ಧ ಮಾನ ಮಹಾವೀರನಾದ. ಜ್ಞಾನಿಗಳು ಆಯಾ ಕಾಯದ ಮೂಲಕವೇ ಜ್ಞಾನಿಗಳಾದರು. ಪುಣ್ಯಪಾಪವೆಂಬ ಅಜ್ಞಾನವನ್ನು ಜ್ಞಾನದ ಮೂಲಕ ಕಳೆದುಕೊಂಡರು. ಜ್ಞಾನವೆಂಬುದು ಕಾಯದಲ್ಲಿಯೇ ಇದೆ. ಆದರೆ ಕಾಯದಲ್ಲಿ ಪುಣ್ಯವೆಂಬ ಅಜ್ಞಾನ, ಪಾಪವೆಂಬ ಅಜ್ಞಾನ ತುಂಬಿಕೊಂಡಿದೆ. ಮನದಿಂದಾಗಿ ಈ ಕೇಡು ಕಾಯಕ್ಕೆ ತಾಕಿದೆ. ಕಾಯದ ಬೆನ್ನಿಗೆ ಕಟ್ಟಿಕೊಂಡ ಈ ಎರಡೂ ಅಜ್ಞಾನ ತೊಲಗಬೇಕಾದರೆ ಕಾಯದ ಜ್ಞಾನದಿಂದ ಮಾತ್ರ ಸಾಧ್ಯ . ಅದು ನಿನ್ನ ಆತ್ಮ. ನಿನ್ನಿಂದಲೇ ನಿನ್ನನ್ನು ತಿಳಿದಾಗ ಮಾತ್ರ ನಿನಗಂಟಿದ ಪುಣ್ಯ ಪಾಪಗಳು ತೊಲಗುವವು. ಕಾಯದ ಜ್ಞಾನ ಕಾಯಕ್ಕೆ ಒಲಿಯುವುದು. ಕಾಯದ ಕಾಳಗ

ಸಂಪೂರ್ಣ ನಿಲ್ಲುವುದು.

**105**

**ಕುಡಿವ ನೀರೆನ್ನಬಹುದೆ, ಹುಡುಕುನೀರಲದ್ದುವಾಗ ?**
**ಅಡುವ ಕಿಚ್ಚೆನ್ನಬಹುದೆ, ಮನೆಯ ಸುಡುವಾಗ ?**
**ಒಡಲು ತನ್ನದೆನ್ನಬಹುದೆ, ಪುಣ್ಯ-ಪಾಪವನುಂಬಾಗ ?**
**ಒಡಲ ಜೀವವೆನ್ನಬಹುದೆ, ಇಕ್ಕಿ ಹೋಹಾಗ ?**
**ಇವನೊಡೆಬಡೆದು ಕಳೆಯೆಂದಾತನಂಬಿಗ ಚೌಡಯ್ಯ .**

ಒಡಲಲ್ಲಿರುವ ಜೀವ ಒಡಲಿನದು. ಅದನ್ನು ಜೀವವಿದ್ದ ಒಡಲು ಅಥವಾ ಒಡಲು ಎಂದು ಕರೆಯುತ್ತೇವೆ. ಒಡಲಲ್ಲಿ ಸಂಗಮವಾದ ಜೀವ ಒಡಲನ್ನು ಬಿಟ್ಟು ಹೋದಾಗ ಅದನ್ನು ಒಡಲೆನ್ನದೆ ಶವ ಎನ್ನುತ್ತೇವೆ.

ಒಡಲು ಜನನ ಮರಣಗಳಿಗೆ, ಪಾಪ ಪುಣ್ಯಗಳಿಗೆ ತುತ್ತಾಗಿದೆ. ಒಡಲಧರ್ಮ ಒಡಲು ಮರೆತು ಹೋಗಿದೆ. ಒಡಲು ತನ್ನ ಸುಖಕ್ಕಾಗಿ ಹಾತೊರೆದು, ಭೋಗಿಸಿದ ಸುಖವನ್ನೇ ಒಡಲ ಮೇಲೆ ಹೇರಿಕೊಂಡು ದುಃಖಿಸುತ್ತದೆ. ಒಡಲ ಸುಖ ಒಡಲ ದುಃಖಗಳೆರಡು ಒಡಲಿಗೆ ಬಂದ ಆಪತ್ಕಾಲಗಳೆಂದು ಒಡಲು ತಿಳಿಯುವುದಿಲ್ಲ.

ಅಡಿಗೆ ಮಾಡುವಾಗ ಕಿಚ್ಚು,ಉರಿದಷ್ಟು ಆನಂದ. ಕಿಚ್ಚಿನ ಕಡೆಗೆ ಒಡಲು ತನ್ನ ಗಮನ ಹರಿಸದೆ, ಮಾಡುವ ಅಡಿಗೆಯಡೆ ಒಡಲ ಗಮನವಿರುತ್ತದೆ. ಕಿಚ್ಚೆದ್ದು ಮನೆಯ ಸುಡುವಾಗ ಒಡಲಿಗೆ ಎಚ್ಚರವಾಗುತ್ತದೆ.

ಒಡಲು ಒಡಲಿಗೆ ನೀಡಿ ಪುಣ್ಯದ ಹೊರೆಯನ್ನು ಒಡಲಿಗೆ ಕಟ್ಟಿಕೊಳ್ಳುತ್ತದೆ. ಒಡಲಿಗೆ ನೀಡದೆ ಪಾಪದ ಹೊರೆಯನ್ನು ಒಡಲಿಗೆ ಕಟ್ಟಿಕೊಳ್ಳುತ್ತದೆ. ನೀಡುವ ವಸ್ತು ಒಡಲಿನದಲ್ಲ. ತನ್ನದಲ್ಲದ್ದು ನೀಡಿದೆನೆನ್ನುವ ರೋಗ, ತನ್ನದಲ್ಲದ್ದನ್ನು ಬೇಡಿ ದೆನೆನ್ನುವ ರೋಗ, ಒಡಲಲ್ಲಿ ಪಾಪ ಪುಣ್ಯಗಳಾಗಿ ಸಂಗ್ರಹಗೊಳ್ಳುತ್ತವೆ. ಬೇಡುವುದು ಒಡಲೇ,ನೀಡುವುದು ಒಡಲೇ, ಒಡಲಿಗೆ ಒಡಲು ನೀಡುವುದೆಂದರೇನು ? ಒಡಲಿಗೆ ಒಡಲು ಬೇಡುವುದೆಂದರೇನು ? ಏನು ನೀಡಿ ಧನ್ಯನಾಯಿತು ; ಏನು ಬೇಡಿ ಧನ್ಯತೆ ಮೆರೆಯಿತು? ಬೇಡುವ ನೀಡುವ ಕಿಚ್ಚು ಒಡಲಲ್ಲಿ ಹುಟ್ಟಿ ಒಡಲು ಅರಿಯದಂತೆ ಒಡಲನ್ನೇ ಸುಡುತ್ತ ಲಿದೆ.

**ಇವನೊಡೆ ಬಡೆದು ಕಳೆಯೆಂದಾತನಂಬಿಗ ಚೌಡಯ್ಯ:**

ಭೂದಾನ, ಅನ್ನದಾನ, ಕನ್ಯಾದಾನ, ಕನಕದಾನ, ಗೋದಾನ ಹೀಗೆ ದಾನ ಮಾಡಿ ಮಾಡಿ ಬೇಡಿ ಬೇಡಿ ಒಡಲು ಪುಣ್ಯವೆಂಬ ಅಜ್ಞಾನದ ಪದ ಸಂಪಾದನೆ ಮಾಡಿಕೊಳ್ಳುತ್ತದೆ. ಒಡಲಿಗೆ ಒಡಲೇ ದಾನ ಮಾಡುತ್ತದೆ, ಒಡಲನ್ನು ಒಡಲೇ ಬೇಡುತ್ತದೆ. ಕೊಡುವುದೂ ತನ್ನ ವಸ್ತುವಲ್ಲ ಬೇಡುವುದೂ ಆತನ ವಸ್ತುವಲ್ಲ ಎಂಬ ಸತ್ಯ ಒಡಲು ಒಡಲಿರುವವರೆಗೆ ಅರಿಯದೆ ಹೋಗುತ್ತದೆ.

ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ ; ಇವು ಜಗಕ್ಕೆ ಇಕ್ಕಿದ ವಿಧಿ, ನಿನ್ನದೆಂಬುದು ಜ್ಞಾನರತ್ನ ಕಾಣಾ. ಅದನ್ನು ಕೆಡಗೊಡದೆ ಅಲಂಕರಿ ಸಿದೆಯಾದಡೆ ನಿನ್ನಂತ ಸಿರಿವಂತರು ಯಾರೂ ಇಲ್ಲ ಎಲೆ ಮನವೆ ಎಂದು ಪ್ರಭುಗಳು ಒಡಲ ಒಳಗುಟ್ಟನ್ನು ಒಡಲಿಗೆ ಹೇಳಿದ್ದಾರೆ.

ಒಡಲಿಗೆ ಒಡಲೇ ದಾನ ಮಾಡಿ ದಾನಿ ಎನ್ನಿಸಿಕೊಳ್ಳುತ್ತದೆ. ದಾನ ಪಡೆದ ಒಡಲನ್ನು ಭಿಕ್ಷುಕ ಎಂದು ಕರೆಯುತ್ತದೆ. ಎರಡು ಒಡಲುಗಳಲ್ಲಿ ಭಿನ್ನವಿಲ್ಲ ; ಆದರೂ ಒಂದು ದಾನಿ ಮತ್ತೊಂದು ಭಿಕ್ಷುಕ ! ತನ್ನದಲ್ಲದ ವಸ್ತುವನ್ನು ಕೊಟ್ಟು ದಾನಿ, ಒಡಲಿನದಲ್ಲದ ವಸ್ತುವನ್ನು ಪಡೆದು ಭಿಕ್ಷುಕ. ಇವೆರಡು ಒಡಲುಗಳಲ್ಲಿಯೂ ಪಾಪ ಪುಣ್ಯದ ಬುತ್ತಿ ಸಂಗ್ರಹವಾಗಿದೆ.

ಒಡಲ ಜ್ಞಾನದಿಂದ ಒಡಲು ನೋಡಿದರೆ ಭೂಮಿ, ಹೇಮ, ವಿಷಯ ವಸ್ತುಗಳ ಸತ್ಯ ಒಡಲ ಗಮನಕ್ಕೆ ಬರುತ್ತದೆ. ಬೇಡುವ ವಸ್ತುಗಳನ್ನು, ನೀಡುವ ವಸ್ತುಗಳನ್ನು ಒಡಲು ಒಡೆಬಡೆಯುತ್ತದೆ. ಒಡಲು ಹೇರಿಕೊಂಡ ವಿಧಿಯನ್ನು ಒಡಲೇ ಕಳಚಿ ಎಸೆಯುತ್ತದೆ. ಜ್ಞಾನದ ಒಡಲಾಗಿ ಬೆಳಗುತ್ತದೆ. ಬೆಳಗಿಂಗೆ ಬೆಳಕಾಗಿ ಬೆಳಗುತ್ತದೆ.

ಒಡಲೊಳಗಿದ್ದ ಜ್ಞಾನ ಒಡಲಿಗೆ ಲಭ್ಯವಾಗುತ್ತದೆ. ಒಡಳೊಳಗಿದ್ದು, ಒಡಲಿಂಗೆ ಆಧಾರವಾಗಿ, ಒಡಲ ಸೋಂಕದೆ, ಒಡಲ ಬೆಳಗುವ ಪರಿಯ ನೋಡಾ. ಬೆಳಗಿಂಗೆ ಬೆಳಗಾಗಿ ಬೆಳಗುವ ಪರಿಯ ನೋಡಾ ಎಂದು ಪ್ರಭುದೇವರು ಹೇಳಿದ ಒಡಲ ಸೂತ್ರ ಒಡಲಿಗೆ ಪರಿಚಯವಾದರೆ ಸಾಕು ಒಡಲ ಅಜ್ಞಾನವನ್ನು ಒಡಲೇ ಒಡೆದು ಹಾಕುತ್ತದೆ.

**106**

**ಕುರಿ ಕೋಳಿ ಕಿರು ಮೀನು ತಿಂಬವರ ಊರೊಳಗೆ ಇರು ಎಂಬರು.**
**ಅಮೃತಾನ್ನವ ಕರೆವ ಗೋವ ತಿಂಬವರ ಊರಿಂದ ಹೊರಗಿರು ಎಂಬರು.**
**ಆ ತನು ಹರಿಗೋಲಾಯಿತ್ತು , ಬೊಕ್ಕಣ, ಸಿದಿಕೆ, ಬಾರುಕೋಲು, ಪಾದರಕ್ಷೆ**
**ದೇವರ ಮುಂದೆ ಬಾರಿಸುವುದಕ್ಕೆ ಮದ್ದಳೆಯಾಯಿತ್ತು .**
**ಈ ಬುದ್ದಲಿಕೆಯೊಳಗಣ ತುಪ್ಪವ ಶುದ್ಧ ಮಾಡಿ**
**ತಿಂಬ ಗುಜ್ಜ ಹೊಲೆಯರ ಕಂಡಡೆ ಉದ್ದನ ಚಮ್ಮಾಳಿಗೆಯ ತೆಕ್ಕೊಂಡು**
**ಬಾಯ ಕೊಯ್ಯುವೆನು ಎಂದಾತ ನಮ್ಮ ಅಂಬಿಗರ ಚೌಡಯ್ಯ .**

ಕುರಿ ಕೋಳಿ ಮೀನು ತಿನ್ನುವವರ ವಾಸ ಗ್ರಾಮದಲ್ಲಿ. ಶಿವನಿಗೆ ಪಂಚಾಮೃತವೆಂಬ ಹಾಲು ಕರೆಯುವ ಗೋವು ತಿಂಬುವವರ ವಾಸ ಊರ ಹೊರಗೆ. ಕುರಿ ಕೋಳಿ ಮೀನು ತಿನ್ನುವವರು ಉತ್ತಮ ಕುಲದವರು. ಸತ್ತ ಗೋವು ತಿನ್ನುವವರು ಹೊಲೆಯರು !

ಗೋವಿನ ಚರ್ಮ ಹರಿಗೋಲಾಯಿತು, ನೀರೆತ್ತುವ ಬೊಕ್ಕಣವಾಯಿತು. ಬಾರುಕೋಲು ಪಾದರಕ್ಷೆಯಾಯಿತು. ದೇವರ ಮುಂದೆ ಬಾರಿಸುವ ಮದ್ದಳೆಯಾಯಿತು. ತುಪ್ಪ ತುಂಬುವುದಕ್ಕೆ ಬುದ್ಧಲಿಕೆಯಾಯಿತು. ಗೋವಿನ ಚರ್ಮದ ಚೀಲದಲ್ಲಿ ತುಂಬಿದ ತುಪ್ಪವನ್ನು ಶುದ್ಧವೆಂದು ತಿನ್ನುವ ಹೊಲೆಯರ ಕಂಡಡೆ ಉದ್ದನೆಯ ಚಮ್ಮಾಳಿಗೆಯ ತೆಗೆದುಕೊಂಡು ಬಾಯ ಕೊಯ್ಯುವೆನು ಎಂದಿದ್ದಾರೆ ಅಂಬಿಗರ ಚೌಡಯ್ಯ .

ಕುರಿ ಕೋಳಿ ಕಿರಿ ಮೀನು ತಿಂಬುವವರ ಕುಲಜರೆಂಬರು. ಶಿವಗೆ ಪಂಚಾಮೃತವ ಕರೆವ ಪಶುವ ತಿಂಬುವವನ ಮಾದಿಗನೆಂಬರು. ಬ್ರಾಹ್ಮಣನುಂಡ ಪುಲ್ಲಿಗೆ ನಾಯಿಗೆ ಶೋಭಿತವಾಯಿತು. ಮಾದಿಗನುಂಡ ಪುಲ್ಲಿಗೆ ಬ್ರಾಹ್ಮಣಂಗೆ ಶೋಭಿತವಾಯಿತು. ಅದೆಂತಡೆ : ಸಿದ್ದಲಿಕೆಯಾಯಿತು, ಸಗ್ಗಳೆಯಾಯಿತು, ಸಿದ್ದಲಿಕೆಯ ತುಪ್ಪವನು ಸಗ್ಗಳೆಯ ನೀರನು ಶುದ್ಧವೆಂದು ಕುಡಿದ ಬುದ್ದಿಗೇಡಿ

ವಿಪ್ರನಿಗೆ ನಾಯಕ ನರಕ ತಪ್ಪದು ಎಂದಿದ್ದಾಳೆ ಶಿವಶರಣೆ ಪುಣ್ಯಸ್ತ್ರೀ ಕಾಳವ್ವೆ.

ಪಶುವಿನ ಚರ್ಮದ ಚೀಲದಲ್ಲಿ ತುಂಬಿದ ತುಪ್ಪವನ್ನು, ಚರ್ಮದ ಚೀಲದಿಂದ ಮೇಲೆತ್ತಿದ ನೀರನ್ನು ಶುದ್ಧವೆಂದು ಕುಡಿಯುತ್ತಾರೆ ಉತ್ತಮ ಕುಲದವರು. ಚರ್ಮವೆಂಬುದು ಮಾದಿಗನು ಉಂಡು ಬೀಸಾಡಿದ ಎಲೆ. ಆ ಎಲೆಯಲ್ಲಿ ತುಪ್ಪ ತುಂಬುವ ಸಿದ್ದಲಿಕೆಯನ್ನು ಬಾವಿಯಿಂದ ನೀರೆತ್ತಲು ಸಗ್ಗಳೆಯನ್ನು ಉತ್ತಮ ಕುಲದವರಿಗೆ ಮಾಡಿಕೊಟ್ಟಿದ್ದಾನೆ. ಇವೆರಡೂ ಚೀಲಗಳು ಮಾದಿಗನು ಉಂಡು ಬೀಸಾಡಿದ ಎಲೆಗಳು. ಇವು ಬ್ರಾಹ್ಮಣರಿಗೆ ಶ್ರೇಷ್ಠವಾದವು. ಬ್ರಾಹ್ಮಣರು ಬಾಳೆ ಎಲೆಯಲ್ಲಿ ಹೋಳಿಗೆ ಉಂಡು ಬೀಸಾಡಿದರು. ಅವರು ಬೀಸಾಡಿದ ಎಲೆ ನಾಯಿ ನೆಕ್ಕಿ ಹೋಯಿತು. ಬ್ರಾಹ್ಮಣ ಉಂಡ ಎಲೆ ನಾಯಿಗೆ ಶ್ರೇಷ್ಠವಾಯಿತು.

ಅಂಬಿಗರ ಚೌಡಯ್ಯ , ಪುಣ್ಯಸ್ತ್ರೀ ಕಾಳವ್ವೆ ಇವರಿಬ್ಬರ ಅಭಿಪ್ರಾಯ ಒಂದೇ. ಒಬ್ಬರು ಮತ್ತೊಬ್ಬರ ವಚನವನ್ನು ನೋಡಲಿಲ್ಲ. ಆದರೆ ಅನುಭವಕ್ಕೆ ಬಂದ ಸತ್ಯ ಒಂದೇ. ಸತ್ಯವಸ್ತುವನ್ನು ಸತ್ಯವೆಂದೇ ಬರೆಯಬೇಕು. ಸತ್ಯದಿಂದಲೇ ನಿರ್ಭಯವಾಗಿ ನುಡಿಯಬೇಕು.

'ಸತ್ತುದನು ಎಳೆವವನೆತ್ತಣ ಹೊಲೆಯ ; ಹೊತ್ತು ತಂದು ಕೊಲ್ಲುವಿರಿ ನೀವು ' ಎಂದು ಅನುಭಾವಿಗಳು ಮಾತ್ರ ನುಡಿಯಬಹುದು. ಶರಣರು ನಿರ್ಭಯಿಗಳು. ಅದಕ್ಕಾಗಿಯೇ ' ಜೋಳವಾಳಿಗ ನಾನಲ್ಲವಯ್ಯ ವೇಳೆಯವಾಳಿಗನಾನಯ್ಯ' ಎಂದರು. ಪಂಪ ಕವಿ. ಸಾಹಿತಿಗಳು ಕವಿಗಳು ಆತನನ್ನು ಆದಿಕವಿ ಎಂದು ಕರೆದರು. ಆದರೆ ಆತ ಸ್ವತಹ ತನ್ನನ್ನು 'ಜೋಳವಾಳಿಗ ' ಎಂದು ಗುರುತಿಸಿಕೊಂಡ. ಕಾಸಿಗಾಗಿ ಬರೆದವನೆಂದು ತನ್ನನ್ನು ತಾನೇ ಜರೆದುಕೊಂಡ.

ಪಂಪನಲ್ಲಿದ್ದ ಕವಿ ಕಾಸಿಗಾಗಿ ಕೈಚಾಚಿದ. ಆತನಲ್ಲಿದ್ದ ಅನುಭಾವಿ 'ಜೋಳವಾಳಿಗ ' ನೀನು ಎಂದು ಮೂದಲಿಸಿ ನುಡಿದ. ಕವಿ ನುಡಿದಂತೆ ನಡೆಯುವುದಿಲ್ಲ.ಅನುಭಾವಿಯ ನುಡಿಯೂ ಒಂದೇ ಆತನ ನಡೆಯೂ ಒಂದೇ. ನಿರ್ಭಯಿ ಆತ. ಹೀಗಾಗಿ ಜೋಳವಾಳಿಗ ನಾನಲ್ಲ ಎಂದು ದಿಟ್ಟತನದಿಂದ ನುಡಿಯುತ್ತಾನೆ.

**107**

**ಕುರುಹೆಂಬೆನೆ ಕಲ್ಲಿನಲ್ಲಿ ಹತ್ತಿದ ಹಾವಸೆ,**
**ಅರಿವೆಂಬೆನೆ ಕಾಣಬಾರದ ಬಯಲು,**
**ಒಂದನಹುದು ಒಂದನಲ್ಲಾಯೆಂದು ಬಿಡಬಾರದು.**
**ಬಿಟ್ಟಡೆ ಸಮಯವಿಲ್ಲ, ಜಿಡ್ಡ ಹಿಡಿದಡೆ ಜ್ಞಾನವಿಲ್ಲ,**
**ಉಭಯದ ಗುಟ್ಟಿನಲ್ಲಿ ಕೊಳೆವುತ್ತಿದ್ದೇನೆ ಎಂದನಂಬಿಗ ಚೌಡಯ್ಯ .**

ಅರಿವಿಗೆ ಕುರುಹಿಲ್ಲ. ಅದು ಬಯಲು. ಬಯಲನ್ನು ಕಾಣಲು ಬರುವುದಿಲ್ಲ. ಆದರೆ ಅರಿವು ಕಾಯವೆಂಬ ಕುರುಹಿನಲ್ಲಿ ಸಂಗಮವಾಗಿದೆ. ಜಲದ ಮೇಲೆ ಸ್ವತಹ ಜಲವೇ ಪಾಚು ಸೃಷ್ಟಿ ಮಾಡಿಕೊಂಡಂತೆ. ಪಾಚು ಸೃಷ್ಟಿ ಮಾಡಿಕೊಂಡು ಜಲ ಕಾಣದಂತಾಗಿದೆ. ಜಲ ಬೇಕಾದರೆ ಜಲದಿಂದಲೇ ಸೃಷ್ಟಿಯಾದ ಪಾಚು ಸರಿಸಬೇಕು. ಹಾಗೆಯೆ ಕಾಯಕ್ಕೆ ಅರಿವು ಬೇಕಾದರೆ ಕಾಯದಲ್ಲಿಯೇ ಹುಡುಕಬೇಕು.

ಒಂದನು ಹೌದು ಎನ್ನುವಂತಿಲ್ಲ; ಮತ್ತೊಂದನ್ನು ಅಲ್ಲಾ ಎನ್ನುವಂತಿಲ್ಲ. ಕಾಯ ಬಿಟ್ಟರೆ

ಅರಿವಿಲ್ಲ. ಅರಿವು ಬಿಟ್ಟರೆ ಕಾಯಕ್ಕೆ ಬೆಲೆಯಿಲ್ಲ. ಕಾಯ ಕುರುಹು ; ಅರಿವು ಬಯಲು !

ಚರ್ಚ್ ಮಸೀದೆಗಳಲ್ಲಿ ಪ್ರಾರ್ಥಿಸುವುದು ಕಾಯವೇ. ದೇವಾಲಯದಲ್ಲಿ ಪೂಜಿಸುವುದು ಕಾಯವೇ. ವ್ಯಾಟಿಕಾನ್, ಮಕ್ಕಾಗಳಿಗೆ ಹೋಗುವುದು ಕಾಯವೇ. ಕಾಶೀ ಕೇದಾರ ರಾಮೇಶ್ವರ ಶ್ರೀಶೈಲ ತಿರುಪತಿಗೆ ಹೋಗುವುದು ಕೂಡಾ ಕಾಯವೇ. ದೇವನನ್ನು ಸೇರುವ ಬಯಕೆ ಕಾಯಕ್ಕೆ. ಬಿಟ್ಟಡೆ ಸಮಯ ವಿರೋಧಿ. ಜಿಡ್ಡ ಹಿಡಿದಡೆ ಜ್ಞಾನವಿಲ್ಲ. ಕುರುಹು ಕುರುಹನ್ನು ಪೂಜಿಸುವ ಕಾಯದ ಕಾಯಕ ಜಗದಾದ್ಯಂತ ನಿರಂತರವಾಗಿ ನಡೆದಿದೆ.

ಕಾಯ ಕಾಣುತ್ತದೆ. ಹೀಗಾಗಿ ಕಾಯವನ್ನು ಕುರುಹು ಎಂದು ಕರೆಯಬಹುದು. ಕಾಯದಲ್ಲಿ ಸಂಗಮವಾದ ಜ್ಞಾನ ಕಾಯಕ್ಕೆ ಕಾಣುವುದಿಲ್ಲ. ಹೀಗಾಗಿ ಕಾಯದ ಜ್ಞಾನ ಬಯಲು ! ಕಾಯ ಕಾಯದಲ್ಲಯೇ ಇದ್ದ ಜ್ಞಾನವನ್ನು ಹಿಡಿಯಬೇಕು. ಆದರೆ ಕಾಯಕ್ಕೆ ಜ್ಞಾನವನ್ನು ಹಿಡಿಯಲು ಬರುವುದಿಲ್ಲ. ಹೀಗಾಗಿ ಕಾಯ ಕಾಯದಿಂದಲೇ ನಿರ್ಮಾಣವಾದ ಮಸೀದಿ ಚರ್ಚ್ ದೇವಾಲಯಗಳನ್ನು ಹಿಡಿಯುತ್ತದೆ. ಕೊರಳಲ್ಲಿ ಜನಿವಾರ ಶಿಲುಬೆ ಲಿಂಗವನ್ನು ಧರಿಸುತ್ತದೆ. ಗಡ್ಡಬಿಟ್ಟು ನಿಲುವಂಗಿ ಕಾವಿ ಧರಿಸಿ ಜ್ಞಾನ ಹಿಡಿದೆನೆಂದು ಜ್ಞಾನದ ಜಿಡ್ಡು ಹಿಡಿದು ಭ್ರಮಿಸುತ್ತದೆ.ಕಾಯದ ಈ ಪಯಣ ಅನಂತ ಕಾಲಗಳಿಂದ ನಡೆದಿದೆ.

ಕಾಯ ಕಾಯದಲ್ಲಿ ಸಂಗಮವಾದ ಜ್ಞಾನದ ಗುಟ್ಟು ಕಾಯಕ್ಕೆ ಹೊಳೆಯದೆ ಕಾಯ ಕೊಳೆತು ಕೊಳೆತು ನಾರುತ್ತ ಒಮ್ಮೆ ಸಾಯುತ್ತದೆ. ಜ್ಞಾನ ಹಿಡಿಯಲು ಬಂದು, ಜ್ಞಾನ ಹಿಡಿಯದೆ ಅಜ್ಞಾನದಿಂದ ನಾರುತ್ತ ಕೊಳೆತು ಸಾಯುವ ಕಾಯಗಳು ಅನಂತ !

ಕಾಯದಲ್ಲಿಯೇ ಜ್ಞಾನದ ಗುಟ್ಟು ಅಡಗಿದೆ. ಕಾಯವೇ ಬೇಧಿಸಿ ಜ್ಞಾನದ ಗುಟ್ಟು ರಟ್ಟು ಮಾಡಿಕೊಂಡು ; ಕಾಯದ ಜ್ಞಾನವನ್ನು ಕಾಯವೇ ಹಿಡಿಯಬೇಕು. ಇದು ಕಾಯದ ಕಾಯಕವಾಗಬೇಕು. ಹೀಗೆ ಮಾಡುವ ಕಾಯಕವೇ ಕೈಲಾಸ. ಕಾಯದಲ್ಲಿ ಜ್ಞಾನದ ಕೈಲಾಸವಿದೆ.

**108**

**ಕುಲವಾದ ಛಲವಾದ ವಾಗ್ವಾದಂಗಳಲ್ಲಿ**
**ಹೋರುವನ್ನಬರ ಅರುಹಿರಿಯರಪ್ಪರೆ ?**
**ಹಸುಳೆಯ ಕನಸಿನಂತೆ, ಹುಸಿ ಮಾತಿನ ಮಂತ್ರದಂತೆ,**
**ಎಸಕವಿಲ್ಲದ ಅರಿಕೆಯಂತಿರಬೇಕೆಂದನಂಬಿಗ ಚೌಡಯ್ಯ .**

ಪ್ರಾಣಿ, ಸಸ್ಯ , ಜಲ, ಉರುಗ, ಕೀಟ, ಪಕ್ಷಿ ಕುಲಗಳಲ್ಲಿ ಮಾನವ ಕುಲವೇ ಶ್ರೇಷ್ಠ. ಮಾನವ ಜ್ಞಾನಿ. ಉಳಿದವುಗಳಿಗೆ ಮಾನವನಂತೆ ಜ್ಞಾನವಿಲ್ಲ. ವಾದಮಾಡಿ ಶ್ರೇಷ್ಠ ಎಂದು ತೋರಿಸುವ ಶಕ್ತಿ ಅವುಗಳಿಗೆ ಇಲ್ಲ. ಹೀಗಾಗಿ ಆಯಾ ಕೆಲಸಗಳಲ್ಲಿ ಅವು ಮೌನ. ಪ್ರಕೃತಿಯಲ್ಲಿ ಬೆರೆತು, ಪ್ರಕೃತಿಯೇ ತಾವಾಗಿ, ಪ್ರಕೃತಿಯಲ್ಲಿ ಒಂದಾಗಿ ಹೋಗುತ್ತವೆ.

ಮಾನವ ಹಾಗಲ್ಲ. ಗಾಳಿ ನೀರು ಬೆಂಕಿ ಭೂಮಿ ಆಕಾಶವನ್ನೇ ತನ್ನಲ್ಲಿ ಅಡಗಿಸಿಕೊಂಡಿದ್ದಾನೆ. ಅವು ನನ್ನಲ್ಲಿ ಅಡಕವಾಗಿವೆ ಎಂದು ತನ್ನ ಜ್ಞಾನದಿಂದಲೇ ತಿಳಿದಿದ್ದಾನೆ. ಜಲದಾಳಕ್ಕೂ ತಲುಪಿದ್ದಾನೆ. ಆಕಾಶದೆತ್ತರಕ್ಕೂ ಜಿಗಿದಿದ್ದಾನೆ. ಭೂಮಿಯ ಉದ್ದಗಲಕ್ಕೆ ವಾಯುವಿನಂತೆ ಹರಿದಾಡಿ ಸಂಭ್ರಮಿಸಿದ್ದಾನೆ. ತನ್ನ ಜ್ಞಾನ ತನ್ನಲ್ಲಿಯೇ ಸಂಗ್ರಹವಾಗಿ ಜ್ಞಾನಮದ ಹುಟ್ಟಿದೆ. ಕುಲ ಮದ,

ಛಲಮದಗಳು ತನುವಿನಲ್ಲಿ ಹುಟ್ಟಿ ಅಗ್ನಿಯನ್ನು ಆಮಂತ್ರಣ ಮಾಡಿಕೊಂಡಿವೆ.

ತನುವಿನ ಜ್ಞಾನ ಪುಸ್ತಕಕ್ಕೆ ಹರಿದು ಪುನಃ ತನುವಿನಲ್ಲಿ ಸಂಗ್ರಹವಾಗಿದೆ ; ಅದು ಹಿರಿಯನಂತೆ ವೇಷ ಹಾಕಿ ವಾದ ಮಾಡುತ್ತದೆ. ಕೇಕೆ ಹಾಕಿ ತಾನೇ ಹಿರಿಯನೆಂದು ಕುಣಿಯುತ್ತದೆ. ವಾದ ವಿವಾದಗಳಿಗೆ ತನು ಬಲಿಯಾಗಿದೆ. ಜಾತಿ ಮತ ಧರ್ಮ ಪಂಗಡಗಳು ಕುಲಗೋತ್ರಗಳು ತನುವಿನಲ್ಲಿ ಹುಟ್ಟಿ ತನುವನ್ನು ಹಗಲಿರುಳೆನ್ನದೆ ಸುಡುತ್ತಲಿವೆ.

ತನುವಿನಲ್ಲಿ ತನ್ಮಯವಾದ ಜ್ಞಾನ ಹಸುಳೆಯಂತೆ ಹಾಯಾಗಿ ನಿದ್ರಿಸುತ್ತಲಿದೆ. ಜ್ಞಾನಕ್ಕೆ ವಾದ ಬೇಡ. ಅಜ್ಞಾನಕ್ಕೆ ವಾದ-ವಿವಾದಗಳೇ ಆಹಾರ. ಜ್ಞಾನಕ್ಕೂ ಅಜ್ಞಾನಕ್ಕೂ ತನುವೇ ಬಳಕೆಯಾಗಿದೆ.

ಅಜ್ಞಾನವೆಂಬ ತೊಟ್ಟಿಲೊಳಗೆ, ಜ್ಞಾನವೆಂಬ ಶಿಶುವ ಮಲಗಿಸಿ,ಸಕಲ ವೇದ ಶಾಸ್ತ್ರವೆಂಬ ನೇಣ ಕಟ್ಟಿ, ಹಿಡಿದು ತೂಗಿ ಜೋಗುಳವಾಡುತ್ತಿದ್ದಾಳೆ ಭ್ರಾಂತಿಯೆಂಬ ತಾಯಿ !ತೊಟ್ಟಿಲು ಮುರಿದು ನೇಣು ಹರಿದು, ಜೋಗುಳ ನಿಂದಲ್ಲದೆ, ಗುಹೇಶ್ವರನೆಂಬ ಲಿಂಗವ ಕಾಣಬಾರದು ಎಂದು ತನುವಿಗೆ ಫರ್ಮಾನು ಹೊರಡಿಸಿದ್ದಾರೆ ಅಲ್ಲಮ ಪ್ರಭುಗಳು !

ತನುವಿನಲ್ಲಿ ತನ್ಮಯವಾಗಿ ತನುವನ್ನೇ ತೊಟ್ಟಿಲ ಮಾಡಿಕೊಂಡು ಜ್ಞಾನದ ಶಿಶು ಹಾಯಾಗಿ ಮಲಗಿದೆ. ತನುವಿನಿಂದಲೇ ಹುಟ್ಟಿದ ಸಕಲ ವೇದ ಶಾಸ್ತ್ರಗಳು, ತನುವಿಗೆ ನೇಣಾಗಿ ಬಿಗಿದುಕೊಂಡಿವೆ. ತನುವಿನಲ್ಲಿಯೇ ಹುಟ್ಟಿದ ಭ್ರಾಂತಿ ತಾಯಿಯಾಗಿ ಜೋಗುಳ ಹಾಡುತ್ತಿದ್ದಾಳೆ. ಅಜ್ಞಾನದ ತೊಟ್ಟಿಲು ಮುರಿದು, ನೇಣು ಹರಿದು, ಜೋಗುಳ ನಿಂದಲ್ಲದೆ, ತನುವಿನಲ್ಲಿ ತನ್ಮಯವಾದ ಜ್ಞಾನ ತನುವಿಗೆ ಕಾಣಲು ಬಾರದು !

ಕಾಯದ ಜ್ಞಾನ ಕಾಯಕ್ಕೆ ದಕ್ಕಿದಾಗ, ಕಾಯಕ್ಕೆ ಅಂಟಿದ ಕುಲಮದ, ಛಲಮದ ತಂತಾನೆ ಕಳಚಿ ಬೀಳುವುದು. ಕಾಯಕ್ಕೆ ಕಾಯವೇ ಕೈಲಾಸವಾಗುವುದು.

**109**

**ಕುಲ ಹಲವಾದಡೇನು? ಉತ್ಪತ್ಯ ಸ್ಥಿತಿ-ಲಯ ಒಂದೆ ಭೇಧ.**
**ಮಾತಿನ ರಚನೆಯ ಬೇಕಾದಂತೆ ನುಡಿದಡೇನು?**
**ಬಿಡು ಮುಡಿಯಲ್ಲಿ ಎರಡನರಿಯಬೇಕೆಂದನಂಬಿಗ ಚೌಡಯ್ಯ .**

ಪ್ರಪಂಚದಲ್ಲಿರುವ ದೇಹಗಳೆಲ್ಲ ಒಂದೇ. ದೇಹವನ್ನು ಹೊದ್ದುಕೊಂಡ ಚರ್ಮ ಒಂದೇ. ಅದರೊಳಗೆ ಅಡಗಿದ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಒಂದೇ. ರೋಮ ನಖ ಕೂಡಾ ಒಂದೇ . ನೋಡುವ ಕಣ್ಣು ಒಂದೇ. ಕೇಳುವ ಕಿವಿ, ರುಚಿಸುವ ನಾಲಿಗೆ, ಮೂಸಿಸುವ ಮೂಗು ಕೂಡಾ ಒಂದೇ. ಇವೆಲ್ಲವುಗಳನ್ನು ಹೊಂದಿದ ದೇಹದ ಹುಟ್ಟು ಒಂದೇ. ಅದರ ಸಾವು ಕೂಡಾ ಒಂದೇ. ಹುಟ್ಟು ಸಾವುಗಳ ಮಧ್ಯದಲ್ಲಿರುವ ದೇಹದ ಬದುಕು ಕೂಡಾ ಒಂದೇ ಆಗಿದೆ.

ಭಾಷೆ ಬೇರೆ ಬೇರೆ ಆದರೇನು ಅರಿವು ಒಂದೇ . ದೇಹದ ಅರಿವು ದೇಹಕ್ಕೆ ತಿಳಿಯದ್ದ ರಿಂದಾಗಿ ದೇಹ ಹಲವು ಕುಲಗಳಿಂದ ಜಾತಿ-ಮತ ಪಂಥ ಪಂಗಡ ಧರ್ಮಗಳಿಂದ ಕರೆ ಯಿಸಿಕೊಳ್ಳಲು ಇಷ್ಟ ಪಡುತ್ತದೆ.

ದೇಹ ತನ್ನ ಮಾತಿನ ರಚನೆಯನ್ನು ತನಗೆ ಬೇಕಾದ ಪ್ರಕಾರಗಳಲ್ಲಿ ಹೆಣೆದುಕೊಂಡು

ಸಂಭ್ರಮ ಪಡುತ್ತದೆ ; ದುಃಖ ಪಡುತ್ತದೆ. ಯುದ್ಧಕ್ಕೆ ಅಣಿಯಾಗುತ್ತದೆ. ಮಾತಿನಿಂದಲೇ ಕತಕತನೆ ಕುದ್ದು ಸಾವಿಗೆ ಈಡಾಗುತ್ತದೆ. ಮಾತನಾಡಿ, ಮಾತಕೇಳಿ, ಕೇಳಿದ ಮಾತನ್ನು ಮೌನ ಮಾಡಿ, ಸಾವು ಇರದ ಸರದಾರನಾಗಲು ಹಿಂಜರಿಯುತ್ತದೆ.

ದೇಹಕ್ಕೆ ಶೋಭೆ ಬರುವುದು ದೇಹದ ಮಾತಿನಿಂದಲೇ . ಮಾತು ದೇಹದ ಧರ್ಮ. ದೇಹ ತನಗೆ ಬೇಕಾದಂತೆ ಮಾತಿನ ರಚನೆ ಮಾಡುತ್ತದೆ. ಹಾಗೆಯೇ ತನಗೆ ಬೇಕಾದಂತೆ ಮಾತು ಕೇಳಿ ಸಂಭ್ರಮ ಪಡುತ್ತದೆ. ತನಗೆ ಬೇಕಾದಂತೆ ಮಾತು ಕೇಳಿ ದುಃಖ ಪಡುತ್ತದೆ. ಕ್ರೌರ್ಯಕ್ಕೆ ಒಳಗಾಗಿ, ದ್ವೇಷ, ಅಸೂಯೆಗಳಿಂದ ಸುಟ್ಟು ದೇಹವೆಂಬ ದೇಶಕ್ಕೆ ಕಿಚ್ಚು-ಹಚ್ಚುತ್ತದೆ.

ದೇಶವೆಂದರೆ ಬಯಲು. ದೇಹವೆಂದರೂ ಬಯಲು! ಹೀಗಾಗಿ ದೇಹವನ್ನು ದೇಶವೆಂದು ಕರೆದರು ಪೂರ್ವಜರು.''ದೇಶಮಂಟೆ ಮಟ್ಟಿ ಕಾದೋಯ್; ದೇಶಮಂಟೆ ಮನುಷುಲೋಯ್ '' ಎಂದ ಒಬ್ಬ ತೆಲುಗು ಕವಿ. ದೇಶವೆಂದರೆ ಮಣ್ಣಲ್ಲ; ದೇಶವೆಂದರೆ ಮನುಷ್ಯರು.

ಬಯಲು ಗುಡುಗು ಸಿಡಿಲು ಮಿಂಚುಗಳಿಗೆ ಹೆದರುವುದಿಲ್ಲ. ಅಲುಗಾಡುವುದಿಲ್ಲ. ಮಿಸುಕುವುದಿಲ್ಲ. ಭೂಮಿ ಬಿರಿದರೇನು; ಲಾವಾರಸ ಚಿಮ್ಮಿದರೇನು? ಗಾಳಿ ರಭಸದಿಂದ ಬೀಸಿದರೇನು? ಜಲ ಸುನಾಮಿಯೋಪಾದಿಯಲ್ಲಿ ಭೋರ್ಗರೆದು ಹರಿದರೇನು? ಬಯಲು ಮಾತ್ರ ಶಾಂತ ಪ್ರಶಾಂತ ! ಏಕೆಂದರೆ ಬಯಲಲ್ಲಿಯೇ ಅವುಗಳ ಸೃಷ್ಟಿ; ಬಯಲ ಗರ್ಭದಲ್ಲಿಯೇ ಅಗ್ನಿ, ಗಾಳಿ, ಜಲ, ಭೂಮಿ. ಆಕಾಶ ಕಾಯಗಳ ವಾಸ. ಇವುಗಳ ಆಟ ಬಯಲಿಗೆ ಚಿನ್ನಾಟ. ಹಾಗೆಯೇ ದೇಹದಲ್ಲಿ ಹುಟ್ಟಿದ ಮಾತುಗಳು ದೇಹಕ್ಕೆ ತಿಳಿಯಬೇಕಲ್ಲ!

ಕಣ್ಣು , ಕಿವಿ, ಮೂಗು ನಾಲಿಗೆ ಚರ್ಮ ಮಾತನಾಡುವುದಿಲ್ಲ. ಕಿವಿ ಮಾತ್ರ ಮಾತು ಕೇಳುತ್ತದೆ. ಮಾತನ್ನು ಮಾತಿನಂತೆ ಕೇಳುವ ಶಕ್ತಿ ಕಿವಿಯ ಕಿವಿಗೆ ಮಾತ್ರ ಇದೆ. ಕಿವಿಯ ಕಿವಿ ಕಿವಿಗೆ ಪರಿಚಯವಿಲ್ಲ. ಹೀಗಾಗಿ ಬಾಯಿಯಿಂದ ಹೊರಬಂದ ಮಾತನ್ನು ಹೊರ ಕಿವಿ ತನಗೆ ಬೇಕಾದಂತೆ ಕೇಳಿ ಸಂಭ್ರಮಿಸುತ್ತದೆ, ದುಃಖಿಸುತ್ತದೆ. ಮಾತು ಕೇಳಿ ದ್ವೇಷ ಅಸೂಯೆಯಿಂದ ಕ್ರೌರ್ಯದಿಂದ ನರಳುತ್ತದೆ. ಮಾತನ್ನು ಮಾತಿನಂತೆ ಕೇಳುವುದಿಲ್ಲ. ಹಾಗೆ ಕೇಳಲು ಹೊರ ಕಿವಿಗೆ ಸಾಧ್ಯವಾಗುವುದಿಲ್ಲ.ಹೊರ ಕಿವಿಗೆ ಒಳಕಿವಿ ಪರಿಚಯವಾಗಬೇಕು. ಆ ಕೆಲಸವನ್ನು ಹೊರಕಿವಿಯೇ ಮಾಡಿಕೊಳ್ಳಬೇಕು. ಹೊರಕಿವಿ ಬೇಕಾದ ಮಾತು ಕೇಳಿ ದೇಹದೊಂದಿಗೆ ಸಂಭ್ರಮಿಸುತ್ತದೆ. ಬೇಡಾದ ಮಾತು ಕೇಳಿ ದೇಹದೊಂದಿಗೆ ದುಃಖಿಸುತ್ತದೆ. ಇವೆರಡೂ ಮಾತನ್ನು ಹಿಡಿದು ಈ ಮಾತಿನಲ್ಲಿ ಸಂಭ್ರಮಿಸುವ ದುಃಖಿಸುವ ಅರ್ಥವಾದರೂ ಇದೆಯಾ ಎಂದು ಪರೀಕ್ಷಿಸಲು ಹೊರ ಕಿವಿಗೆ ಸಾಧ್ಯವಾಗುವುದಿಲ್ಲ. ಒಳಕಿವಿ ಹಾಗಲ್ಲ. ಸಕಲ ಮಾತುಗಳನ್ನು ಮಾತಿನಂತೆ ಕೇಳುತ್ತದೆ. ಏಕೆಂದರೆ ಅದು ಕಿವಿಯಲ್ಲ; ಕಿವಿಯ ಕಿವಿ. ಬಯಲು ಅಲ್ಲಿ ಚುಳುಕಾಗಿ ಒಳ ಕಿವಿಯಾಗಿದೆ.

ಹೀಗಾಗಿ ಅಂಬಿಗರ ಚೌಡಯ್ಯ ಶರಣರು ಮಾತಿನ ರಚನೆಯ ಬೇಕಾದಂತೆ ನುಡಿದರೇನು ? ಬಿಡುಮುಡಿಯಲ್ಲಿ ಎರಡನರಿಯ ಬೇಕು ಎಂದರು.

ಮಾತು ಹೇಗಾಡಿದರೇನು; ಯಾರು ಆಡಿದರೇನು? ಮಾತನ್ನು ಮಾತಿನಂತೆ ಕೇಳುವ ಸಾಮರ್ಥ್ಯ ಕಿವಿಯಲ್ಲಿರಬೇಕು. ಅದು ಒಳ ಕಿವಿಯಲ್ಲಿದೆ. ಆದರೆ ಒಳ ಕಿವಿ ಮೊದಲು ಮಾತು ಕೇಳಿ ಸಂಭ್ರಮಿಸಿ, ದುಃಖಿಸಿ ಒಳಗೆ ಬಿಡುತ್ತದೆ. ಮಾತಿನ ಘಟನೆ ಘಟಿಸಿ ಎಲ್ಲವೂ ಮುಗಿದು ಹೋಗಿರುತ್ತದೆ. ಆಗ ಒಳ ಕಿವಿ ಹೊರ ಕಿವಿಗೆ ಪಾಠ ಮಾಡುತ್ತದೆ. ಆದರೂ ಅದಕ್ಕೆ ಪಾಠ

ಎನ್ನಿಸುವುದಿಲ್ಲ. ಏಕೆಂದರೆ ಹೊರ ಕಿವಿಗೆ ಒಳ ಕಿವಿಯ ಪರಿಚಯವಿಲ್ಲ. ಆ ಶಿಕ್ಷಣವೂ ಶಿಕ್ಷಣ ದಲ್ಲಿ ಇಲ್ಲ. ಹೀಗಾಗಿ ಮಾತಿನಿಂದ ಜಗಳ , ಯುದ್ಧ ಕ್ರೌರ್ಯ, ದ್ವೇಷ , ಅಸೂಯೆಗಳು, ಎಲ್ಲವೂ ಮಾತಿನಿಂದಲೇ ; ಮಾತಿನಿಂದಲೇ ಬದುಕು ಮಾತಿನಿಂದಲೇ ಉಪ ಜೀವನ.

**110**

**ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ,**
**ತಿರುಗಿ ಅವನ ಮನೆಯಲ್ಲಿ ಉಣ್ಣ ಬಾರದೆಂದು**
**ಅಕ್ಕಿ ಕಣಕವ ಕೊಂಡು ಹೋಗುವ ಗುರುವಿನ ಕಂಡರೆ,**
**ಕೆಡವಿ ಹಾಕಿ ಮೂಗನೆ ಕೊಯ್ದು**
**ಇಟ್ಟಂಗಿಯ ಕಲ್ಲಿಲೆ ತಿಕ್ಕಿ**
**ಸಾಸಿವೆಯ ಹಿಟ್ಟನೆ ತಳಿದು**
**ಮೇಲೆ ಲಿಂಬಿಯ ಹುಳಿಯನೆ ಹಿಂಡಿ**
**ಪಡುವ ಗಾಳಿಗೆ ಹಿಡಿಯೆಂದಾತ ನಮ್ಮ ಅಂಬಿಗರ ಚೌಡಯ್ಯ.**

ತನಗೆ ಅನುಗ್ರಹವ ಮಾಡುವ ಶ್ರೀ ಗುರುವನ್ನು ಹುಡುಕುವುದಕ್ಕೆ ಶಿಷ್ಯನಿಗೆ ಸಾಧ್ಯವಾಗುವುದೇ ಇಲ್ಲ. ಶ್ರೀಗುರು ಬಯಕೆ ಉಳ್ಳ ಸರಿಯಾದ ಶಿಷ್ಯರನ್ನು ಹುಡುಕಲು ಜೀವನ ಪರ್ಯಂತ ಪ್ರಯಾಸ ಪಡುತ್ತಾರೆ. ಪ್ರಯಾಣ ಮಾಡುತ್ತಾರೆ. ಹಾಗೆ ಹುಡುಕುವಾಗ ಸಿಕ್ಕ ಶಿಷ್ಯನೇ ನಿಜವಾದ ಶಿಷ್ಯ ಹೊರತು ಉಳಿದವರು ಅಲ್ಲ. ಶಿಷ್ಯ ಗುರುದೇವನನ್ನು ಹುಡುಕಲಾರ. ಹುಡುಕಿದರೂ ಆತನಿಗೆ ಸಿಗುವುದು ವೇಷದ ವ್ಯವಹಾರದ ಗುರುವೇ ಹೊರತು ನಿಜ ಗುರುವಲ್ಲ. ಈತ ನಿಜ ಗುರುವಲ್ಲವೆಂದು ಶಿಷ್ಯನಿಗೆ ಕಂಡು ಹಿಡಿಯಲು ಬರುವುದಿಲ್ಲ.

ಅಜಾತನನ್ನು ಹುಡುಕುವುದಕ್ಕಾಗಿ ಬಳಲಿ ಬಂದ ಶಿಷ್ಯನಿಗೆ ವೇಷ ಹಾಕಿಕೊಂಡ ಗುರು ಅನುಗ್ರಹವ ಮಾಡಿ ಪುನಃ ಶಿಷ್ಯನ ಜಾತಿ ಕೇಳಿ ಅವನ ಮನೆಯಲ್ಲಿ ಉಣ್ಣ ಬಾರದೆಂದು ಅಕ್ಕಿ, ಹಿಟ್ಟು, ಬೆಲ್ಲ ಪಡೆದುಕೊಂಡು ಹೋಗುವ ಮೋಸದ ಗುರುವನ್ನು ಕಂಡರೆ, ಆವನನ್ನು ಕೆಡವಿ ಹಾಕಿ ಮೂಗು ಕೊಯ್ದು, ಇಟ್ಟಂಗಿಯ ಕಲ್ಲಿಲೆ ತಿಕ್ಕಿ, ಅದರ ಮೇಲೆ ಸಾಸಿವೆ ಪುಡಿ ಉದುರಿಸಿ , ನಿಂಬೆ ಹಣ್ಣಿನ ಹುಳಿಯನು ಹಿಂಡಿ ಪಶ್ಚಿಮದ ಗಾಳಿಗೆ ಹಿಡಿಯಬೇಕು ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಶಿಷ್ಯನಿಗೆ ಗುರುದೇವನನ್ನು ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ. ವೇಷದ ಗುರುವಿಗೆ ಬಯಕೆ ಉಳ್ಳ ಶಿಷ್ಯನನ್ನು ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ. ಇವರಿಬ್ಬರೂ ವ್ಯವಹಾರದಲ್ಲಿ ನಿಪುಣರು. ಗುರು ಬೇಡುತ್ತಾನೆ. ಬೇಡಿದ ಗುರುವಿಗೆ ಶಿಷ್ಯ ನೀಡುತ್ತಾನೆ. ಬೇಡುವವನು ಗುರು, ಬೇಡಿಸಿಕೊಂಬುವವನು ಶಿಷ್ಯ .ಬೇಡುವವನು ಏನು ನೀಡಿಯಾನು ? ನೀಡುವವನು ಏನು ಬೇಡಿಯಾನು ?

ನನಗೆ ಅನುಗ್ರಹ ನೀಡಿ ಎಂದು ಬೇಡಲು ಬಂದ ಶಿಷ್ಯ ಬೇಡುವವನು. ಅನುಗ್ರಹವ ಬೇಡಲು ಬಂದ ಶಿಷ್ಯನಿಗೆ ನೀಡುವವನು ಗುರು. ಆದರೆ ನೀಡುವವನೇ ಬೇಡುವವನಾಗಿದ್ದಾನೆ. ಬೇಡುವವನೇ ನೀಡುವವನಾಗಿದ್ದಾನೆ. ಬೇಡುವವನಿಗೂ ಬೇಡಿಸಿಕೊಂಬುವವನಿಗೂ ಮುಕ್ತಿಯಿಲ್ಲ

ಗುಹೇಶ್ವರಾ ಎಂದು ಅಲ್ಲಮಪ್ರಭುಗಳು ಸಾರಿದ್ದಾರೆ.

ತನ್ನನ್ನು ತಾನು ಅರಿತವನು ಮಾತ್ರ ಇತರರನ್ನು ಅರಿಯಬಲ್ಲ. ತನ್ನನ್ನು ತಾನು ಅರಿಯದವನು ಇತರರನ್ನು ಅರಿಯಲಾರ. ಗುರುವಾಗುವುದೆಂದರೆ ವೇದ ಶಾಸ್ತ್ರ ಪುರಾಣ ಭಗವದ್ಗೀತೆ ಬೈಬಲ್ ಕುರಾನ್ ಕಲಿಯುವುದು ಅಲ್ಲ. ತನ್ನನ್ನು ತಾನೇ ತಿಳಿಯುವುದು. ಕಲಿತರೆ ಹೇಳಲು ಬರುತ್ತದೆ. ನುಡಿಯಲು ಬರುತ್ತದೆ. ನುಡಿದಂತೆ ನಡೆಯಲು ಬರುವುದಿಲ್ಲ.

ಗುರುವಾಗುವುದು ಎಂದರೆ ಅರಿವಾಗುವುದು. ನೋಡುವ ಕಣ್ಣಿಗೆ ಸಕಲರನ್ನೂ ತನ್ನಂತೆ ನೋಡುವ ಅರಿವಾಗುವುದು. ಹೊಗಳಿಕೆ ತೆಗಳಿಕೆಗಳನ್ನು ಸಹಜವಾಗಿ ಕೇಳಲು ಅರಿವಾಗುವುದು. ಹೆಣ್ಣು ಗಂಡು ಕಳೆದುಕೊಂಡು ಮುಟ್ಟುವ ಅರಿವು ಚರ್ಮಕ್ಕೆ ಆಗುವುದು. ಏಕೆಂದರೆ ಚರ್ಮ ಹೆಣ್ಣಲ್ಲ ಗಂಡಲ್ಲ ಎಂದು ಚರ್ಮದಲ್ಲಿಯೇ ಅರಿತರಿತು ನೋಡಿದಾಗ ಚರ್ಮಕ್ಕೆ ಅರಿವಾಗುವುದು. ದುರ್ಗಂಧ ಸುಗಂಧಗಳನ್ನು ಮೂಗು ಅರಿಯದೆ ಸಹಜವಾಗಿ ಪರಿಮಳದಂತೆ ಮೂಸಿಸುವ ಅರಿವಾಗುವುದು. ಇದು ಗುರುವಾದಾತ ಕಂಡುಕೊಂಡ ಅರಿವಿನ ಪರಿಮಳದ ಬೆಡಗು. ಈ ಸತ್ಯವನ್ನು ಅರಿತಾತನೇ ಗುರು. ಅರಿತಾತ ಅರಿದುದನ್ನೇ ಹೇಳುತ್ತಾನೆ. ಅರಿದರಿದು ನೋಡಲು ಕೈಹಿಡಿದು ಕಲಿಸುತ್ತಾನೆ.

ಗುರುವಿನಲ್ಲಿದ್ದ ವಸ್ತುಗಳು ಶಿಷ್ಯನಲ್ಲಿವೆ. ಅವು ಸ್ಥಾನಪಲ್ಲಟವಾಗಿವೆ. ಗುರುದೇವ ಶಿಷ್ಯನಿಗೆ ಸರಿ ಮಾಡಿಕೊಳ್ಳಲು ಸೂಚಿಸುತ್ತಾನೆ. ಸಹಜವಾಗಿರಲು ಉಪದೇಶಿಸುತ್ತಾನೆ. ಉಪ ಅಂದರೆ ಹತ್ತಿರ. ದೇಶ ಅಂದರೆ ಬಯಲು. ಶಿಷ್ಯ ಬಯಲಲ್ಲಿಯೇ ಇದ್ದು ಬಯಲನ್ನು ಮರೆತಿದ್ದಾನೆ. ಗುರು ಬಯಲನ್ನು ಹೊದ್ದು ಬಯಲನ್ನು ಅರಿತಿದ್ದಾನೆ. ಮರೆತಿದ್ದನ್ನು ಅರಿಯಲು ಹೇಳುತ್ತಾನೆ. ಗುರುವಾಗಿ ಅಲ್ಲ ; ಸಖನಾಗಿ!

**111**

**ಕೂಡಿದ ಧನವೆಲ್ಲವನು ಗುರುಲಿಂಗಜಂಗಮಕ್ಕೆ**
**ವಂಚನೆಯ ಮಾಡಿ ಒಳಗಿಟ್ಟುಕೊಂಡು,**
**ನೆಲನ ತೋಡಿ ಬಚ್ಚಿಟ್ಟುಕೊಂಡು,**
**ಹಲವು ತೆರದ ಆಭರಣಗಳ ಮಾಡಿಸಿ,**
**ಕರ ಚರಣ ಉರ ಕರ್ಣಂಗಳೊಳಗಿಟ್ಟುಕೊಂಡು,**
**ಮುತ್ತಿಷ್ಟು ಬದುಕಾಗಲೆಂದು ತನ್ನ ಕೈಯೊಳಗಿನ ಇಷ್ಟಲಿಂಗಕ್ಕೆ**
**ಅಷ್ಟವಿಧಾರ್ಚನೆಯಂ ಮಾಡುವ ಲಿಂಗಪೂಜಕನ ಪರಿ ಎಂತೆಂದೊಡೆ:**
**ಆ ಭಕ್ತನು ಪಂಚಾಭಿಷೇಕದಿಂದ ಲಿಂಗಕ್ಕೆ ಮಜ್ಜನವ ನೀಡಿದಡೆ**
**ಲಿಂಗದ ಚಿತ್ತದಲ್ಲಿ ಸುಣ್ಣ ನೀರನೆತ್ತಿ ಬಾಜಿಸಿದಂತಾಯಿತ್ತಯ್ಯಾ !**
**ಆ ಭಕ್ತನು ವಿಭೂತಿಯ ಧರಿಸಿದಡೆ**
**ಲಿಂಗದ ಚಿತ್ತದಲ್ಲಿ ಬೂದಿಯ ಬೊಕ್ಕಣವ ಕಟ್ಟಿ ಬಾಜಿಸಿದಂತಾಯಿತ್ತಯ್ಯಾ !**
**ಆ ಭಕ್ತನು ಗಂಧವ ಧರಿಸಿದರೆ**
**ಲಿಂಗದ ಚಿತ್ತದಲ್ಲಿ ಚಂಡಿಟ್ಟು ಬಾಜಿಸಿದಂತಾಯಿತ್ತಯ್ಯಾ !**
**ಆ ಭಕ್ತನು ಅಕ್ಷತೆನೇಯರಿಸಿದರೆ**

**ಲಿಂಗದ ಚಿತ್ತದಲ್ಲಿ ಕಲ್ಲು ಹೊರಿಸಿ ಬಾಜಿಸಿದಂತಾಯಿತ್ತಯ್ಯಾ !**
**ಆ ಭಕ್ತನು ಪುಷ್ಪವ ಧರಿಸಿದರೆ**
**ಲಿಂಗದ ಚಿತ್ತದಲ್ಲಿ ಬೆನ್ನ ಮೇಲೆ ಹೇರು ಹೊರಿಸಿದಂತಾಯಿತ್ತಯ್ಯಾ!**
**ಆ ಭಕ್ತನು ಧೂಪವ ಬೀಸಿದರೆ**
**ಲಿಂಗದ ಚಿತ್ತದಲ್ಲಿ ಅರವನಿಕ್ಕಿ ಬಾದಿಸಿದಂತಾಯಿತ್ತಯ್ಯಾ!**
**ಆ ಭಕ್ತನು ದೀಪಾರತಿಯನೆತ್ತಿದರೆ**
**ಲಿಂಗದ ಚಿತ್ತದಲ್ಲಿ ಪಂಜುಗಳ್ಳರು ಬಂದು ವೋರೆಯ ಸುಟ್ಟು**
**ಬಾ (ಧಿ)ಸಿದಂತಾಯಿತ್ತಯ್ಯಾ !**
**ಆ ಭಕ್ತನು ಸ್ತೋತ್ರಮಂತ್ರವ ನುಡಿದರೆ**
**ಲಿಂಗದ ಚಿತ್ತದಲ್ಲಿ ಕರ್ಣದೊಳಗೆ ತೊಣಚಿ ಹೊಕ್ಕು ಗೋಳಿಟ್ಟು**
**ಬಾಧಿಸಿದಂತಾಯಿತ್ತಯ್ಯಾ !**
**ಇಂತಪ್ಪ ಲಿಂಗಬಾಧಕರನು ಲಿಂಗಪೂಜಕರೆನಬಹುದೆ ?**
**ಆತನ ಅಂಗಳವ ಮೆಟ್ಟಬಹುದೆ ?**
**ಇದರ ಇಂಗಿತವ ನಿಜಭಾವುಳ್ಳ ಶರಣರು**
**ನೀವೇ ತಿಳಿದು ನೋಡಿರೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಮನುಷ್ಯನಿಗೆ ಮನುಷ್ಯನ ಮೇಲಿನ ಪ್ರೀತಿ ಕಮ್ಮಿ ಆಗುತ್ತಲಿದೆ. ಮನುಷ್ಯನೇ ನಿರ್ಮಾಣ ಮಾಡಿ ಮನುಷ್ಯನಿಗಾಗಿ ಚಲಾವಣೆಯಲ್ಲಿರುವ ಧನದ ಮೇಲೆ ಮೋಹ ಹೆಚ್ಚಾಗುತ್ತಲಿದೆ. ಧನದ ವ್ಯಾಮೋಹಕ್ಕಾಗಿ ಅದರ ಹೆಚ್ಚಳಕ್ಕಾಗಿ ದೇವರನ್ನು ಸೃಷ್ಟಿಸಿಕೊಂಡ. ಧನಕ್ಕಾಗಿ ಸತಿ ಸುತರಿಗಾಗಿ ಭೂಮಿಗಾಗಿ ಆರಾಧಿಸುವ ದೇವರು ದೇವರಲ್ಲ. ಆ ದೇವರಿಗಾಗಿ ಮಾಡುವ ಭಕ್ತಿಯೂ ಭಕ್ತಿಯಲ್ಲ.

ಪರಧನ ಪರಸತಿ ಪರದೈವಕ್ಕೆ ಅಳುಪಿದೆಯಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಎಂದು ಖಚಿತವಾಗಿ ನುಡಿದರು ಶರಣರು.

ಪರಧನ ಪರಸತಿ ಪರದೈವ ಇದೆ ಎಂದ ಮೇಲೆ ಸ್ವಧನ ಸ್ವಸತಿ ಸ್ವದೈವ ಎಂದು ಇರಬೇಕಲ್ಲ ? ಮೊದಲ ಮೂರು ಪದಗಳಿಗೆ ಶಿಕ್ಷಣದ ಅವಶ್ಯಕತೆಯೇ ಇಲ್ಲ. ಮನುಷ್ಯ ಹುಟ್ಟಿದಂದಿನಿಂದ ಈ ಶಬ್ದಗಳನ್ನು ಕೇಳುತ್ತ ಅನುಭವಿಸುತ್ತಾ ಆರಾಧಿಸುತ್ತಲೇ ಬಂದಿದ್ದಾನೆ. ಪರದೈವ ಪರಧನ ಪರಸತಿಯ ಆರಾಧನೆಗಾಗಿ ಶಿಕ್ಷಣವಿದೆ. ಸ್ವಧನ, ಸ್ವದೈವ,ಸ್ವಸತಿಯ ಆರಾಧನೆಗಾಗಿ ಶಿಕ್ಷಣವಿಲ್ಲ. ಸಮಾಜದಲ್ಲಿ ಈ ಪದಗಳ ಬಳಕೆಯೂ ಇಲ್ಲ.

ಕೂಡಿದ ಧನವೆಲ್ಲ ಗುರುಲಿಂಗ ಜಂಗಮಕ್ಕೆ ವಂಚನೆ ಮಾಡಿ, ಕೈಬೆರಳಿಗೆ ಕೊರಳಿಗೆ ಸೊಂಟಕ್ಕೆ ಶಿರಕ್ಕೆ ಚಿನ್ನಾಭರಣವನ್ನು ಬಳಸಿ, ಬಚ್ಚಿಟ್ಟುಕೊಂಡು, ಮತ್ತಿಷ್ಟು ಬೇಕೆಂದು ತನ್ನ ಕೈಯೊಳಗಿನ ಇಷ್ಟಲಿಂಗಕ್ಕೆ ಅಷ್ಟ ವಿಧಾರ್ಚನೆಯಿಂದ ಪೂಜಿಸುವ ಭಕ್ತನನ್ನು ಅಂಬಿಗರ ಚೌಡಯ್ಯ ಶರಣರು ಖಂಡಿಸಿದ್ದಾರೆ.

ಲಿಂಗ ತನ್ನ ಕೊರಳಲ್ಲಿ ಕಟ್ಟಿಕೊಂಡ ಮಟ್ಟಿಗೆ ಅದು ಇಷ್ಟ ಲಿಂಗವಾಗುವುದಿಲ್ಲ. ಇಷ್ಟಲಿಂಗವೆಂಬುದು ಅಂಗದಲ್ಲಿ ಸಂಗಮವಾಗಿದೆ. ಬಸವಣ್ಣನವರು ಅದನ್ನು ಸ್ವದೈವವೆಂದು ಆರಾಧಿಸಿ ಸಂಗಮನಾಥನೆಂದು ನಾಮಕರಣ ಮಾಡಿದರು. ತನಗೆ ಇಷ್ಟವಾದ ಆ ಲಿಂಗಯ್ಯನನ್ನು

ಸರ್ವಾಂಗದಲ್ಲಿ ಧರಿಸಿಕೊಂಡರು. ಲಿಂಗಯ್ಯ ನುಡಿದು ಹೇಳುವುದನ್ನು ಬಸವಣ್ಣ ಕೇಳಿದರು. ಬಸವಣ್ಣ ನುಡಿದು ಹೇಳುವುದನ್ನು ಲಿಂಗಯ್ಯ ಕೇಳಿದ. ಹೀಗೆ ಕಲ್ಯಾಣದಲ್ಲಿ ಸರ್ವ ಶರಣರು ಸ್ವದೈವವನ್ನು ಆರಾಧಿಸಿದರು. ಆರಾಧಿಸಿ ಸ್ವದೈವವನ್ನು ಅಪ್ಪಿಕೊಳ್ಳುವ ಈ ಶಿಕ್ಷಣವನ್ನು ಬೆಡಗಿನ ನುಡಿಗಳ ಮೂಲಕ ವಚನಗಳ ಫಾರ್ಮೆಟ್‌ನಲ್ಲಿ ರಚಿಸಿದರು.

ಶರಣರು ರಚಿಸಿದ ಸೂತ್ರದ ಮೂಲಕ ಅಂಗದಲ್ಲಿ ಪ್ರವೇಶ ಮಾಡಿ ಹುಡುಕಿದರೆ ಅಲ್ಲಿ ಸ್ವದೈವವೆಂಬ ಲಿಂಗ ಸಿಕ್ಕುವುದು. ಸ್ವಧನವೆಂಬ ಸಂಪತ್ತು ಪ್ರಾಪ್ತಿಯಾಗುವುದು. ಕೂಟಕ್ಕಾಗಿ ಸ್ವಸ್ತ್ರೀಯೆಂಬ ಸ್ತ್ರೀ ಕೂಡಾ ಸಿಕ್ಕುವಳು.

ಭಕ್ತ , ಸ್ವಧನ ಸ್ವದೈವ ಸ್ವಸ್ತ್ರೀಗೆ ಮರುಳಾಗಿ, ಆರಾಧಿಸುತ್ತಲೇ ಅಲ್ಲಿಯೇ ಮೈಮರೆವನು. ಪರಧನ ಪರದೈವ ಪರಸ್ತ್ರೀಯನ್ನು ತ್ಯಜಿಸುವನು. ಮೊದಲನೇಯ ಪೂಜೆ ಸ್ವಾನುಭವದ ಪೂಜೆ. ಕೂಡದ ಅಗಲದ ಕೂಟದ ನಿರಂತರ ಸುಖದ ಪೂಜೆ. ಎರಡನೇಯದು ಲೋಕದ ಪೂಜೆ ಪರರ ಬಳುವಳಿಯಿಂದ ಬಂದ ಪೂಜೆ. ಕೂಡಿ ಅಗಲುವ ಕೂಟದ ಕ್ಷಣಿಕ ಸುಖದ ಪೂಜೆ. ಇಂತಹ ಲೋಕದ ಪೂಜೆಯನ್ನು ಅಂಬಿಗರ ಚೌಡಯ್ಯ ಶರಣರು ಖಂಡಿಸಿದ್ದಾರೆ.

ಭಕ್ತನು ಪಂಚಾಭಿಷೇಕದಿಂದ ಲಿಂಗಕ್ಕೆ ಮಜ್ಜನವ ಮಾಡಿದರೆ ಅಂಗದಲ್ಲಿ ಸಂಗಮವಾದ ಲಿಂಗಯ್ಯನಿಗೆ ಸುಣ್ಣದ ನೀರನೆತ್ತಿ ಬಾಧಿಸಿದಂತೆ ಆಗುತ್ತದೆ.

ಭಕ್ತನು ಕೊರಳಲ್ಲಿ ಕಟ್ಟಿಕೊಂಡ ಲಿಂಗಕ್ಕೆ ಭಸ್ಮವ ಧರಿಸಿದಡೆ, ಅಂಗದಲ್ಲಿ ಸಂಗಮವಾದ ಲಿಂಗಯ್ಯನಿಗೆ ಬೂದಿಯ ಚೀಲವ ಕಟ್ಟಿ ಬಾಧಿಸಿದಂತೆ ಆಯಿತು.

ಭಕ್ತನು ಲಿಂಗಕ್ಕೆ ಗಂಧವ ಧರಿಸಿದರೆ, ಅಂಗದಲ್ಲಿ ಸಂಗಮವಾದ ಲಿಂಗಯ್ಯನಿಗೆ ಚಂಡಿಟ್ಟು ಬಾಧಿಸಿದಂತಾಯಿತು. ಭಕ್ತನು ಲಿಂಗಕ್ಕೆ ಪುಷ್ಪವ ಧರಿಸಿದರೆ, ಅಂಗದಲ್ಲಿ ಸಂಗಮವಾದ ಲಿಂಗಯ್ಯನ ಬೆನ್ನ ಮೇಲೆ ಭಾರ ಹೊರಿಸಿ ದಂತಾಯಿತು.

ಭಕ್ತನು ಲಿಂಗಕ್ಕೆ ಧೂಪವ ಬೀಸಿದರೆ, ಅಂಗದಲ್ಲಿ ಸಂಗಮವಾದ ಲಿಂಗಯ್ಯನಿಗೆ ಅರದಿಂದ ತಿಕ್ಕಿ ಬಾಧಿಸಿದಂತಾಯಿತು. ಭಕ್ತನು ದೀಪಾರತಿಯನು ಎತ್ತಿದರೆ, ಅಂಗದಲ್ಲಿ ಸಂಗಮವಾದ ಲಿಂಗಯ್ಯನಿಗೆ ಪಂಜುಗಳ್ಳರು ಬಂದು ಮೋರೆಯ ಸುಟ್ಟು ಬಾಧಿಸಿದಂತಾಯಿತು.

ಭಕ್ತನು ಲಿಂಗಕ್ಕೆ ಸ್ತೋತ್ರ ಮಂತ್ರವ ನುಡಿದರೆ, ಅಂಗದಲ್ಲಿ ಸಂಗಮವಾದ ಲಿಂಗಯ್ಯನ ಕಿವಿಯಲ್ಲಿ ತೊಣಚಿ ಹುಳು ಹೊಕ್ಕು ಗೋಳಿಟ್ಟು ಬಾಧಿಸಿದಂತಾಯಿತು.

ಇಂತಪ್ಪ ಲಿಂಗ ಬಾಧಕರನು ಲಿಂಗಪೂಜಕರೆನಬಹುದೆ ಆತನ ಅಂಗಳವ ಗುರುವಾದವನು ಮೆಟ್ಟಬಹುದೆ ಎನ್ನುವ ಪ್ರಶ್ನೆ ಚೌಡಯ್ಯ ಶರಣರದು. ಅಂಗದಲ್ಲಿ ಸಂಗಮವಾದ ಅಂತರಾಳದ ಲಿಂಗಯ್ಯನನ್ನು ಪೂಜಿಸಲು ಯಾವ ಪರಿಕರಗಳ ಅವಶ್ಯಕತೆಯೂ ಇಲ್ಲ. ಹೂ ಪತ್ರಿ ಫಲಗಳು ಬೇಕಿಲ್ಲ. ಧೂಪ ದೀಪಾರತಿಗಳು ಬೇಕಿಲ್ಲ. ಮೃಷ್ಟಾನ್ನ ಪಂಚಾಮೃತಗಳ ಅವಶ್ಯಕತೆಯೂ ಇಲ್ಲ. ತನ್ನೊಳಗೆ ತಾನೇ ಹೊಕ್ಕು ತನ್ನನ್ನು ತಾನೇ ನೋಡುವ ಅನುಭವವೊಂದಿದ್ದರೆ ಸಾಕು.

**112**

**ಕೂರ್ಮನ ಭಾವ ನಿಂದಲ್ಲಿ, ಮೋಹವಾಗಿಪ್ಪುದು.**
**ಮರ್ಕಟ ಭಾವ ನಿಂದಲ್ಲಿ, ಹೆಚ್ಚುಗೆ ತಗ್ಗನರಸುತ್ತಿಪ್ಪುದು.**
**ವಿಹಂಗ ಜ್ಞಾನ ನಿಂದಲ್ಲಿ, ಅಡಿ ಆಕಾಶ ಉಭಯವ ನರಸುತ್ತಿಪ್ಪುದು.**

**ಪಿಪೀಲಿಕ ಭಾವ ನಿಂದಲ್ಲಿ,ಮೂರ್ತಿಧ್ಯಾನವಾಗಿಪ್ಪುದು.**
**ಧ್ಯಾನ ನಿಷ್ಪತ್ತಿಯಾಗಬೇಕೆಂದನಂಬಿಗ ಚೌಡಯ್ಯ .**

ಧ್ಯಾನ ಎಂದರೆ ಭಾವದಿಂದ ಕೂಡುವುದಲ್ಲ. ಖಾಲಿಯಾಗುವುದು ಧ್ಯಾನ. ನಿಶ್ಚಲ ಬ್ರಹ್ಮನಾಗುವುದು ಧ್ಯಾನ. ಚಲನೆಯನ್ನು ಕಳೆದುಕೊಂಡು ಬಯಲ ಬೀಜದಂತಾಗುವುದು; ಬಯಲೇ ತಾನಾಗುವುದು ಧ್ಯಾನ.

ಧ್ಯಾನ ಒಂದು ಸರಕಾಗಿದೆ. ಅದನ್ನು ಗುರುವಾದಾತ ನಾನಾ ವಿಧಾನಗಳ ಮೂಲಕ ಭಾವದಿಂದ ಧ್ಯಾನ ಮಾಡುವುದನ್ನು ಕಲಿಸುತ್ತಾನೆ. ಏನೇನೋ ಆಗುವುದು ಬೇಡವೋ ಅದನ್ನು ಭಾವದಿಂದ ಆಗಲು ಹೇಳುತ್ತಾನೆ.

ಕೂರ್ಮನ ಭಾವನಿಂದಲ್ಲಿ, ಮೋಹವಾಗಿಪ್ಪುದು :

ಪಂಚ ಜ್ಞಾನೇಂದ್ರಿಯಗಳು ಇಂದ್ರಿಯಗಳಾದಾಗ ಒಳ ಮುಖಕ್ಕೆ ಸರಿಯುವವು. ಕಣ್ಣು ನೋಡಿ ಕಾಮದ ಭಾವದಿಂದ ಹಿಂದೆ ಸರಿದಾಗ ಅದರ ಜೊತೆಗೆ ನಾಲ್ಕು ಇಂದ್ರಿಯಗಳು ಒಳ ಸರಿಯುವ ಭಾವವೇ ಕೂರ್ಮಭಾವ. ಈ ಭಾವದಿಂದ ಧ್ಯಾನ ಮಾಡಲು ಹೇಳುವ ಗುರುಗಳು ಸಿಕ್ಕುವರು. ಈ ಧ್ಯಾನದಿಂದ ಕಾಮ ಕಳೆಯುವುದಿಲ್ಲ. ಕಾಮವೇ ಮೋಹವಾಗಿ ಒಳಸರಿದು ಪುನಃ ಕಾಮವಾಗಿ ಹೊರ ಬರುತ್ತದೆ. ಭಾವ ಭಾವಿಸಿದಾಗ ಆಮೆಯಂತೆ ಚಿಪ್ಪಿನಲ್ಲಿ ಬಚ್ಚಿಟ್ಟುಕೊಂಡು ಪುನಃ ಜಾಗೃತವಾಗಿ ಹೊರಬರುತ್ತದೆ. ಇದು ಕೂರ್ಮನ ಭಾವವಾಯಿತೇ ಹೊರತು ತನ್ನ ಅನುಭಾವದ ಧ್ಯಾನವಾಗಲಿಲ್ಲ !

ಭಾವಿಸಿದ ಭಾವಗಳೆಲ್ಲ ದುರ್ಭಾವಗಳಾಗಿ ಪರಿವರ್ತನೆಯಾಗುವುವೇ ಹೊರತು ನಿರ್ಭಾವವಾಗುವುದಿಲ್ಲ. ನಿರ್ಭಾವವೆಂದರೆ ಭಾವಿಸುವ ಭಾವವೆಲ್ಲ ಬೆತ್ತಲೆಯಾಗಿ ನಿರ್ಭಾವವಾಗುವುದು.

ನೋಡಿದರೆ ನೋಡುವ ಕಣ್ಣಿನಲ್ಲಿ ಕಾಮ ಹುಟ್ಟುತ್ತದೆ ಎಂದರೆ ಕಣ್ಣಿನಲ್ಲಿ ದೋಷವಿದೆ ಎಂದು ಅರ್ಥ. ಅಂತಹ ದೋಷದ ಕಣ್ಣಿನೊಂದಿಗೆ ಹಿಂದೆ ಸರಿದರೆ ಆ ಕ್ಷಣದಲ್ಲಿ ಘಟಿಸುವ ಘಟನೆ ಹಿಂದೆ ಸರಿಯಿತು ಅಷ್ಟೆ. ಆದರೆ ಕಣ್ಣಿನಲ್ಲಿರುವ ಕಾಮ ಬೆತ್ತಲೆಯಾಗಲಿಲ್ಲ. ಮೋಹವಾಗಿ ಕಣ್ಣಿನಲ್ಲಿ ಬಚ್ಚಿಟ್ಟುಕೊಂಡು ಕೂರ್ಮಭಾವದಿಂದ ಹಿಂದೆ ಸರಿಯಿತು. ಪುನಃ ಕಣ್ಣು ತೆರೆದರೆ ಕಾಮವೇ ಕಾಣುತ್ತದೆ. ಮನುಷ್ಯ ಜನ್ಮ ತಳೆದು ಪುನಃ ಕೂರ್ಮವಾಗುವುದು ಜ್ಞಾನಿಯ ಲಕ್ಷಣವಲ್ಲ. ಕೂರ್ಮನಾಗಿ, ಮರ್ಕಟವಾಗಿ,ಪಕ್ಷಿಯಾಗಿ,ಇರುವೆಯಾಗಿ ಈಗ ಅರಿವೆಂಬ ಅಂಗವನ್ನು ಧರಿಸಿದ ನೀನು ಪುನಃ ಭಾವದಿಂದ ಆಯಾ ವೃತ್ತಿಯಲ್ಲಿ ಅಡಗುವುದೆಂದರೇನು ?

ಧ್ಯಾನದ ಭಾವಗಳೆಲ್ಲ ಬೆತ್ತಲೆಯಾಗಿ ಬಯಲಾಗಬೇಕು. ಏಕೆಂದರೆ ತನು ಬಯಲ ಬಿತ್ತಿಗೆಯ ಬೆಳೆ. ನಿಷ್ಪತ್ತಿಯಾಗಿ ಹಣ್ಣು ಕಳಚಿ ಬೀಳುವಾಗ ಶಿವ ತನಗೆ ಬೇಕೆಂದು ಎತ್ತಿಕೊಂಡ ಎಂದು ಬಸವಣ್ಣನವರು ಹೇಳಿಲ್ಲವೆ ? ಹಾಗೆ. ಧ್ಯಾನ ನಿಷ್ಪತ್ತಿಯಾಗಬೇಕೆಂದು ಅಂಬಿಗರ ಚೌಡಯ್ಯ ಶರಣರು ಕೂಡಾ ಹೇಳಿದ್ದಾರೆ.

**113**

**ಕೇಳಿದೇನೆಲೆ ಮಾನವ,**
**ಪಂಚಮಹಾಪಾತಕ ದೋಷಾದಿಗಳನ್ನು ಮಾಡಿ**

**ಬಾಯಿಲೆ 'ಶಿವ ಶಿವ ' ಎಂದು ಶಿವನ ನೆನೆದರೆ**
**ಭವ ಹರಿಯಿತೆಂಬ ವಿಚಾರಗೇಡಿಗಳ ಮಾತು ಕೇಳಲಾಗದು.**
**ಜ್ಯೋತಿಯ ನೆನೆದರೆ ಕತ್ತಲೆ ಹಿಂಗುವುದೇ ?**
**ರಂಭೆಯ ನೆನೆದರೆ ಕಾಮದ ಕಳವಳ ಹೋಗುವುದೇ ?**
**ಮೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವುದೇ ?**
**ಮಾಡಿದಂತಹ ದೋಷವು ಹೋಗಲಾರದು.**
**ಇಂತಪ್ಪ ದುರಾಚಾರಿಗಳ ಪಡಿಹಾರಿ ಉತ್ತಣ್ಣಗಳ ಪಾದುಕೆಯಿಂದ**
**ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.**

ಗುರುದ್ರೋಹ, ಲಿಂಗದ್ರೋಹ,ಜಂಗಮದ್ರೋಹ, ಆಚಾರದ್ರೋಹ, ಪ್ರಸಾದ ದ್ರೋಹ ಇವು ಪಂಚ ಮಹಾಪಾತಕಗಳು . ಹೀಗೆ ಪಂಚ ಮಹಾಪಾತಕಗಳ ದೋಷದಿಂದ ಕೂಡಿದ ದೇಹ ಬಾಯಿಲೆ ಶಿವ ಶಿವ ಎಂದು ಶಿವನ ನೆನೆದರೆ ದೇಹಕ್ಕೆ ಜನನ ಮರಣಗಳ ಬಾಧೆ ಹರಿಯುವುದೇ ? ಹೀಗೆಂದು ಹೇಳುವ ವಿಚಾರಗೇಡಿಯ ಮಾತ ಕೇಳಲಾಗದು.

ಪ್ರತಿ-ದೇಹದಲ್ಲಿ ಅರಿವೆಂಬ ಗುರುದೇವನಿದ್ದರೂ ಆ ಗುರುದೇವನನ್ನು ನೆನೆಯದ ದೇಹ ಗುರುದ್ರೋಹವೆಂಬ ಮಹಾಪಾತಕವನ್ನು ಮಾಡುತ್ತದೆ. ಅಂಗದಲ್ಲಿ ಲಿಂಗಸಂಗಮವಾಗಿದ್ದರೂ ಅಂಗವನ್ನು ಆವರಿಸಿದ ಮನ ಲಿಂಗಯ್ಯನನ್ನು ನೆನೆಯದೆ ಲಿಂಗದ್ರೋಹವನ್ನು ಮಾಡಿ ಎರಡನೇಯ ಪಾತಕಿಯಾಗುತ್ತದೆ.

ಅಂಗದಲ್ಲಿ ಜಂಗಮ ಸಂಗಮವಾಗಿದ್ದರೂ ಅಂಗವನ್ನು ಆವರಿಸಿದ ಮನ ಜಂಗಮನನ್ನು ನೆನೆಯದೆ ಜಂಗಮ ದ್ರೋಹಿಯಾಗಿ ಮೂರನೆಯ  ಪಾತಕಿ ಎಂದು ಕರೆಯಿಸಿಕೊಳ್ಳುತ್ತದೆ.

ಅಂಗದಲ್ಲಿ ಸಂಗಮವಾದ ಗುರು,ಲಿಂಗ ಜಂಗಮರ ಸಹಾಯದಿಂದ ಮನಕ್ಕೆ ತನ್ನ ಸರಿತಪ್ಪುಗಳು ಮನದಟ್ಟಾಗುತ್ತವೆ.ಹೀಗಿದ್ದರೂ ತಪ್ಪಿನೊಂದಿಗೆ ಸುಖಿಸಿ ಅನಾಚಾರಿಯಾಗುತ್ತದೆ. ಅಗೋಚರದ ಅರಿವಿನ ಆಚಾರಕ್ಕೆ ದ್ರೋಹ ಬಗೆದು ಮನ ನಾಲ್ಕನೇಯ ಪಾತಕಿಯಾಗುತ್ತದೆ.

ನೋಡುವ ನೋಟದಲ್ಲಿ ಅರಿವಿದೆ. ಹಾಗೆಯೇ ನೋಡುವ ನೋಟದಲ್ಲಿ ಅಜ್ಞಾನವೂ ಇದೆ. ತನ್ನ  ಅಜ್ಞಾನ ತನ್ನ ಜ್ಞಾನದ ನೋಟಕ್ಕೆ ಪ್ರಸಾದವಾಗದೆ ಮನ ಪ್ರಸಾದ ದ್ರೋಹಿಯಾಗಿ ಪಂಚ ಮಹಾಪಾತಕಿ ಎಂದು ಕರೆಯಿಸಿಕೊಳ್ಳುತ್ತದೆ.

ಜ್ಯೋತಿಯ ನೆನೆದರೆ ಕತ್ತಲೆ ಬೆಳಕಾಗುವುದಿಲ್ಲ.ಕತ್ತಲು ಬೆಳಕಿನೆಡೆಗೆ ಪಯಣಿಸಿ ಆ ಬೆಳಕಿನಲ್ಲಿ ಲೀನವಾಗಿ ಬೆಳಕಾಗಬೇಕು. ನೆನೆದರಾಗದು.

**ರಂಭೆಯ ನೆನೆದರೆ ಕಾಮದ ಕಳವಳ ಹೋಗುವುದಿಲ್ಲ** : ರಂಭೆಯ ನೆನೆಯುವ ಮನ ಹೆಣ್ಣು; ರಂಭೆಯೂ ಹೆಣ್ಣು. ಅಜ್ಞಾನದಿಂದಾಗಿ ಹೆಣ್ಣು ಹೆಣ್ಣನ್ನೇ ನೆನೆದು ಹೆಣ್ಣನ್ನು ಬಯಸುತ್ತಲಿದೆ. ಸತಿ-ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ. ಸತಿ ಎನ್ನುವುದು ಮನ. ಪತಿ ಎನ್ನುವುದು ಪರಮ ಪುರುಷ ಪರಮೇಶ್ವರನೆಂಬ ಅರಿವು. ಅಂಗದಲ್ಲಿ ಇವರಿಬ್ಬರೂ ಸಂಗಮವಾಗಿದ್ದಾರೆ. ರಂಭೆಯ ನೆನೆಯುವ ಮನಕ್ಕೆ ಅರಿವಾದರೆ ಸಾಕು; ಆ ಮನವೇ ಘನಮನವಾಗುತ್ತದೆ. ಮಹಾದೇವನೊಂದಿಗೆ ಬೆರೆತು ಮಹಾಸತಿಯಾಗುತ್ತದೆ.

**ಮೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವುದೇ ?:**

ಕಾಮಧೇನು, ಕಲ್ಪವೃಕ್ಷ, ಪರಷುಮಣಿ ಎಂಬ ವಸ್ತುಗಳು ಇಲ್ಲ. ಅವೇನಿದ್ದರೂ

ಅಂಗದಲ್ಲಿಯೇ ಸಂಗಮವಾದ ಜ್ಞಾನ . ಅದನ್ನು ಪೂರ್ವಜರು ಬೇಡಿದ್ದನ್ನು ಕೊಡುವ ಪರಷುಮಣಿ, ಕಾಮಧೇನು, ಕಲ್ಪವೃಕ್ಷ ಎಂದು ಕರೆದರು. ಅದು ತನ್ನಲ್ಲಿಯೇ ಇರುವಾಗ ಅನ್ನವನ್ನು ಮೃಷ್ಟಾನ್ನವನು ನೆನೆದು ಭ್ರಮೆ ಪಡುವುದು ಏಕೆ? ಭ್ರಮೆಗೊಳಗಾದ ಮನದಿಂದಲೇ ಮಹಾದೇವನತ್ತ ಪ್ರಯಾಣ ಮಾಡಿದರೆ ಸಾಕು. ಅಲ್ಲಿ ಸಕಲ ಭೋಗಗಳು ಮನಕ್ಕೆ ಲಭ್ಯವಾಗುವವು.

ಮನ ಮಾಡಿದ ದೋಷಗಳು, ಮನ ಮಾಡಿದ ದುರಾಚಾರಗಳು ಸುಲಭವಾಗಿ ಹೋಗುವುದಿಲ್ಲ. ಮನ ನೆನೆದರಾಗದು ; ಕೆಂಚ ಕರಿಕನ ನೆನೆದರೆ ಕರಿಕನಾಗನು. ಕರಿಕ ಕೆಂಚನ ನೆನೆದರೆ ಕರಿಕ ಕೆಂಚನಾಗನು. ನೆನೆದರಾಗದು ಎಂದು ಬಸವಣ್ಣ ಸಾರಿದ್ದಾರೆ.

ಮನ ಘನದತ್ತ ಸಾಗುವ ಒಂದು ಸೂತ್ರ ಇದು. ಶರಣರ ಈ ಸೂತ್ರ ಹಿಡಿದು ಘನದತ್ತ ಪಯಣಿಸಲು ಅಣಿಯಾಗಬೇಕು. ಕೇಳಿದೇನೆಲೆ ಮಾನವ ಎಂದು ಮನಕ್ಕೆ ಭೋದಿಸಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**114**

**ಕೇಳಿರಯ್ಯಾ ಮಾನವರೆ, ಗಂಡ ಹೆಂಡಿರ ಮನಸ್ಸು ಒಂದಾಗಿದ್ದರೆ**
**ದೇವರ ಮುಂದೆ ನಂದಾದೀವಿಗೆಯ ಮುಡಿಸಿದ ಹಾಗೆ.**
**ಗಂಡ ಹೆಂಡಿರ ಮನಸ್ಸು ಬೇರಾದರೆ ಗಂಜಳದೊಳಗೆ ಹಂದಿ ಹೊರಳಾಡಿ**
**ಒಂದರ ಮೇಲೆ ಒಂದು ಬಂದು ಮೂಸಿದ ಹಾಗೆ.**
**ಛೇ, ಛೇ, ಇದು ಭಕ್ತಿಯಲ್ಲಣ್ಣ . ಅದೇನು ಕಾರಣ ಎಂದೊಡೆ,**
**ಕಾಶಿಗೆ ಹೋದೆನೆಂಬವರು ಹೇಸಿ ತೊತ್ತಿನ ಮಕ್ಕಳಯ್ಯಾ .**
**ಮೈಲಾರಕ್ಕೆ ಹೋದೆನೆಂಬವರು ಮಾದಗಿತ್ತಿಯ ಮಕ್ಕಳಯ್ಯಾ .**
**ಪರ್ವತಕ್ಕೆ ಹೋದೆನೆಂಬವರು ಹಾದರಗಿತ್ತಿಯ ಮಕ್ಕಳಯ್ಯಾ .**
**ರಾಚೋಟಿಗೆ ಹೋದೆನೆಂಬವರು ಲಜ್ಜೆ ಮಾರಿ ತೊತ್ತಿನ ಮಕ್ಕಳಯ್ಯಾ .**
**ಛೇ, ಛೇ, ಇದು ಭಕ್ತಿಯಲ್ಲವಯ್ಯಾ . ಅದೆಂತೆಂದೊಡೆ :**
**ಪರಬ್ರಹ್ಮ ಮೂರುತಿಯಾದ ಪರಶಿವನೆ ಗುರುನಾಮದಿಂ ಬಂದು**
**ಇಷ್ಟಲಿಂಗವ ಧರಿಸಿ, ಪಂಚಾಕ್ಷರಿಯ ಬೋಧಿಸಿದ ಮೇಲೆ**
**ಆ ಭಕ್ತನ ಕಾಯವೇ ಕೈಲಾಸ. ಅವನ ಒಡಲೆ ಸೇತುಬಂಧ ರಾಮೇಶ್ವರ.**
**ಅವನ ಶಿರವೇ ಶ್ರೀಶೈಲ. ಆತ ಮಾಡುವ ಆಚಾರವೇ ಪಂಚಪರುಷ.**
**ಇದು ತಿಳಿಯದೆ. ಶಾಸ್ತ್ರದಿಂದ ಕೇಳಿ, ಅರಿಯದೆ ಮಂದ ಬುದ್ಧಿಯಿಂದ**
**ಪರ್ವತಕ್ಕೆ ಹೋಗಿ ಪಾತಾಳ ಗಂಗೆಯಲ್ಲಿ ಮುಳು ಮುಳುಗೆದ್ದರೆ,**
**ಛೇ, ಛೇ, ನಿನ್ನ ದೇಹದ ಮೇಲಣ ಮಣ್ಣು ಹೋಯಿತಲ್ಲದೆ,**
**ನಿನ್ನ ಪಾಪವು ಹೋಗಲಿಲ್ಲವು. ಅಲ್ಲಿಂದ ಕಡೆಗೆ ಬಂದು ಕೆಟ್ಟ ಕತ್ತಿಯ**
**ಕೊಂಡು ಕೆರವಿನಟ್ಟೆಯ ಮೇಲೆ ಮಸೆದು ಮಸ್ತಕವ ತೋಯಿಸಿ**
**ತಲೆಯ ಬೋಳಿಸಿಕೊಂಡರೆ, ನಿನ್ನ ತಲೆಯ ತಿಂಡಿ ಹೋಯಿತಲ್ಲದೆ**
**ನಿನ್ನ ಪಾಪವು ಬಿಡಲಿಲ್ಲವಯ್ಯಾ . ಅಲ್ಲಿಂದ ಕೋಲು ಬುಟ್ಟಿಯ**
**ತೆಗೆದುಕೊಂಡು ಬರುವಂತಹ ದಿಂಡೆ ತೊತ್ತಿನ ಮಕ್ಕಳ ಕಣ್ಣಲಿ ಕಂಡು,**

**ಪಡಿಹಾರಿ ಉತ್ತಣ್ಣನ ಎಡದ ಪಾದ ಎಕ್ಕಡದಿಂದ**
**ಪಟಪಟನೆ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣರು.**

ಕೇಳಿರಣ್ಣಾ ಕೇಳಿರಿ, ಎಂದು ಮಾನವರಿಗೆ ರಹಸ್ಯವಾದ ಸೂತ್ರವನ್ನು ಕಿವಿಯಲ್ಲಿ ಹೇಳದೆ ಡಂಗುರ ಹೊಡೆದು ಸಾರಿದ್ದಾರೆ. ಗಂಡ ಹೆಂಡಿರ ಮನಸ್ಸು ಒಂದಾಗಿದ್ದರೆ ದೇವರ ಮುಂದೆ ನಂದಾ ದೀವಿಗೆಯ ಮುಡಿಸಿದ ಹಾಗೆ ; ಗಂಡ ಹೆಂಡಿರ ಮನಸ್ಸು ಬೇರಾದರೆ ಗಂಜಳದೊಳಗೆ ಹಂದಿ ಹೊರಳಾಡಿ ಒಂದರ ಮೇಲೆ ಒಂದು ಬಂದು ಮೂಸಿದ ಹಾಗೆ :

ಒಂದಾಗದ ಗಂಡ ಹೆಂಡಿರು ಒಂದಾಗಿ ಕಾಶಿ, ಮೈಲಾರ, ಶ್ರೀಶೈಲ ಪರ್ವತ, ರಾಚೋಟಿ ವೀರಭದ್ರನಿಗೆ ಹೋದರೇನು ? ಅವರೆಲ್ಲ ಹೇಸಿ ಮಾದಗಿತ್ತಿ , ಹಾದರಗಿತ್ತಿ , ಲಜ್ಜೆಮಾರಿ ತೊತ್ತಿನ ಮಕ್ಕಳು. ಏಕೆಂದರೆ ಗಂಡ ತನ್ನ ಅರಿವೆಂಬ ಗಂಡನೊಂದಿಗೆ ಕೂಡಿ ಒಂದಾಗಿಲ್ಲ. ಹೆಂಡತಿ ಕೂಡಾ ತನ್ನ ಅರಿವೆಂಬ ಗಂಡನೊಂದಿಗೆ ಬೆರೆತು ಒಂದಾಗಿಲ್ಲ. ಅರಿವೆಂಬ ಗುರುವಿನೊಂದಿಗೆ ಒಂದಾಗದ ಗಂಡ ಹೆಂಡಿರು ಒಂದಾಗಿ ಕಾಶಿಗೆ ಹೋದರೇನು, ರಾಮೇಶ್ವರಕ್ಕೆ ಹೋದರೇನು ? ಮೈಲಾರ, ಶ್ರೀಶೈಲ ಪರ್ವತ, ರಾಚೋಟಿಗೆ ಹೋದರೇನು ಇವರು ಭಕ್ತರಲ್ಲ. ಪುಣ್ಯ ಕ್ಷೇತ್ರಗಳಿಗೆ ಹೋಗಿ ಭಕ್ತಿ ಮಾಡುವುದು ಭಕ್ತಿಯೂ ಅಲ್ಲ.

ಪರಬ್ರಹ್ಮ ಮೂರುತಿಯಾದ ಪರಶಿವನೆ ಅರಿವೆಂಬ ಗುರುನಾಮದಿಂದ ಬಂದು ಹುಟ್ಟುವಾಗಲೇ ಅಂಗದಲ್ಲಿ ಸಂಗಮವಾಗಿ, ಪಂಚಾಕ್ಷರಿಯ ಬೋಧಿಸಿದ ಮೇಲೆ; ಅಂದರೆ ಕಣ್ಣಿನ ಮೂಲಕ ಬೋಧಿಸಿ ನೋಡುವುದನ್ನು , ಕಿವಿಯ ಮೂಲಕ ಕೇಳುವುದನ್ನು , ಚರ್ಮದ ಮೂಲಕ ಮುಟ್ಟಿ ಅನುಭವಿಸುವುದನ್ನು, ನಾಲಗೆ ಮೂಲಕ ರುಚಿಸುವುದನ್ನು, ಮೂಗಿನ ಮೂಲಕ ಮೂಸಿಸುವುದನ್ನು ಬೋಧಿಸಿದ ಮೇಲೆ ಗರ್ಭದಿಂದ ಹೊರ ಬಂದ ಆ ಭಕ್ತನ ಕಾಯವೇ ಕೈಲಾಸ, ಅವನ ಒಡಲೇ ಸೇತುಬಂಧ ರಾಮೇಶ್ವರ, ಅವನ ಶಿರವೇ ಶ್ರೀಶೈಲ, ಆತ ಮಾಡುವ ಆಚಾರವೇ ಪಂಚ ಪರುಷ !

ತನ್ನನ್ನು ತಾನು ತಿಳಿಯದೆ ಪಾಪಿಯಾಗಿ ಪಾತಾಳಗಂಗೆಗೆ ಹೋಗುತ್ತಾನೆ; ಶಾಸ್ತ್ರ ಪುರಾಣ ಕೇಳಿ ಪಾಪ ಕಳೆದುಕೊಳ್ಳಲು ಗಂಗೆಯಲ್ಲಿ ಮುಳುಗುತ್ತಾನೆ. ಹಾಗೆ ಮಾಡಿದರೆ ದೇಹದ ಮೇಲಿನ ಮಣ್ಣು ಹೋಯಿತಲ್ಲದೆ ಪಾಪ ಹೋಗುವುದಿಲ್ಲ. ಕೆರವಿನ ಅಟ್ಟೆಯ ಮೇಲೆ ಮಸೆದ ಕೆಟ್ಟ ಕತ್ತಿಯಿಂದ ತಲೆಯ ಬೋಳಿಸಿಕೊಂಡರೆ ತಲೆಯ ತಿಂಡಿ ಹೋಯಿತಲ್ಲದೆ ಪಾಪ ಬಿಡುವುದಿಲ್ಲ. ಇಂತಹವರೆಲ್ಲ ತೊತ್ತಿನ ಮಕ್ಕಳು, ಮಾದಗಿತ್ತಿಯ ಮಕ್ಕಳು; ಹಾದರಗಿತ್ತಿಯ ಮಕ್ಕಳು. ಇದಕ್ಕೆ ಕಾರಣ ಕಾಯವನ್ನು ಆವರಿಸಿದ ಮನ!

ಕಾಯದಲ್ಲಿ ಕೈಲಾಸ ಸಂಗಮವಾಗಿದ್ದರೂ ಅದನ್ನು ನೋಡದೆ ಶ್ರೀಶೈಲದ ಕೈಲಾಸ ಪರ್ವತಕ್ಕೆ ಕರೆದುಕೊಂಡು ಹೋಗುವ ಹಾದರಗಿತ್ತಿಯ ಮಾದಿಗ ಮನಕ್ಕೆ ಪಡಿಹಾರಿ ಉತ್ತಣ್ಣನ ಎಡಪಾದದ ಎಕ್ಕಡದಿಂದ ಪಟಪಟನೆ ಹೊಡಿ ಎಂದು ಅಂಗದಲ್ಲಿಯೇ ಸಂಗಮವಾದ ಅಂಬಿಗನಿಗೆ ಹೇಳಿದ್ದಾನೆ.

ಅಜ್ಞಾನದ ಹೊಳೆ ದಾಟಿಸಿ ಜ್ಞಾನದ ದಡಕ್ಕೆ ಕರೆದೊಯ್ಯುವ ಅಂಬಿಗ ಹೊರಗಿಲ್ಲ. ಆತ ಅಂಗದಲ್ಲಿಯೇ ಸಂಗಮವಾಗಿದ್ದಾನೆ. ಚೌಡಯ್ಯ ಶರಣರು ಆತನನ್ನು ಅಂಬಿಗ ಎಂದು ಕರೆದರೆ ಬಸವಣ್ಣನವರು ಆತನನ್ನು ಸಂಗಮನಾಥ ಎಂದು ಕರೆದರು.

**115**

**ಕೇಳು ನೀನೆಲೋ ಮಾನವಾ, ಸೋಮವಾರ ಅಮವಾಸ್ಯೆ**

ಹುಣ್ಣಿಮೆ ಎಂಬ ದೊಡ್ಡ ಹಬ್ಬಗಳು ಬಂದಿವೆ ಎಂದು ಮನೆಯ ಸಾರಿಸಿ,
ರಂಗವೋಲೆಯ ನಿಕ್ಕಿ,
ಆಸನವ ಬಲಿದು, ಪತ್ರೆ ಪುಷ್ಪ ಮೊದಲಾದ ಅನಂತ ಸೌರಂಭವ ಸವರಿಸಿ,
ವಿರಕ್ತನ ಕರೆತಂದು ಪೂಜೆಯ ಮಾಡುವುದಕ್ಕಿಂತಲೂ, ಹೊರೆಯಲ್ಲಿ
ಚರಿಸಾಡುವ ಕಾಳ ಶುನಕನ ತಂದು ಆ ಗದ್ದುಗೆಯಲ್ಲಿ ಪೂಜೆ ಮಾಡುವುದು
ಮಹಾ ಲೇಸಯ್ಯಾ ಅದೇನು ಕಾರಣವೆಂದರೆ :
ಅಣವಮಲ- ಮಾಯಾಮಲ - ಕಾರ್ಮಿಕ ಮಲಕ್ಕೆ ಹೊರತೆಂದು,
ಅಷ್ಟಮದ ವಿರಹಿತನೆಂದು, ಷಡ್ಗುಣವ ಸಂಹರಿಸಿದವನೆಂದು,
ಶಾಸ್ತ್ರದಲ್ಲಿ ಸಂಪನ್ನನೆಂದು, ಕ್ರಿಯೆಯಲ್ಲಿ ವೀರಶೈವನೆಂದು, ನಿರಾಭಾರಿಯೆಂದು,
ಬಾಯಿಲೆ ಬೊಗಳಿ, ಲೌಕಿಕದಲ್ಲಿ ಮಠವ ಮಾಡಿಕೊಂಡು,
ಮಾನ್ಯವ ಸಂಪಾದಿಸಿಕೊಂಡು, ಅಶನಕ್ಕಾಶ್ರಯನಾಗಿ, ವ್ಯಸನಕ್ಕೆ ಹರಿದಾಡಿ,
ವಿಷಯದಲ್ಲಿ ಕೂಡಿ, ಸರ್ವವೂ ಎನಗೆ ಬೇಕೆಂದು ತಮೋಗುಣದಿಂದ ದ್ರವ್ಯವ
ಕೂಡಿಸಿ, ವಿರತಿ ಸ್ಥಲವು ಹೆಚ್ಚೆಂದು ಕಾವಿಯ ಹೊದೆದು, ಕೌಪೀನವ ಕಟ್ಟಿ,
ವೇಷ ಡಂಭಕದಿಂದ ತಿರುಗುವ ಭ್ರಷ್ಟರ ಮುಖವ ನೋಡಲಾಗದು.
ಇಂತಪ್ಪ ವಿರತರ ಪೂಜೆಯ ಮಾಡುವುದಕ್ಕಿಂತಲೂ
ಕರೆ ನಾಯಿಯ ತಂದು ಪೂಜೆಯ ಮಾಡುವುದು ಮಹಲೇಸು ಕಂಡಯ್ಯಾ
ಪಂಚಾಮೃತವ ಮುಂದಿಟ್ಟರೆ ಕಣ್ಣು ನೋಡುವುದು,
ದ್ರವ್ಯ ಮುಂದಿಟ್ಟರೆ ಕೈಯ ಮುಟ್ಟುವುದು,
ಎಂದು ಪೇಳುವ ವಿರತರ ನಾಲಗೆಯು ಆ ನಾಯಬಾಲಕ್ಕಿಂತಲೂ ಕರಕಷ್ಟವು
ಇಂತಹ ವಿರತರ ಪೂಜೆಯ ಮಾಡುವಾತನು, ಆ ಜಂಗಮವು
ಉಭಯತರ ಮೂಗು ಸವರಿ ಕತ್ತೆಯನೇರಿಸಿ
ಪಡಿಹಾರಿಕೆಗಳ ಪಾದುಕೆಯಿಂದ ಪಡಪಡ ಹೊಡಿ ಎಂದಾತ
ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

ಅಂಬಿಗರ ಚೌಡಯ್ಯ ಶರಣರು ತಮ್ಮ ಈ ವಚನದಲ್ಲಿ ಯಾವ ಗುಟ್ಟನ್ನು ಇಟ್ಟಿಲ್ಲ. ಸರಳವಾಗಿ ಬರೆದಿದ್ದಾರೆ. ವಿರಕ್ತರಿಗೂ ಅವರನ್ನು ಪೂಜಿಸುವ ಭಕ್ತರಿಗೂ ಅರ್ಥವಾಗುವಂತೆ ಬರೆದಿದ್ದಾರೆ. ಹೀಗಾಗಿ ವಚನಾನುಭವ ಮಾಡಿಲ್ಲ.

ಭಕ್ತನೇ ವಿರಕ್ತನಾಗುವುದು; ವಿರತಿಯಾಗುವುದು. ವಿರತಿಯಾಗಿ ಅಂಗದಲ್ಲಿ ಸಂಗಮವಾದ ಅರಿವಿನ ಸಂಗಯ್ಯನಿಗೆ ಭಕ್ತಿ ಮಾಡುವುದು, ಇದು ಭಕ್ತ -ವಿರಕ್ತ; ವಿರತಿಯ ಅರಿವಿನ ಆಚಾರ ಅಗೋಚರದ ಅರಿವಿನ ಆಚಾರ. ಇಂತಹ ಆಚಾರದಲ್ಲಿ ನಿರತರಾಗಬೇಕೆಂಬ ಆಶಯ ಅಂಬಿಗರ ಚೌಡಯ್ಯ ಶರಣರದು.

**116**

ಕೈ ಮುಟ್ಟುವಲ್ಲಿ, ಕಿವಿ ಕೇಳುವಲ್ಲಿ, ಬಾಯಿ ಕೊಂಬಲ್ಲಿ,

**ಮೂಗು ವಾಸಿಸುವಲ್ಲಿ, ಕಣ್ಣು ನೋಡುವಲ್ಲಿ**
**ಇಂತೀ ಅಯಿದರ ಗುಣ ಎಡೆಯಾಟ ಅದಾರಿಂದಾ ಎಂಬುದ ತಾ ವಿಚಾರಿಸಿದಲ್ಲಿ,**
**ಪಂಚಕ್ರೀಯಲ್ಲಿ ಸಂಚಿತ ಪ್ರಾರಬ್ಧ ಆಗಾಮಿಯೆಂಬ ಹಿಂಚು ಮುಂಚಿಗೆ ಸಿಕ್ಕದೆ,**
**ಕುಡಿವೆಳಗಿನ ಮಿಂಚಿನ ಸಂಚದಂತಿರಬೇಕೆಂದ ನಂಬಿಗ ಚೌಡಯ್ಯಾ.**

ಮನುಷ್ಯ ಏನು ತಿಳಿಯಬೇಕಾಗಿತ್ತೋ ಅದನ್ನು ತಿಳಿಯದೆ ಎಲ್ಲವನ್ನೂ ತಿಳಿಯುತ್ತಿದ್ದಾನೆ. ತಾನು ತಿಳಿಯುವುದೆಲ್ಲ ಬಾಹ್ಯವಿದ್ಯೆ. ಅದು ಆಂತರಿಕ ಜ್ಞಾನವನ್ನು ಬಳಸದಂತೆ ತಡೆಯುತ್ತದೆ ಎಂದು ಮನುಷ್ಯನಾದ ತನಗೆ ತಿಳಿಯದೆ ಇರುವುದು ದುರ್ದೈವವೇ ಸರಿ.

ಸ್ಪರ್ಶಿಸಿ ಆನಂದ ಪಡುವ ಜ್ಞಾನವನ್ನು ಚರ್ಮಕ್ಕೆ ಯಾರೂ ಹೇಳಬೇಕಾಗಿಲ್ಲ. ಯಾವ ಗುರುವಿನ ಅವಶ್ಯಕತೆಯೂ ಇಲ್ಲ. ಹಾಗೆಯೇ ಚರ್ಮದಲ್ಲಿ ಸಂಗ್ರಹವಾದ ಅಜ್ಞಾನ ಕಳೆದುಕೊಳ್ಳಲು ಭಗವದ್ಗೀತೆ ಬೈಬಲ್ ಕುರಾನ್‌ಗಳು ಸಹಕರಿಸುವುದಿಲ್ಲ. ಅಲ್ಲಿ ಸೂತ್ರ ಸಿಕ್ಕ ಬಹುದು. ಆದರೆ ಚರ್ಮದ ಅಜ್ಞಾನವನ್ನು ಚರ್ಮದ ಜ್ಞಾನದಿಂದಲೇ ಕಳೆದುಕೊಳ್ಳಬೇಕು.

ಚರ್ಮದಲ್ಲಿ ಸಂಚಿತ ಆಗಾಮಿ ಪ್ರಾರಬ್ಧ ಎಂಬ ಅಜ್ಞಾನ ಬೆರೆತಿದೆ.

ಬೆರೆತ ಆ ಅಜ್ಞಾನದಿಂದಾಗಿ ಚರ್ಮದಲ್ಲಿ ಸಂಗಮವಾದ ಸಹಜ ಜ್ಞಾನ ಚರ್ಮಕ್ಕೆ ಬಳಕೆಗೆ ಬಾರದೆ ಚರ್ಮದಲ್ಲಿಯೇ ಉಳಿದಿದೆ. ಹೀಗಾಗಿ ಚರ್ಮ ಸ್ಪರ್ಶದ ಸುಖ ದುಃಖಗಳಿಗೆ ಈಡಾಗಿದೆ. ಸುಖದ ಸುಖ, ಶಾಶ್ವತ ಸುಖ ಅದು ಬಳಕೆಗೆ ಬಾರದೆ ಚರ್ಮದಲ್ಲಿಯೇ ಉಳಿದಿದೆ.

ಚರ್ಮ ಕಿವಿ ನಾಲಿಗೆ ಮೂಗು ಕಣ್ಣುಗಳಿಗೆ ಧಾರಾಕಾರವಾಗಿ ಹರಿಯುತ್ತಿರುವ ಧರ್ಮ ಒಂದೇ. ಅದನ್ನು ಜ್ಞಾನದ ಮಹಾಧರ್ಮ ಸಹಜಧರ್ಮ ಎಂದು ಕರೆಯಬಹುದು. ಅದು ಆಯಾ ಜಾಗದಲ್ಲಿಯೇ ಸಂಗಮವಾಗಿದೆ. ಕಾಯದ ಕಣ ಕಣದಲ್ಲಿ ಸಂದಿಲ್ಲದಂತೆ ಬೆರೆತಿದೆ.

ತನ್ನ ಚರ್ಮವನ್ನು ತಾನೇ ಮುಟ್ಟಿಕೊಂಡಾಗ, ತನ್ನ ಹಸ್ತದಿಂದ ತನ್ನ ತನುವಿನ ಎಲ್ಲೆಡೆ ಸ್ಪರ್ಶಿಸಿದಾಗ ಸಹಜವಾದ ಜ್ಞಾನ ಅನುಭವಕ್ಕೆ ಬರುತ್ತದೆ. ಈ ಜ್ಞಾನವನ್ನು ಚರ್ಮ ಅನುಭವಿಸುವುದಿಲ್ಲ. ಇದು ತನ್ನ ಸಹಜ ಜ್ಞಾನವೆಂದು ಚರ್ಮಕ್ಕೆ ಭಾಸವಾಗುವುದೇ ಇಲ್ಲ. ಆದರೆ ತನ್ನ ಕೈಯಿಂದ ಮತ್ತೊಂದು ಕಾಯವನ್ನು ಮುಟ್ಟಿದಾಗ ತನಗೆ ರೋಮಾಂಚನವಾಗುತ್ತದೆ. ಕಾಮದ ಬಯಕೆ ಹುಟ್ಟುತ್ತದೆ. ಕಾಯದಲ್ಲಿ ಕಾಮದ ಹಾವು ಹರಿದಾಡುತ್ತದೆ. ಭೋಗದ ತವಕ ಆಮಂತ್ರಣ ಮಾಡಿಕೊಂಡ ಕಾಯ ಭೋಗಕ್ಕಾಗಿ ಚಡಪಡಿಸುತ್ತದೆ.

ಭೂತಕಾಲದ ಅಜ್ಞಾನ ಭವಿಷ್ಯದ ಸುಖ ವರ್ತಮಾನದ ಸುಳ್ಳು ಸ್ಪರ್ಶ ಸುಖಕ್ಕೆ ಚರ್ಮ ಮರುಳಾಗಿದೆ. ಮಾರು ಹೋಗಿದೆ. ಚರ್ಮದಲ್ಲಿ ಕಾಮದ ಕಿಡಿ ಹೊತ್ತಿಕೊಂಡಿದೆ.

ಕೀಚಕನ ಚರ್ಮವಾದರೇನು ; ದ್ರೌಪದಿಯ ಚರ್ಮವಾದರೇನು? ಇವರೆಡೂ ಚರ್ಮವಲ್ಲವೆ? ರಾವಣನ ಚರ್ಮವಾದರೇನು ; ಸೀತೆಯ ಚರ್ಮವಾದರೇನು? ಇವರೆಡೂ ಚರ್ಮವಲ್ಲವೆ? ಚರ್ಮದಲ್ಲಿಯ ಅಜ್ಞಾನ ರಾಮಾಯಣವನ್ನು ಸೃಷ್ಟಿ ಮಾಡಿತು. ಮಹಾಬಲಿಷ್ಠ ಕೀಚಕನನ್ನು ಕೊಂದು ಹಾಕಿ ಮಹಾಭಾರತವನ್ನು ಸೃಷ್ಟಿ ಮಾಡಿತು. ಚರ್ಮದ ಮಿಂಚಿನ ಸಂಚನ್ನು ಚರ್ಮವೇ ಅರಿಯದಂತೆ ಮಾಡಿತು.

ಮೊಸರಕಲ್ಲಿನ ಮುಕ್ತಾಯಕ್ಕ ಚರ್ಮದ ಸಂಚನ್ನು ಅರಿತು ಹೀಗೆ ಹಾಡಿದ್ದಾಳೆ: ಕೈಯದು ಕುರುಹು ಬಾಯದು ಬೊಬ್ಬೆ ಉಲಿಯದಿರೋ ಭಾವ ಉಲಿಯದಿರೋ ಎಂದು. ಚರ್ಮ ಮತ್ತು

ನಾಲಿಗೆಯ ಭಾವವನ್ನು ಅರಿತು ಅದನ್ನು ನಿರ್ಭಾವಗೊಳಿಸಿದ್ದಾಳೆ. ಬತ್ತಲೆಯಾಗಿಸಿದ್ದಾಳೆ. ಚರ್ಮದಲ್ಲಿ ಉಂಟಾದ ಕಾಮದ ಭಾವ ರಾವಣ, ಕೀಚಕರನ್ನು ದುರ್ಭಾವಕ್ಕೆ ಈಡು ಮಾಡಿತು. ಭಾವ ಬತ್ತಲೆಯಾಗಿಸುವ ಕಲೆ ಶ್ರೀ ರಾಮನಿಗೆ ತಿಳಿದಿತ್ತು. ಶ್ರೀ ಕೃಷ್ಣನಿಗೂ ತಿಳಿದಿತ್ತು. ಮೊಸರಕಲ್ಲಿನ ಮುಕ್ತಾಯಕ್ಕಳಿಗೆ ಸಕಲ ಶರಣರಿಗೂ ತಿಳಿದಿತ್ತು. ಹೀಗಾಗಿ ಅಂಬಿಗರ ಚೌಡಯ್ಯ ಶರಣರು ಚರ್ಮದ ಭಾವ ಬತ್ತಲೆಗೊಳಿಸುವ ಸೂತ್ರವನ್ನು ತಮ್ಮ ಈ ವಚನದಲ್ಲಿ ಬೆಡಗಿನಿಂದ ಬಚ್ಚಿಟ್ಟಿದ್ದಾರೆ. ಬಿಚ್ಚಿ ಸಾರ್ಥಕ ಗೊಳಿಸಿಕಳ್ಳುವುದಕ್ಕಾಗಿ ಜಗದ ಚರ್ಮಗಳಿಗೆಲ್ಲ ಉಪಕರಿಸಿದ್ದಾರೆ.

'ಚರ್ಮ'ವೆಂದರೆ ಸ್ತ್ರೀಯೋ ಅಥವಾ ಪುರುಷನೋ ? ಚರ್ಮ ಸ್ತ್ರೀಯೂ ಅಲ್ಲ ; ಪುರುಷನೂ ಅಲ್ಲ ! ಚರ್ಮದಲ್ಲಿ ಸ್ತ್ರೀ ಎಬ ಭಾವ ಆಮಂತ್ರಣವಾಗಿದೆ ; ಮುಟ್ಟಿ ಅದರಲ್ಲಿರುವ ಭಾವ ದುರ್ಭಾವಕ್ಕೆ ಒಳಗಾಗಿ ಭೋಗದ ಆಸಕ್ತಿ ಕೆರಳುತ್ತದೆ. ಚರ್ಮ ಚರ್ಮದೊಂದಿಗೆ ಬೆರೆತು ಸುಖಿಸುವ ತವಕ ಚರ್ಮದಲ್ಲಿ ಹುಟ್ಟುತ್ತದೆ. ಚರ್ಮದೊಳಗೆ ಬಿಚ್ಚಿಟ್ಟುಕೊಂಡ ದ್ರವ್ಯ ಚರ್ಮವೇ ಹೊರ ಹಾಕಿ ಸುಖಿವಾಯಿತೆಂದು ಭ್ರಮೆಯಿಂದ ಆನಂದ ಪಡುತ್ತದೆ. ಇದು ಸುಳ್ಳು ಸುಖವೆಂದು ಚರ್ಮಕ್ಕೆ ಗೊತ್ತಾಗುವುದೇ ಇಲ್ಲ. ಹಾಗೆ ಗೊತ್ತು ಮಾಡಿಕೊಂಡವನೇ ಜ್ಞಾನಿ, ಶರಣ , ನಿಜ ಸುಖಿ.

ಚರ್ಮದ ಚೀಲದಲ್ಲಿ ತುಂಬಿದ ಕಾಮ ದ್ರವ್ಯ ಚರ್ಮದಿಂದಲೇ ಹೊರ ಬಂದು ಚರ್ಮಕ್ಕೆ ಸುಖವಾಯಿತು. ಆದರೆ ಅನ್ಯ ಚರ್ಮದಿಂದ ಚರ್ಮಕ್ಕೆ ಸುಖವಾಯಿತೆಂದು ಚರ್ಮ ಭಾವಿಸುತ್ತದೆ. ಹೀಗಾಗಿ ಚರ್ಮದ ಭಾವ ಸುಳ್ಳು. ಅದರ ದುರ್ಭಾವವೂ ಸುಳ್ಳು. ಚರ್ಮದ ನಿರ್ಭಾವವೊಂದೇ ಸತ್ಯ ! ಅದು ಚರ್ಮದಲ್ಲಿಯೇ ಸಂಗಮವಾಗಿದೆ. ಚರ್ಮವೇ ಚರ್ಮದ ಸತ್ಯವನ್ನು ಕಂಡುಕೊಳ್ಳಬೇಕು.

ಚರ್ಮ, ಕಿವಿ, ನಾಲಿಗೆ, ಮೂಗು, ಕಣ್ಣು ಈ ಐದರ ಭಾವ ದುರ್ಭಾವ, ಗುಣ ದುರ್ಗುಣ, ಇವುಗಳ ಆಟ ಎಡೆಯಾಟ ಅದಾರಿಂದ ಎಂದು ಅಲ್ಲಲ್ಲಿಯೇ ವಿಚಾರಿಸಬೇಕು. ಅಲ್ಲಲ್ಲಿಯೇ ವಿಚಾರಕ್ಕೆ ಒಳಗಾಗಬೇಕು. ಸಂಚಿತ ಪ್ರಾರಬ್ಧ ಆಗಾಮಿಯೆಂಬ ಅಜ್ಞಾನಕ್ಕೆ ಸಿಕ್ಕದೆ ಆಪಾತ್ಕಾಲದಿಂದ ಹೊರಗಾಗಬೇಕು. ಚರ್ಮ ಕಿವಿ ನಾಲಿಗೆ ಮೂಗು ಕಣ್ಣಿನ ಕುಡಿಯೊಳಗಿರುವ ಬೆಳಗಿನ ಮಿಂಚಿನ ಸಂಚನು ಅರಿತು ವ್ಯವಹರಿಸುವ ರೂಢಿಯನ್ನು ಹಾಕಿಕೊಂಡು ಆರೂಢನಾಗಬೇಕು. ಚರ್ಮದ ಸೂತ್ರದಂತೆ ಕಣ್ಣು ಕಿವಿ ಮೂಗು ನಾಲಿಗೆಯ ಸೂತ್ರವೂ ಇದೆ. ಅದನ್ನೇ ಅನುಕರಿಸಬಹುದು.

**117**

**ಕ್ರಿ ಜ್ಞಾನವೆಂಬ ಉಭಯವ ತಾವರಿಯದೆ,**
**ಕಾಯ ಜೀವವೆಂಬ ಹೆಚ್ಚು ಕುಂದನರಿಯದೆ,**
**ನಾನೀನೆಂಬ ಭಾವದ ಭ್ರಮೆ ಆರಿಗೆಂದನಂಬಿಗ ಚೌಡಯ್ಯ .**

ಕ್ರಿ ಜ್ಞಾನವೆಂಬ ಉಭಯವ ತಾವರಿಯದೆ :

ಮನಕ್ಕೆ ಲಭ್ಯವಾದ ಜ್ಞಾನ ಸಕಲ ತನುಗಳಲ್ಲಿಯೂ ಇದೆ. ಅದು ಮನದಲ್ಲಿ ಸಂಗ್ರಹವಾದ ಜ್ಞಾನ. ಪುಸ್ತಕಗಳಿಂದ, ಮಹಾ ಪುರುಷರ ಉಪನ್ಯಾಸಗಳಿಂದ, ಭಗವದ್ಗೀತೆ, ಬೈಬಲ್, ಕುರಾನ್‌ಗಳಿಂದ ಮನ ಜ್ಞಾನವನ್ನು ಸಂಗ್ರಹಿಸಿಕೊಳ್ಳುತ್ತದೆ. ಸಂಗ್ರಹಿಸಿಕೊಂಡ ಆ ಜ್ಞಾನವನ್ನೇ

ಉಪನ್ಯಾಸದ ಮೂಲಕ ಹೊರ ಹಾಕುತ್ತದೆ. ಈ ಜ್ಞಾನ ಮನ ಮಾತಿಗಾಗಿ ಬಳಕೆ ಮಾಡಿಕೊಳ್ಳುತ್ತದೆ. ಇದನ್ನು ಕ್ರಿಯೆಯಲ್ಲಿ ತರುವುದು ಮನಕ್ಕೆ ಸಾಧ್ಯವಾಗುವುದಿಲ್ಲ. ಹಾಗೆಯೇ ಅದು ಮನದ ಕೆಲಸವೂ ಅಲ್ಲ. ಅದೇನಿದ್ದರೂ ಮಾತಿನ ಮೂಲಕ ತೃಪ್ತಿಪಡುತ್ತದೆ. ಇತರರನ್ನು ತೃಪ್ತಿಪಡಿಸುವ ಮೂಲಕ ವ್ಯವಹರಿಸುತ್ತದೆ.

ಆಡಿದ ಮಾತು ಕ್ರಿಯೆಯಲ್ಲಿ ಬರಲಿಲ್ಲ ಎನ್ನುವುದು ಇತರ ತನುಗಳಿಗೆ ಗೋಚರಕ್ಕೆ ಬರುತ್ತದೆ. ಆದರೆ ಅದು ಬರಲು ಸಾಧ್ಯವೇ ಇಲ್ಲ ಎನ್ನುವುದು ಖಚಿತವಾಗಿ ಇತರ ತನುಗಳ ಗಮನಕ್ಕೂ ಬರುವುದಿಲ್ಲ. ಏಕೆಂದರೆ ಆಡಿದ ಮಾತು ಮನದಿಂದ ಹೊರಬಂದದ್ದು ; ಘನದಿಂದ ಹೊರ ಬಂದದ್ದು ಅಲ್ಲ ಎಂದು ಕೇಳಿದ ತನುಗಳಿಗೆ ತಿಳಿಯುವುದಿಲ್ಲ. ಹೀಗೆ ಕೇಳುವ ತನುಗಳೆಲ್ಲ ಮನದಿಂದ ಕೇಳಿ ನಿರ್ಧರಿಸಿ ಮಾತನಾಡುವ ತನುಗಳು. ಆಡುವ ಮಾತಿನಲ್ಲಿ ದೋಷವಿದೆಯೆಂದು ಕಂಡು ಹಿಡಿಯುವ ಶಕ್ತಿ ಮನಕ್ಕಿಲ್ಲ. ಮನ -ಘನ ಒಂದಾದ ತನುಗಳಿಗೆ ಮಾತ್ರ ನುಡಿದಂತೆ ನಡೆಯಲು ಬರುತ್ತದೆ. ನುಡಿದಂತೆ ನಡೆಯುವ ಜ್ಞಾನಿಗಳನ್ನು ಕಂಡುಹಿಡಿಯಲು ಬರುತ್ತದೆ.

ಮನ ಮಾತು ತಿಳಿದರೆ ನುಡಿಯಲು ಬರುತ್ತದೆ. ನಡೆಯಲು ಬರುವುದಿಲ್ಲ. ಮನ ಘನದತ್ತ ಪಯಣಿಸಿ ಆ ಘನದಲ್ಲಿ ಲೀನವಾಗಿ ಘನ ಮನವಾದಾಗ ಮಾತ್ರ ನಡೆಯಲು ಬರುತ್ತದೆ. ನಡೆದಂತೆ ನುಡಿಯಲು ಬರುತ್ತದೆ.

ನುಡಿದಂತೆ ನಡೆಯದಿದ್ದರೆ ಅದು ಕಾಯದ ತಪ್ಪಲ್ಲ. ಕಾಯವನ್ನು ಆವರಿಸಿದ ಮನದ ತಪ್ಪು! ಅದು ಮನದ ತಪ್ಪೂ ಅಲ್ಲ; ಮನ ಇರುವುದೇ ಹಾಗೆ ಎಂದು ಘನವಾಗಿ ತಿಳಿಯುವುದು ಘನ-ಮನ ಮಾತ್ರ. ಮನಕ್ಕೆ ಘನದಲ್ಲಿ ಬೆರೆಯುವ ಬಯಕೆ ಆಗಬೇಕು ಅಂದರೆ ಮಾತ್ರ ಈ ಕ್ರಿಯೆ ಒಂದಿಲ್ಲ ಒಂದು ದಿನ ಕಾಯದಲ್ಲಿ ಘಟಿಸುತ್ತದೆ.

ಹನ್ನೆರಡನೇ ಶತಮಾನದಲ್ಲಿ ಶರಣರು ಒಂದು ಪೈಸೆಯೂ ಖರ್ಚಿಲ್ಲದಂತೆ ಮನವನ್ನು ಘನಮನವನ್ನಾಗಿಸುವ ಶಿಕ್ಷಣವನ್ನು ಕಂಡುಹಿಡಿದರು. ಕಲ್ಯಾಣದಲ್ಲಿ ವಿಶ್ವವಿದ್ಯಾಲಯವನ್ನೇ ಸ್ಥಾಪಿಸಿದರು. ಅಲ್ಲಿ ತರಬೇತಿ ಹೊಂದಿದ ಒಂದೊಂದು ಕಾಯಗಳು ವಿಶ್ವವಿದ್ಯಾಲಯಗಳೇ ಆಗಿ ಹೊರಬಂದವು. ಬುದ್ಧನಂತೆ ಬೋಧಿವೃಕ್ಷವಾಗಿ ಬೋಧಿಸುತ್ತಾ ಸಂಚರಿಸಿದವು.

ಮನ ಘನದತ್ತ ಪಯಣಿಸುವ ಸರಳ ಸೂತ್ರಗಳನ್ನು ಶರಣರು ಕಂಡುಹಿಡಿದರು. ಬೆಡಗಿನ ವಚನಗಳ ರೂಪದಲ್ಲಿ ಬರೆದು ಮನುಕುಲಕ್ಕೆ ಉಪಕರಿಸಿದರು. ಅಂಬಿಗರ ಚೌಡಯ್ಯ ಶರಣರ ಮೂರು ಸಾಲಿನ ಈ ವಚನ ಮನ ಘನ ಮನವಾಗಲು ಸಹಕಾರಿಯಾಗಿದೆ.

ನುಡಿದಂತೆ ನಡೆಯುವ ಕಾಯವೇ ಬೇರೆ. ನುಡಿದಂತೆ ನಡೆಯದ ಕಾಯವೇ ಬೇರೆ. ಇವೆರಡೂ ಕಾಯಗಳನ್ನು ಸಂಗಮಗೊಳಿಸಿಕೊಂಡ ಕಾಯವೇ ಬೇರೆ. ಒಂದಕ್ಕೊಂದು ಸಂಬಂಧವಿಲ್ಲದಂತೆ ಕಾಣುವ ಒಂದು ಕಾಯದಲ್ಲಿ ಕಾಣ ಬಾರದ ಎರಡು ಕಾಯಗಳು ಸಂಗಮವಾಗಿವೆ.

ಸ್ಥೂಲ ಕಾಯ ಕಾಣುತ್ತದೆ ; ಸೂಕ್ಷ್ಮ ಕಾಯ ಕಾಣುವುದಿಲ್ಲ ; ಕಾರಣ ಕಾಯವೂ ಕಾಣುವುದಿಲ್ಲ. ಸೂಕ್ಷ್ಮಕಾಯ ಸ್ಥೂಲಕಾಯವನ್ನು ಬಳಸಿಕೊಂಡು ನುಡಿಯತ್ತದೆ. ನುಡಿದಂತೆ ನಡೆಯುವುದಿಲ್ಲ. ಕಾರಣ ಕಾಯ ಸ್ಥೂಲ ಕಾಯವನ್ನು ಬಳಸಿಕೊಂಡು ನುಡಿಯುತ್ತದೆ; ನುಡಿದಂತೆ ನಡೆಯುತ್ತದೆ. ಇದನ್ನು ತಿಳಿಯಬೇಕೆನ್ನುವ ಬಯಕೆ ಹುಟ್ಟಿದ ಕಾಯಕ್ಕೆ ಮಾತ್ರ ಗೋಚರಕ್ಕೆ ಬರುತ್ತದೆ. ಈ ಎರಡೂ ಕಾಯಗಳನ್ನು ಸ್ಥೂಲಕಾಯದಲ್ಲಿ ಒಂದು ಮಾಡಿಕೊಳ್ಳಬೇಕೆಂಬ ಆಸೆಯಾದ ಕಾಯಕ್ಕೆ ಮಾತ್ರ ಈ ಶಿಕ್ಷಣ ಲಭ್ಯವಾಗುತ್ತದೆ.

ಕ್ರಿ-ಜ್ಞಾನ ಒಂದಾಗುತ್ತದೆ. ಕಾಯ-ಜೀವ ಒಂದಾಗುತ್ತದೆ. ನಾನು-ನೀನು ಎಂಬ ಭಾವದ ಭ್ರಮೆ ಅಳಿದು ಬ್ರಹ್ಮವೇ ತಾನಾಗುತ್ತದೆ. ನಾನು ಎಂದರೆ ಮನ; ನೀನು ಎಂದರೆ ಕ್ರಿಯೆಯಲ್ಲಿ ತೊಡಗಿದ ಜ್ಞಾನ . ನಾ-ನೀ ಎಂಬ ಭೇದ ಭಾವ ಕಾಯದಲ್ಲಿ ಇರುವವರೆಗೆ ನುಡಿಯುತ್ತದೆ ; ನುಡಿದಂತೆ ನಡೆಯುವುದಿಲ್ಲ. ನುಡಿಯುವುದಕ್ಕೆ ಸಂತೋಷವಾಗುತ್ತದೆ. ನುಡಿಯುವ, ನುಡಿಯುವುದನ್ನು ಕೇಳುವ ಕಾಯಗಳು ಭಿನ್ನ ಭಿನ್ನವಲ್ಲ. ಒಂದೇ ಜಾತಿಗೆ ಸಂಬಂಧಪಟ್ಟ ಕಾಯಗಳು. ಕಾಯದ ತಂತ್ರಜ್ಞಾನವನ್ನು ತಿಳಿಯದ ಕಾಯಗಳು. ಸಾತ್ವಿಕ ರಾಜಸ ತಾಮಸ ಗುಣಗಳನ್ನು ಅಳವಡಿಸಿಕೊಂಡ ಕಾಯಗಳು.

ಸಾತ್ವಿಕ ಗುಣದ ಕಾಯ ರಾಜಸ ಗುಣದ ಕಾಯವನ್ನು ಸೇರುವುದಿಲ್ಲ. ರಾಜಸ ಗುಣದ ಕಾಯ ತಾಮಸ ಗುಣದ ಕಾಯವನ್ನು ಸೇರುವುದಿಲ್ಲ. ತಾಮಸ ಗುಣದ ಕಾಯ ಸಾತ್ವಿಕ ರಾಜಸ ಗುಣದ ಕಾಯಗಳನ್ನು ಸೇರುವುದಿಲ್ಲ. ಈ ಮೂರು ಗುಣಗಳನ್ನು ಕಳೆದುಕೊಂಡ ನಿರ್ಗುಣಿ ಸಹಜ ಕಾಯವೊಂದು ಕಾಯದಲ್ಲಿಯೇ ಇದೆ. ಜಗದಲ್ಲಿರುವ ಸಕಲ ಕಾಯಗಳು ಸಹಜ ಕಾಯದ ತಂತ್ರಜ್ಞಾನವನ್ನು ಪಡೆದುಕೊಳ್ಳುತ್ತಿಲ್ಲವಲ್ಲ ಎನ್ನುವ ಕಳವಳವನ್ನು ಅಂಬಿಗರ ಚೌಡಯ್ಯ ಶರಣರು ಈ ವಚನದ ಸೂತ್ರದಲ್ಲಿ ವ್ಯಕ್ತಪಡಿಸಿದ್ದಾರೆ.

**118**

**ಕ್ರಿಯೆನರಿದವಂಗೆ ಗುರುವಿಲ್ಲ, ಆಚಾರವನರಿದವಂಗೆ ಲಿಂಗವಿಲ್ಲ,**
**ಉತ್ಪತ್ತಿ ಸ್ಥಿತಿ ಲಯವನರಿದವಂಗೆ ಜಂಗಮವಿಲ್ಲ,**
**ಪರಬ್ರಹ್ಮವನರಿದವಂಗೆ ಸರ್ವೇಂದ್ರಿಯವಿಲ್ಲ,**
**ತನ್ನನರಿದವಂಗೆ ಹಿಂದೆ ಮುಂದೆ ಎಂಬುದೊಂದೂಯಿಲ್ಲ,**
**ಎಂದನಂಬಿಗ ಚೌಡಯ್ಯ.**

ಗುರುಬೇಕು, ಲಿಂಗಬೇಕು, ಜಂಗಮಬೇಕು. ತನ್ನ ತಾನು ಅರಿತಮೇಲೆ ಗುರುಬೇಡ, ಲಿಂಗಬೇಡ, ಜಂಗಮ ಬೇಡ. ಗುರು ಬೇರಿಲ್ಲ, ಲಿಂಗಬೇರಿಲ್ಲ, ಜಂಗಮ ಬೇರಿಲ್ಲ, ಪರಬ್ರಹ್ಮನೂ ಬೇರಿಲ್ಲ. ತನ್ನ ತನುವಿನಲ್ಲಿಯೇ ತನ್ಮಯವಾದ ಈ ನಾಲ್ಕೂ ಜನ ತನ್ನ ತಾನರಿತ ಮೇಲೆ. ತನುವಿನಲ್ಲಿಯೇ ಸಂಗಮವಾದದ್ದು ತನ್ನ ಗಮನಕ್ಕೆ ಬರುತ್ತದೆ.

ನುಡಿಯುವುದು ನುಡಿದಂತೆ ನಡೆಯುವುದೇ ಕ್ರಿಯೆ. ನುಡಿಯಲು ಬರುತ್ತದೆ; ನುಡಿದಂತೆ ನಡೆಯಲು ಬರವುದಿಲ್ಲ. ಏಕೆಂದರೆ ನುಡಿಯುವುದು ಮನ, ನುಡಿದಂತೆ ನಡೆಯದೇ ಇರುವಂತೆ ಕಾಯವನ್ನು ದುರ್ಬಲಗೊಳಿಸುವುದೂ ಮನವೇ. ನುಡಿದಂತೆ ನಡೆಯುವುದು ಅಕಾಯ. ಈ ಅಕಾಯ ಕಾಯದಲ್ಲಿ ಪ್ರವೇಶ ಮಾಡಿ ಕಾಯದೊಂದಿಗೆ ನುಡಿಯುತ್ತದೆ ; ನುಡಿದಂತೆ ಕ್ರೀಯಲ್ಲಿ ತೊಡಗುತ್ತದೆ. ನುಡಿದಂತೆ ನಡೆಯದ ಮನ ಅಕಾಯದಲ್ಲಿ ಸಂಗಮವಾಗಿ ಅಕಾಯವೇ ಆಗುತ್ತದೆ.

ನುಡಿದಂತೆ ನಡೆಯುವ ಕ್ರೀಯಲ್ಲಿ ತೊಡಗಿದ ಅಕಾಯವೇ ಗುರುಕಾಯ ! ಗುರು ಕಾಯವೇ ತಾನಾದಾಗ ಗುರುವಿಗೆ ಮತ್ತೊಬ್ಬ ಗುರು ಬೇಡ. ಇದು ಅರಿವಿನ ಕಾಯ; ಸಹಜಕಾಯ. ಮನ ಕೃತ್ರಿಮವಾದ ಕಾಯ. ಮನವೆಂಬ ಕೃತ್ರಿಮಕಾಯ ಕಾಯವನ್ನು ಆವರಿಸಿರುವುದರಿಂದ, ಕಾಯ ನುಡಿದಂತೆ ನಡೆಯುವುದಿಲ್ಲ. ಕಾಯ ಕಾಯದ ಕಾಯಕ

ಮಾಡಲರಿಯದಿದ್ದರೆ ಗುರು ಕಾಯವಾದರೇನು, ಮಠ, ಪೀಠಾಧಿಪತಿ, ಜಗದ್ಗುರುವಿನ ಕಾಯವಾದರೇನು? ಶಾಸಕ, ಸಚಿವ ಮುಖ್ಯಮಂತ್ರಿ ಪ್ರಧಾನಮಂತ್ರಿ ರಾಷ್ಟ್ರಪತಿಯ ಕಾಯವಾದರೇನು? ಜವಾನ ಅಧಿಕಾರಿ ಶ್ರೀಮಂತ ಬಡವನ ಕಾಯವಾದರೇನು? ಹೆಣ್ಣಾದರೇನು, ಗಂಡಾದರೇನು? ಇವು ನುಡಿದಂತೆ ನಡೆಯಲು ಬಾರದ ಕೃತ್ರಿಮ ಕಾಯಗಳು. ಕಾಯಕ್ಕೆ ಅಕಾಯದ ತಂತ್ರಜ್ಞಾನ ತಿಳಿಯದ ಕಾಯಗಳು. ಇಂತಹ ಕಾಯಗಳಿಗೆ ಗುರುವುಂಟು, ಲಿಂಗವುಂಟು, ಉತ್ಪತ್ತಿ ಸ್ಥಿತಿ ಲಯಗಳು ಉಂಟು. ಸರ್ವೇಂದ್ರಿಯಗಳ ಸುಖದ ಭ್ರಮೆ ಉಂಟು.

ಕ್ರೀಯನರಿದ ಕಾಯವದು ಕಾಯವಲ್ಲ; ಅಕಾಯ! ಕಾಯಕ್ಕೆ ಜನನ ಉಂಟು, ಮರಣವುಂಟು, ಕಾಯದಲ್ಲಿ ಸಂಗಮವಾದ ಅಕಾಯಕ್ಕೆ ಜನನವಿಲ್ಲ ಮರಣವಿಲ್ಲ. ಏಕೆಂದರೆ ಅದು ಕಾಯವಲ್ಲ. ಕಾಯದ ಚರಿತ್ರೆ ಅಕಾಯಕ್ಕೆ ಇಲ್ಲ. ಕಾಯಕ್ಕೆ ಚರಿತ್ರೆ ಉಂಟು ತಂದೆ ತಾಯಿ ಬಂಧು ಬಳಗ ತಾತ ಮುತ್ತಾತನ ಮನೆತನದ ಚರಿತ್ರೆ ಉಂಟು. ಮನೆತನದ ಕುಲಕಸುಬು ಉಂಟು. ಅಕಾಯಕ್ಕೆ ಜಾತಿ ಮತ ಪಂಥವಿಲ್ಲ. ಅದು ಹೆಣ್ಣಲ್ಲ ಗಂಡಲ್ಲ. ಸಾಕ್ಷಾತ್ ಬಯಲು ; ಶಿವ. ಈ ಶಿವನನ್ನು ಕುರಿತು ಬಸವಣ್ಣನವರು ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು ನೀನಲ್ಲದೆ ಮತ್ತಾರು ಇಲ್ಲವಯ್ಯ ಅಂಗದಲ್ಲಿಯೇ ಸಂಗಮವಾದ ಕೂಡಲ ಸಂಗಯ್ಯನೇ. ಹಾಲಲ್ಲಾದರೂ ಅದ್ದು, ನೀರಲ್ಲಾದರೂ ಅದ್ದು ನಿಮ್ಮ ಧರ್ಮ ಎಂದು ಹಾಡುತ್ತಾ ಕಾಯವನ್ನು ಆವರಿಸಿದ ಮನ ಅಕಾಯ ಪ್ರವೇಶ ಮಾಡಿದ್ದಾರೆ. ಹಾಗೆ ಮಾಡುವ ವಿಧಾನವನ್ನು ಬರಹದ ಮೂಲಕ ಬಿಟ್ಟು ಹೋಗಿದ್ದಾರೆ.

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ, ಪಾತಾಳದಿಂದಲತ್ತತ್ತ ನಿಮ್ಮ ಶ್ರೀ ಚರಣ. ಬ್ರಹ್ಮಾಂಡದಿಂದಲತ್ತತ್ತ ನಿಮ್ಮ ಶ್ರೀಮುಕುಟ. ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಲಿಂಗವೇ ಎಂದು ಅಕಾಯವನ್ನು ಬಣ್ಣಿಸುತ್ತ ಎನ್ನ ಕಾಯ(ಕರಸ್ಥಲ)ದಲ್ಲಿ ಬಂದು ಚುಳುಕಾದಿರಯ್ಯ ಎಂದು ಖಚಿತವಾಗಿ ಹಾಡಿದ್ದಾರೆ.

**ಪರಬ್ರಹ್ಮವನರಿದವಂಗೆ ಸರ್ವೇಂದ್ರಿಯವಿಲ್ಲ:**

ನೋಡುವ ಕಣ್ಣಿನಲ್ಲಿ, ಕೇಳುವ ಕಿವಿಯಲ್ಲಿ, ರುಚಿಸುವ ನಾಲಿಗೆಯಲ್ಲಿ, ಮೂಸಿಸುವ ಮೂಗಿನಲ್ಲಿ, ಸ್ಪರ್ಶಿಸುವ ಚರ್ಮದಲ್ಲಿ ಸುಖವುಂಟು , ದುಃಖವುಂಟು. ಇವು ಇಂದ್ರಿಯಗಳ ಗುಣ. ಕ್ರೀಯನರಿತ ಕಾಯಕ್ಕೆ, ಆಚಾರ, ಉತ್ಪತ್ತಿ ಸ್ಥಿತಿ ಲಯವನು ಅರಿತ ಕಾಯಕ್ಕೆ ಭ್ರಮೆಯನ್ನು ಕಳೆದುಕೊಂಡು ಪರಬ್ರಹ್ಮವೇ ತಾನಾದ ಕಾಯಕ್ಕೆ ಸರ್ವೇಂದ್ರಿಯವಿಲ್ಲ. ಅಂದರೆ ಇಂದ್ರಿಯಗಳೆಲ್ಲ ತನ್ನ ಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾಗುತ್ತದೆ.

ಕಲ್ಲನ್ನು ಕಣ್ಣು ಕಲ್ಲೆಂದು ನೋಡುತ್ತದೆ. ಕಲ್ಲಿನಲ್ಲಿ ಪರಮೇಶ್ವರನ ಮೂರ್ತಿ ಕೆತ್ತಿದರೆ ಕಣ್ಣಿನಲ್ಲಿ ದೇವರ ಭಾವ ಹುಟ್ಟುತ್ತದೆ. ಮಸೀದೆ ಕೆತ್ತಿದಾಗ ದುರ್ಭಾವ ಹುಟ್ಟುತ್ತದೆ. ಭಾವ ದುರ್ಭಾವಗಳು ಇಂದ್ರಿಯಗಳ ಗುಣ. ನಿರ್ಭಾವದಲ್ಲಿ ಇಂದ್ರಿಯಗಳಿಲ್ಲ. ಸಹಜತೆ ಇದೆ. ಕಣ್ಣು ಕಲ್ಲನ್ನು ಕಲ್ಲೆಂದು ನೋಡುವುದು ಕಣ್ಣಿನ ಸಹಜ ಧರ್ಮ. ಕೆತ್ತಿದ ಕಲ್ಲನ್ನು ಭಾವದಿಂದ, ದುರ್ಭಾವದಿಂದ ನೋಡುವುದು ಭ್ರಮೆ. ಪರಬ್ರಹ್ಮವನು ಅರಿತ ಕಣ್ಣು ಇಂದ್ರಿಯ ಗುಣ ಕಳೆದುಕೊಂಡು ನಿರ್ಗುಣಿಯಾಗುತ್ತದೆ.

ತನ್ನನ್ನು ತಾನು ಅರಿತ ಕಾಯಕ್ಕೆ ಹಿಂದಿಲ್ಲ ಮುಂದಿಲ್ಲ. ಗುರುವಿಲ್ಲ, ಲಿಂಗವಿಲ್ಲ. ಜಂಗಮವಿಲ್ಲ. ಸರ್ವೇಂದ್ರಿಯವೂ ಇಲ್ಲ ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

119

**ಕ್ಷೀರದಿಂದಾದ ತುಪ್ಪ ಕ್ಷೀರವಪ್ಪುದೇ ?**
**ನೀರಿನಿಂದಾದ ಮುತ್ತು ನೀರಪ್ಪುದೆ ?**
**ಮೀರಿ ಪೂರ್ವ ಕರ್ಮವನು ಹರಿದ ಭಕ್ತಂಗೆ**
**ಬೇರೆ ಮತ್ತೆ ಜನ್ಮವುಂಟೆ ಲಿಂಗವಲ್ಲದೆ ?**
**ಕಟ್ಟಿಹೆ ಬಿಟ್ಟಿಹೆವೆಂಬ ದಂದುಗ ನಿಮಗೇಕೆ ?**
**ತೆರನನರಿಯದೆ ಹಲವು ತೊಪ್ಪಲ ತರಿದು ತಂದು ಮೇಲೊಟ್ಟಲೇಕೋ ?**
**ಜಂಗಮ ಬಂದರೆ ತೆರನರಿತು ಅರ್ಪಿಸಬಲ್ಲಡಲ್ಲಿ**
**ಶಿವ ತೆರಹಿಲ್ಲದಿಪ್ಪನೆಂದಾತ ನಂಬಿಗರ ಚೌಡಯ್ಯ .**

ಹಾಲು ತುಪ್ಪವಾದ ಮೇಲೆ ಆ ತುಪ್ಪ ಮತ್ತೆ ಹಾಲಾಗುವುದಿಲ್ಲ. ಹಾಗೆಯೇ ನೀರು ಮುತ್ತಾದ ಮೇಲೆ ಆ ಮುತ್ತು ಮತ್ತೆ ನೀರಾಗುವುದಿಲ್ಲ. ಹಾಲು ಮತ್ತು ನೀರು ಪೂರ್ವಾಶ್ರಯವನ್ನು ಕಳೆದುಕೊಂಡು ತುಪ್ಪ ಮತ್ತು ಮುತ್ತು ಆಗಿವೆ. ಅದಕ್ಕೆ ಅದೇ ಜನ್ಮ ಕಡೆ.

ಭವಿ ಮನ ತನ್ನ ಪೂರ್ವಾಶ್ರಯವನ್ನು ಕಳೆದುಕೊಂಡು ಭಕ್ತನಾದ ಮೇಲೆ ಮತ್ತೆ ಭವಿಯಾಗುವುದಿಲ್ಲ ಏಕೆಂದರೆ ಅಂಗದಲ್ಲಿಯೇ ಸಂಗಮವಾದ ಲಿಂಗವಾಗಿ ಅಂಗ ಲಿಂಗಾಂಗವಾಗಿದೆ. ಜ್ಞಾನಾಂಗವಾಗಿದೆ.

ಹಾಲಿಗೆ ಹೆಪ್ಪು ಬಿದ್ದು ಮೊಸರಾಗಿ ಕಡೆಯಿಸಿಕೊಂಡು ಮಜ್ಜಿಗೆಯಾಗಿ ಬೆಣ್ಣೆಯಾಗಿ ಕಾಸಲು ತುಪ್ಪವಾಗಿದೆ. ಆ ತುಪ್ಪ ಮತ್ತೆ ಹಾಲಾಗಲೊಲ್ಲದು. ಅದು ಸಾಧ್ಯವೂ ಇಲ್ಲ. ಹಾಗೆಯೇ ಜಲ ಬಿಂದು ಚಿಪ್ಪಿನಲ್ಲಿ ಬಿದ್ದು ಫಳ ಫಳನೆ ಹೊಳೆಯುವ ಮುತ್ತಾದ ಮೇಲೆ ಅದು ಮತ್ತೆ ಜಲವಾಗುವುದಿಲ್ಲ. ಭವಿ ಮನವು ಕೂಡಾ ಹಾಗೆಯೇ. ತನ್ನಲ್ಲಿ ಸಂಗ್ರಹವಾದ ಅಜ್ಞಾನದಿಂದಾಗಿ ಅದು ಭವಿಯಾಗಿದೆ. ಅಂಗವನ್ನು ಆವರಿಸಿದ ಭವಿಮನ ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನಕ್ಕೆ ಭಕ್ತಿ ಮಾಡಲು ಹೋಗಿ ಅಲ್ಲಿಯೇ ಸಂಗಮ ವಾಗುತ್ತದೆ. ಸಂಗಮನಾಥನೇ ತಾನಾಗುತ್ತದೆ. ಪುನಃ ಭವಿಯಾಗುವುದಿಲ್ಲ. ಹಾಲು ತುಪ್ಪವಾಗಲು ಕಾರಣ ಅಲ್ಲಿ ಘಟಿಸಿದ ಕ್ರಿಯೆ. ಜಲ ಮುತ್ತಾಗಲು ಕಾರಣ ಅಲ್ಲಿ ಘಟಿಸಿದ ಕ್ರಿಯೆ. ಭವಿಯೆಂಬ ಅಜ್ಞಾನಿ ಮನ ಜ್ಞಾನಿಯಾಗಲು ಕಾರಣ ಅಲ್ಲಿ ಘಟಿಸಿದ ಕ್ರಿಯೆ. ಹಾಲು ತುಪ್ಪವಾದಂತೆ , ಜಲ ಮುತ್ತಾದಂತೆ, ಭವಿಮನ ಭಕ್ತನಾಗುತ್ತದೆ.

**ಬೇರೆ ಮತ್ತೆ ಜನ್ಮವುಂಟೆ ಲಿಂಗವಲ್ಲದೆ ?**
**ಕಟ್ಟಿಹೆ ಬಿಟ್ಟಿಹೆವೆಂಬ ದಂದುಗ ನಿಮಗೇಕೆ ? :**

ಅಂಗದಲ್ಲಿ ಅರಿವೆಂಬ ಲಿಂಗವೇ ಸಂಗಮವಾಗಿರುವಾಗ ; ಅಂಗ ಲಿಂಗಾಂಗವೇ ಆಗಿರುವಾಗ ಅಂಗಕ್ಕೆ ಮತ್ತೊಂದು ಲಿಂಗ ಕಟ್ಟಬಹುದೆ ? ತುಪ್ಪದ ಗಿಂಡಿಗೆ ತುಪ್ಪದ ಕಂಪು ಕಟ್ಟಲು ಸಾಧ್ಯವೆ ? ಮುತ್ತಿಗೆ ಮತ್ತೊಂದು ಬೆಳಗುವ ಬೆಳಕು ಕಟ್ಟಲು ಸಾಧ್ಯವೆ ? ಹಾಗೆಯೇ ಅಂಗದೊಂದಿಗೆ ಸಂಗಮವಾಗಿ ಬಂದ ಲಿಂಗಕ್ಕೆ ಮತ್ತೊಂದು ಲಿಂಗ ಕಟ್ಟಲು ಬರುತ್ತದೆಯೇ ? ಕಟ್ಟುವುದೊಂದು ವ್ಯವಹಾರ. ಕಟ್ಟಿಸಿಕೊಳ್ಳುವದೊಂದು ವ್ಯವಹಾರ. ಕಟ್ಟುವವನು ಜಂಗಮನಲ್ಲ ; ಕಟ್ಟಿಸಿಕೊಳ್ಳುವವನು ಭಕ್ತನಲ್ಲ .

ಜಂಗಮನಾದವನು ; ಹಾಲಿನಲ್ಲಿ ತುಪ್ಪವಿದೆ ಅದನ್ನು ಹೀಗೆ ಮಾಡಬೇಕು ಎಂದು ಹೇಳಬಹುದು. ಜಲವೇ ಮುತ್ತಾಗುತ್ತದೆ ಎಂದು ಹೇಳಬಹುದು. ಹಾಲಿನಲ್ಲಿ, ಜಲದಲ್ಲಿ ಇದ್ದ ಶಕ್ತಿ ಅಂಗದಲ್ಲಿ ಇದೆ ; ಅದು ಬರಿ ಅಂಗವಲ್ಲ ಲಿಂಗಾಂಗ ಎಂದು ಹೇಳಬಹುದು. ಅದು ಜಂಗಮನಾದವನಿಗೆ ತಿಳಿದಿದ್ದರೆ ಮಾತ್ರ . ನಿಜ ಜಂಗಮ ಹೇಳುವುದು ಭವಿಮನ ತಿಳಿದುಕೊಂಡರೆ ಮಾತ್ರ ಅಂಗದಲ್ಲಿ ಘಟಿಸಿ ಅದು ಲಿಂಗಾಂಗವಾಗುತ್ತದೆ.

ಹಾಲಿಗೆ ತುಪ್ಪವಾಗಲು ಹೇಳಿದರೆ ಅದು ಆಗುವುದಿಲ್ಲ. ಹಾಲಿನಲ್ಲಿಯೇ ಘಟಿಸಿ ತುಪ್ಪವಾಗ ಬೇಕು. ಜಲಕ್ಕೆ ಮುತ್ತಾಗಲು ಬೋಧಿಸಿದರೆ ಮುತ್ತಾಗುವುದಿಲ್ಲ. ಅದು ಚಿಪ್ಪಿಗೆ ಬಿದ್ದ ಜಲ ಬಿಂದುವಿನಲ್ಲಿಯೇ ಘಟಿಸಿ ಮುತ್ತಾಗಬೇಕು. ಹಾಗೆಯೇ ಅಂಗವನ್ನು ಆವರಿಸಿದ ಮನ, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗದೊಂದಿಗೆ ಸಂಗಮವಾಗಿ ಭಕ್ತನಾಗಬೇಕು. ಇದು ಅಂಗದಲ್ಲಿಯೇ ಘಟಿಸಬೇಕು. ಮನಕ್ಕೆ ಘನಮನವಾಗಲು ಬಯಕೆ ಹುಟ್ಟಬೇಕು. ಹೊರತಾಗಿ ಅಂಗಕ್ಕೆ ಲಿಂಗ ಕಟ್ಟಿಕೊಂಡರೆ ಅಂಗ ಲಿಂಗಾಂಗವಾಗುವುದಿಲ್ಲ.

ಅಂಗದ ಮೇಲೆ ಕಟ್ಟಿಕೊಂಡ ಲಿಂಗಕ್ಕೆ ಹಲವು ತೊಪ್ಪಲ ಪುಷ್ಪ ತಂದು ಲಿಂಗದ ಮೇಲೆ ಒಟ್ಟಿ ಧೂಪ ದೀಪ ಬೆಳಗಿ ಭಸ್ಮ ಗಂಧ ಲೇಪಿಸಿ ಪೂಜಿಸಿದರೆ ಲಿಂಗಯ್ಯ ಅಂಗಕ್ಕೆ ಒಲಿಯುವುದಿಲ್ಲ. ಸರ್ವಾಂಗದಲ್ಲಿ ಲಿಂಗ ಸಂಗಮವಾಗಿದೆ. ಅನುವನು ಅರಿತು ಅರ್ಪಿಸಬಲ್ಲಡೆ ತೆರಹಿಲ್ಲದಂತೆ ; ಸಂದಿಲ್ಲದಂತೆ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಶಿವ ಸರ್ವಾಂಗದಲ್ಲಿಯೂ ಕಾಣುತ್ತಾನೆ. ಸರ್ವ ಅಂಗಗಳಲ್ಲಿ ಶಿವ ಸಂಗಮವಾದುದು ಗೋಚರಕ್ಕೆ ಬರುತ್ತದೆ ಎಂದು ಅಂಬಿಗರ ಚೌಡಯ್ಯ ಶರಣರು ಘೋಷಿಸಿದ್ದಾರೆ.

**120**

**ಗಂಡನೆಂಜಲಿಗೆ ಹೇಸುವಳು ಮಿಂಡನ ತಂಬುಲವ ತಿಂಬುವ**
**ತೆರನಂತೆ, ಗುರುವಿನುಪದೇಶವ ಕೊಂಡು,**
**ಅನೀತಿ ದೇವರುಗಳ ಎಡೆಯ ತಿನ್ನುವಂತಹ ಮಾದಿಗರು ನೀವು ಕೇಳಿರೋ.**
**ಅಂಡಜ ಉತ್ಪತ್ತಿ ಎಲ್ಲ ದೇವರಿಂದಾಯಿತ್ತು .**
**ಮೈಲಾರ,ಬೀರ, ಭೈರವ, ಧೂಳ,ಕೇತನೆಂಬ**
**ಕಿರಿ ದೈವಕ್ಕೆರಗಿ, ಭಕ್ತರೆನಿಸಿಕೊಂಬುವ**
**ಚಂಡಿನಾಯಿಗಳ ಕಂಡು ಮನ ಹೇಸಿತ್ತೆಂದಾತ**
**ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.**

ರೂಪು ಹಲವಾದಡೇನು ? ಗುಪ್ತಾಂಗಗಳು ಒಂದೇ ಎನ್ನುವ ಸೂತ್ರ ಗಂಡ ಮತ್ತು ಹೆಂಡತಿಗೆ ಬಲವಾಗಿ ತಿಳಿದರೆ ಸಾಕು ಅವರಿಬ್ಬರೂ ಹಾದರ ಮಾಡುವುದಿಲ್ಲ.ಅಂಗದಲ್ಲಿರುವ ಸುಖದ ದ್ರವ್ಯ ಅಂಗದಿಂದಲೇ ಹೊರಬಂದು ಅಂಗಕ್ಕೆ ಸುಖವಾಗುತ್ತದೆ. ಎನ್ನುವ ಸೂತ್ರ ಅಂಗಕ್ಕೆ ತಿಳಿಯದ್ದಕ್ಕಾಗಿ ಅಂಗ ಮತ್ತೊಂದು ಅಂಗ ದೊಂದಿಗೆ ಹಾದರ ಮಾಡುತ್ತದೆ. ಹಾಗೆಯೇ ಗುರುವಿನ ಉಪದೇಶ ಕೂಡಾ !

ಅರಿವೆಂಬ ಗುರುದೇವ ಅಂಗದಲ್ಲಿಯೇ ಇದ್ದಾನೆ. ಆತ ಮಹಾದೇವನೂ ಹೌದು ;

ಸದಾಶಿವನೂ ಹೌದು ; ಸಾಕ್ಷಾತ್ ಪರಬ್ರಹ್ಮನೂ ಹೌದು. ಇಂತಹ ಗುರುದೇವನೇ ಅಂಗದಲ್ಲಿ ಸಂಗಮವಾಗಿರುವಾಗ ಆತನ ಉಪದೇಶ ತೆಗೆದು ಕೊಂಡು ; ತಾನೇ ತನ್ನ ಕೈಯಾರೆ ನಿರ್ಮಿಸಿದ ದೇವರಿಗೆ ಆರಾಧಿಸಿ, ಎಡೆಮಾಡಿ ನೈವೇದ್ಯ ತಿನ್ನುವವನನ್ನು ಅಂಬಿಗರ ಚೌಡಯ್ಯ ಶರಣರು ಮಾದಿಗ ಎಂದು ಕರೆದಿದ್ದಾರೆ.ಇಂತಹ ಮನಗಳಿಗೆ ಮಾದಿಗನೆಂದು, ಮಿಂಡನ ಎಂಜಲು ತಿಂಬುವ ಮನ ಎಂದು ಹೆಸರಿಟ್ಟಿದ್ದಾರೆ.

ಮೈಲಾರ, ಬೀರ, ಭೈರವ, ಧೂಳ, ಕೇತನೆಂಬ ದೇವರುಗಳನ್ನು ತನುವೇ ಸೃಷ್ಟಿ ಮಾಡಿದೆ. ಆ ತನುವಿನಿಂದಲೇ ಆ ದೇವರುಗಳು ಪೂಜೆಗೊಳ್ಳುತ್ತವೆ. ತನುವಿನಲ್ಲಿ ಅರಿವೆಂಬ ಗುರುದೇವ, ಮಹಾದೇವ, ಸದಾಶಿವ, ಸಾಕ್ಷಾತ್ ಪರಬ್ರಹ್ಮ ಸಂಗಮವಾಗಿದ್ದರೂ ಆತನನ್ನು ಮನ ಆರಾಧಿಸಲೊಲ್ಲದು. ತನುವನ್ನು ಆವರಿಸಿದ ಅಂತಹ ಮನವೇ ಮಾದಿಗನೆಂದು ಜರಿದು ಅದಕ್ಕೆ ಬುದ್ಧಿವಾದ ಹೇಳಿದ್ದಾರೆ. ಚಂಡಿನಾಯಿಯಂತೆ ಎಂದು ಹೇಸಿಗೆ ಪಟ್ಟು ಅಂತಹ ತನುಗಳನ್ನು ಆವರಿಸಿದ ಮನದಿಂದ ದೂರ ಉಳಿದಾತನೇ ನಿಜ ಶರಣನೆಂದು ಘೋಷಿಸಿದ್ದಾರೆ.

**121**

**ಗಂಧವ ವಾಯು ಕೊಂಬಾಗ ಅದು ತಂದು**
**ಕೂಡಿದವರಾರು ?ನಿಂದ ಮರಕ್ಕೆ ಸುಗಂಧ ಹುಟ್ಟುವಾಗ**
**ಅದ ಬಂಧಿಸಿ ತಂದು ಇರಿಸಿದವರಾರು ?**
**ಅವು ತಮ್ಮ ಅಂಗದ ಸ್ವಭಾವದಂತೆ ನಿಂದ ನಿಜವ**
**ತಾನಾಗಿ ಅಲ್ಲಿ ಬೇರೊಂದು ಸಂದೇಹವ ಸಂಧಿಸಲಿಲ್ಲ**
**ಎಂದನಂಬಿಗ ಚೌಡಯ್ಯ.**

ಮರದಲ್ಲಿ ಗಂಧ ಸಹಜ. ತನುವಿನಲ್ಲಿ ಜ್ಞಾನ ಸಹಜ. ಗಂಧ ಗಾಳಿಯಿಂದಲೇ ಎಂದು ಭಾಸವಾಗಿದೆ. ಸುಗಂಧದ ಗಾಳಿಯದು ಕ್ಷಣಿಕ. ಮರದಲ್ಲಿ - ಪುಷ್ಪದಲ್ಲಿ ಇದ್ದ ಗಂಧವನ್ನು ಗಾಳಿ ಪಸರಿಸಲು ಸಹಕರಿಸಿತೇ ಹೊರತು ಗಾಳಿಯೇ ಗಂಧವಲ್ಲ.

ಮರದಲ್ಲಿ ಗಂಧವನು, ತನುವಿನಲ್ಲಿ ಜ್ಞಾನವನು ಯಾರೂ ತಂದಿರಿಸಲಾರರು. ಮರದ ಸಹಜ ಗುಣ ಗಂಧ ! ಮರದ ಕಣ ಕಣದ ತುಂಬ ತನ್ಮಯವಾಗಿ ಗಂಧವೇ ತುಂಬಿ ಆ ಗಂಧದೊಂದಿಗೆ ಮರ ಬೆಳೆದಿದೆ. ಮರ ಕಡಿಕಡಿದು ತುಂಡರಿಸಿದರೂ ಅದು ಗಂಧ ಪಸರಿಸುವುದೇ ಹೊರತು ಅನ್ಯವಲ್ಲ.

ಶರಣ ಅಂಬಿಗರ ಚೌಡಯ್ಯನವರು ತನುವಿನಲ್ಲಿ ತನ್ಮಯವಾದ ಸಹಜ ಜ್ಞಾನದ ಬಗ್ಗೆ ಈ ವಚನದಲ್ಲಿ ಮಾಹಿತಿ ನೀಡಿದ್ದಾರೆ. ಶರಣರು ನೀಡಿದ ಈ ಮಾಹಿತಿ ವೈಜ್ಞಾನಿಕವಾದುದು. ಮರದಲ್ಲಿ ಯಾರೂ ಗಂಧವನು ಬೆರೆಸುವುದಿಲ್ಲ, ಗಂಧದ ನೀರನ್ನೂ ಎರೆಯುವುದಿಲ್ಲ, ಮರ ಗಂಧದೊಂದಿಗೆ ಸಹಜವಾಗಿಯೇ ತನ್ಮಯವಾಗಿ ಬೆಳೆಯುವುದು, ಇದರಂತೆ ತನುವು ಜನ್ಮ ಪಡೆದಾಗಿನಿಂದ, ಜ್ಞಾನ; ತನುವಿನಲ್ಲಿ ತನ್ಮಯವಾಗಿ, ತನುವಿನೊಂದಿಗೆ ಹೊರಬಂದಿದೆ. ತನುವಿನ ತುಂಬ ಜ್ಞಾನವೇ ತುಂಬಿದೆ. ಕಣ್ಣು, ಕಿವಿ, ಮೂಗು, ಚರ್ಮ, ನಾಲಿಗೆ ಜ್ಞಾನ ಕೇಂದ್ರಗಳೇ ಆಗಿವೆ. ಕಣ್ಣಿಗೆ ನೋಡಲು ಯಾರೂ ಕಲಿಸಲಿಲ್ಲ. ಕಿವಿಗೆ ಕೇಳುವುದನ್ನು ಯಾರೂ ಕಲಿಸಲಿಲ್ಲ. ಮೂಗಿಗೆ

ವಾಸಿಸಲು ಯಾರೂ ಹೇಳಿ ಕೊಡಲಿಲ್ಲ. ಚರ್ಮಕ್ಕೆ ಸ್ಪರ್ಶಿಸಲು ಯಾರೂ ಬೋಧಿಸಲಿಲ್ಲ. ನಾಲಿಗೆಗೆ ರುಚಿಸಲು ಯಾವ ಜ್ಞಾನಿಯೂ ಪಾಠ ಮಾಡಲಿಲ್ಲ. ಎರಡಕ್ಷರ ಕಲಿತ ಮಟ್ಟಿಗೆ ತನುವಿನಲ್ಲಿ ತನ್ಮಯವಾದ ಜ್ಞಾನ ನೋಡುವುದು ಬಿಟ್ಟು ಹೊರಗೆ ನೋಡುವುದೆ ?

ತನುವಿಗೆ ಮತ್ತೊಂದು ತನುವು ಶಕ್ತಿ ತುಂಬಬೇಕೆ ? ಹಾಗಿದ್ದರೆ ಗಂಧ ಬೀರಲು ಮರಕ್ಕೆ ಯಾರು ಪಾಠ ಮಾಡಿದರು. ಹೂವಿನಲ್ಲಿ ಮಕರಂದ ತುಂಬಿದವರಾರು? ಜೇನಿನಲ್ಲಿ ಸಿಹಿ ತುಂಬಿದವರಾರು, ಕಬ್ಬಿನಲ್ಲಿ ಸ್ವಾದ ತುಂಬಿದವರಾರು ? ಮಾತಿಲ್ಲದೆ ಸಹಜ ಕ್ರಿಯೆಯಲ್ಲಿ ಲೀನವಾದ ಗಿಡ, ಮರ, ಬಳ್ಳಿಗಿಂತ ಭಿನ್ನವಾಗಿದೆಯೆ ಈ ತನುವು ?

ತನುವಿನ ಸಹಜ ಕ್ರಿಯೆ ತನುವಿನಲ್ಲಿ ಅಡಗಿ, ಅಸಹಜ ಕ್ರಿಯೆ ಎದ್ದು ಕಾಣುವುದು ಗಮನಕ್ಕೆ ಬರುತ್ತಿಲ್ಲವಲ್ಲ ಎಂದು ಚೌಡಯ್ಯ ಶರಣರು ಪ್ರಶ್ನಿಸಿದ್ದಾರೆ.

ತಾಯಿ ತನುವಿಗೆ ಹಾಲುಣಿಸಿದರೆ ಸಾಕಿತ್ತು , ತನ್ನ ಎಂಜಲು ಪ್ರೀತಿ ಬೆರೆಸಿದಳು. ತಂದೆ, ಮಗುವನ್ನು ತನ್ನಂತೆ ತನ್ನ ಮನೆತನದಂತೆ ಬೆಳೆಯಲು, ಶೌರ್ಯ, ಧೈರ್ಯ, ಈರ್ಶೆ, ದ್ವೇಷ, ಭಾವ, ಮಮಕಾರದ ಎಂಜಲ ನಂಜು ತುಂಬಿದ. ಗರ್ಭದಿಂದ ಅಪ್ಪಟ ಚಿನ್ನವೇ ಹೊರಬಂದಿತ್ತು , ಆ ಚಿನ್ನಕ್ಕೆ ಆದರ್ಶವೆಂಬ ಮಣ್ಣು ಮೆತ್ತಿದರು. ಆ ಮಣ್ಣಿನಲ್ಲಿ ಚಿನ್ನವೇ ಮರೆಯಾಯಿತು. ತುಂಬಿದ ನಂಜೇ ಹೊರೆಯಾಯಿತು. ತನುವಿನ ಸಹಜ ತನವೆಂ ಬುದು ಜ್ಞಾನ ಮಾತ್ರ . ಮರದ ಸಹಜ ತನವೆಂಬುದು ಗಂಧ ಮಾತ್ರ . ಮರಕ್ಕೆ ಅಸಹಜ ವಾದ ಗಂಧ ಯಾರೂ ತುಂಬಲಿಲ್ಲ. ಅದಕ್ಕಾಗಿ ಮರ ದುರ್ಗಂಧ ಎಂದೂ ಬೀರಲಿಲ್ಲ.

ತನುವಿನ ಸಹಜ ಜ್ಞಾನ ಹೊರಸೂಸಬೇಕಾದರೆ, ಹೇರಿಕೊಂಡ ಜ್ಞಾನ ಕೊಡವಬೇಕು. ಹೇರಿಕೊಂಡ ಜ್ಞಾನ ಕೊಡವಲು ತನುವಿಗೆ ಸಾಧ್ಯವೆ ? ಸಹಜ ಜ್ಞಾನ ಕಾಣದಂತೆ ಬೆಟ್ಟದಷ್ಟು ಮಣ್ಣು ತನುವಿಗೆ ಸುರಿಯಲಾಗಿದೆ. ಎಷ್ಟೊಂದು ಪುಸ್ತಕಗಳು ಹೊರಗಿನಿಂದ ಸೇರಿವೆ. ಒಂದೇ ಎರಡೆ ಹಲವಾರು. ರಾಮಾಯಣ, ಮಹಾಭಾರತ, ಭಗವದ್ಗೀತೆ, ಬೈಬಲ್, ಕತೆ, ಕಾದಂಬರಿ, ಕವನ, ಮಹಾಕಾವ್ಯ , ರಾಜಕೀಯ, ಧರ್ಮ, ಪುರಾಣ, ಪುಣ್ಯ ಕತೆಗಳು ಹೀಗೆ ತನುವಿನಲ್ಲಿ ಹೇರಿಕೊಂಡ ಜ್ಞಾನ ದ್ರವ್ಯವೆಂಬ ಕಸ ತೆಗೆದು ಹಾಕಲು ಸಾಧ್ಯವೆ? ಇದಲ್ಲದೆ ತನುವಿಗೆ, ಮತ್ತೊಂದು ತನುವಿನಿಂದ ಬೋಧೆ ಬೇರೆ. ಇವೆಲ್ಲವುಗಳಲ್ಲಿ ಹೂತುಹೋದ ಸಹಜತೆ ಪ್ರಜ್ವಲಿಸುವುದಾದರೂ ಹೇಗೆ ? ತನುವಿನ ತನ್ನ ಒಳ ಮಿಡಿತವನ್ನು ಹೊರಹಾಕಬೇಕೆಂದರೆ, ಹೇರಿಕೊಂಡ ಕಸ ಅಡ್ಡಿ ಪಡಿಸುತ್ತದೆ. ಹಾವು ಸಾಯುವುದಿಲ್ಲ, ಕೋಲು ಮುರಿಯುವುದಿಲ್ಲ. ಏಕೆಂದರೆ ಹಾವು ತಾನೆ; ಕೋಲು ಕೂಡಾ ತಾನೆ ! ತಾನೆ ಬೆಳೆಸಿಕೊಂಡ ವಿಷದ ಹಾವನ್ನು ತಾನೇ ತನ್ನ ಕೋಲಿನಿಂದ ಹೊಡೆಯಲು ಸಾಧ್ಯವೇ ? ಅಥವಾ ಮತ್ತೊಬ್ಬರಿಗೆ ತಾನು ಪ್ರೀತಿಯಿಂದ ಸಾಕಿದ ಹಾವನ್ನು ಹೊಡೆಯಲು ಆದೀತೆ ? ಆಗಲು ಸಾಧ್ಯವೇ ಇಲ್ಲ.

ಮರದಲ್ಲಿ ಗಂಧ ಮಿಳಿತವಾದದ್ದು ಸಹಜ. ಅಂಗದಲ್ಲಿ ಅರಿವು ಮಿಳಿತವಾದದ್ದು ಸಹಜ. ಮರದಲ್ಲಿದ್ದ ಗಂಧವನ್ನು ಬೇರಾರೂ ತುಂಬಲಿಲ್ಲ. ಅದಕ್ಕಾಗಿ ಅದು ಸದಾ ಸುಗಂಧವೆ ಎನ್ನುವ ಸಹಜ ಜ್ಞಾನದ ಸೂತ್ರವನ್ನು ಜಗಕ್ಕೆ ಕರುಣಿಸಿದ್ದಾರೆ. ಶರಣ ಚೌಡಯ್ಯನವರು.

**122**

**ಗಾಳಿಯ ಹಡೆದಲ್ಲಿ ತೂರಿಕೊಳ್ಳಯ್ಯ,**

**ಗಾಳಿ ನಿನ್ನಾಧೀನವಲ್ಲಯ್ಯಾ ,**
**ನಾಳೆ ತೂರಿಹೆನೆಂದಡೆ ಇಲ್ಲಯ್ಯಾ .**
**ಶಿವಶರಣೆಂಬುದೊಂದು ಗಾಳಿಯ ಹಡೆದಲ್ಲಿ,**
**ಬೇಗ ತೂರೆಂದನಂಬಿಗ ಚೌಡಯ್ಯ .**

ಕಾಯ ಜ್ಞಾನವನ್ನು ಸಂಗ್ರಹ ಮಾಡಲು ಬಡಿದಾಡುತ್ತದೆ. ಕಾಯದಲ್ಲಿಯೇ ಜ್ಞಾನವಿದೆಯೆಂದು ಕಾಯಕ್ಕೆ ತಿಳಿಯುವುದಿಲ್ಲ. ಶರಣರು ಮಾತ್ರ ತಿಳಿಸಿಹೇಳಬಲ್ಲರು. ಅಂತಹ ಸಂದರ್ಭ ಕಾಯಕ್ಕೆ ಕೂಡಿ ಬಂದಾಗ, ಜ್ಞಾನ ತಿಳಿಹೇಳುವ ಸಂದರ್ಭ ಬಂದಾಗ ಕಾಯ ನಿರ್ಲಕ್ಷ್ಯ ಮಾಡುವುದು ಸೂಕ್ತವಲ್ಲ. ಮತ್ತೆ ಅಂತಹ ಸಂದರ್ಭ ಕೂಡಿ ಬರುವುದಿಲ್ಲ.

ಕಾಯದಲ್ಲಿಯೇ ಜ್ಞಾನವಿದೆಯೆಂದು ಕಾಯಕ್ಕೆ ತಿಳಿಯುವುದಿಲ್ಲ. ಕಾಯದಲ್ಲಿರುವ ಜ್ಞಾನ ಕಾಯಕ್ಕೆ ಒಲಿಯಬೇಕೆಂದು ಅದು ಎಂದೂ ಯೋಚಿಸುವುದಿಲ್ಲ. ಕಾಯದಲ್ಲಿ ಜ್ಞಾನವಿದೆಯೆಂದು ಕಾಯ ಹಿಡಿದು ಜ್ಞಾನ ಹೇಳುವ ಶರಣರನ್ನು ಜ್ಞಾನಿಗಳನ್ನು ಕಾಯ ಎಂದೂ ಹುಡುಕುವುದಿಲ್ಲ. ಹುಡುಕಬೇಕೆಂಬ ಸುಳಿವು ಕೂಡಾ ಕಾಯಕ್ಕೆ ದೊರೆಯುವುದಿಲ್ಲ. ಹೀಗಿದ್ದಾಗ ಕಾಯದ ಸಮೀಪಕ್ಕೆ ಜ್ಞಾನದ ಗಾಳಿ ಬೀಸಿದಾಗ ತೂರಿಕೊಂಡು ಜ್ಞಾನದ ಕಣ ಮಾಡಿಕೊಳ್ಳಿ. ಜ್ಞಾನ ನಿನ್ನಾಧೀನವಲ್ಲ. ನಾಳೆ ತಿಳಿದರಾಯಿತೆಂದು ಉದಾಸೀನ ಮಾಡುವಂತಿಲ್ಲ.

**ಶಿವಶರಣೆಂಬುದೊಂದು ಗಾಳಿಯ ಹಡೆದಲ್ಲಿ ಬೇಗ ತೂರೆಂದನಂಬಿಗ ಚೌಡಯ್ಯ :**

ಕಾಯದಲ್ಲಿ ಶಿವ ಸಂಗಮವಾಗಿದ್ದಾನೆ. ಆತನಿಗೆ ಶರಣು ಹೋಗುವುದೇ ಲೇಸು. ಶಿವನೆಂಬಾತ ಹೊರಗಿಲ್ಲ. ಅರಿವೇ ಗುರು. ಆ ಗುರುದೇವನೇ ಮಹಾದೇವ. ಆ ಮಹಾದೇವನೇ ಸದಾಶಿವ. ಅಂತಹ ಶಿವನಿಗೆ ಶರಣು ಹೋಗುವ ಜ್ಞಾನದ ಗಾಳಿ ಮನಕ್ಕೆ ತಾಗಿದರೆ ಸಾಕು ಮನ ಘನ ಮನವಾಗಿ ಶಿವಶರಣೆಂದು ಬದುಕುತ್ತದೆ.

ಶರಣರು ಮಹಾಜ್ಞಾನಿಗಳು. ಪ್ರತಿಕಾಯ ಶರಣ ಸುಖವನ್ನು ಪಡೆದು ಧನ್ಯನಾಗಬೇಕೆಂಬ ಕಳಕಳಿ ಅವರದು. ಅಂತಹ ಶರಣರು ಕಾಯವನ್ನು ಕೈಲಾಸ ಮಾಡಲು ಬಂದಾಗ, ಅಲಕ್ಷ್ಯಕ್ಕೊಳಗಾಗದೆ ಜ್ಞಾನದ ಗಾಳಿಯ ಹಡೆದಲ್ಲಿ ತೂರಿಕೊಳ್ಳಿರಯ್ಯಾ , ಅದು ನಿನ್ನ ಆಧೀನವಲ್ಲವ ಯ್ಯಾ ಎಂದು ಅಂಬಿಗರಚೌಡಯ್ಯ ಶರಣರು ಕಾಯಗಳಿಗೆ ತಿಳಿ ಹೇಳಿದ್ದಾರೆ.

**123**

**ಗಿಡುವಿನ ಪುಷ್ಪವ ಕೊಯ್ಯೆನು,**
**ಮಡುವಿನಗ್ಘವಣಿಯ ತುಳುಕೆನು,**
**ಸ್ಥಾವರಂಗಳ ಪೂಜಿಸೆನು.**
**ಕೇಳು ಕೇಳು ನಮ್ಮಯ್ಯ :**
**ಮನದಲ್ಲಿ ನೆನೆಯೆ ; ವಚನಕ್ಕೆ ತಾರೆ,**
**ಹೊಡವುಂಟು ಬೇರು ಮಾಡುವವನಲ್ಲ.**
**ಬಸುರೊಳಗಿರ್ದು ಕಾಲನಿಡುವ ಬುದ್ಧಿ ಕೂಡದೆಂದನಂಬಿಗ ಚೌಡಯ್ಯ .**

ಅಂಗದಲ್ಲಿ ಸಂಗಮವಾದ ಅರಿವೆಂಬ ಸಂಗಮನಾಥನೆ ನಿನ್ನನ್ನು ನಾನು ಪುಷ್ಪದಿಂದ

ಪೂಜಿಸಲು ಬರುವುದೆ ? ಜಲದಿಂದ ಪೂಜಿಸಲು ಬರುವುದೆ ? ಕಲ್ಲುಗಳಿಂದ ಮಾಡಿದ ಮೂರ್ತಿಗಳ ಮೂಲಕ ಪೂಜಿಸಲು ಸಾಧ್ಯವೆ ? ವಚನ ಮೂಲಕ ಪೂಜಿಸಲು ಸಾಧ್ಯವೆ ? ಇಲ್ಲ ; ಸಾಧ್ಯವೇ ಇಲ್ಲ. ಏಕೆಂದರೆ ನೀನು ನನ್ನ ಬಸುರೊಳಗಿರುವಿ. ಸರ್ವಾಂಗದ ಕಣಕಣದಲ್ಲಿಯೂ ಸಂಗಮವಾಗಿರುವಿ. ಅಂತಹ ನಿನ್ನ ಮೇಲೆ ಎನಗೆ ಕರುಣೆ ತೋರಿದ ನಿನ್ನ ಮೇಲೆ ಕಾಲನು ಇಡುವ ಬುದ್ಧಿಕೊಡಬೇಡ ತಂದೆ.

ಪೂಜಿಸುವ ಪುಷ್ಪ ನೀನೆ; ಅದು ಹೊರಚೆಲ್ಲುವ ಗಂಧವೂ ನೀನೆ. ಜಲವೂ ನೀನೇ ; ಜಲಜನಕ ಆಮ್ಲಜನಕವೂ ನೀನೆ. ಅವೆರಡನ್ನೂ ಕೂಡಿಸಿ ಜಲಮಾಡಿ ಅದರಲ್ಲಿ ಸಂಗಮವಾದ ಸಂಗಯ್ಯನೂ ನೀನೆ. ಕಲ್ಲು ನೀನೇ, ಕಲ್ಲಲ್ಲಿ ಚುಳುಕಾದ ಬಿಂದು ನೀನೆ. ಅಂಗ ನೀನೇ ; ಅಂಗವನ್ನು ಆವರಿಸಿದ ಮನ ನೀನೇ ; ಅಂಗದಲ್ಲಿ ಸಂಗಮವಾದ ಸಂಗಮನಾಥನೂ ನೀನೇ. ನಾನು-ನೀನು ಸಂದಿಲ್ಲದಂತೆ ಸಂಗ ಮವಾದ ನಿನ್ನನ್ನು ಪುಷ್ಪದಿಂದ, ಜಲದಿಂದ ಪೂಜಿಸಬಹುದೆ ? ಕಲ್ಲಿನಲ್ಲಿರುವೆಯೆಂದು ಸ್ಥಾವರಗಳನ್ನು ಪೂಜಿಸಬಹುದೆ ?

ಕೇಳು ಕೇಳು ನಮ್ಮಯ್ಯ ; ನೀನು ಸೃಷ್ಟಿಸಿದ ಮನದಿಂದ ನಿನ್ನನ್ನು ಪೂಜಿಸಬ ಹುದೆ ? ನನ್ನ ಗರ್ಭದಲ್ಲಿಯೇ ಸಂಗಮವಾದ ನಿನ್ನನ್ನು ನಾನು ಬೇರೆ ಮಾಡಿ ನೋಡುವವನಲ್ಲ. ಅದು ನನಗೆ ಸಲ್ಲದ ಕೆಲಸ ನನ್ನಯ್ಯ . ಇಂತಹ ನಿನ್ನನ್ನು ನಾನು ಏನೆಂದು ಪೂಜಿಸಲಿ ?

ನೋಡಿ ಪೂಜಿಸಲು ಹೋದರೆ ನೋಡುವ ಕಣ್ಣುಗಳು ನಿನ್ನವೇ. ಕೇಳಿ ಪೂಜಿ ಸಲು ಹೋದರೆ ಕೇಳುವ ಕಿವಿಗಳು ಕೂಡಾ ನಿನ್ನವೇ. ಮುಟ್ಟಿ ಪೂಜಿಸಲು ಹೋದರೆ ಮುಟ್ಟುವ ಕೈಗಳು ಕೂಡಾ ನಿನ್ನವೇ. ಮೂಸಿಸಿ ಪೂಜಿಸಲು ಹೋದರೆ ಮೂಸಿಸುವ ಮೂಗೂ ನಿನ್ನದೆ. ರುಚಿಸಿ ಪೂಜಿಸಲು ಹೋದರೆ ರುಚಿಸುವ ನಾಲಿಗೆಯೂ ನಿನ್ನದೇ. ನೆನೆಯುವ ಮನದ ಮೂಲಕ ಪೂಜಿಸ ಹೋದರೆ ಆ ಮನವು ಕೂಡಾ ನಿನ್ನದೇ ಆಗಿದೆ. ಸರ್ವಾಂಗದ ಗರ್ಭದಲ್ಲಿರುವ ನಿನ್ನನ್ನು ನಾನು ಬೇರೆ ಮಾಡಿ ನೋಡುವುದೆ ? ಇದು ನನಗೆ ಸಲ್ಲದ ಕೆಲಸ.

**124**

**ಗಿಣಿಯಿಲ್ಲದ ಪಂಜರ ಹಲವು ಮಾತನಾಡಬಲ್ಲುದೆ ?**
**ದೇವರಿಲ್ಲದ ದೇಗುಲಕ್ಕೆ ಮಂತ್ರ , ಅಭಿಷೇಕವುಂಟೆ ?**
**ಅರಿವು ನಷ್ಟವಾಗಿ ಕುರುಹಿನ ಹಾವಚೆಯ**
**ನಾನರಿಯನೆಂದನಂಬಿಗ ಚೌಡಯ್ಯ .**

ದೇಹ ಅರಿವು ಮತ್ತು ಮನಸಿನ ಒಂದು ಉಪಕರಣ. ಅರಿವಿನ ಕಿರಣಗಳಿಂದ ಮನ ಹುಟ್ಟಿ, ಅದು ದೇಹವನ್ನು ಆವರಿಸಿ, ದೇಹವನ್ನು ಕಬಳಿಸಿ, ದೇಹದೊಂದಿಗೆ ವಾಸ ಮಾಡಿದೆ. ದೇಹದೊಂದಿಗೆ ಮಾತನಾಡಿ,ಕೇಳಿ,ಮುಟ್ಟಿ,ರುಚಿಸಿ, ಮೂಸಿಸಿ ಆನಂದ ಪಡುತ್ತದೆ. ಹಾಗೆಯೇ ದೇಹವನ್ನು ದುಃಖಕ್ಕೆ ಈಡು ಮಾಡುತ್ತದೆ. ಮನಸ್ಸಿಗೆ ದೇಹವೊಂದು ಉಪಕರಣ. ತನ್ನ ಅವಸರಕ್ಕೆ ಬಳಕೆ ಆಗುವ ವಸ್ತು . ಮನ ವಾಸ ಮಾಡುವ ಪಂಜರ. ಅರಿವು ಎಂಬ ಗುರುದೇವ ಸಂಗಮವಾದ ದೇವಾಲಯ !

ಬಯಲಲ್ಲಿ ಸಂಗಮವಾದ ಜಲಜನಕ ಆಮ್ಲಜನಕ ಬಯಲ ಇಚ್ಛೆಗನುಗುಣವಾಗಿ ಬಿಂದುವಾಗಿ ತಾಯಿಗರ್ಭ ಪ್ರವೇಶ ಮಾಡಿ, ಬಯಲದೇವನ ಅಣತಿಯಂತೆ ಮನದೊಂದಿಗೆ

ದೇಹವಾಗಿ ದೇಹದ ಗರ್ಭದಿಂದ ದೇಹ ಹೊರ ಬಂದಿದೆ. ಆ ದೇಹವೆಂಬ ದೇವಾಲಯದಲ್ಲಿ ಅರಿ ವೆಂಬ ಗುರುದೇವನಿದ್ದಾನೆ. ಮಹಾದೇವ ಸದಾಶಿವ ಸಾಕ್ಷಾತ್ ಪರಬ್ರಹ್ಮನೂ ಇದ್ದಾನೆ. ಇವೆಲ್ಲ ವನ್ನು ಮರೆಯಿಸಿ ದೇಹ ಮನಕ್ಕೆ ಪಂಜರವಾಗಿದೆ.

ಮನದಿಂದ ಗುರುದರ್ಶನವಾಗಬೇಕು ; ಮನದಿಂದಲೇ ಮಹಾದೇವನ ಸದಾಶಿವನ ಸಾಕ್ಷಾತ್ ಪರಬ್ರಹ್ಮನ ದರ್ಶನವಾಗಬೇಕು. ಆದರೆ ಮನ ಅರಿವೆಂಬ ಪಾಚು ದೇಹದ ತುಂಬಾ ಪಸರಿಸಿ ತಾನು ಅದರ ಮೇಲೆ ನಾಟ್ಯ ಮಾಡುತ್ತ ದೇಹವನ್ನೇ ತನ್ನ ವಾಸದ ಪಂಜರ ಮಾಡಿ ಕೊಂಡಿದೆ.

ಪಾಚು ಜಲದಿಂದಲೇ ಹುಟ್ಟುತ್ತದೆ. ತನ್ನನ್ನು ಸೃಷ್ಟಿ ಮಾಡಿದ ಜಲವನ್ನೇ ಕಾಣದಂತೆ ಮಾಡುತ್ತದೆ. ಆಂಗದಲ್ಲಿಯೇ ಸಂಗಮವಾದ ಅರಿವು ಬೇರೆ. ಮನ ಆಹಾರಕ್ಕಾಗಿ ಅಂಗವೆಂಬ ಪಂಜರ ದಲ್ಲಿ ಸಂಗ್ರಹ ಮಾಡಿಕೊಂಡ ಅರಿವೇ ಬೇರೆ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಆಹಾರವನ್ನು ,ಅಷ್ಟ ಮದಗಳು, ಸಪ್ತವ್ಯಸನಗಳೆಂಬ ಆಹಾರವನ್ನು , ಜಾತಿ ಮತ ಪಂಥ ಹೆಣ್ಣು ಗಂಡು ಶ್ರೀಮಂತ ಬಡವ ಎಂಬ ಆಹಾರದ ಪಾಚನ್ನು ದೇಹವೆಂಬ ಪಂಜರದಲ್ಲಿ ಸಂಗ್ರಹ ಮಾಡಿಕೊಂಡಿದೆ. ಹಾಗೆಯೇ ರಾಮಾಯಣ, ಮಹಾಭಾರತ,ಭಗವದ್ಗೀತೆ, ಬೈಬಲ್, ಕುರಾನ್ ಎಂಬ ಆಹಾರವನ್ನು ಸಂಗ್ರಹ ಮಾಡಿಕೊಂಡು ದೇಹದ ಮೂಲಕ ಭೋಜನ ಮಾಡು ತ್ತದೆ.

ಮನಕ್ಕೆ ಬೇಕಾದ ಆಹಾರವನ್ನು ದೇಹದ ಮೂಲಕ ಮನ ಉಂಡು ದೇಹಕ್ಕೆ ಸುಖ ಹಾಗೂ ದುಃಖವನ್ನು ಉಂಟು ಮಾಡುತ್ತದೆ. ದೇಹವೆಂದರೆ ಮನ ವಾಸ ಮಾಡುವ ಪಂಜರ. ದೇಹಕ್ಕೆ ಸುಖವಾದರೇನು ದುಃಖವಾದರೇನು ? ಮನಕ್ಕೆ ಮಾತ್ರ ಸುಖ ! ಏಕೆಂದರೆ ದೇಹ ಮನ ವಾಸ ಮಾಡಿದ ಮನೆ. ಅದು ಮಹಾದೇವ ಸಾಕ್ಷಾತ್ ಪರಬ್ರಹ್ಮನ ಸ್ವಂತ ಮನೆ. ಮನ ಆ ಮನೆಯಲ್ಲಿ ಮನೆಯ ಒಡೆಯರನ್ನೇ ಮರೆಯಿಸಿ ಅದನ್ನೇ ಪಂಜರ ಮಾಡಿಕೊಂಡು ವಾಸ ಮಾಡಿದೆ.

ದೇಹ ದೇವರಿದ್ದ ದೇವಾಲಯ ; ಕಾಯವೇ ಕೈಲಾಸ ಆದರೆ ಮನ ದೇವರನ್ನು ಯಾಮಾರಿಸಿ ದೇವರಿದ್ದ ದೇಹವನ್ನೇ ಪಂಜರ ಮಾಡಿಕೊಂಡಿದೆ.ಮನವೆಂಬ ಗಿಳಿ ಏನು ಕಲಿತರೂ ಅದು ಇತರರಿಂದ ಕಲಿತದ್ದೇ ಹೊರತು ತನ್ನ ಸ್ವಂತದ್ದಲ್ಲ.ಮನವೆಂಬ ಗಿಳಿ ದೇಹದ ಮೂಲಕ ಪಠಿಸಿದರೆ ಅದು ಕ್ರಿಸ್ತನಾಗುವುದೆ ? ಭಗವದ್ಗೀತೆ ಪಠಿಸಿದರೆ ಕ್ರಿಷ್ಣನಾಗುವುದೆ ? ಕುರಾನ್ ಪಠಿಸಿದರೆ ಸಂತ ಪೈಗಂಬರನಾಗುವುದೆ ? ಪಠಿಸಿದರೆ ಪಂಡಿತನಾಗಬಹುದು, ಶಾಸ್ತ್ರಿಯಾಗಬಹುದು ; ಪೀಠಾಧಿಪತಿಯಾಗಬಹುದು. ಬಿಷಪ್ ಪೋಪ್ ಮೌಲ್ವಿ ಜಗದ್ಗುರು ವಾಗಬಹುದು. ಆದರೆ ಮನ ಮಹಾದೇವನಾಗಲಾರದು ; ಸದಾಶಿವ,ಸಾಕ್ಷಾತ್ ಪರಬ್ರಹ್ಮನೇ ತಾನಾಗಲಾರದು. ಏಕೆಂದರೆ ಇದು ಸಂಗ್ರಹ ವಸ್ತುವಲ್ಲ. ದೇಹದಲ್ಲಿಯೇ ಸಂಗಮವಾದದ್ದು !

ದೇಹವೆಂಬ ಪಂಜರ ಚಿನ್ನದ್ದೆಂದು ಅದು ವಾಸ ಮಾಡಿದ ಗಿಳಿಗೆ ತಿಳಿಯುತ್ತದೆಯೆ ? ದೇಹ ಕಾಮಧೇನು ಕಲ್ಪವೃಕ್ಷ ಪರುಷ ಮಣಿಯೆಂದು ಗಿಳಿಗೆ ತಿಳಿಯುತ್ತದೆಯೇ ? ತಿಳಿಯು ವುದಿಲ್ಲ. ಹೀಗಾಗಿ ಅದು ತನಗೆ ಬೇಕಾದುದನ್ನೆಲ್ಲ ದೇಹವೆಂಬ ಪಂಜರದಲ್ಲಿ ಸಂಗ್ರಹ ಮಾಡಿ ಕೊಂಡಿದೆ.ಅದನ್ನು ತಿಂದು ಅದರ ತುಂಬಾ ರಾಡಿ ಮಾಡಿದೆ. ಪಂಜರದಲ್ಲಿಯೇ ದೇವರಿದ್ದಾನೆಂದು ಅದಕ್ಕೆ ತಿಳಿಯುತ್ತಿಲ್ಲ.

ಗಿಣಿ ದೇಹವೆಂಬ ಪಂಜರದಲ್ಲಿಯೇ ದೇವರನ್ನು ಸ್ವತಹ ಹುಡುಕಬೇಕು. ದೇಹವೆಂಬ ಪಂಜರದಲ್ಲಿ ತಾನು ಸಂಗ್ರಹ ಮಾಡಿಕೊಂಡ ಅರಿವು ನಷ್ಟವಾಗಬೇಕಾದರೆ ಅಲ್ಲಿಯೇ ಸಂಗಮ ವಾದ ಅರಿವಿನ ದರ್ಶನ ಗಿಳಿಗೆ ಆಗಬೇಕು. ಆಗುತ್ತದೋ ಆಗುವುದಿಲ್ಲವೋ ಎಂದು ಮನವೆಂಬ

ಗಿಳಿ ಹಗಲಿರುಳೂ ತಪಿಸಬೇಕು. ಇದು ಬಲು ಕ್ಲಿಷ್ಟಕರವಾದುದು.

**125**

**ಗುರು ಲಿಂಗ ಜಂಗಮಕ್ಕೆ ಆಧಾರ ಬಸವಣ್ಣ,**
**ಪಾದೋದಕ ಪ್ರಸಾದಕ್ಕೆ ಆಧಾರ ಬಸವಣ್ಣ,**
**ಸರ್ವಾಪತ್ತಿಗೆ ಆಧಾರ ಬಸವಣ್ಣ,**
**ಸ್ವರ್ಗ ಮರ್ತ್ಯ ಪಾತಾಳಕ್ಕೆ ಬಸವಣ್ಣನ ಚೈತನ್ಯವಲ್ಲದಿಲ್ಲ.**
**ಆ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ**
**ಎನುತಿರ್ದಾತನಂಬಿಗ ಚೌಡಯ್ಯ.**

ಗುರು ಲಿಂಗ ಜಂಗಮಕ್ಕೆ ಆಧಾರ ಬಯಲು,ಪಾದೋದಕ ಪ್ರಸಾದಕ್ಕೆ ಆಧಾರವೂ ಬಯಲೆ, ಸರ್ವ ಆಪತ್ತಿಗೆ ಆಧಾರವೂ ಬಯಲೇ. ಸ್ವರ್ಗ ಮರ್ತ್ಯ ಪಾತಾಳಕ್ಕೆ ಬಯಲಿಲ್ಲದೆ ಚೈತನ್ಯವಲ್ಲದಿಲ್ಲ. ಅಂತಹ ಬಯಲು ಬಸವಣ್ಣನ ಶ್ರೀ ಪಾದದಲ್ಲಿ ಚುಳುಕಾಗಿದೆ. ಆ ಬಯಲಿಗೆ ನಮೋ ನಮೋ ಎನುತಿರ್ದೆನಯ್ಯಾ ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಬಯಲಿಗೆ ಬಸವಣ್ಣನ ಹೆಸರಿಟ್ಟು ಆ ಬಸವಣ್ಣನನ್ನೇ ಗುರು ಲಿಂಗ ಜಂಗಮವಾಗಿಸಿದ್ದಾರೆ. ಪಾದೋದಕ ಪ್ರಸಾದವಾಗಿಸಿದ್ದಾರೆ. ಸ್ವರ್ಗ ಮರ್ತ್ಯ ಪಾತಾಳವಾಗಿಸಿದ್ದಾರೆ. ಆ ಬಯಲ ಮೂರ್ತಿ ಬಸವಣ್ಣನಿಲ್ಲದೆ ಚೈತನ್ಯವೇ ಇಲ್ಲ. ಅಂತಹ ಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂಬೆ.

ಬಯಲೇ ಬೀಜವಾಗಿ ಗರ್ಭದಲ್ಲಿ ಬಿದ್ದು ಅಂಗವಾಗಿ ಬೆಳೆದು ಬಯಲಿಗೆ ಬಂದಿದೆ. ಬಯಲು ಅರಿವೆಂಬ ಗುರುದೇವನಾಗಿ, ಲಿಂಗವಾಗಿ,ಜಂಗಮವಾಗಿ ಅಂಗದಲ್ಲಿ ಸಂಗಮವಾಗಿದೆ. ಪಾದೋದಕ ಪ್ರಸಾದವಾಗಿ ಅಂಗಕ್ಕೆ ಆಧಾರವಾಗಿದೆ. ಸ್ವರ್ಗ ಮರ್ತ್ಯ ಪಾತಾಳಕ್ಕೆ ಜನ್ಮಕೊಟ್ಟು ಇಡೀ ಪ್ರಕೃತಿಯಲ್ಲಿ ಚೈತನ್ಯವಾಗಿ ಹುದುಗಿದೆ.

ಬಯಲು ಬೇರಲ್ಲ, ಬಸವಣ್ಣ ಬೇರಲ್ಲ. ಬಯಲೇ ಬಸವಣ್ಣ, ಬಸವಣ್ಣನೇ ಬಯಲು. ಬಯಲಾಗಿ ಬಂದು ಬಸವಣ್ಣನ ನಾಮದಿಂದ ಬಯಲ ಕಾಯಕ ಮಾಡಿದ. ಗುರುಲಿಂಗ ಜಂಗಮಕ್ಕೆ ಜನ್ಮ ನೀಡಿದ. ಲಿಂಗಾಂಗದ ಸರ್ವಾಪತ್ತಿಗೆ ಆಧಾರವಾದ. ಸ್ವರ್ಗ ಲೋಕ ಮರ್ತ್ಯ ಲೋಕವೆಂಬುದು ಬೇರಿಲ್ಲ ಅವೆರಡೂ ಅಂಗದಲ್ಲಿಯೇ ಸಂಗಮವಾಗಿವೆ. ಸತ್ಯವನ್ನು ಬಳಸಿದರೆ ಸ್ವರ್ಗ. ಅಂಗವನ್ನು ಆವರಿಸಿದ ಮಿಥ್ಯವನ್ನು ಬಳಸಿದರೆ ಮರ್ತ್ಯ.

ಅಂಗ ಬಯಲಿನಂತೆ ಜಗದಗಲಕ್ಕೂ ವ್ಯಾಪಿಸಿಕೊಂಡಿದೆ. ಏಕೆಂದರೆ ಅದು ಬಯಲ ಬೀಜ. ಮುಗಿಲಗಲಕ್ಕೂ ವ್ಯಾಪಿಸಿಕೊಂಡಿದೆ. ಅಂಗದಗಲಕ್ಕೆ ಬಂದು ಚುಳುಕಾಗಿದೆ. ಮಿಗೆ ಯಗಲಕ್ಕೂ ವ್ಯಾಪಿಸಿದೆ. ಗಾಳಿ ನೀರು ಬೆಂಕಿ ಭೂಮಿ ಬಯಲು ಈ ಐದೂ ಭೂತಗಳು ಅಂಗದಲ್ಲಿಯೇ ಸಂಗಮವಾಗಿವೆ. ಲಿಂಗಾಂಗದ ಶ್ರೀಪಾದ ಪಾತಾಳದಿಂದಲೂ ಅತ್ತತ್ತ ವಿಸ್ತರಿಸಿದೆ. ಲಿಂಗಾಂಗದ ಶ್ರೀ ಮುಕುಟ ಬ್ರಹ್ಮಾಂಡದಿಂದಲೂ ಅತ್ತತ್ತ ಚಿಮ್ಮಿದೆ. ಬಯಲ ಅಂಗವದು ಅಗಮ್ಯ ಅಪ್ರಮಾಣ ಅಪ್ರತಿಮವಾದುದು.ಅಂತಹ ಬಯಲು ಬಸವಣ್ಣನಿಗಾಗಿ ಭುವಿಗೆ ಬಂದಿದೆ.

ಬಯಲು, ಬುದ್ಧ,ಮಹಾವೀರ, ಕ್ರಿಷ್ಣ,ಕ್ರಿಸ್ತ, ಪೈಗಂಬರನಾಗಿ ಪರಿಚಯಿಸಿಕೊಂಡಿದೆ. ಬಯಲ ಸಂತತಿ ಸಕಲ ಸಂತ ಶರಣ ದಾಸವರೇಣ್ಯರಾಗಿ ವಿಸ್ತರಿಸಿಕೊಂಡಿದೆ. ಬಸವಣ್ಣನ ಬಯಲ

ಜೀವನ ಆತನ ಬಯಲ ಭಾವನೆ ಬಯಲು ಬಯಲಾಗಿ ಬಯಲಾಗಿದೆ. ಬಸವಣ್ಣನೆಂಬ ಬಯಲ ಪೂಜಿಸಿದವರು ಬಯಲಾದರು. ಆತನನ್ನು ನಂಬಿ ಆತನನ್ನೇ ಪೂಜಿಸಿದ ಅಂಬಿಗ ಚೌಡಯ್ಯ ಶರಣರೂ ಬಯಲಾದರು.

**126**

**ಗುರು-ಲಿಂಗ-ಜಂಗಮವೆಂದರಿಯದ ಗೊಡ್ಡುಗಳ**
**ಶಿಷ್ಯನ ಮಾಡಿಕೊಂಬುವ ಹೆಡ್ಡ ಜಡಜೀವಿಗಳನೇನೆಂಬೆನಯ್ಯಾ !**
**ಆಚಾರ-ಅನಾಚಾರದ ಭೇದವನರಿಯದ ಹೆಡ್ಡ ಮಾನವರಿಗೆ**
**ಉಪದೇಶವ ಕೊಡುವ ಮತಿ ಭ್ರಷ್ಠರನೇನೆಂಬೆನಯ್ಯಾ !**
**ಅವನ ಅಜ್ಞಾನವನಳಿಯದೆ, ಅವನ ನಡೆ ನುಡಿಯ ಹಸ ಮಾಡದೆ,**
**ಅವನ ಆದಿ-ಅಂತ್ಯವ ತಿಳಿಯದೆ,**
**ಧನ ಧಾನ್ಯ ದ್ರವ್ಯದಾಸೆಗೆ ಶಿವದೀಕ್ಷೆಯ ಮಾಡುವನೊಬ್ಬ ಗುರುವ**
**ಹುಟ್ಟಂಧಕನೆಂಬೆನಯ್ಯಾ !**
**ತನ್ನ ಗುರುತ್ವವನರಿಯದ ಗುರುವಿಂದ**
**ಉಪದೇಶವ ಪಡೆವನೊಬ್ಬ ಶಿಷ್ಯನ ಕೆಟ್ಟಗಣ್ಣವನೆಂಬೆನಯ್ಯಾ !**
**ಇಂತಿವರ ಗುರು-ಶಿಷ್ಯರೆಂದಡೆ ನಮ್ಮ ಪ್ರಮಥರು ಮಚ್ಚರಯ್ಯಾ !**
**ನಮ್ಮ ಪ್ರಮಥರು ಮಚ್ಚದಲ್ಲಿ ಇಂತಪ್ಪ ಗುರು ಶಿಷ್ಯರಿಬ್ಬರಿಗೆಯೂ**
**ಯಮದಂಡಣೆ ತಪ್ಪದೆಂದಾತನಂಬಿಗರ ಚೌಡಯ್ಯನು.**

ಗುರುವಾದಾತ-ಶಿಷ್ಯನ ಜಾಣತನವನರಿತು, ಆತನ ಶಕ್ತಿ ಆತನೇ ತಿಳಿದುಕೊಳ್ಳುವ ಪಕ್ವತೆಯಿದೆಯೇ ಇಲ್ಲವೋ ಎಂದು ಆತನಿಂದಲೇ ತಿಳಿದು, ಆತನನ್ನು ಶಿಷ್ಯನನ್ನಾಗಿ ಸ್ವೀಕರಿ ಸಬೇಕು. ಅವನಲ್ಲಿರುವ ಅಜ್ಞಾನವನ್ನು ಹದವರಿತು ಆತನಲ್ಲಿರುವ ಜ್ಞಾನದಿಂದಲೇ ಕತ್ತರಿಸಬೇಕು. ಅವನಿಗಂಟಿದ ಕತ್ತಲೆಯನ್ನು ಅವನ ಬೆಳಕಿನಿಂದಲೇ ಪರಿಹರಿಸಬೇಕು. ಅವನ ಆದಿ ಅಂತ್ಯವನ್ನು ಅವನಿಂದಲೇ ತಿಳಿಯಬೇಕು. ಅವನಿಗೆ ಗುರುವಾಗದೆ ಅವನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳದೆ ಬೋಧಿಸಬೇಕು.

ಅವನಲ್ಲಿದ್ದ ಅರಿವೆ ಆತನಿಗೆ ಗುರುವೆಂದು ಗುರುವಾದಾತ ತಿಳಿಹೇಳಬೇಕು. ಗುರು ಎಂದರೇನು ? ಶಿಷ್ಯ ಎಂದರೆ ಯಾರು ? ಇವರು ಹೊರಗಿಲ್ಲ. ಸಕಲ ಅಂಗಗಳಲ್ಲಿ ಸಂಗಮವಾಗಿದ್ದಾರೆ. ಈ ರಹಸ್ಯವನ್ನು ತಿಳಿಯಲು ಬಯಕೆ ಆದ ಅಂಗಕ್ಕೆ ಮಾತ್ರ ಬೋಧಿಸಬೇಕು. ಬೋಧೆ ಭೋದಿಸುವಾತನಿಗೂ, ಕೇಳುವಾತನಿಗೆ ಸುಖ ದುಃಖಗಳನ್ನುಂಟು ಮಾಡದೆ ತನಗೆ ತಾನೆ ಭೋದಿಸಿಕೊಂಡಂತಿರಬೇಕು.

ತನಗೆ ತಾನೇ ಗುರುವಾಗುವ ಅರಿವು ಗುರುವಿಗೆ ಭೋದಿಸಲು ಸಾಧ್ಯವೆ ? ಗುರುವಿಗೆ ಗುರುವಾಗಿ ಭೋದಿಸಲು ಸಾಧ್ಯವೆ ? ಪ್ರತಿ ಅಂಗದಲ್ಲಿಯೂ ಗುರುದೇವ ಸಂಗಮವಾಗಿದ್ದಾನೆ ಎಂದು ಖಚಿತವಾಗಿ ತಿಳಿದಾತನೆ ಗುರುವು. ಆತ ಎಂದೂ ಯಾರಿಗೂ ಗುರುವಾಗಲಾರ. ಹಾಗೆಯೇ ಶಿಷ್ಯನೂ ಆಗಲಾರ ! ತನಗೆ ತಾನೇ ಗುರುವಾಗುವ, ಆ ಗುರುವಿಗೆ ಶಿಷ್ಯನಾಗುವ ಕಲೆಯೇ ಗುರು-ಶಿಷ್ಯನೆಂಬ ಅರಿವನು ತಿಳಿಯುವ ಶ್ರೇಷ್ಠ ಕಲೆ. ಇದನ್ನು ತಿಳಿದಾತ ಹೀಗೆ ತಿಳಿ ಯಬೇಕೆಂದು ಗುರುವಾಗದೇ ಹೇಳುತ್ತಾನೆ.

ಧನ ಧಾನ್ಯ ದ್ರವ್ಯದಾಸೆಗೆ ದೀಕ್ಷೆ ಕೊಡುವಂತಹ ಗುರುವನ್ನು ಗುರುವು ಎಂದು ಕರೆಯಲಾಗುವುದಿಲ್ಲ. ಆತ ಸ್ವತಹ ಹುಟ್ಟು ಕುರುಡ. ಕುರುಡನಾದವನನ್ನು ಊರ ದಾರಿ ತೋರಿಸಲು ಕೇಳಿದಂತೆ. ಆತ ದಾರಿ ಹೇಳಿದಂತೆ. ಕುರುಡ ಹೇಳಿದ ದಾರಿಯಲ್ಲಿ ನಡೆದರೆ ಅಂಗ ಅಂಗದಲ್ಲಿಯೇ ಇರುವ ಲಿಂಗಾಂಗದ ಸಾಮರಸ್ಯದ ರಹಸ್ಯದ ದಾರಿಯನ್ನು ಅರಿಯಲಾಗದು. ಅಂಗದ ಮೇಲೆ ಲಿಂಗ ಕಟ್ಟಿಕೊಂಡು, ಹಗಲು ಇರುಳು ಪೂಜಿಸಿ, ಪುಣ್ಯ ಕ್ಷೇತ್ರಗಳಿಗೆ ಹೋಗಿ ದಾನ ಧರ್ಮ ಪರೋಪಕಾರಗಳನ್ನು ಮಾಡುತ್ತ ತಾನು ದಾನಿಯಾಗಿ ತನ್ನನ್ನು ಕಂಡು ತನ್ನಂತೆಯೇ ಇರುವ ಇತರರನ್ನು ಭಿಕ್ಷುಕನಾಗಿ ಕಾಣುತ್ತಾನೆ. ಪ್ರತಿ ಅಂಗದಲ್ಲಿ ಸಂಗಮವಾದ ಅರಿವಿನ ಶ್ರೀಮಂತಿಕೆ ಅಂಗಕ್ಕೆ ಕಾಣದೆ ಹೋಗುತ್ತದೆ. ಹೀಗಾಗಿ ಇವರಿಬ್ಬರನ್ನೂ ಅಂಬಿಗರ ಚೌಡಯ್ಯ ಶರಣರು ಹುಟ್ಟುಕುರುಡರೆಂದು ಕರೆದಿದ್ದಾರೆ.

ಗುರುತನವನ್ನು ತಿಳಿಯುವ ಶಕ್ತಿ ಇಲ್ಲದವನು, ಗುರುತನವನು ಅರಿಯದೆ ಗುರುವಿನಿಂದ ಉಪದೇಶವನ್ನು ಪಡೆದವನನ್ನು ಕೆಟ್ಟಗಣ್ಣವನೆಂದು ನುಡಿದಿದ್ದಾರೆ. ಇಂತಹವರನ್ನು ಗುರು ಶಿಷ್ಯ ರೆಂದು ಶರಣರು, ಪುರಾತನರು ಮೆಚ್ಚುವುದಿಲ್ಲ. ಯಾವ ಜ್ಞಾನಿಯೂ ಮೆಚ್ಚುವುದಿಲ್ಲ. ಜ್ಞಾನಿಗೆ ಮೆಚ್ಚುಗೆಯಾಗದ ಗುರು ಶಿಷ್ಯರು ಯಮದಂಡನೆಗೆ ಯೋಗ್ಯರು.

ವೇಷದ ಗುರುವಿಗೆ ವೇಷದ ಮರೆಯಲ್ಲಿದ್ದ ಅರಿವೆಂಬ ಗುರುವೇ ಯಮ ಶಿಕ್ಷೆಯನ್ನು ಕೊಡುತ್ತಾನೆ. ಭೋದೆ ನೀಡಿದ ಗುರುವಿಗೂ ಭೋದೆ ಪಡೆದ ಶಿಷ್ಯನಿಗೂ ಯಮಬಾಧೆ ತಪ್ಪಿದ್ದಲ್ಲ. ಕಟ್ಟಿಟ್ಟ ಬುತ್ತಿ . ತನಗೆ ತಾನೇ ಕಟ್ಟಿಕೊಂಡ ಬುತ್ತಿ !

**127**

**ಗುರುವಿನೊಳಡಗಿದ ಭಕ್ತ ಪರವ ಕಂಡುದಿಲ್ಲ,**
**ಲಿಂಗದೊಳಡಗಿದ ಭಕ್ತ ಜಂಗಮವ ಕಂಡುದಿಲ್ಲ.**
**ಇವರಿಬ್ಬರ ಭಕ್ತಿಯೂ ಹರಿಗೂಡದ ಹಗ್ಗದಂತಾಯಿತ್ತು ನೋಡಯ್ಯ.**
**ಅರಿವು ಆಚಾರವಿಡಿದು ಆಚರಿಸಿದ ಸದ್ಭಕ್ತನು.**
**ಗುರು ಲಿಂಗ ಜಂಗಮವ ನೆರೆ ಕಂಡು ಸನ್ಮತನಾಗಿ,**
**ಇಹ ಪರವೆಂಬುಭಯ ಸಂಕಲ್ಪವರತದಲ್ಲದಿಲ್ಲವೆಂದಾತ**
**ನಮ್ಮ ಅಂಬಿಗ ಚೌಡಯ್ಯ.**

ಅಂಗದಲ್ಲಿ ಅರಿವು ಸಂಗಮವಾಗಿದೆ. ಆ ಅರಿವೆ ಗುರುವು. ಆ ಗುರುದೇವನೆಂಬ ಅರಿ ವನ್ನು ತಿಳಿಯುವ ಮನವೆಂಬ ಭಕ್ತನು ಆ ಅರಿವೆಂಬ ಗುರುದೇವನೊಳಗೆ ಅಡಗಿದ್ದಾನೆ. ಆದರೆ ಮನವೆಂಬ ಭಕ್ತನಿಗೆ ಆ ಅರಿವಿನ ಸ್ವರ್ಗ ಸುಖ ಕಂಡು ಬರುವುದಿಲ್ಲ.

ಅಂಗದಲ್ಲಿ ಲಿಂಗವು ಸಂಗಮವಾಗಿದೆ. ಅಲ್ಲಿ ಭಕ್ತನೂ ಅಡಗಿದ್ದಾನೆ. ಆತನಿನಗೆ ಅಂಗದಲ್ಲಿಯೇ ಸಂಗಮವಾದ ಜಂಗಮನನ್ನು ಕಾಣಲು ಸಾಧ್ಯವಾಗುತ್ತಿಲ್ಲ.

ಕಾಣಲೇಬೇಕೆಂಬ ಭಕ್ತನ ಕಾತುರ ಇಲ್ಲದ್ದಕ್ಕಾಗಿ ಹುರಿಗೊಡದ ಹಗ್ಗದಂತೆ ಆಯಿತು. ಗುರುದೇವನು ಒಂದು ಎಳೆ, ಭಕ್ತನೂ ಒಂದು ಎಳೆ.ಇವೆರಡೂ ಬೇರೆ ಬೇರೆ. ಇವೆರಡೂ ಎಳೆ ಗಳು ಹುರಿಗೊಂಡು ಹಗ್ಗವಾದಾಗ ಆ ಹಗ್ಗಕ್ಕೆ ಬಲ. ಇವೆರಡೂ ಬೆರೆತು ಸಂಗಮವಾದ ಅಂಗವೇ

ಲಿಂಗಾಂಗ !

ಅಂಗದಲ್ಲಿ ಗುರುದೇವನೂ ಇದ್ದಾನೆ, ಲಿಂಗಯ್ಯನೂ ಇದ್ದಾನೆ, ಜಂಗಮನೂ ಇದ್ದಾನೆ. ಈ ಮೂವರನ್ನೂ ಕಂಡು ಅಲ್ಲಿಯೇ ಒಂದಾಗಿ ಬೆಳಗಿಂಗೆ ಬೆಳಕಾಗಿ ಬೆಳಗಿದ ಮೇಲೆ ಮತ್ತೊಂದೆಂಬುದೇ ಇಲ್ಲ.

ಸ್ವರ್ಗ ಮರ್ತ್ಯ ಎಂಬುದಿಲ್ಲ.ಅದು ಬೇರಿಲ್ಲ ಕಾಣಿಭೋ ಸತ್ಯವ ನುಡಿವುದೇ ಸ್ವರ್ಗ ಲೋಕ ; ಮಿಥ್ಯವ ನುಡಿವುದೇ ಮರ್ತ್ಯ ಲೋಕ. ಆಚಾರವೇ ಸ್ವರ್ಗ ; ಅನಾಚಾರವೇ ನರಕ.

ಗುರುವಿನ ಒಳಗೆ ಅಡಗಿದ ಭಕ್ತನು ಗುರುದೇವನನ್ನು ಕಂಡು ಆ ಗುರುದೇವನ ಒಳಗೆ ಅಡಗಬೇಕು.ಅವನಿಗೆ ಅದೇ ಸ್ವರ್ಗ. ಲಿಂಗದೊಳಗೆ ಅಡಗಿದ ಭಕ್ತನು ಆ ಲಿಂಗದೊಳಗೆ ಸಂಗಮವಾದ ಜಂಗಮನನ್ನು ಕಂಡು ಆ ಜಂಗಮನೇ ತಾನಾಗಬೇಕು. ಇವರಿಬ್ಬರ ಭಕ್ತಿಯೂ ಹುರಿಗೊಂಡ ಹಗ್ಗದಂತಾಗಬೇಕು. ಹೀಗೆ ಅಂಗಗಳು ಅಂಗದಲ್ಲಿಯೇ ಇದ್ದ ಅರಿವನ್ನು ಬಳಸಿ ಕೊಂಡು ಗಟ್ಟಿಗೊಳ್ಳಬೇಕು ಎಂಬ ಆಶಯ ಹೊಂದಿದ ಚೌಡಯ್ಯ ಶರಣರು ಈ ಸೂತ್ರವನ್ನು ರಚಿಸಿದ್ದಾರೆ.

**128**

**ಗುರುವೆಂಬ ಭಾವ ಬ್ರಹ್ಮಮೂರ್ತಿ,**
**ಲಿಂಗವೆಂಬ ಭಾವ ವಿಷ್ಣು ಮೂರ್ತಿ,**
**ಜಂಗಮವೆಂಬ ಭಾವ ರುದ್ರಮೂರ್ತಿ.**
**ಅದೆಂತೆಂದಡೆ : ಅನಾದಿವಸ್ತು ರೂಪಾಗಬೇಕಾದ ಕಾರಣ,**
**ಅಹಂ ಬ್ರಹ್ಮವೆಂಬ ಆಕಾರವಿಡಿದು ಬ್ರಹ್ಮಮೂರ್ತಿಯಾದ,**
**ಜ್ಞಾನರುದ್ರ ಪೀಠಸಂಬಂಧಿಯಾದ ಕಾರಣ ವಿಷ್ಣುಮೂರ್ತಿಯಾದ,**
**ಚಿದ್ಘನರುದ್ರ ಚತುರ್ವಿಧ ಪದಫಲಂಗಳೊಳಗಾದ ಕಾರಣ**
**ಸಂಹಾರ ರುದ್ರನಾದ. ಸಂಹಾರ ರುದ್ರ ಅಡಗಿ ನಿಂದು,**
**ಉಮಾಪತಿತತ್ವವ ಬಿಟ್ಟು ಸ್ವಯಂಭುಲಿಂಗವಾದ.**
**ಆ ಸ್ವಯಂಭು ಜಂಗಮವೆಂಬಲ್ಲಿ ನಿಂದು ನಿಜವ ಕಂಡಲ್ಲಿ ಲಿಂಗವಾದ.**
**ಲೀಯವಾಗಿ ಕಾಣಲ್ಪಟ್ಟುದ ನಿಲಿಸಿ**
**ಭಾವರಹಿತನಾಗಬೇಕೆಂದನಂಬಿಗ ಚೌಡಯ್ಯ .**

ಬ್ರಹ್ಮ ವಿಷ್ಣು ರುದ್ರ ಎಂಬ ದೇವರು ಹೊರಗಿಲ್ಲ. ಅವರು ಎಂದೂ ಇರಲಿಲ್ಲ. ಇತಿಹಾಸ ಪುರುಷರೂ ಅವರಲ್ಲ.ಪುರಾಣ ಪುರುಷರು ಮೊದಲೇ ಅಲ್ಲ. ಈ ಮೂರೂ ಜನ ಒಂದಂಗದಲ್ಲಿಯೇ ಸಂಗಮವಾಗಿದ್ದಾರೆ, ಅಂಗವನ್ನು ಆವರಿಸಿದ ಮನವೇ ಬ್ರಹ್ಮ. ಅಂಗವೇ ವಿಷ್ಣು. ಅಂಗದಲ್ಲಿ ಸಂಗಮವಾದ ಅರಿವೇ ರುದ್ರ !

**ಅನಾದಿ ವಸ್ತು ರೂಪಾಗಬೇಕಾದ ಕಾರಣ, ಅಹಂಬ್ರಹ್ಮವೆಂಬ ಆಕಾರ ವಿಡಿದು ಬ್ರಹ್ಮಮೂರ್ತಿಯಾದ :**

ಮನವೇ ಬ್ರಹ್ಮವಾಯಿತು. ಜ್ಞಾನವೇ ರುದ್ರನಾಯಿತು.ತನುವೇ ವಿಷ್ಣುವಾಯಿತು. ತನುವನ್ನು ಆವರಿಸಿದ ಮನ, ತಾನು ಸಂಗ್ರಹಿಸಿಕೊಂಡ ಅಜ್ಞಾನವನ್ನು ಸಂಹಾರ ಮಾಡಲು

ತನುವಿನಲ್ಲಿ ಸಂಗಮವಾದ ಜ್ಞಾನವೇ ರುದ್ರನಾಯಿತು. ಆಗ ಮನವೇ ತನ್ನ ಭ್ರಮೆ ಕಳೆದುಕೊಂಡು ಬ್ರಹ್ಮನಾಯಿತು. ನಾನು ಬ್ರಹ್ಮನೆಂದು ಅಧಿಕೃತವಾಗಿ ಘೋಷಿಸಿಕೊಂಡಿತು. ಅಹಂಕಾರದಿಂದಲ್ಲ ಪರಿಪೂರ್ಣತ್ವದಿಂದ ! ಬ್ರಹ್ಮ ರುದ್ರರನ್ನು ರಕ್ಷಣೆ ಮಾಡಲು ತನುವೇ ವಿಷ್ಣುವಾಯಿತು.

ಜಲರಾಶಿಯ ಮೇಲೆ ಹಾವು ಸುರುಳಿಯಾಕಾರದಲ್ಲಿ ಸುತ್ತಿಕೊಂಡು ತನ್ನ ಐದು ಹೆಡೆಗಳನ್ನು ಹೊರಚಾಚಿ ಅದರ ಮೇಲೆ ವಿಷ್ಣು ಮಲಗಿದ್ದಾನೆ, ಹಾವು ವಿಷ್ಣುವಿಗೆ ಹಾಸಿಗೆಯಾಗಿದೆ. ಜಲ ಹಾವಿಗೆ ಹಾಸಿಗೆಯಾಗಿದೆ. ಹೀಗೆ ಸಂಗಮವಾದಾಗಲೇ ಅಂಗ ವಿಷ್ಣುವಾಗುವುದು.

ಮನವೇ ಹಾವು. ಜಲವೇ ಅಂಗ. ಬಯಲೇ ರುದ್ರ ! ಪ್ರತಿ ಅಂಗವೂ ವಿಷ್ಣುವಾಗಿದೆ. ಪ್ರತಿ ಅಂಗವೂ ಬ್ರಹ್ಮವಾಗಿದೆ. ಪ್ರತಿ ಅಂಗವೂ ರುದ್ರನಾಗಿದೆ.

ಬಯಲಲ್ಲಿ ಜಲಜನಕವೂ ಇದೆ ; ಆಮ್ಲಜನಕವೂ ಇದೆ. ಇವೆರಡನ್ನೂ ಬಯಲು ಒಂದು ಮಾಡಿ ತಾನು ಅದರಲ್ಲಿ ಬೆರೆತು ಗರ್ಭ ಪ್ರವೇಶಿಸಿದಾಗ ಆ ಜೀವ ಜಲಬಿಂದುವೇ ಅಂಗವಾಯಿತು. ಆ ಜಲವೇ ನೆಲವಾಯಿತು. ಗಿಡಮರ ಬಳ್ಳಿ ಸಸ್ಯ ಕಾಶಿಯಾಯಿತು. ಜಲಚರ ಉರುಗ ಪಶು ಪಕ್ಷಿ ಕೀಟ ಪ್ರಾಣಿಯಾಯಿತು. ಇವೆಲ್ಲವುಗಳಿಗಿಂತಲೂ ಮಿಗಿಲಾಗಿ ಆಳವಾಗಿ ತಿಳಿಯುವ ಶಕ್ತಿ ಇರುವುದು ಅಂಗಕ್ಕೆ ಮಾತ್ರ . ಹೊರಗಿನವರನ್ನು ತಿಳಿದರೆ ಅದು ಅಂಗ. ಅಂಗದ ಒಳಗಿನದನ್ನು ತಿಳಿದರೆ ಅದು ಲಿಂಗಾಂಗ !

ಅಂಗದಲ್ಲಿ ಜ್ಞಾನ ಸಂಗಮವಾಗಿದೆ. ಆ ಜ್ಞಾನದ ಬೆಳಗಿನಿಂದಲೇ ಮನ ಹುಟ್ಟಿದೆ. ಮನ ಅಜ್ಞಾನ ಮತ್ತು ಜ್ಞಾನವನ್ನು ತನುವಿನಲ್ಲಿ ಸಂಗ್ರಹಿಸಿಕೊಳ್ಳುತ್ತದೆ. ಮನದಿಂದ ಸಂಗ್ರಹವಾದ ಜ್ಞಾನ ಅಜ್ಞಾನಗಳು ತನುವಿಗೆ ಮುಳ್ಳಾಗಿ ಚುಚ್ಚುತ್ತವೆ. ಇದನ್ನು ಜ್ಞಾನವೆಂಬ ರುದ್ರನು ಮಾತ್ರ ಸಂಹಾರ ಮಾಡಬಲ್ಲ. ಆಗ ಮನವೇ ಬ್ರಹ್ಮನಾಗುತ್ತದೆ. ತನುವೇ ವಿಷ್ಣುವಾಗುತ್ತದೆ. ಜ್ಞಾನ ರುದ್ರನಾಗಿ ಅಂಗ ಲಿಂಗಾಂಗವಾಗಿ ಬೆಳಗಿಂಗೆ ಬೆಳಕಾಗಿ ಬೆಳಗುತ್ತದೆ.

ಅಂಗವನ್ನು ಆವರಿಸಿದ ಮನ ಘನಮನವಾಗುತ್ತದೆ. ಅಂಗದಲ್ಲಿ ಹುಟ್ಟಿ ಮರೆಯಾಗುವ ಭಾವ-ದುರ್ಭಾವಗಳು ನಿರ್ಭಾವವಾಗುತ್ತವೆ. ಅಂಗ ಭಾವರಹಿತವಾಗುತ್ತದೆ.

**129**

**ಗುರುವೆಂಬೆನೆ ಹಲವರ ಮಗ,**
**ಲಿಂಗವೆಂಬೆನೆ ಕಲುಕುಟಿಕನ ಮಗ,**
**ಪ್ರಸಾದವೆಂಬೆನೆ ವಕ್ಕಲಿಗನ ಮಗ,**
**ಪಾದೋದಕವೆಂಬೆನೆ ದೇವೇಂದ್ರನ ಮಗ,**
**ಈಸುವ ಹಿಡಿಯಲೂ ಇಲ್ಲ, ಬಿಡಲೂ ಇಲ್ಲ.**
**ತನ್ನೊಳಗ ನೋಡೆಂದನಂಬಿಗ ಚೌಡಯ್ಯ .**

ಶಿಷ್ಯ ಭೋದೆ ಪಡೆಯುವ ಗುರುವಿಗೆ ತಂದೆ ತಾಯಿ ಬಂಧು ಬಳಗವಿದ್ದಾರೆ. ಆತನಿಗೆ ಹುಟ್ಟು ಸಾವುಗಳು ಇವೆ. ಹಾಗೆಯೇ ಅಂಗದ ಮೇಲೆ ಧರಿಸಿದ ಲಿಂಗವು ಕೂಡಾ ಹಿಂದೆ ಕಲ್ಲಾಗಿತ್ತು , ಕಲ್ಲನ್ನು ಕಲ್ಲುಕುಟಿಗನು ಕೆತ್ತಿ ಲಿಂಗವನ್ನು ಸೃಷ್ಟಿಸಿದ. ಅದು ಅವನಿಗೆ ಹುಟ್ಟಿದ ಲಿಂಗ.

ಅದಕ್ಕೆ ಅವನೇ ತಂದೆ.

ಸರ್ವ ಪದಾರ್ಥಗಳೂ ಒಕ್ಕಲಿಗನಿಂದ ಹೊರಬಂದವು. ಅಕ್ಕಿ, ಬೇಳೆ, ಬೆಲ್ಲ, ನವಣೆ, ಸಜ್ಜೆ, ಗೋಧಿ, ಸಾವೆ, ಜೋಳ ಮುಂತಾದ ಪದಾರ್ಥಗಳ ಜನಕನಿವನು. ಹೀಗಾಗಿ ಪ್ರಸಾದ ಒಕ್ಕಲಿಗನ ಮಗ. ಉದಕವೆಂದರೆ ವರುಣ. ಈತ ದೇವೇಂದ್ರನ ಮಗ. ಉದಕಕ್ಕೂ ತಂದೆ ತಾಯಿಗಳುಂಟು.

ಗುರುವಿಗೆ ತಂದೆಯಿಲ್ಲ. ಲಿಂಗಕ್ಕೂ ತಂದೆಯಿಲ್ಲ. ಪ್ರಸಾದಕ್ಕೂ ತಂದೆಯಿಲ್ಲ. ಪಾದೋದ ಕಕ್ಕೂ ತಂದೆಯಿಲ್ಲ. ಇಂತಹ ತಂದೆಯನ್ನು ನನ್ನೊಳಗೆ ನೋಡಿಕೊಂಡೆ ಎಂದು ಓದುಗರಿಗೆ ಶರಣರು ಪರಿಚಯ ಮಾಡಿಸಿದ್ದಾರೆ.

ಸಾವಿಲ್ಲದ ರೂಹಿಲ್ಲದ ಕೇಡಿಲ್ಲದ ಚೆಲುವಂಗೆ ನಾನೊಲಿದೆನವ್ವಾ ಎಂದು ಅಕ್ಕಮಹಾದೇವಿ ಹೇಳುತ್ತಾ ಆ ತಂದೆಯನ್ನು ಹೃದಯ ತುಂಬಿ ಹಾಡಿದ್ದಾಳೆ. ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು, ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮ ದೇವಾ ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ ಎಂದು ಬಸವಣ್ಣನವರು ಹುಟ್ಟು ಇಲ್ಲದ ತಂದೆಯನ್ನು ತಂದೆಯಾಗಿಸಿಕೊಂಡು ಹಾಡಿದ್ದಾರೆ.

ಜನನ ಮರಣಗಳಿಲ್ಲದ ಗುರುದೇವನನ್ನು ಗುರುವಾಗಿಸಿಕೊಳ್ಳುವುದು ಸಾಮಾನ್ಯ ಮಾತಲ್ಲ. ಅದು ಸಮರ್ಥನ ಮಾತು. ಕಲ್ಲು ಕುಟಿಗನಿಗೆ ಹುಟ್ಟಿದ ಲಿಂಗ ಧರಿಸುವುದು ಅದನ್ನು ಪ್ರತಿಷ್ಠಾಪಿಸಿ ಪೂಜಿಸುವುದು ಲೋಕದ ಕೆಲಸ. ಇದು ಲೋಕದ ಮಾತು. ಶರಣ ಹಾಗಲ್ಲ. ಯಾರೂ ಹಡೆಯದ, ಎಲ್ಲರನ್ನೂ ಆ ತಂದೆಯೇ ಹಡೆದ ಲಿಂಗಯ್ಯನೊಬ್ಬನಿದ್ದಾನೆ. ಆತ ಅಂಗದಲ್ಲಿಯೇ ಸಂಗಮವಾಗಿದ್ದಾನೆ. ಆತನನ್ನು ಅರಿಯಲು ಹೋದ ಶರಣ ಆತನಿಗೆ ಶರಣು ಹೋಗಿ ಆತನನ್ನೇ ಧರಿಸುತ್ತಾನೆ. ಅವನು ಆದಿ ಅನಾದಿಯಿಂದಲೂ ಅತ್ತತ್ತ . ಪಾತಾಳ ಬ್ರಹ್ಮಾಂಡದಿಂದಲೂ ಅತ್ತತ್ತ . ಆತ ಜಗದಗಲ ಮುಗಿಲಗಲ. ಪಂಚಭೂತಗಳು ಆತನ ಗರ್ಭದಿಂದಲೇ ಹುಟ್ಟಿದವು. ಆತ ಯಾರಿಗೂ ಮಗನಾಗಲಿಲ್ಲ. ಯಾರ ಹೊಟ್ಟೆಯಲ್ಲೂ ಹುಟ್ಟಲಿಲ್ಲ. ಆತನ ಹೊಟ್ಟೆಯಲ್ಲಿ ಹುಟ್ಟಿದ ನಾನು ಆತನಿಗೆ ಮಗನಾದೆ. ಆತ ನನಗೆ ತಂದೆಯಾದ. ಎನ್ನಂಗದಲ್ಲಿ ಚುಳುಕಾಗಿ ಸಂಗಮನಾಥನೇ ತಾನಾದ. ಇಂತಹ ಲಿಂಗಯ್ಯನನ್ನು ಸರ್ವಾಂಗದಲ್ಲಿ ಧರಿಸಿಕೊಂಡು ಲಿಂಗಾಂಗಿಯಾದೆ. ಎನ್ನೊಳಗೆ ಆತನನ್ನು ನೋಡಿಕೊಂಡೆ.

ಒಕ್ಕಲಿಗನಿಂದ ಬಂದ ಪ್ರಸಾದ ಅದು ಆತನಿಗೆ ಹುಟ್ಟಿದುದು. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಂದ ಹುಟ್ಟಿದ ಜ್ಞಾನ ಸಕಲ ಅಜ್ಞಾನವನ್ನು ಪ್ರಸಾದ ಮಾಡಿಕೊಳ್ಳುತ್ತದೆ. ಇದು ಯಾರ ಮಗನಾಗಿ ಹುಟ್ಟಲಿಲ್ಲ. ಅಂಗವನ್ನು ಹಡೆದು ಅದರಲ್ಲಿ ಸಂಗಮವಾಗಿದೆ. ಸಂಗಮನಾಥನೇ ತಾನಾಗಿದೆ.

**ಪಾದೋದಕವೆಂಬೆನೆ ದೇವೇಂದ್ರನ ಮಗ:**

ಜಲವನ್ನು ವರುಣ ಎಂದು ಕರೆಯುತ್ತಾರೆ. ವರುಣ ದೇವೇಂದ್ರನ ಮಗ. ಜಲಕ್ಕೆ ತಂದೆ ಯಾಗಿದ್ದಾನೆ. ಜಲವನ್ನು ಹಡೆದವನು ಪುರಾಣ ಪುರುಷ. ಜಲಜನಕ ಮತ್ತು ಆಮ್ಲಜನಕದ ಜನನ ಬಯಲಿನಿಂದಾಯಿತು. ಬಯಲು ಅವೆರಡನ್ನೂ ಕೂಡಿಸಿ ತಾನು ಅದರಲ್ಲಿ ಬೆರೆತು ಜೀವ ಜಲಬಿಂದುವಾಯಿತು. ಇದು ಬಯಲ ಪಾದೋದಕ. ಇದಕ್ಕೆ ತಂದೆ ಬಯಲುದೇವ. ಬಯಲಿಗೆ ತಂದೆಯಿಲ್ಲ. ಆದರೆ ಬಯಲಿಗೆ ಮಕ್ಕಳಿದ್ದಾರೆ. ಬಯಲ ತಂದೆಗೆ ಹುಟ್ಟಿದ ಮಗ ನಾನು. ಆತನಿಗೆ ರೂಪು ಇಷ್ಟವಾಗಿ ಅಂಗಕ್ಕೆ ಜನ್ಮ ನೀಡಿದ. ಆ ಅಂಗದಲ್ಲಿ ಆತನೇ ಸಂಗಮವಾದ. ಆ ಸಂಗಯ್ಯನನ್ನು

ತಿಳಿದ ಅಂಗ ಆತನ ಪಾದೋದಕದಿಂದ ಮರುಜನ್ಮ ತಳೆದ ಲಿಂಗಾಂಗ.

ಗುರು ಲಿಂಗ ಪಾದೋದಕ ಪ್ರಸಾದವನ್ನು ಹಿಡಿಯಲೂ ಇಲ್ಲ ; ಹಿಡಿಯದೇ ಬಿಡಲೂ ಇಲ್ಲ. ಏಕೆಂದರೆ ಅವೆಲ್ಲ ತನ್ನೊಳಗೆ ಸಂಗಮವಾಗಿವೆ. ತನುವಿನಲ್ಲಿ ತನ್ಮಯವಾದುದನ್ನು ತನುವಿನಿಂದಲೇ ನೋಡಿ ಆ ತನುವೇ ನಾನಾದೆ.

ನೋಡುವ ಕಣ್ಣು ಕಣ್ಣಿನಲ್ಲಿಯೇ ಇದೆ. ನೋಡಿಯೂ ನೋಡಲು ಬಾರದ ಕಣ್ಣು ಕಣ್ಣಿನಲ್ಲಿಯೇ ಇದೆ. ನೋಡಲು ಬಾರದ ಕಣ್ಣಿಗೆ ಗುರುದೇವ ಹಲವರ ಮಗನಾಗಿ ಕಾಣುತ್ತಾನೆ. ಅಂಗದ ಮೇಲಿನ ಲಿಂಗವೇ ಘನವಾಗಿ ಕಾಣುತ್ತದೆ. ರೈತ ಬೆಳೆದ ಪ್ರಸಾದವೇ ಘನವಾಗಿ ಕಾಣುತ್ತದೆ. ಜಂಗಮನ ಪಾದ ತೊಳೆದ ನೀರೇ ಪಾದೋದಕವಾಗಿ ಕಾಣುತ್ತದೆ.ಇದು ಅಜ್ಞಾನದ ಕಣ್ಣು. ಬೇಡದ ಕಣ್ಣು. ಇಂತಹ ಬೇಡದ ಕಣ್ಣನ್ನು ನಿಜ ಕಣ್ಣಿಗೆ ಅರ್ಪಿಸಿದ ಕಣ್ಣಪ್ಪ ಬೇಡರ ಕಣ್ಣಪ್ಪ ಎನ್ನಿಸಿಕೊಂಡ. ಕಣ್ಣೊಳಗೆ ಕಣ್ಣನ್ನು ನೋಡಿಕೊಂಡು ಬೇಡದ ಕಣ್ಣನ್ನು ಕಳೆದುಕೊಂಡ. ತನ್ನೊಳಗೆ ತಾನೇ ನೋಡಿಕೊಳ್ಳುವ ಅಂಬಿಗರ ಚೌಡಯ್ಯ ಶರಣರ ಮಹಾ ಸೂತ್ರವಿದು.

**130**

**ಘಟದ ಮಧ್ಯದಲ್ಲಿ ನಿಂದವನ, ಆತ್ಮನ ಚಿತ್ತದಲ್ಲಿ ಅರಿದವನ,**
**ಅಲ್ಲ ಆಹುದೆಂದು ಗೆಲ್ಲ ಸೋಲಕ್ಕೆ ಹೋರದವನ,**
**ಎಲ್ಲಾ ಜೀವಂಗಳಲ್ಲಿ ದಯವುಳ್ಳವನ,**
**ಆತನೆಲ್ಲಿಯೂ ಸುಖಿಯೆಂದನಂಬಿಗ ಚೌಡಯ್ಯ**

ಕಾಯ ಹೊತ್ತ ಪ್ರತಿ-ಜೀವಿ ಪರಮ ಸುಖಿಯಾಗಿರಬೇಕಿತ್ತು , ಆದರೆ ಪ್ರಪಂಚದ ಯಾವ ಕಾಯವೂ ಸುಖಿಯಾಗಿಲ್ಲ. ಏಕೆಂದರೆ ಅಂಬಿಗರ ಚೌಡಯ್ಯ ಶರಣರ ಸೂತ್ರ ಯಾವ ಕಾಯಕ್ಕೂ ಹೊಳೆಯುತ್ತಿಲ್ಲ. ಸೂತ್ರ ಹಿಡಿದು ಕಾಯಕದಲ್ಲಿಯೇ ಇರುವ ಪರಕಾಯ ಪ್ರವೇಶ ಮಾಡಿದ ಕಾಯ ಮಾತ್ರ ಸುಖಿ. ಅಂತಹ ಕಾಯ ಮಾತ್ರ ಸುಖದ ಸೂತ್ರದ ಮೂಲಕ ಪರಕಾಯಕ್ಕೆ ಹೋಗುವ ತಂತ್ರಗಾರಿಕೆಯನ್ನು ಹೇಳಬಹುದು. ಅಂತಹ ಸೂತ್ರ ಕಾಯಕ್ಕೆ ಹೊಳೆದರೆ ಸುಖ. ಸೂತ್ರ ಹಿಡಿದು ಹೋಗುವ ಮಾರ್ಗ ತಿಳಿದರೆ ಸುಖ. ಹಾಗೇ ತಿಳಿದು ಪರಕಾಯ ಪ್ರವೇಶ ಮಾಡಿದರೆ ಸಾಕು ಅದು ಪರಮ ಸುಖ! ಪರಮ ಹಂಸನ ಸುಖ!

ಅಂತಹ ಕಾಯಕ್ಕೆ ಜ್ಞಾನ ಕಾಯ, ಶರಣ ಕಾಯ, ಸಂತ ಕಾಯ, ದಾಸ ಕಾಯ ಎಂದು ಕರೆಯುತ್ತಾರೆ. ಹಾಗೆ ಪರಕಾಯ ಪ್ರವೇಶ ಆದ ಕಾಯ ಮಾತ್ರ ಕಾಯದ ಮಧ್ಯ ಕಾಯದಲ್ಲಿ ನಿಲ್ಲಬಹುದು. ಕಾಯದ ಮಧ್ಯ ಕಾಯವೇ ಪರಕಾಯ. ಪರಕಾಯವೆಂದರೆ ಬೇರೆಯವರ ಕಾಯವಲ್ಲ. ಪರ ಎಂದರೆ ಸ್ವರ್ಗ. ಹೀಗಾಗಿ ಬಸವಣ್ಣನವರು ಸ್ವರ್ಗಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ ಎಂದರು. ಸತ್ಯವ ನುಡಿವುದೇ ಸ್ವರ್ಗಲೋಕ. ಅದೇ ಪರಕಾಯ! ಕಾಯದಿಂದ ಪರಕಾಯಕ್ಕೆ ಪ್ರವೇಶ ಮಾಡಬೇಕು.

ಹೀಗೆ ಪರಕಾಯ ಪ್ರವೇಶ ಮಾಡಿದ ಕಾಯ ಮಾತ್ರ ಘಟಕದ ಮಧ್ಯದಲ್ಲಿಯ ಘಟದಲ್ಲಿ ನಿಲ್ಲುತ್ತದೆ. ಅದು ಚಲಿಸುವುದಿಲ್ಲ. ಚಲಿಸುವ ಕಾಯ ತನ್ನ ಚಲನೆಯನ್ನು ಕಳೆದುಕೊಂಡು ನಿಃಶ್ಚಲವಾಗುತ್ತದೆ.

ವಾಹನದ ಚಕ್ರಗಳು ಓಡುತ್ತವೆ. ಚಕ್ರಗಳನ್ನು ಹೊತ್ತುಕೊಂಡು, ಚಕ್ರಗಳಿಗೆ ಆಧಾರವಾದ ಎಕ್ಸೆಲ್ ಓಡುವುದಿಲ್ಲ. ಅದು ನಿಂತಲ್ಲಿಯೇ ನಿಃಶ್ಚಲವಾಗಿ ನಿಲ್ಲುತ್ತದೆ. ನಿಂತಿರುತ್ತದೆ. ಹೀಗೆ ನಿಂತ ಪರಕಾಯ ಮಾತ್ರ ಆಯಾ ಕಾಯದ ಚಿತ್ತವನ್ನು ಅರಿಯುತ್ತದೆ. ಅಲ್ಲ ಹೌದು ಎನ್ನುವ ಗೆಲ್ಲುವು ಸೋಲುವ ಮಾತುಗಳು ಕಾಯದಿಂದ ಹೊರಡುವುದೇ ಇಲ್ಲ. ಸದಾ ಹಸನ್ಮುಖಿಯಾಗಿರುತ್ತದೆ. ಸಕಲ ಜೀವಿಗಳಲ್ಲಿ ದಯವುಳ್ಳದ್ದಾಗಿರುತ್ತದೆ.

ಬಸವಣ್ಣನವರು ''ದಯವೇ ಧರ್ಮದ ಮೂಲವಯ್ಯ ಎಂದರು. ದಯವಿಲ್ಲದ ಧರ್ಮವದೇವುದಯ್ಯಾ , ದಯವೇ ಬೇಕು ಸಲಕ ಪ್ರಾಣಗಳೆಲ್ಲರಲ್ಲಿಯು. ದಯವೇ ಧರ್ಮದ ಮೂಲವಯ್ಯ ಕೂಡಲ ಸಂಗಯ್ಯನಂತಲ್ಲ ದೊಲ್ಲನಯ್ಯ''

ಬಸವಣ್ಣನವರು ಸೂಚಿಸಿದ ದಯ, ಕಾಯದಲ್ಲಿ ಒಮ್ಮೆ ಬರುತ್ತದೆ ಮತ್ತೊಮ್ಮೆ ಬರುವುದಿಲ್ಲ. ಹೀಗೆ ಸಕಲ ಕಾಯದಲ್ಲಿ ಘಟಿಸುತ್ತದೆ. ಏಕೆಂದರೆ ಅವೆಲ್ಲ ಕಾಯಗಳು; ಪರಕಾಯಗಳಲ್ಲ ! ಪರ ಕಾಯದಲ್ಲಿ ಮಾತ್ರ ಸದಾ ದಯವಿರುತ್ತದೆ. ದಯವೇ ಪರ ಕಾಯದ ಧರ್ಮ. ಹೀಗಾಗಿ ಶ್ರೀ ಶಂಕರರು ಪರಕಾಯ ಪ್ರವೇಶ ಮಾಡಿದರು. ಆ ಶಬ್ದವನ್ನು ತಿಳಿಯದ ಪಂಡಿತರು ಶಂಕರಾಚಾರ್ಯರನ್ನು ಹೇಗೇಗೋ ಚಿತ್ರಿಸಿ ಕತೆ ಬರೆದರು. ಪರಕಾಯ ಎನ್ನುವುದು ಕಾಯದಲ್ಲಿಯೇ ಇರುವ ಜ್ಞಾನಕಾಯ ಎಂಬುದು ಪಂಡಿತರಿಗೆ ತಿಳಿಯವುದಿಲ್ಲ, ಜ್ಞಾನಿಗೆ ತಿಳಿಯದೇ ಇರುವುದಿಲ್ಲ. ಏಕೆಂದರೆ ಜ್ಞಾನಿ ಪರಕಾಯದಲ್ಲಿ ಪ್ರವೇಶ ಮಾಡಿರುತ್ತಾನೆ. ಹೀಗಾಗಿ ಆತನ ಕಾಯ ಆಚೀಚೆ ಅಲಗಾಡುವುದಿಲ್ಲ. ಗೆಲ್ಲ ಸೋಲಕ್ಕೆ ಹೋಗುವುದಿಲ್ಲ.ಸಕಲ ಜೀವಿಗಳ ಮೇಲೆಯೂ ಸದಾ ದಯವನ್ನು ಬೀರುತ್ತದೆ. ಇದು ಪರಕಾಯದ ಧರ್ಮ. ಈ ಧರ್ಮ ಜಗದ ಸರ್ವ ಕಾಯಗಳಲ್ಲಿಯೂ ಇದೆ. ಅದನ್ನು ಕಾಯವೇ ಪಡೆಯಬೇಕು. ಹಾಗೆ ಪಡೆದ ಕಾಯ ಮಾತ್ರ ಸದಾ ಸುಖಿಯಾಗಿರುತ್ತದೆ.

ಸ್ಥೂಲಕಾಯ, ಸೂಕ್ಷ್ಮಕಾಯ, ಕಾರಣ ಕಾಯಗಳೆಂದು ಕಾಯದಲ್ಲಿ ಮೂರು ಕಾರ್ಯಗಳಿವೆ. ಸ್ಥೂಲಕಾಯ ವಾಹನವಾದರೆ ಸೂಕ್ಷ್ಮ ಕಾಯ ಅದರ ಚಕ್ರಗಳು. ಚಕ್ರಗಳಿಗೆ ಸದಾ ಚಲನೆ ಉಂಟು. ಹೀಗಾಗಿ ಅದನ್ನು ಸೂಕ್ಷ್ಮ ಕಾಯ ಎಂದು ಕರೆಯುತ್ತಾರೆ. ಅದಕ್ಕೆ ಹಣ ಹೆಂಡ ಅಧಿಕಾರ ವಿಷಯ ವಿದ್ಯೆ ಎಂದರೆ ಬಲು ಇಷ್ಟ. ಅದು ತನ್ನ ಚಲನೆಯುಳ್ಳ ಚಕ್ರಗಳ ಮೂಲಕ. ಓಡಾಡುತ್ತಾ ಸ್ಥೂಲ ಕಾಯವನ್ನು ಬಳಸಿಕೊಂಡು ಭೋಗಿಸುತ್ತದೆ, ಸೂಕ್ಷ್ಮ ಕಾಯದ ಸಕಲ ಅಪರಾಧಗಳನ್ನು, ಅಧಿಕಾರದ ಅಹಂಕಾರವನ್ನು ಸ್ಥೂಲಕಾಯಕ್ಕೆ ಕಟ್ಟುತ್ತದೆ.

ಹಣ ಹೆಂಡ ಅಧಿಕಾರ ವಿದ್ಯೆ ವಿಷಯ ಸುಖಗಳನ್ನು ಪಡೆದುಕೊಳ್ಳಲು ಸೂಕ್ಷ್ಮಕಾಯ ಸ್ಥೂಲಕಾಯವನ್ನು ಹಗಲಿರುಳೆನ್ನದೆ ದುಡಿಸುತ್ತದೆ. ಅದರ ಮೂಲಕ ಕಳುವು ಹಾದರ ಮಾಡಿ ಸುಖಿಸುತ್ತದೆ. ಹೀಗಾಗಿ ಸ್ಥೂಲ ಕಾಯವನ್ನು ಕಾಯಗಳು ಶ್ರೀಮಂತ ಬಡವ ಕಳ್ಳ ಅಧಿಕಾರಿ ಗುರು ಸಂತ ಪಂಡಿತ ಶಾಸ್ತ್ರಿ ಹೆಣ್ಣು ಗಂಡು ಎಂದು ಗುರುತಿಸಿ ಕರೆಯುತ್ತವೆ. ಜಾತಿ-ಧರ್ಮ, ಮತ-ಪಂಥಗಳ ಮೂಲಕ ಭಾಷೆ ವೇಷಗಳ ಮೂಲಕ ಕಾಯವನ್ನು ಕಾಯದ ಮೂಲಕ ಗುರುತಿಸಿ ಕಾಯವನ್ನು ವಿಂಗಡಿಸುತ್ತವೆ. ಇದು ಕಾಯದ ಗುಣ. ಇಂತಹ ಸೂಕ್ಷ್ಮ ಕಾಯಕ್ಕೆ ಕಾಯವನ್ನು ಕಾಯದಂತೆ ನೋಡಲು ಬರುವುದಿಲ್ಲ. ಹೀಗಾಗಿ ಅದು ಕಾಯವನ್ನು ಕಾಯದಂತೆ ನೋಡಲು ಜ್ಞಾನಿಗಳು ಬರೆದಿಟ್ಟ ಪುಸ್ತಕಗಳನ್ನು ಅಂದರೆ ಬೈಬಲ್ ಭಗವದ್ಗೀತೆ ಕುರಾನ್‌ಗಳನ್ನು ಓದುತ್ತದೆ. ಓದಿದರೂ ಅದು ಹಾಗಾಗುವುದಿಲ್ಲ. ಅದು ಶ್ರೇಷ್ಠ ಇದು ಕನಿಷ್ಠ ಎಂದು ಗ್ರಂಥಗ

ಳನ್ನು ದೂರುತ್ತದೆ. ಧರ್ಮ ಜಾತಿ- ಮತ ಪಂಥಗಳನ್ನು ಕಾಯದಲ್ಲಿ ಸೃಷ್ಟಿಸಿಕೊಂಡು ಕಾಯ ಕಾಯದೊಂದಿಗೆ ಗೆಲ್ಲುವ ಸೋಲುವ ಮಾತುಗಳನ್ನು ಆಡುತ್ತಾ ಬಡಿದಾಡಿ ಸಾಯುತ್ತದೆ. ಇದು ಸೂಕ್ಷ್ಮ ಕಾಯದ ಗುಣ !

ಕಾರಣ ಕಾಯ ಹಾಗಲ್ಲ. ಅದು ಹುಟ್ಟಿನಿಂದಲೇ ಜ್ಞಾನಿ. ಅದಕ್ಕೆ ಏನೆಲ್ಲ ತಿಳಿದಿದೆ. ಅದಕ್ಕೆ ತಿಳಿಯದೇ ಇರುವ ವಿಷಯಗಳೆ ಇಲ್ಲ. ಭಗವದ್ಗೀತೆ, ಬೈಬಲ್, ಕುರಾನ್‌ಗಳು ಸಕಲ ಜ್ಞಾನ ತಂತ್ರಜ್ಞಾನದ ಪುಸ್ತಕಗಳು ಕಾರಣ ಕಾಯದಿಂದಲೇ ಹೊರಬಂದಿವೆ. ಅದು ಜಗದಗಲ ಮುಗಿಲ ಗಲ, ವಿರಾಟ ಸ್ವರೂಪ, ಬ್ರಹ್ಮಾಂಡದಿಂದಲೂ ಅತ್ತತ್ತ . ಪಾತಾಳದಿಂದಲೂ ಅತ್ತತ್ತ . ಗಮನಕ್ಕೂ ಗೋಚರಕ್ಕೂ ನಿಲುಕದ್ದು, ಅಪ್ರಮಾಣ ಅಪ್ರತಿಮವಾದ ಕಾಯವದು. ಹೀಗಾಗಿ ಆ ಕಾಯವನ್ನು ಸ್ವರ್ಗ ಎಂದು ಕರೆದರು. ಇದು ದೇವಾನು ದೇವತೆಗಳಿಗೂ ಪರಿಚಯವಿಲ್ಲ. ಸೂಕ್ಷ್ಮ ಕಾಯದಿಂದ ಕಾರಣ ಕಾಯಕ್ಕೆ ಪ್ರವೇಶ ಮಾಡಿದ ಕಾಯಕ್ಕೆ ಮಾತ್ರ ಈ ಸುಖ ಸಿಗಲು ಸಾಧ್ಯ. ಬಯಕೆಯಾದರೆ ಸಕಲ ಕಾಯಗಳಿಗೂ ಪರಕಾಯ ಲಭ್ಯ .

**131**

**ಚಿತ್ರವ ಬರೆವ ಲೆಕ್ಕಣಿಕೆಯ ಕಟ್ಟಿಗೆಯಂತೆ,**
**ನೋಡಿದಡೆ ರೋಮಹಲವಾಗಿ,**
**ಬರೆವಡೆ ಕೂಡಿಹ ದಾರಿ ಒಂದೆಯಾಗಿ ತೋರುವೊಲು,**
**ತನ್ನಿಚ್ಛೆಗೆ ಪ್ರಕೃತಿ ಹಲವಾಗಿ ವಸ್ತುವ ಮುಟ್ಟುವಲ್ಲಿ**
**ಏಕಚಿತ್ತವಾಗಿರಬೇಕೆಂದನಂಬಿಗ ಚೌಡಯ್ಯ .**

ತನುವಿಗೆ ತಿಳಿದಂತೆ ಪ್ರಕೃತಿಯಲ್ಲಿರುವ ಯಾವ ಪ್ರಾಣಿ ಪಶು ಪಕ್ಷಿ ಉರುಗ ಜಲಚರ ಸಸ್ಯವರ್ಗಕ್ಕೆ ತಿಳಿಯುವುದಿಲ್ಲ. ಆದರೆ ತನ್ನಿಚ್ಛೆಯಂತೆ ತಿಳಿಯುವ ಕಾಯ ಒಂದಿದೆ ; ಅದರ ಚಿತ್ತ ಚಂಚಲ. ಬೇಕು ಬೇಡ ಎನ್ನುವ ಗುಣ ಹೊಂದಿದೆ. ಶರಣರು ಇದನ್ನು ಸೂಕ್ಷ್ಮ ಕಾಯ ಎಂದು ಕರೆದರು.

ಕಾರಣ ಕಾಯ ಒಂದಿದೆ. ಇದರ ಚಿತ್ತವೇನಿದ್ದರೂ ಏಕ. ಸಕಲ ವಸ್ತುಗಳನ್ನು ನೋಡಿ ಆನಂದ ಪಡುತ್ತದೆ. ಯಾವುದನ್ನೂ ಬೇಕು ಎನ್ನುವುದಿಲ್ಲ. ಬೇಡ ಎನ್ನುವುದಿಲ್ಲ. ಏಕೆಂದರೆ ವಸ್ತುಗಳು ಹಲವಾರು ಕಂಡರೂ ಅದರ ಸತ್ಯ ಒಂದೇ. ಆ ಸತ್ಯ ಮಾತ್ರ ಕಾರಣ ಕಾಯಕ್ಕೆ ಕಾಣುತ್ತದೆ. ಹೀಗಾಗಿ ಅದರ ಚಿತ್ತ ಕೂಡಾ ಒಂದೇ ಆಗಿರುತ್ತದೆ. ಏಕವಾಗಿರುತ್ತದೆ.

ಕಾರಣ ಕಾಯ ಕಾಣುವುದಿಲ್ಲ. ಕಾಣುವ ಬಯಕೆಯಾದ ಕಾಯಕ್ಕೆ ಮಾತ್ರ ಅನುಭವಕ್ಕೆ ಬರುತ್ತದೆ. ಬಯಕೆಯಾದ ಕಾಯ ತಂತ್ರಜ್ಞಾನಿ ಕಾಯವನ್ನು ಹುಡಕಿ ಅನುಭಕ್ಕೆ ತಂದುಕೊಂಡು ದೃಢ ನಿರ್ಧಾರ ಮಾಡುತ್ತದೆ. ಸೂಕ್ಷ್ಮಕಾಯದ ಮೂಲಕ ಕಾರಣ ಕಾಯಕ್ಕೆ ಪ್ರವೇಶ ಮಾಡುತ್ತದೆ. ಇಂತಹ ಕಾಯವನ್ನು ಶರಣ,ಸಂತ,ಜ್ಞಾನಿ ಎಂದು ಕರೆದರು.

ಸೂಕ್ಷ್ಮಕಾಯ ಸ್ಥೂಲ ಕಾಯವನ್ನು ಬಳಕೆ ಮಾಡುತ್ತಿತ್ತು . ಹೀಗಾಗಿ ಕಾಯ ಹಲವಾರು ವೇಷಗಳಿಂದ ಬಳಲುತ್ತಿತ್ತು. ಹಲವಾರು ಸುಖಗಳ ಮೂಲಕ ಸುಖಿಸುತ್ತಿತ್ತು . ಸುಖಿಸುವ ಸುಖ ಕೂಡಾ ದುಃಖವೇ, ಅನುಭವಿಸುವ ದುಃಖ ಕೂಡಾ ದುಃಖವೇ ಎಂದು ಸೂಕ್ಷ್ಮ ಕಾಯಕ್ಕೆ ಶರಣು ಹೋದ ಸ್ಥೂಲ ಕಾಯಕ್ಕೆ ತಿಳಿಯುವುದಿಲ್ಲ. ಏಕೆಂದರೆ ಸಕಲ ಕಾಯಗಳಿಗೂ ಕಾಣುವ

ಕಾಯಗಳೆಲ್ಲ ಸ್ಥೂಲ ಕಾಯಗಳು ಮಾತ್ರ ಸ್ಥೂಲಕಾಯ ಸೂಕ್ಷ್ಮಕಾಯದ ಉಪಕರಣ ಮಾತ್ರ. ಟಿ.ವಿ.ಪೆಟ್ಟಿಗೆ ಇದ್ದಂತೆ. ವಿದ್ಯುತ್ ಮತ್ತು ಚಾನೆಲ್‌ಗಳು ಟಿ.ವಿ.ಗೆ ಜೀವ ತುಂಬುತ್ತವೆ. ಇವೆರಡಿದ್ದರೆ ಮಾತ್ರ ಟಿ.ವಿ.ಗೆ ಬೆಲೆ. ಹಾಗೆಯೇ ಸ್ಥೂಲಕಾಯ ಸೂಕ್ಷ್ಮಕಾಯ ಮತ್ತು ಕಾರಣ ಕಾಯಕ್ಕೆ ಬಳಕೆಯಾಗುತ್ತದೆ. ಇವೆರಡೂ ಕಾಯಗಳಿಗೆ ಬಳಕೆಯಾಗುವ ಉಪಕರ ಣವೇ ಸ್ಥೂಲಕಾಯ.

ಸೂಕ್ಷ್ಮಕಾಯ ಸ್ಥೂಲಕಾಯವನ್ನು ಬಳಕೆ ಮಾಡಿಕೊಂಡು ಪ್ರಕೃತಿಯನ್ನು ನೋಡಿದಾಗ ಬರೀ ಸುಳ್ಳು ಗೋಚರಿಸುತ್ತದೆ. ಕಾಯ ತಾನು ಹೆಣ್ಣೆಂದು ಗಂಡು ಕಾಯವನ್ನು ನೋಡುತ್ತದೆ. ಗಂಡೆಂದು ಹೆಣ್ಣು ಕಾಯವನ್ನು ನೋಡಿ ಭೋಗದ ಆಸಕ್ತಿಯನ್ನು ಕೆರಳಿಸಿಕೊಳ್ಳುತ್ತದೆ. ಕಲ್ಲಿನಿಂದ ಕೆತ್ತಿದ ಮೂರ್ತಿಗಳನ್ನು ನೋಡಿ ಕೈಮುಗಿಯುತ್ತದೆ. ಕಲ್ಲು ಮಸೀದೆಯಾಗಿ ಚರ್ಚ್ ಆಗಿ ದೇವಾಲಯಗಳಾಗಿ ಕಂಡು ಕಾಯದಲ್ಲಿ ಭಾವ ದುರ್ಭಾವ ಮೂಡುತ್ತವೆ. ಅರಿವು ಗೌಣವಾಗುತ್ತದೆ. ಜಾತಿ ಮತ ಪಂಥ ಧರ್ಮ ಹೆಣ್ಣು ಗಂಡು ಅಧಿಕಾರ ಶ್ರೀಮಂತಿಕೆ ಬಡತನ ವೆಂಬ ಅಜ್ಞಾನ; ಅಕ್ಷರಸ್ಥ ಅನಕ್ಷರಸ್ಥ ಎನ್ನುವ ಅಜ್ಞಾನ; ಕಾಯದಲ್ಲಿ ತಾಂಡವ ನೃತ್ಯಮಾಡುತ್ತದೆ. ಸ್ಥೂಲ ಕಾಯವನ್ನು ಸೂಕ್ಷ್ಮ ಕಾಯ ಬಳಕೆ ಮಾಡಿಕೊಂಡರೆ ಅದು ಅನುಭವಿಸುವ ಸುಖ ಸುಖವೂ ಅಲ್ಲ ದುಃಖ ದುಃಖವೂ ಅಲ್ಲ. ಅದರ ಬದುಕು ನಿತ್ಯ ನರಕ. ನರಕದ ಸೆರೆಮನೆಯಲ್ಲಿ ತನಗೆ ತಾನೇ ಬಂಧಿಯಾಗಿ ಒಮ್ಮೆ ಸಾಯುತ್ತದೆ.

ಸೂಕ್ಷ್ಮ ಕಾಯವನ್ನು ಹೊತ್ತ ಕಾಯ ಯಾವ ಪಾತ್ರದಲ್ಲಿದ್ದರೇನು ? ಅದು ಪಾತ್ರವೇ ಸರಿ. ನಿಜವಲ್ಲ.ಅದು ಗುರುವಾದರೇನು, ಅಧಿಕಾರಿಯಾದರೇನು, ರಾಜಕಾರಣಿಯಾದರೇನು, ಶಾಸಕ ಸಚಿವ ಮುಖ್ಯಮಂತ್ರಿ ಪ್ರಧಾನಿ ರಾಷ್ಟ್ರಪತಿಯಾದರೇನು? ಸೂಕ್ಷ್ಮಕಾಯಕ್ಕೆ ಪಾತ್ರಗಳೇ ಆಗಿವೆ. ಹಣ ಹೆಂಡ ವಿಷಯಾಸಕ್ತಿ ಭೂಮಿ ಹೇಮಕ್ಕಾಗಿ ಪಾತ್ರ ಹಾಕುತ್ತದೆ. ಅದು ಪಾತ್ರವೆಂದು ತನಗೂ ತಿಳಿಯುತ್ತದೆ. ಏಕೆಂದರೆ ಸೂಕ್ಷ್ಮ ಕಾಯ ಸಹಜ ಕಾಯವಲ್ಲ. ಕಾರಣ ಕಾಯ ಮಾತ್ರ ಸಹಜ ಕಾಯ.

ಸ್ಥೂಲಕಾಯದಲ್ಲಿಯೇ ಇರುವ ಕಾರಣ ಕಾಯ ಸೂಕ್ಷ್ಮ ಕಾಯದ ಪಾತ್ರಗಳನ್ನೆಲ್ಲ ಪಟ್ಟಿ ಮಾಡಿ ಮತ್ತೆ ಮತ್ತೆ ಕಾಯಕ್ಕೆ ನೆನಪಿಸುತ್ತದೆ. ಅದಕ್ಕೆ ಸಕಲ ಕಾಯದಲ್ಲಿರುವ ಸತ್ಯ ಮಾತ್ರ ಗೊತ್ತು . ಪ್ರಕೃತಿಯಲ್ಲಿರುವ ಸತ್ಯ ಕಾಯದಲ್ಲಿರುವ ಸತ್ಯ ಒಂದೇ ಆಗಿರುವುದರಿಂದ ಕಾರಣ ಕಾಯವನ್ನು ಬಳಕೆ ಮಾಡಿದ ಸ್ಥೂಲಕಾಯಕ್ಕೆ ಪಾತ್ರದ ಅವಶ್ಯಕತೆಯಿಲ್ಲ. ಕಾಯವನ್ನು ಕಾಯದಂತೆಯೇ ನೋಡುತ್ತದೆ. ಕಾಯದಲ್ಲಿರುವ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಇವುಗಳನ್ನು ಪ್ಯಾಕ್ ಮಾಡಿದ ಚರ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ ಎನ್ನುವ ಸತ್ಯಕಾರಣ; ಕಾಯಕ್ಕೆ ಮಾತ್ರ ಗೊತ್ತಿರುವುದರಿಂದ ಆ ಜ್ಞಾನವನ್ನು ಸಹಜವಾಗಿ ಬಳಸುತ್ತದೆ.

ಜೀವಜಲಬಿಂದುವಿನಿಂದಲೇ ಗಿಡ ಮರ ಬಳ್ಳಿ ಸಸ್ಯಕುಲ ಇದಕ್ಕೆ ಆಧಾರವಾದ ಭೂಮಿ ಜನ್ಮ ತಳೆದಿದೆ. ಪ್ರಾಣಿ ಪಶು ಪಕ್ಷಿ ಜಲಚರ ಉರುಗ ಕೀಟಗಳು ಜನ್ಮ ತಳೆದಿವೆ. ಭೂಮಿಯ ಗರ್ಭದಲ್ಲಿರುವ ಸಕಲ ಖನಿಜಗಳು, ಭೂಮಿಯ ಮೇಲೆ ವಾಸಿಸುವ ಸಕಲ ಕಾಯಗಳು ಕೂಡಾ ಜೀವಜಲ ಬಿಂದುವಿನಿಂದಲೇ ಜನ್ಮ ತಳೆದಿವೆ. ಬಯಲು ಚಂದ್ರ ಸೂರ್ಯ ನಕ್ಷತ್ರ ಸಕಲ ಆಕಾಶ ಕಾಯಗಳಿಗೆ ಬಯಲು ಆಶ್ರಯ ನೀಡಿದೆ. ಭೂಮಿ ತನ್ನ ಗರ್ಭದಲ್ಲಿಟ್ಟುಕೊಂಡ ಜಲಜನಕ ಆಮ್ಲಜನಕವನ್ನು ಒಂದು ಗೂಡಿಸಿ ಅದಕ್ಕೆ ತಾನೇ ಜೀವವಾಗಿ ಜೀವಜಲವಾಗಿ ಕೆಳಗೆ ಸುರಿದಿದೆ. ಆ ಜಲವೇ ಗರ್ಭಧರಿಸಿ ಭೂಮಿಯಾಗಿದೆ. ಆ ಜಲವೇ ಗರ್ಭ ಹೊಕ್ಕು ಕಾಯವಾಗಿದೆ. ಇದು

ಸತ್ಯ . ಈ ಸತ್ಯದ ಕಾಯ ಕಾಯದಲ್ಲಿಯೇ ಇದೆ. ಇದು ಸಹಜ ಕಾಯ. ಈ ಸತ್ಯವನ್ನೇ ವಿಪರೀತವಾಗಿ ತಿಳಿದ ಕಾಯ ಕಾಯದಲ್ಲಿಯೇ ಇದೆ. ಇದು ಸೂಕ್ಷ್ಮ ಕಾಯ. ಇವೆರಡೂ ಕಾಯಗಳಿಗೆ ಆಶ್ರಯ ನೀಡಿ ಅವುಗಳಿಗೆ ಉಪಕರಣವಾದ ಕಾಯವೇ ಸ್ಥೂಲಕಾಯ.

ಚಿತ್ರ ಬರೆಯುವ ಲೆಕ್ಕಣಿಕೆಯ ಕಟ್ಟಿಗೆ ನೋಡಲು ಒಂದಾಗಿ ಕಂಡರೂ ಅದಕ್ಕೆ ಅಂಟಿಸಿದ ಕೂದಲುಗಳು ಹಲವು.ಬರೆಯಲು ಹೋದರೆ ದಾರಿ ಒಂದೆಯಾಗಿ ತೋರುವುದು. ಹಾಗೆಯೇ ಮನದ ಇಚ್ಛೆಗೆ ಪ್ರಕೃತಿ ಹಲವಾಗಿ ಕಾಣುತ್ತವೆ, ಅರಿವಿನಿಂದ ಅರಿತರಿತು ಏಕಚಿತ್ತದಿಂದ ನೋಡಲು ಹೋದರೆ ಒಂದೇಯಾಗಿ ಕಾಣುತ್ತದೆ.ಇದು ಸಹಜ ಕಾಯ; ಗುಣವೇ ಇಲ್ಲದ ನಿರ್ಗುಣಿ ಕಾಯ. ಈ ಕಾಯವನ್ನು ಕಾಯವೇ ಪಡೆದುಕೊಳ್ಳಬೇಕು.

**132**

**ಜಂಗಮದ ಪಾದತೀರ್ಥ ಎನ್ನಂಗದೋಷವ ಕಳೆಯಿತ್ತಯ್ಯ ,**
**ಜಂಗಮದ ಪಾದತೀರ್ಥ ಎನ್ನ ಲಿಂಗಕ್ಕೆ ಪ್ರಾಣ ಪ್ರತಿಷ್ಠೆಯಾಯಿತ್ತಯ್ಯ ,**
**ಜಂಗಮದ ಪಾದತೀರ್ಥ ಸಂಗನ ಶರಣರಿಗೆ ಮುಕ್ತಿಯ ಪಥವ ತೋರಿತ್ತಯ್ಯ .**
**ಇಂತಪ್ಪ ಜಂಗಮದ ಪಾದತೀರ್ಥಕ್ಕೆ**
**ಎಂತಪ್ಪ ಹಿರಿಯರಾದರು ತಮ್ಮ ಗರುವಿಕೆಯ ಬಿಟ್ಟು ,**
**ದೀರ್ಘದಂಡ ಪ್ರಣಾಮಂಗೆಯ್ದು ನಮಸ್ಕರಿಸಿ,**
**ಸಾಕ್ಷಿ : ಉತ್ತಮಂ ದೀರ್ಘದಂಡಂಚ ಮಧ್ಯಮಂ ಶಿರೋ ವಂದನಂ ।**
**ಕನಿಷ್ಟಂ ಕರ ಮೇಲನಂ ವಾಗ್ವಂದನಂ ಮಹಾಧಮಂ ॥ ಎಂಬುದಾಗಿ**
**ಜಂಘೆಯಿಕ್ಕಿ ನಡದುಬಂದು ಕೊಂಡಡೆ ಕಂಗಳ ಮೂರುಳ್ಳ ದೇವನೆಂಬೆ,**
**ಹಿರಿಯ ಮಹೇಶ್ವರನೆಂಬೆ.**
**ಹಾಂಗೆಲ್ಲದೆ ಕಂಗಳು ಹೋದ ಅಂಧಕನಂತೆ, ಕಾಲಿಲ್ಲದ ಪಂಗುಳನಂತೆ,**
**ತಾನಿದ್ದಲ್ಲಿಯೇ ಇದ್ದು ಅಯ್ಯಾ ಶರಣಾರ್ಥಿಯೆಂದು ಇದ್ದೆಡೆಗೆ ತರಿಸಿಕೊಂಡು,**
**ಅಂಗಯ್ಯಾಂತುಕೊಂಬ ಚೆಂಗಿಮೂಳ ಹೊಲೆಯರ ಕಂಡಡೆ**
**ನೆತ್ತಿಯ ಮೇಲೆ ಚೊಂಗ ಚೊಂಗನೆ ಹೊಡಿ,**
**ಒದ್ದೊದ್ದು ತುಳಿಯೆಂದು ಹೇಳಿದಾತನಂಬಿಗ ಚೌಡಯ್ಯ**

ಎಂತಹ ಗುರು ಹಿರಿಯರಾದರು ಜಂಗಮನ ಪಾದತೀರ್ಥ ಸ್ವೀಕರಿಸಿ ಅಂಗದ ದೋಷ ಕಳೆದುಕೊಳ್ಳಬೇಕು. ಪುನಃ ಪ್ರಾಣ ಪ್ರತಿಷ್ಠೆ ಮಾಡಿಕೊಳ್ಳಲೇಬೇಕು. ಜಂಗಮನ ಪಾದ ತೀರ್ಥ ಸ್ವೀಕರಿಸಿ ಮುಕ್ತಿ ಪಥದತ್ತ ನಡೆಯಲೇಬೇಕು. ಗುರು ಹಿರಿಯರೆನ್ನಿಸಿಕೊಂಡವರು ಕೂಡಾ ತಮ್ಮ ತಮ್ಮ ಗರ್ವ ಅಹಂಕಾರವನ್ನು ಬದಿಗಿರಿಸಿ ದೀರ್ಘದಂಡ ಪ್ರಣಾಮಗಳನ್ನು ಜಂಗಮನಿಗೆ ಮಾಡಲೇಬೇಕು.

ಉತ್ತಮನಾದವನು ಮುಕ್ತಿಯ ಬಯಕೆ ಉಳ್ಳವನು ಜಂಗಮನಿಗೆ ದೀರ್ಘದಂಡ ಪ್ರಣಾಮಗಳನ್ನು ಮಾಡುತ್ತಾನೆ. ಮಧ್ಯಮ ಬಯಕೆ ಉಳ್ಳವನು ಶಿರದಿಂದ ನಮಸ್ಕರಿಸುತ್ತಾನೆ: ಕನಿಷ್ಟ ಬಯಕೆ ಉಳ್ಳವನು ಕೈಮುಗಿದು ನಮಸ್ಕರಿಸುತ್ತಾನೆ. ಬರಿ ಬಾಯಿಯಿಂದ ನಮಸ್ಕರಿಸುವವನು ಮಹಾ

ಅಧಮನಾಗಿರುತ್ತಾನೆ. ಮಂಡೆಯೂರಿ ನಡೆದು ಬಂದು ಮುಕ್ತಿಗಾಗಿ ಜಂಗಮನಿಗೆ ನಮಸ್ಕರಿಸಿದಾತನು ಮೂರುಕಣ್ಣುಳ್ಳ ಮುಕ್ಕಣ್ಣ ದೇವನೆಂದು, ಮಹೇಶ್ವರನೆಂದು ಕರೆಯಿಸಿಕೊಳ್ಳುತ್ತಾನೆ.

ಹೀಗೆ ನಡೆದುಕೊಳ್ಳದೆ ಜಂಗಮನನ್ನು ತಾನಿದ್ದಲ್ಲಿಗೆ ಕರೆಯಿಸಿಕೊಂಡು ತಾನು ಮೇಲೇಳದೆ ತನ್ನ ಅಂಗೈಗಳನ್ನು ಮಾತ್ರ ಮೇಲೆತ್ತಿ ಶರಣಾರ್ಥಿ ಎನ್ನುವ ಚೆಂಗಿಮೂಳ ಹೊಲೆಯರ ಕಂಡಡೆ ನೆತ್ತಿಯ ಮೇಲೆ ಚೊಂಗ ಚೊಂಗನೆ ಹೊಡಿ, ಒದ್ದೊದ್ದು ತುಳಿ ಎಂದು ಆಯಾ ಅಂಗದಲ್ಲಿರುವ ಅರಿವೆಂಬ ಗುರುದೇವನನ್ನು ಅಂಬಿಗರ ಚೌಡಯ್ಯ ಶರಣರು ಬೇಡಿಕೊಂಡಿದ್ದಾರೆ.

ಶರಣರು ತಮ್ಮ ಈ ವಚನದಲ್ಲಿ ಹೇಳಿದ್ದು ಜಾತಿ ಜಂಗಮರನ್ನು ಕುರಿತು ಅಲ್ಲ. ಅಂಗದಲ್ಲಿಯೇ ಸಂಗಮವಾದ ಜಂಗಮನಿಗೆ ಅಂಗವನ್ನು ಆವರಿಸಿದ ಮನವೆಂಬ ಭಕ್ತ ಮಣಿಯಬೇಕು. ಆತನ ಪಾದತೀರ್ಥ ಸ್ವೀಕರಿಸಿ ಅಂಗದ ದೋಷ ಕಳೆದುಕೊಳ್ಳಬೇಕು. ಆಗ ಅಂಗದಲ್ಲಿಯೇ ಸಂಗಮವಾದ ಜಂಗಮ ಭಕ್ತನಿಗೆ ಮುಕ್ತಿಪಥವನ್ನು ತೋರಿಸುತ್ತಾನೆ.

ಶರಣರು ಸೂಚಿಸಿದ ತಂತ್ರಗಾರಿಕೆಯನ್ನು ಕರಗತ ಮಾಡಿಕೊಂಡ ಭಕ್ತನು ಕೂಡಾ ಜಂಗಮನಾಗುತ್ತಾನೆ. ಅಂಗವನ್ನು ಆವರಿಸಿದ ಮನವೆಂಬ ಭಕ್ತನು ಅಂಗದಲ್ಲಿಯೇ ಸಂಗಮವಾದ ಜಂಗಮನನ್ನು ಕಂಡು ಆತನಿಗೆ ಭಕ್ತನಾಗಿ ಆತನಲ್ಲಿಯೇ ಲೀನನಾಗಿ ಜಂಗಮನಾಗುತ್ತಾನೆ. ಇಂತಹ ತಂತ್ರಗಾರಿಕೆಯನ್ನು ಕರಗತ ಮಾಡಿಕೊಂಡ ಯಾವ ಕಾಯವಾದರೂ ಕೂಡಾ ಅದು ಜಂಗಮ ಕಾಯವೇ ಆಗಿರುತ್ತದೆ. ಅಂತಹ ಕಾಯವನ್ನು ಗುರು ಹಿರಿಯರಾದವರು ಕೂಡಾ ತಮ್ಮ ಅಹಂಕಾರವನ್ನು ಬಿಟ್ಟು ಜಂಗಮನಾಗುವ ತಂತ್ರಗಾರಿಕೆಯನ್ನು ಜಂಗಮ ಕಾಯಕ್ಕೆ ಸೇವೆ ಮಾಡುತ್ತ ಕಲಿತುಕೊಳ್ಳಬೇಕೆಂಬ ಆಶಯವನ್ನು ಅಂಬಿಗರ ಚೌಡಯ್ಯ ಶರಣರು ವ್ಯಕ್ತಪಡಿಸಿದ್ದಾರೆ.

**133**

**ಜಂಗಮವ ಕರತಂಬು ಮನೆಯಲ್ಲಿ ಕುಳ್ಳಿರಿಸಿ,**
**ಅಂಗದ ಮೇಲಣ ಜಪವನೆಣಿಸುವ ಭಕ್ತನ ಜಪದ ಬಾಯಲ್ಲಿ ಕೆರಹನಿಕ್ಕಲಿ!**
**ಅವನ ಲಿಂಗಾರ್ಚನೆಯ ಬಾಯಲ್ಲಿ ಹುಡಿಯ ಹೊಯ್ಯಲಿ !**
**ಜಂಗಮದ ತೃಪ್ತಿಯನರಿಯದೆ ಲಿಂಗವಂತನೆಂತಾದನೊ ? ಮರುಳೆ !**
**ಅವ ಪಿಸುಣ, ಹೊಲೆಯನೆಂದಾತನಂಬಿಗರ ಚೌಡಯ್ಯ.**

'' ವರ್ಣವಿಲ್ಲದ ಲಿಂಗಕ್ಕೆ ರೂಪ ಪ್ರತಿಷ್ಠೆಯ ಮಾಡುವರು. ಪ್ರಳಯವಿಲ್ಲದ ಲಿಂಗಕ್ಕೆ ಪ್ರಾಣ ಪ್ರತಿಷ್ಠೆಯ ಮಾಡುವರು. ನುಡಿಯಬಾರದ ಲಿಂಗಕ್ಕೆ ಜಪಸ್ತೋತ್ರವ ಮಾಡುವರು. ಮುಟ್ಟಬಾರದ ಲಿಂಗಕ್ಕೆ ಕೊಟ್ಟು ಕೊಂಡಾಡಿಹೆನೆಂಬರು. ಬೊಟ್ಟಿಡಲು ಎಡೆಯಿಲ್ಲದ ಲಿಂಗವ ಮುಟ್ಟಿ ಪೂಜಿಸಿಹೆನೆಂಬ ಭ್ರಷ್ಟರು ನೋಡಾ ಗುಹೇಶ್ವರಾ .''

ಜಂಗಮನನ್ನು ಮನೆಗೆ ಬರಮಾಡಿಕೊಂಡು ಆತನನ್ನು ಕುಳ್ಳಿರಿಸಿ ಅಂಗದ ಮೇಲಿರುವ ಜಪಮಣಿ ಎಣಿಸುವ ಭಕ್ತನ ಜಪದ ಬಾಯಲ್ಲಿ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಕೆರಹನು ಇಕ್ಕಲಿ ಎಂದು ಖಾರವಾಗಿ ನುಡಿದಿದ್ದಾರೆ ಅಂಬಿಗರ ಚೌಡಯ್ಯ ಶರಣರು. ಅಂತಹ ಭಕ್ತನು ಲಿಂಗಾರ್ಚನೆ ಮಾಡುವ ಬಾಯಲ್ಲಿ ಹುಡಿಯನು ಇಕ್ಕಲಿ. ನಿಜ ಜಂಗಮದ ತೃಪ್ತಿಯನು ಅರಿಯದಾತ ಲಿಂಗವಂತನಾಗುವುನೆ ? ಅವನನ್ನು ಲಿಂಗವಂತನೆಂದು

ಕರೆಯುವವನು ಮರುಳ. ಕರೆಯಿಸಿಕೊಳ್ಳುವವನೂ ಮರುಳನೆ ! ಅಂತಹ ಭಕ್ತನೇ ಹೊಲೆಯ.

ಅಂಗದಲ್ಲಿ ಸಂಗಮವಾದ ಅರಿವೆಂಬ ಜಂಗಮನನ್ನು ತೋರಿಸಲು ಬಂದ ಜಂಗಮನನ್ನು ಕೂಡಿಸಿ ಮಣಿಯನೆಣಿಸುವ ಭಕ್ತ ನಿಜ ಭಕ್ತನಲ್ಲ.

ವರ್ಣವಿಲ್ಲದ ಲಿಂಗಕ್ಕೆ ರೂಪ ಪ್ರತಿಷ್ಠೆಯ ಮಾಡಿ ಅದನ್ನು ಅಂಗದ ಮೇಲೆ ಧರಿಸಿ ಪೂಜೆ ಮಾಡುವುದೆ ? ಪ್ರಳಯವಿಲ್ಲದ ಲಿಂಗಕ್ಕೆ ಪ್ರಾಣಪ್ರತಿಷ್ಠೆಯ ಮಾಡುವುದೆ ? ಅದನ್ನು ಪೂಜಿಸುತ್ತಾ ಮಣಿಯನೆಣಿಸುವುದೆ ? ನುಡಿಯಲು ಬಾರದ ಲಿಂಗಕ್ಕೆ ಜಪ ಮಾಡುತ್ತಾಸ್ತುತಿಸುವುದೆ ? ಮುಟ್ಟಲು ಬಾರದ ಲಿಂಗಕ್ಕೆ ಹಣ್ಣು ಹೂ ಕಾಯಿ ನಾನಾ ಭಕ್ಷಾದಿಗಳಿಂದ ಆರಾಧಿಸಿ ಸಂಪ್ರದಾಯವನ್ನು ಮೆರೆಯುವುದೆ ?

ಮುಟ್ಟಲು ಬಾರದ ಲಿಂಗಕ್ಕೆ ಭಕ್ತನಾದವನು ಏನಾದರೂ ಕೊಡಲು ಸಾಧ್ಯವೆ ? ಬೊಟ್ಟು ಇಡಲು ಎಡೆಯಿಲ್ಲದ ಲಿಂಗವನ್ನು ಪರಿಚಯಿ ಸಲು ಬಂದ ಜಂಗಮನನ್ನು ಗೌರವಿಸದೆ ಅಂಗದ ಮೇಲೆ ಕಟ್ಟಿಕೊಂಡ ಲಿಂಗಕ್ಕೆ ಪೂಜಿಸುವ ಭಕ್ತ ಭಕ್ತನಲ್ಲ. ಅವನು ಜಿಪುಣ ; ಅವನು ಹೊಲೆಯ ಎಂದು ಅಂಗವನ್ನು ಆವರಿಸಿದ ಮನಕ್ಕೆ ಪೆಟ್ಟು ಕೊಟ್ಟಿದ್ದಾರೆ.

ಪೂಜಿಸುವ ಲಿಂಗ ಲಿಂಗವಲ್ಲ. ಅದು ಪಾಷಾಣ. ಅಂಗದಲ್ಲಿ ಸಂಗಮವಾದ ಲಿಂಗವೇ ಲಿಂಗ. ಅದಕ್ಕೆ ವರ್ಣವಿಲ್ಲ. ಪ್ರಳಯವಿಲ್ಲ. ತಪ್ಪಿ ನುಡಿಯುವ ನುಡಿಗೆ ಅವಕಾಶ ಮಾಡಿಕೊಡದಂತೆ ನುಡಿಯಬೇಡವೆಂದು ನುಡಿದು ಹೇಳುವ ಲಿಂಗ ಸರ್ವಾಂಗದಲ್ಲಿ ಸಂಗಮವಾಗಿರುವಾಗ ಅಂಗದ ಮೇಲೆ ಮತ್ತೊಂದು ಲಿಂಗ ಧರಿಸುವುದೆ ? ಅದನ್ನು ಪೂಜಿಸುತ್ತಾ ಕಾಲ ಕಳೆಯುವುದೆ ? ಮನೆಗೆ ಬಂದ ಮಹಾಂತನನ್ನು ಕುಳ್ಳಿರಿಸಿ ಅಪಮಾನ ಮಾಡುವುದೆ ? ಇದು ನಿನಗೆ ತರವಲ್ಲ ಮನವೆ. ಲಿಂಗವಂತನಾಗಬೇಡ ಮನವೇ ನೀನು ಲಿಂಗಾಂಗಿಯೇ ಆಗಿರುವಿ.

ಮನೆಗೆ ಬಂದ ನಿಜ ಜಂಗಮನ ಮೂಲಕ ಲಿಂಗಾಂಗದ ವಾರ್ತೆಯನ್ನು ಕೇಳಿ ತೃಪ್ತನಾಗು. ಹೇಳಲು ಬಂದ ಆತನನ್ನು ಕಾಯಿಸಿ ಅಪಮಾನಿಸಬೇಡ ಮರುಳು ಮನವೆ ? ಮುಟ್ಟಲು ಬಾರದ ಲಿಂಗವನ್ನು ಕಟ್ಟಿಕೊಂಡು ಪೂಜಿಸಲು ಸಾಧ್ಯವೆ  ಎಂದು ಪ್ರಶ್ನಿಸಿದ್ದಾರೆ ಶರಣ ಅಂಬಿಗರ ಚೌಡಯ್ಯನವರು.

**134**

**ಜಂಗಮವೆಂದಡೆ ನಡೆ ನುಡಿ ಸಿದ್ಧಿಯಾಗಿರಬೇಕು.**
**ಮೂರು ಮಲಕ್ಕೆ ಸಿಕ್ಕದೆ, ಆರರಡಿಗೆ ಅಡಿಮೆಯಾಗದೆ,**
**ಆ ಗುಣ ತೋರುವುದಕ್ಕೆ ಮೊದಲೆ**
**ಮೀರಿ ಇರಬೇಕೆಂದನಂಬಿಗ ಚೌಡಯ್ಯ .**

ಜಂಗಮವೆಂದರೆ ಅದೊಂದು ಜಾತಿಯಲ್ಲ. ಅಂಗದಲ್ಲಿಯೇ ಸಂಗಮವಾದ ಜಂಗಮಶಕ್ತಿ ಅಂಗಕ್ಕೆ ಒಲಿಯುವುದೇ ಜಂಗಮವಾಗಿದೆ. ಜಂಗಮಶಕ್ತಿ ಅಂಗಕ್ಕೆ ಲಭಿಸಿದ ಅಂಗವು ಲಿಂಗಾಂಗವಾಗುತ್ತದೆ. ಆ ಲಿಂಗಾಂಗದ ನಡೆಶುದ್ದಿ ; ನುಡಿ ಶುದ್ಧಿ !

ಅಂಗ ಅಣವ ಮಲ ಮಾಯಾ ಮಲ ಕಾರ್ಮಿಕ ಮಲ ಹಾಗೂ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳ ಮೂಲಕ ಸುಖಿಸುತ್ತಾ ಸಾತ್ವಿಕ ಗುಣವನ್ನು ಪ್ರದರ್ಶಿಸಿ  ಜಂಗಮ

ವೇಷವನು ಹಾಕಿದ ಅಂಗ ಜಂಗಮವಾಗುವುದಿಲ್ಲ, ಗುರು ವೇಷವನ್ನು ಹಾಕಿದ ಅಂಗ ಗುರುವಾಗುವುದಿಲ್ಲ. ಅಂಗದ ಸಕಲ ವೇಷಗಳು ಕಳಚಬೇಕು. ಮೂರು ಮಲಗಳು ಕಳಚಬೇಕು, ಅರಿಷಡ್ವರ್ಗಗಳಿಗೆ ಬಲಿಯಾಗದೆ ಅಂಗವನ್ನು ಆವರಿಸಿದ ಮನವೇ ಅಂಗದಲ್ಲಿಯೇ ಸಂಗಮವಾದ ಜಂಗಮದತ್ತ ಪ್ರಯಾಣಿಸಬೇಕು.

ರಜೋ ಗುಣ ತಾಮಸಗುಣ ಸಾತ್ವಿಕ ಗುಣಗಳನ್ನು ಕಳಚಲು ಮನಕ್ಕೆ ಬಯಕೆಯಾಗಬೇಕು. ಆಗ ಮಾತ್ರ ಮನ ಜಂಗಮದಲ್ಲಿ ಬೆರೆತು ಘನಮನವಾಗುತ್ತದೆ. ಬದಲಾಗಿ ಮನ ಜಂಗಮ ವೇಷ ಹಾಕಿದರೆ ಅದು ಜಂಗಮವಾಗುವುದಿಲ್ಲ. ಜಂಗಮವೆಂದರೆ ಮನಕ್ಕೆ ಜಂಗಮವಾಗುವ ಬಯಕ್ಕೆ ಹುಟ್ಟಿ ಅದು ಬತ್ತಲೆಯಾಗಬೇಕು. ಅಂಗ ಜಂಗಮ ಜಾತಿಯ ಹೊಟ್ಟೆಯಲ್ಲಿ ಹುಟ್ಟುವ ಮೂಲಕ ಅದು ಜಂಗಮವಾಗುವುದಿಲ್ಲ. ಅದರ ನಡೆ ನುಡಿಯೂ ಶುದ್ಧಿ ಯಾಗುವುದಿಲ್ಲ.

ಅಂಗ ಯಾವ ಜಾತಿಯಲ್ಲಿ ಹುಟ್ಟಿದರೇನು ಅಂಗದಲ್ಲಿ ಅರಿವು ಸಂಗಮವಾಗಿದೆ. ಆ ಅರಿವನ್ನು ಬಳಕೆ ಮಾಡುವ ಜಂಗಮ ಕೂಡಾ ಅಂಗದಲ್ಲಿಯೇ ಸಂಗಮವಾಗಿದೆ. ಅಂಗವನ್ನು ಆವರಿಸಿದ ಪ್ರತಿ ಯೊಂದು ಮನಕ್ಕೆ ಅಂಗದಲ್ಲಿಯೇ ಸಂಗಮವಾದ ಜಂಗಮನನ್ನು ಹೊಂದುವ ಬಯಕೆಯಾದಾಗ ಮಾತ್ರ ಅಂಗಕ್ಕೆ ಜಂಗಮತ್ವ ಸಿದ್ಧಿಯಾಗುತ್ತದೆ.

**135**

**ಜನನ ಸೂತಕ ಮರಣ ಸೂತಕಂಗಳ ಕಳೆದು**
**ಶುದ್ಧವಾದೆನೆಂಬ ಅಜ್ಞಾನಿ ಜಡಜೀವಿಗಳು ನೀವು ಕೇಳಿರೋ !**
**ಪೃಥ್ವಿ ಶುದ್ಧವೆಂಬಿರಿ, ಇಪ್ಪತ್ತೊಂದು ಲಕ್ಷ ಜೀವರಾಶಿಗಳು**
**ಅಲ್ಲಿಯೇ ಹುಟ್ಟಿ, ಅಲ್ಲಿಯೇ ಹೊಂದಿದವಾಗಿ ಪೃಥ್ವಿ ಶುದ್ಧವಲ್ಲ.**
**ಅಪ್ಪು ಶುದ್ಧವೆಂಬಿರಿ, ಇಪ್ಪತ್ತೊಂದು ಲಕ್ಷ ಜೀವರಾಶಿಗಳು**
**ಅಲ್ಲಿಯೇ ಹುಟ್ಟಿ ಅಲ್ಲಿಯೇ ಹೊಂದಿದವಾಗಿ ಅಪ್ಪು ಶುದ್ಧವಲ್ಲ.**
**ಅಗ್ನಿ ಶುದ್ಧವೆಂಬಿರಿ, ಇಪ್ಪತ್ತೊಂದು ಜೀವರಾಶಿಗಳು**
**ಅಲ್ಲಿಯೇ ಹುಟ್ಟಿ, ಅಲ್ಲಿಯೇ ಹೊಂದಿದವಾಗಿ ಅಗ್ನಿ ಶುದ್ಧವಲ್ಲ.**
**ವಾಯು ಶುದ್ಧವೆಂಬಿರಿ, ಇಪ್ಪತ್ತೊಂದು ಲಕ್ಷ ಜೀವರಾಶಿಗಳು**
**ಅಲ್ಲಿಯೇ ಹುಟ್ಟಿ, ಅಲ್ಲಿಯೇ ಹೊಂದಿದವಾಗಿ ವಾಯು ಶುದ್ಧವಲ್ಲ.**
**ಆಕಾಶ ಶುದ್ಧವೆಂಬಿರಿ, ಈ ಚತುರ್ವಿಧ ತತ್ವಂಗಳ ಒಳಗಿಟ್ಟುಕೊಂಡು**
**ಈ ಪ್ರಕಾರವಾದ ಕಾರಣ ಆಕಾಶ ಶುದ್ಧವಲ್ಲ.**
**ಇವು ಶುದ್ಧವಹ ಪರಿಎಂತೆಂದೊಡೆ : ಈ ಪಂಚ ತತ್ವಗಳು ಹುಟ್ಟಿದವು**
**ನಮ್ಮ ಸದಾಶಿವನ ಸಿರಿಯಪ್ಪದೊಂದು ಇಷ್ಟಲಿಂಗದಲ್ಲಿ.**
**ಆ ಲಿಂಗಕ್ಕೆ ಅಷ್ಟವಿಧಾರ್ಚನೆ ಮಾಡಿ ಸರ್ವರುಚಿ ಪದಾರ್ಥವನು ತಂದು**
**ಆ ಲಿಂಗಕ್ಕೆ ಕೊಟ್ಟಲ್ಲಿ, ಲಿಂಗ ಪ್ರಸಾದವನು ಅಂಗಕ್ಕೆ ಲೇಸಾಗಲೆಂದು,**
**ಕೊಂಬಾತನ ಸರ್ವಾಂಗವೆಲ್ಲ ಶುದ್ಧವಯ್ಯಾ . ಆತನಿಪ್ಪ ಗೃಹವೇ ಪುಣ್ಯಕ್ಷೇತ್ರಮ,**
**ಅಂತಹವರ ಪಾದಕ್ಕೆ ಶರಣಾರ್ಥಿ.**

**ಈ ವಿವರವನರಿಯದೆ ತನ್ನ ಕರದ ಲಿಂಗಕ್ಕೆ ಅಷ್ಟವಿಧಾರ್ಚನೆಯ ಮಾಡದೆ,**
**ಭೋಜನ ಪದಾರ್ಥ ನೀರು ರೊಟ್ಟಿ ಮುಟ್ಟಿಗೆ ಗುಗ್ಗರಿ ಸೀತೆನಿ ಬೆಳಸಿ ಕಾಯಿ**
**ಕಸಿಕು ಹಣ್ಣು ಹಂಪಲ ಹಾಲು ಮೊಸರು ಮಜ್ಜಿಗೆ ತುಪ್ಪ ಸಕ್ಕರೆ ಹೋಳು**
**ವೀಳೆಯ-ಇವನೆಲ್ಲವನು ತನ್ನ ಲಿಂಗಕ್ಕೆ ಕೊಡದೆ, ಅಂಗಕ್ಕೆ ಲೇಸಾಗಲೆಂದು**
**ತಿಂಬುವನು ಅವನೀಗ ತಾನೇ ಶುದ್ಧ ಹೊಲೆಯನೆಂದಾತ**
**ನಮ್ಮ ಅಂಬಿಗರ ಚೌಡಯ್ಯ**

ಜನನ ಸೂತಕವನ್ನು ಮರಣ ಸೂತಕವನ್ನು ಮನೆ ಸಾರಿಸಿ, ಪೂಜಾ ವಿಧಿ ವಿಧಾನಗಳನ್ನು ಆಚಾರ್ಯರಿಂದ, ಜಂಗಮರಿಂದ ಮಾಡಿಸಿ ದಾನ ಧರ್ಮಾದಿಗಳನ್ನು ಮಾಡಿ ಶುದ್ಧವಾದೆವೆಂದು ಸಮಾಧಾನಪಡುವ ಲೋಕದ ಜನಕ್ಕೆ ಅಂಬಿಗರ ಚೌಡಯ್ಯ ಶರಣರು ಮಾರ್ಮಿಕವಾಗಿ ನುಡಿಯುತ್ತ ಶುದ್ಧವಾಗುವ ಸೂತ್ರವನ್ನು ಹೇಳಿದ್ದಾರೆ.

ಪೃಥ್ವಿ ಶುದ್ಧವೆಂದು ತಿಳಿದು ಮಣ್ಣು ತಂದು ಪೂಜಿಸಲು ಹೋದರೆ ಪೃಥ್ವಿ ಶುದ್ಧವಲ್ಲ. ಏಕೆಂದರೆ ಪೃಥ್ವಿಯ ಮೇಲೆ ಪೃಥ್ವಿಯ ಗರ್ಭದಲ್ಲಿ ವಾಸಿಸುವ ಇಪ್ಪತ್ತೊಂದು ಲಕ್ಷ ಜೀವರಾಶಿಗಳು ನಿತ್ಯ ನಿತ್ಯ ಸಾಯುತ್ತವೆ ; ನಿತ್ಯ ನಿತ್ಯ ಹುಟ್ಟುತ್ತವೆ. ಹೀಗಾಗಿ ಪೃಥ್ವಿ ಕೂಡಾ ಜನನ ಮರಣ ಸೂತಕಗಳನ್ನು ಅನುಭವಿಸುತ್ತಲಿದೆ.

ಜಲ ಶುದ್ಧವೆಂದು ಜಲದಿಂದ ಪೂಜಿಸಿ ಜನನ ಮರಣದ ಸೂತಕ ಕಳೆದು ಕೊಳ್ಳಲು ಹೋದರೆ ; ಜಲವೂ ಶುದ್ಧವಲ್ಲ. ಏಕೆಂದರೆ ಜಲದಲ್ಲಿ ಕೂಡಾ ಇಪ್ಪತ್ತೊಂದು ಲಕ್ಷ ಜೀವರಾಶಿಗಳು ನಿತ್ಯ ನಿತ್ಯ ಹುಟ್ಟಿ, ನಿತ್ಯ ನಿತ್ಯ ಜಲದಲ್ಲಿಯೇ ಮರಣ ಹೊಂದುವವು. ಹೀಗಾಗಿ ಜಲವು ಕೂಡಾ ಜನನ ಮರಣ ಸೂತಕಗಳನ್ನು ಅನುಭವಿಸುತ್ತಲಿದೆ ; ಜಲ ಶುದ್ಧವಲ್ಲ.

ಅಗ್ನಿ ಶುದ್ಧವೆಂದು ಅಗ್ನಿಯಿಂದ ಹೋಮ ಹವನ ಮಾಡಿ ಸೂತಕ ಕಳೆದುಕೊಳ್ಳಲು ಹೋದರೆ ಮಂದಾಗ್ನಿಯ ಮೂಲಕ ಇಪ್ಪತ್ತೊಂದು ಲಕ್ಷ ಜೀವರಾಶಿಗಳು ಹುಟ್ಟಿ ಆ ಅಗ್ನಿಯಿಂದಲೇ ಸಾಯುತ್ತವೆ. ಹೀಗಾಗಿ ಅಗ್ನಿ ಕೂಡಾ ಜನನ ಮರಣ ಸೂತಕವನ್ನು ಆನುಭವಿಸುತ್ತಲಿದೆ. ಅಗ್ನಿ ಶುದ್ಧವಲ್ಲ.

ವಾಯು ಶುದ್ಧವೆಂದು ವಾಯುವನ್ನು ಪೂಜಿಸಿ ಸೂತಕ ಕಳೆದುಕೊಳ್ಳಲು ಹೋದರೆ ಆ ವಾಯುವಿನಲ್ಲಿಯೇ ಇಪ್ಪತ್ತೊಂದು ಲಕ್ಷ ಜೀವರಾಶಿಗಳು ಹುಟ್ಟಿ ಅಲ್ಲಿಯೇ ಮರಣ ಹೊಂದುತ್ತವೆ. ಹೀಗಾಗಿ ವಾಯು ಕೂಡಾ ಸೂತಕದಿಂದ ಕೂಡಿದೆ. ವಾಯು ಶುದ್ಧವಲ್ಲ.

ಆಕಾಶ ಶುದ್ಧವೆಂದು ಆಕಾಶವನ್ನು ಪೂಜಿಸಿ ಸೂತಕ ಕಳೆದುಕೊಳ್ಳಲು ಹೋದರೆ ; ಭೂಮಿ, ಜಲ, ಅಗ್ನಿ, ವಾಯುವನ್ನು ತನ್ನ ಗರ್ಭದಲ್ಲಿ ಹಿಡಿದಿಟ್ಟುಕೊಂಡಿದೆ. ಹೀಗಾಗಿ ಆಕಾಶವೂ ಶುದ್ಧವಲ್ಲ.

ಭೂಮಿ ಜಲ ಅಗ್ನಿ ವಾಯು ಆಕಾಶವೆಂಬ ಪಂಚತತ್ವಗಳು ಬಯಲದೇವನ ಗರ್ಭದ ಮೂಲಕ ಜನಿಸಿದವು. ಆ ದೇವನನ್ನು ಯಾರೂ ಹಡೆಯಲಿಲ್ಲ.ಆತ ಯಾರಿಂದಲೂ ಜನ್ಮ ಪಡೆಯಲಿಲ್ಲ. ಆತನಿಗೆ ಜನನವಿಲ್ಲ, ಮರಣವಿಲ್ಲ, ಆತನ ಅಂಶ ನಾನು. ಸರ್ವಾಂಗದಲ್ಲಿ ಲಿಂಗವಾಗಿ ಸಂಗಮವಾದ ಸಂಗಮನಾಥನು ಆತ. ಹೀಗಾಗಿ ಆ ಬಯಲನ್ನೇ ಲಿಂಗವಾಗಿ ಧರಿಸಿ ಆ ಲಿಂಗಕ್ಕೆ ಅಷ್ಟವಿಧಾರ್ಚನೆ ಯಿಂದ ಪೂಜಿಸಿ, ಸರ್ವರುಚಿ ಪದಾರ್ಥವನು ಆ ಲಿಂಗಕ್ಕೆ ಕೊಟ್ಟಲ್ಲಿ, ಲಿಂಗಪ್ರಸಾದವನು ಅಂಗಕ್ಕೆ ಲೇಸಾಗಲಿ ಎಂದು ಕೊಟ್ಟು ಕೊಂಬಾತನ ಸರ್ವ ಅಂಗವೆಲ್ಲ

ಶುದ್ಧವಾಯಿತು. ಆತನಿದ್ದ ಮನೆ ಪುಣ್ಯಕ್ಷೇತ್ರವಾಯಿತು. ಅಂತಹವರ ಪಾದಕ್ಕೆ ಶರಣಾರ್ಥಿ.

ಈ ವಿವರವನು ಅರಿಯದೆ ಅಂಗದಲ್ಲಿ ಸಂಗಮವಾದ ಲಿಂಗಕ್ಕೆ ಅಷ್ಟವಿಧಾರ್ಚನೆಯ ಮಾಡದೆ ಭೋಜನವನ್ನು ಅಂಗಕ್ಕೆ ಲೇಸಾಗಲೆಂದು ತಿಂಬುವವನೇ ಶುದ್ಧ ಹೊಲೆಯನು ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**136**

**ಜಲ ಶುದ್ಧವೆಂಬೆನೆ ಜಲ ಶುದ್ಧವಲ್ಲ, ನೆಲ ಶುದ್ಧವೆಂಬೆನೆ**
**ನೆಲ ಶುದ್ಧವಲ್ಲ,**
**ಅಗ್ನಿ ಶುದ್ಧವೆಂಬೆನೆ ಅಗ್ನಿ ಶುದ್ಧವಲ್ಲ, ವಾಯು ಶುದ್ಧವೆಂಬೆನೆ**
**ವಾಯು ಶುದ್ಧವಲ್ಲ,**
**ಬೆಳಗು ಶುದ್ಧವೆಂಬೆನೆ ಬೆಳಗು ಶುದ್ಧವಲ್ಲ.**
**ಗುರುವೆ, ನೀ ಕೇಳಯ್ಯಾ , ದೇವರಾಯ**
**ಹುಸಿಮುಸುಳ ಕಳೆದು, ಜ್ಞಾನವೆಂಬ ಬೆಳಗ ಸಾಧಿಸಬಲ್ಲಡೆ,**
**ಅಲ್ಲಿ ತಾನಿಪ್ಪನೆಂದನಂಬಿಗ ಚೌಡಯ್ಯ .**

ಜಲ ನೆಲ ಅಗ್ನಿ ವಾಯು ಬೆಳಕು ಜನ್ಮ ಪಡೆದದ್ದು ಬಯಲಿನಿಂದ. ಅವು ಯಾವೂ ಶುದ್ಧವಲ್ಲ. ಶುದ್ಧವಾಗುವ ಬಯಕೆಯೂ ಅವುಗಳಿಗಿಲ್ಲ. ಜಲ ನೆಲ ಅಗ್ನಿ ವಾಯುವನ್ನು ತನುವಿನ ಗರ್ಭದಲ್ಲಿಟ್ಟುಕೊಂಡು ಅವುಗಳನ್ನು ಶುದ್ಧೀಕರಿಸುವ ಶಕ್ತಿ ತನುವಿನಲ್ಲಿ ತನ್ಮಯವಾದ ಜ್ಞಾನದ ಬೆಳಕಿಗೆ ಮಾತ್ರ ಇದೆ. ಹೀಗಾಗಿ ಆ ಜ್ಞಾನವನ್ನು ಕೋಟಿ ಸೂರ್ಯ ಸಮಪ್ರಭ ಎಂದಿದ್ದಾರೆ ಪುರಾತನರು.

ಕೋಟಿ ಸೂರ್ಯರನ್ನು ಬೆಳಗುವ ಶಕ್ತಿ ಜ್ಞಾನದ ಬೆಳಕಿಗಿದೆ. ಅದು ಒಡಲೊಳಗೆ ಇದೆ. ಒಡಲಿಗೆ ಆಧಾರವಾಗಿ ಇದೆ. ಆದರೆ ಒಡಲನ್ನು ಸೋಂಕಿಲ್ಲ. ಒಡಲನ್ನು ಬೆಳಗುತ್ತಲಿದೆ ! ಬೆಳಕಿಂಗೆ ಬೆಳಕಾಗಿ ಬೆಳಗುತ್ತಲಿದೆ ಎಂದು ಜ್ಞಾನದ ಬೆಳಗನ್ನು ಕುರಿತು ಹಾಡಿದ್ದಾರೆ ಅಲ್ಲಮಪ್ರಭುಗಳು.

**ಗುರುವೆ, ನೀ ಕೇಳಯ್ಯ , ದೇವರಾಯ ಹುಸಿಮುಸುಳ ಕಳೆದು, ಜ್ಞಾನವೆಂಬ ಬೆಳಗ ಸಾಧಿಸಬಲ್ಲಡೆ ಅಲ್ಲಿ ತಾನಿಪ್ಪನೆಂದನಂಬಿಗ ಚೌಡಯ್ಯ :**

ಒಡಲು ತನ್ನೊಳಗೆ ಜಲ ಅಗ್ನಿ ವಾಯು ನೆಲವನ್ನು ಬಂಧಿಸಿಕೊಂಡಿದೆ. ಜ್ಞಾನವೆಂಬಬೆಳಗನ್ನು ಸಾಧಿಸಿ ಅದನ್ನು ಪಡೆದ ಶರಣರಿಗೆ ಮಾತ್ರ ಇದು ತಿಳಿದಿದೆ. ಉಳಿದ ಒಡಲುಗಳಲ್ಲಿ ಇವೆಲ್ಲ ಸಂಗಮವಾಗಿದ್ದರೂ ಅವುಗಳಿಗೆ ಈ ವಿಷಯ ತಿಳಿದಿಲ್ಲ. ತಿಳಿಯುವ ಗೊಡವೆಗೂ ಆ ಒಡಲುಗಳು ಹೋಗುತ್ತಿಲ್ಲ, ಏಕೆಂದರೆ ಹುಸಿಮುಸುಳ ಸುಖದಲ್ಲಿ ಒಡಲುಗಳು ತನ್ಮಯವಾಗಿವೆ !

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು, ಸಪ್ತ ವ್ಯಸನಗಳು, ಅಷ್ಟ ಮದಗಳು ಒಡಲನ್ನು ಸುಖಕ್ಕೆ ಈಡು ಮಾಡಿ ದುಃಖಕ್ಕೆ ಒಳಗು ಮಾಡಿವೆ. ಒಡಲನ್ನು ಆವರಿಸಿದ ಮನಕ್ಕೆ ಈ ಸುಳ್ಳು ಸುಖವೆಂದರೆ ಬಲು ಸಂತೋಷ ! ಸುಳ್ಳು ದುಃಖವೆಂದರೂ ಮನಕ್ಕೆ ಬಲು ಸಂತೋಷ !

ಮನ ಒಡಲಿಗೆ ಸುಳ್ಳು ಸುಖವನ್ನು ಸುಳ್ಳು ದುಃಖವನ್ನು ಕೊಡುತ್ತ ತಾನು ಪರಮ ಸುಖಿಯಾಗಿರುತ್ತದೆ. ಇಂತಹ ಮನದಿಂದಲೇ ಒಡಲೊಳಗೆ ಸಂಗಮವಾದ ಜ್ಞಾನವೆಂಬ ಬೆಳಗನ್ನು

ಸಾಧಿಸಬೇಕಾಗಿದೆ. ಆ ಜಾಗಕ್ಕೆ ಮನ ಪ್ರಯಾಣಿಸಿದಾಗ ಹುಸಿಮುಸಳ ಕಳೆದುಕೊಂಡ ಮನ ಘನಮನವಾಗುತ್ತದೆ. ಜ್ಞಾನವೆಂಬ ಬೆಳಗಿನಲ್ಲಿ ಮುಳುಗಿ ಬೆಳಗೇ ಆಗುತ್ತದೆ. ಆಗ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ.

**137**

**ಜಾತಿಭ್ರಮೆ, ನೀತಿಭ್ರಮೆ ಎಂಬ ಕರ್ಮಂಗಳನು**
**ಘಾತಿಸಿ ಕಳೆಯಬಲ್ಲಡಾತ ಯೋಗಿ.**
**ಕ್ಷೇತ್ರ ಭ್ರಮೆ, ತೀರ್ಥ ಭ್ರಮೆ, ಪಾಷಾಣ ಭ್ರಮೆ ಎಂಬ ಕರ್ಮಂಗಳನು**
**ನೀಕರಿಸಿ ಕಳೆಯಬಲ್ಲಡಾತ ಯೋಗಿ.**
**ಲೋಕಕ್ಕಂಜಿ ಲೌಕಿಕವ ಮರೆಗೊಂಡು  ನಡವಾತ ತೂತಯೋಗಿ**
**ಎಂದಾತನಂಬಿಗ ಚೌಡಯ್ಯ .**

ಜಾತಿ ಭ್ರಮೆ, ನೀತಿ ಭ್ರಮೆ ಕಳೆದುಕೊಂಡು ಕಳೆಯುವಾತನನ್ನು ಯೋಗಿ ಎಂದು ಕರೆದಿದ್ದಾರೆ ಅಂಬಿಗರ ಚೌಡಯ್ಯ ಶರಣರು. ಜಾತಿಗೊಬ್ಬ ಯೋಗಿಯನ್ನು ಸೃಷ್ಟಿ ಮಾಡಿ ಇಡೀ ವಾತಾವರಣವನ್ನೇ ಕಲುಷಿತ ಮಾಡುವ ನಕಲಿ ಶರಣರಿಗೆ ಚೌಡಯ್ಯ ಶರಣರ ಮಾತು ಛಾಟಿಯಿಂದ ಬೀಸಿ ಹೊಡೆದಂತಿದೆ.

'ಕೋತಿ ತಾನು ಕೆಡುವುದಲ್ಲದೆ ವನವನ್ನು ಕೆಡಿಸಿತು 'ಎನ್ನುವ ನಾಣ್ನುಡಿ ನಕಲಿ ಯೋಗಿಯನ್ನು ಕುರಿತು ಹೇಳಿದಂತಿದೆ. ಜಾತಿ ಭ್ರಮೆ ಉಂಟು ಮಾಡಲು ಸ್ವಾಮಿಯ ವೇಷ ತೊಟ್ಟುಕೊಂಡಾತ ಇಡೀ ಜನಾಂಗವನ್ನೇ ಮೋಸ ಮಾಡಿದಂತೆ. ತನ್ನನ್ನು ತಾನೇ ಮೋಸ ಮಾಡಿಕೊಂಡಂತೆ.

ಯೋಗಿ, ಶರಣ, ಗುರು ಎನ್ನುವ ಶಬ್ದಗಳು ಸಮಾಜ ಕೊಡಮಾಡುವ ಪದವಿಗಳಲ್ಲ. ಮತ್ತೊಬ್ಬ ವೇಷದ ಸ್ವಾಮಿ ತನ್ನ ಶಾಖಾ ಮಠದ ಪೀಠಗಳ ಮೇಲೆ ಕೂಡಿಸಿ ಶರಣ, ಯೋಗಿ ಎಂದು ಘೋಷಿಸುವಂತೆಯೂ ಇಲ್ಲ. ಶರಣ ಯೋಗಿ ಎನ್ನುವುದನ್ನು ತನಗೆ ತಾನೇ ಘೋಷಿಸಿಕೊಳ್ಳುವಂಥದ್ದು. ಪ್ರಮಾಣೀಕರಿಸಿಕೊಳ್ಳುವಂಥದ್ದು. ತನುವಿನಲ್ಲಿ ತನ್ಮಯವಾದ ಜ್ಞಾನಕ್ಕೆ ತನುವನ್ನು ಆವರಿಸಿದ ಮನದಿಂದ ಸಂಪೂರ್ಣ ಶರಣು ಹೋಗಿ ಶರಣನಾಗಿ ಶರಣತ್ವ ಸಂಪಾದಿಸುವಂಥದು. ಆ ಶರಣತ್ವದ ತಂತ್ರಜ್ಞಾನದಿಂದ ತನಗೆ ತಾನೇ ಆನಂದದಿಂದ ಪುಳಕಿತನಾಗುತ್ತಾನೆ. ತನುವಿನ ಅಜ್ಞಾನ ಬತ್ತಲೆಯಾಗುತ್ತದೆ. ತನು ಮತ್ತು ಜ್ಞಾನ ಮಾತ್ರ ಉಳಿಯುತ್ತದೆ. ಅಂತಹ ಜ್ಞಾನ ತನುವಿಗೆ, ಸಕಲ ತನುಗಳು ತನ್ನಂತೆಯೇ ಇರುವ ಜ್ಞಾನ ತನುಗಳಾಗಿ ಕಾಣುತ್ತದೆ. ಕಂಡ ತನುಗಳಿಗೆಲ್ಲ ಶರಣು ಶರಣಾರ್ಥಿ ಎಂದು ತಲೆಬಾಗಿ ಕೈಮುಗಿದು ನಮಸ್ಕರಿಸುತ್ತಾನೆ. ಶಿವಸ್ವರೂಪಿಗೆ ಸಕಲವೂ ಶಿವಮಯವಾಗಿ ಕಾಣುತ್ತದೆ.

ಕಾಯವನ್ನು ಜ್ಞಾನದಿಂದ ನೋಡುತ್ತಾನೆ. ಅದರ ಚರ್ಮಕ್ಕೆ ಜಾತಿ ಇಲ್ಲ. ಚರ್ಮದ ಗರ್ಭದಲ್ಲಿದ್ದ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸುಗಳಿಗೂ ಜಾತಿ-ಮತಗಳಿಲ್ಲ. ಕಾಯ ಯಾವ ನಾಡಿನಲ್ಲಿದ್ದರೇನು ? ಯಾವ ದೇಶದಲ್ಲಿದ್ದರೇನು ? ಕಾಯ ಒಂದೇ; ಕಾಯದಲ್ಲಿರುವ ಪದಾರ್ಥಗಳೂ ಒಂದೇ. ಕಾಯ ಹೆಣ್ಣು ಅಲ್ಲ ; ಗಂಡೂ ಅಲ್ಲ ! ಚರ್ಮ ಅದರೊಳಗಿದ್ದ

ಪದಾರ್ಥಗಳು ಎರಡೂ ಕಾಯಗಳಲ್ಲಿ ಒಂದೇ ಆಗಿರುವಾಗ ಅದು ಹೆಣ್ಣು ಹೇಗೆ? ಗಂಡು ಹೇಗೆ ? ಕಣ್ಣಿನ ಅಜ್ಞಾನದಿಂದಾಗಿ ಹೆಣ್ಣಾಗಿದೆ; ಗಂಡಾಗಿದೆ. ಜಾತಿ ಮತ ಪಂಥಗಳನ್ನು ಅಜ್ಞಾನದ ಕಣ್ಣು ತಾನೇ ಸೃಷ್ಟಿಸಿಕೊಂಡಿದೆ. ವೇಷ ಹಾಕಿಕೊಂಡ ಶರಣನಿಗೆ ನಿಜ ಕಾಯ ಕಾಣುವುದಿಲ್ಲ. ಹೆಣ್ಣು ಗಂಡು ಜಾತಿ ಮತ ಪಂಥಗಳು ಕಾಣುತ್ತವೆ. ಅಜ್ಜಿ, ಅವ್ವ, ತಾಯಿ ಎನ್ನುವ ವೇಷದ ಮೋಸದ ಧ್ವನಿಯ ಹಿಂದೆ ವಿಷಯ ಸುಖದ ಹಾದರ ಅಡಗಿರುತ್ತದೆ.

ಕಾಯಕ್ಕೆ ಹಾಕಿದ ವೇಷ ಸುಳ್ಳು ನುಡಿಯುವುದಕ್ಕೂ ಹೇಸುವುದಿಲ್ಲ; ಹಾದರ ಮಾಡುವುದಕ್ಕೂ ಹೇಸುವುದಿಲ್ಲ. ಇವೆರಡೂ ವೇಷದ ಕಾಯಕ್ಕೆ ಸುಖ ; ಸಂಭ್ರಮ. ಇಂತಹ ನಕಲಿ ಶರಣ ಯೋಗಿ ವೇಷ ಹಾಕಿದ ಕಾಯಗಳಿಂದ ಜಾತಿಭ್ರಮೆ, ನೀತಿ ಭ್ರಮೆ ಎಂಬ ಕರ್ಮಂಗಳನ್ನು ಘಾತಿಸಿ ಕಳೆಯಲು ಸಾಧ್ಯವೆ ? ಕ್ಷೇತ್ರಭ್ರಮೆ, ತೀರ್ಥಭ್ರಮೆ, ಪಾಷಾಣ ಭ್ರಮೆ ಎಂಬ ಕರ್ಮಂಗಳನ್ನು ನೀಕರಿಸಿ ಕಳೆಯಲು ಸಾಧ್ಯವೆ ? ಸಾಧ್ಯವೇ ಇಲ್ಲ. ಏಕೆಂದರೆ ಅವುಗಳ ಸೃಷ್ಟಿಕರ್ತರೇ ಇವರು ! ಇಂತವರೆಲ್ಲ ಯೋಗಿಗಳಲ್ಲ; ತೂತ ಯೋಗಿಗಳು ಎಂದು ಕರೆದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**138**

**ಜಾತಿವಿಚಾರ, ನೀತಿವಿಚಾರ, ಸಮಯ ವಿಚಾರವೆಂಬ**
**ತ್ರಿವಿಧವ ಹಿಡಿದು, ಬಿಡದೆ ಉತ್ತಮ ಮಧ್ಯಮ ಕನಿಷ್ಠವೆಂಬವ**
**ಕಾಲಿಗೆ ಮೂವವ ಕಟ್ಟಿ ಸಿಕ್ಕಿಸಿ,**
**ಸರ್ವಸೂತಕದೊಳಗಿರ್ದಜಾತನಾದೆ ಕ...ಗವನೆಂದಡಾತ**
**ಸಾಧ್ಯವಾದಾತನೆ ಸಿಕ್ಕನೆಂದ ಅಂಬಿಗ ಚೌಡಯ್ಯ .**

ಕಾಯ ಒಂದೇ. ಕಾಯದಲ್ಲಿ ಸಂಗಮವಾದ ಅರಿವು ಒಂದೇ. ಕಾಯವನ್ನು ಆವರಿಸಿದ ಮನ ಒಂದೇ. ಈ ಮನದಿಂದಾಗಿ ಕಾಯ ಮುಸಲ್ಮಾನ ಹಿಂದು ಕ್ರಿಶ್ಚಿಯನ್ ಆಗಿದೆ. ಜಾತಿ ಮತ ಪಂಥವನ್ನು, ನೀತಿ-ಅನೀತಿ, ವಿಚಾರವನ್ನು ಹೆಗಲಿಗೆ ಹಾಕಿಕೊಂಡು ದುಃಖ ಮತ್ತು ಸುಖ ಪಡುತ್ತಲಿದೆ. ಹೆಣ್ಣು ಗಂಡು ಎಂದು ಅಜ್ಞಾನವನ್ನು ಹೇರಿಕೊಂಡಿದೆ. ಉತ್ತಮ ಮಧ್ಯಮ ಕನಿಷ್ಠ ಎಂಬ ಅಜ್ಞಾನದ ಗುಂಡು ಕಾಲಿಗೆ ಕಟ್ಟಿಕೊಂಡಿದೆ.

ಜನನ ಮರಣ ಇತ್ಯಾದಿ ಸೂತಕಗಳನ್ನು ಹೇರಿಕೊಂಡು ಕಾಯ ವಿಲಿ ವಿಲಿ ಒದ್ದಾಡುತ್ತಲಿದೆ. ಕಾಯದಲ್ಲಿ ಸಂಗಮವಾದ ಅರಿವೆಂಬ ಸಂಗಮನಾಥನು ಕಾಯವನ್ನು ಆವರಿಸಿದ ಮನಕ್ಕೆ ಬಹುದೂರ ಆಗಿದ್ದಾನೆ. ಕಾಯದ ಒಳಗೆ ಅರಿವು ಕಾಯದ ಹೊರಗೆ ಮನ. ಆದರೂ ಕ್ರಮಿಸುವ ದಾರಿ ಬಲುದೂರ. ಕಾಯ ಕೃಷವಾದರೂ ಕಾಯದ ಸಂಪತ್ತು ಕಾಯಕ್ಕೆ ಸಿಕ್ಕುತ್ತಿಲ್ಲ ; ಅಸಾಧ್ಯವ ಸಾಧಿಸುವ ಛಲವೂ ಮನಕ್ಕೆ ಇಲ್ಲವಾದುದರಿಂದ ಸಮೀಪವಿದ್ದರೂ ದಾರಿ ಬಲು ದೂರ ಕ್ರಮಿಸಬೇಕಾಗಿದೆ.

ಜಾತಿ ನೀತಿ ಸಮಯ ವಿಚಾರಗಳು ಲೋಕದಲ್ಲಿದ್ದರೂ ತನಗೆ ತಾಕದಂತೆ ಅರಿವಿನಿಂದ ಬಲು ಸಂತೋಷದಿಂದ ಹಾದಿ ಕ್ರಮಿಸುವ ವಿಚಾರ ತನಗೆ ಹೊಳೆದರೆ ಸಾಕು ಅದನ್ನು ಹಿಡಿಯದೆ ಜನರ ತೋರಿಕೆಗಾಗಿ ಬಿಡದೆ, ಉತ್ತಮ ಮಧ್ಯಮ ಕನಿಷ್ಠವೆಂಬ ಅಜ್ಞಾನಕ್ಕೆ ಸಿಲುಕದೆ ; ಸಕಲ

ಕಾಯಗಳನ್ನು ಆ ದೃಷ್ಟಿಯಿಂದ ನೋಡದೆ, ಸರ್ವ ಸೂತಕದೊಳಗಿದ್ದೂ ಅಜಾತನಾದವನು, ಜಾತಿ ಅಂಟಿಸಿಕೊಳ್ಳದೆ ಅಜಾತನೆ ತಾನಾದವನು ಸಿಗಲು ಸಾಧ್ಯವೆ ? ಎಂದು ಪ್ರಶ್ನಿಸಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**139**

**ಜೇಡಂಗೆ ಬೇಡಂಗೆ ಡೋಹಾರಂಗೆ ಹೊಲೆಯಂಗೆ**
**ರೂಢಿಗೀಶ್ವರನೊಲಿದ ಪರಿಯ ನೋಡಾ ಅಯ್ಯಾ !**
**ಲೋಕದ ಮನುಜರು ಮಾಡುವ ಸಮಯಂಗಳ ಮಾಡಲೇಕೆ ?**
**ಅವರು ಸ್ವತಂತ್ರರು, ಇವರು ಹೋದ ಠಾವಿನಲ್ಲಿ**
**ಕಲ್ಲು ಮುಳ್ಳು ಮೂಡವು.**
**ಇವರ ಕೂಡ ಕೂರದಾತನಂಬಿಗ ಚೌಡಯ್ಯ .**

ಜೇಡರ ದಾಸೀಮಾರ್ಯರಿಗೆ, ಬೇಡರ ಕಣ್ಣಪ್ಪನಿಗೆ, ಡೋಹಾರ ಕಕ್ಕಯ್ಯನವರಿಗೆ, ಮಾದಾರ ಚೆನ್ನಯ್ಯನವರಿಗೆ, ನುಲಿಯ ಚೆಂದಯ್ಯ ಮುಂತಾದ ಶರಣರಿಗೆ ಅರಿವೆಂಬ ಶಿವ ಒಲಿದ ಪರಿಯ ನೋಡಯ್ಯ .

ಲೋಕದ ಮನುಜರು ಕೂಡಾ ನಾನಾ ದೇವತೆಗಳನ್ನು ಒಲಿಸಿಕೊಳ್ಳಲು ಪೂಜಿಸುತ್ತಾರೆ. ಆದರೆ ಶರಣರಿಗೂ ಲೋಕದ ಮನುಜರಿಗೂ ಅಜಗಜಾಂತರ ವ್ಯತ್ಯಾಸ. ಶರಣರು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಶಿವನಿಗೆ ಶರಣು ಹೋದರು. ಆ ಅರಿವೇ ತಾವಾದರು. ಶಿವ ಶರಣರಿಗೆ ಪ್ರತ್ಯಕ್ಷವಾದ. ಶಿವ ಶರಣ ಒಂದಾಗಿ ಶಿವಶರಣರಾದರು. ಶಿವನನ್ನು ಶರಣರು ಆಲಯಕ್ಕೆ ಹೋಗಿ ಆರಾಧಿಸಲಿಲ್ಲ. ಅಂಗದಲ್ಲಿಯೇ ಹುಡುಕಿದರು. ಲಿಂಗ ಅಲ್ಲಿಯೇ ಪ್ರತ್ಯಕ್ಷವಾಯಿತು. ಲಿಂಗಾಂಗಿಗಳಾದರು.

ಲೋಕದ ಜನ ಶರಣರಂತೆ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಕ್ಕೆ ಶರಣು ಹೋಗಲಿಲ್ಲ. ಆಲಯದಲ್ಲಿರುವ ಸ್ಥಾವರಕ್ಕೆ ಶರಣು ಹೋದರು. ಮಲ್ಲಿಕಾರ್ಜುನ, ವೆಂಕಟರಮಣ, ಪದ್ಮಾವತಿ,ಭ್ರಮರಾಂಬ ಎಂದರು. ಕಲ್ಲನ್ನು ಕೆತ್ತಿ ಕಲ್ಲೆನ್ನಲಿಲ್ಲ. ಬದಲಾಗಿ ಮಸೀದೆ, ಚರ್ಚ್, ದೇವಾಲಯವೆಂದರು. ಅಲ್ಲಿಯೇ ಪೂಜಿಸಿದರು. ಅಲ್ಲಿಯೇ ಪ್ರಾರ್ಥಿಸಿದರು. ಅಲ್ಲಿಯೇ ಹುಡುಕಿದರು. ಹೀಗಾಗಿ ಆ ಕಲ್ಲು ಹಿಂದು ಮುಸಲ್ಮಾನ ಕ್ರಿಶ್ಚಿಯನ್ ನಾಗು ಎಂದು ಕಲ್ಲನ್ನು ಆರಾಧಿಸಿದ ಅಂಗಗಳಿಗೆ ಆಶೀರ್ವದಿಸಿದರು. ಅಂಗದಿಂದ ಹುಟ್ಟಿದ ಕಲ್ಲು ಅಂಗಕ್ಕೆ ಶ್ರೇಷ್ಠ ವಾಯಿತು, ಅಂಗ ಕನಿಷ್ಠವಾಯಿತು.

ಕಲ್ಲಿನಲ್ಲಿ ಸಿಕ್ಕಿ ಹಾಕಿಕೊಂಡ ಅಂಗ ಕಲ್ಲು ಮುಳ್ಳುಗಳ ಬಾಧೆಯಿಂದ ನರಳಿತು. ಆದರೂ ಕಲ್ಲನ್ನು ಆರಾಧಿಸಲು ಬಿಡಲಿಲ್ಲ. ಬಳಕೆ ಮಾಡಿದ ಕಲ್ಲು ಒಂದೇ. ಆದರಲ್ಲಿ ನಿರ್ಮಾಣವಾದ ಮಸೀದೆ, ಆಲಯ, ಚರ್ಚ್ ಬೇರೆ ಬೇರೆ. ಅದನ್ನು ಆರಾಧಿಸುವ ಅಂಗಗಳೆಲ್ಲ ಒಂದೇ. ಅಂಗದಲ್ಲಿರುವ ಪದಾರ್ಥಗಳೆಲ್ಲ ಒಂದೇ. ಆದರೂ ಹಿಂದು ಮುಸಲ್ಮಾನ ಕ್ರೈಸ್ತ ಎಂಬ ನಾಮ ಪಡೆದು ಒಂದನ್ನೇ ಅನೇಕ ಮಾಡಿ ಕೊಂಡು ಸರಳ ಹಾದಿಯಲ್ಲಿ ಜಾತಿ ಬೀಜ ಬಿತ್ತಿ ಮುಳ್ಳನ್ನು ಮುರಿದುಕೊಂಡಿದೆ.

ಲೋಕದ ಜನ ದೇವನನ್ನು ಆರಾಧಿಸಲು ಬಿಟ್ಟಿಲ್ಲ ; ದೇವರೆಂದರೆ ಯಾರೆಂದೂ ತಿಳಿಯುತ್ತಿಲ್ಲ. ಕ್ರಿಸ್ತ ಪೈಗಂಬರ ಕ್ರಿಷ್ಣ ಹೋದ ಹಾದಿಯಲ್ಲಿ ಕಲ್ಲು ಮುಳ್ಳುಗಳಿಲ್ಲ. ಕಾಯವನ್ನೇ ಕೈಲಾಸ ಮಾಡಿಕೊಂಡು ಆನಂದದಿಂದ ಜೀವನದ ಹಾದಿ ಕ್ರಮಿಸಲು ಹೇಳಿದರು. ಕಾಯವೆಂಬ ಕೈಲಾಸಕ್ಕೆ ಹೋ ಗುವ ರಾಜ ಮಾರ್ಗವನ್ನು ಬರೆದಿಟ್ಟು ಹೋದರು.ಲೋಕದ ಜನ ಹಾದಿ ತೋರಿದ ಕ್ರಿಷ್ಣನನ್ನು ಪೂಜಿಸಿ ಆತ ಬರೆದ ಗ್ರಂಥವನ್ನು ಆರಾಧಿಸಿ ಮುಳ್ಳು ಮುರಿದು ಕೊಂಡು ಹಿಂದುವಾಯಿತು. ಜುಟ್ಟು ಬಿಟ್ಟು ಜನಿವಾರ ಹಾಕಿ ನಾಮ ಬರೆದುಕೊಂಡು ಬ್ರಾಹ್ಮಣನಾಯಿತು. ಬ್ರಹ್ಮನಾಗಲಿಲ್ಲ. ಜಾತಿ ಮತ ಪಂಥ ಹೆಣ್ಣು ಗಂಡುಗಳನ್ನು ಸೃಷ್ಟಿ ಮಾಡಿಕೊಂಡು ಕೈಲಾಸವಾಗಬೇಕಾದ ಕಾಯ ನರಕದ ನಿವಾಸವಾಯಿತು.

ಅಂಗಕ್ಕೆ ಚುಚ್ಚಿಕೊಂಡ ಅಜ್ಞಾನದ ಮುಳ್ಳಿನಲ್ಲಿ ಮುಸಲ್ಮಾನ ಕ್ರೈಸ್ತ ಹುಟ್ಟಿದ. ಬೇಡ ಜೇಡ ಡೋಹಾರ ಹೊಲೆಯ ಗೊಲ್ಲ ಕುರಿಗಾಹಿಗಳಿಗೆ ಈಶ್ವರ ಒಲಿದ. ಅವರು ಸ್ವತಂತ್ರರು. ಅವರು ಹೋದ ಹಾದಿಯಲ್ಲಿ ಪರಿಮಳಭರಿತ ಹೂಗಳು ಮೂಡಿದವು. ಅವರನ್ನು ಕಲ್ಲುಮಾಡಿ, ಮಸೀದೆ ಮಂದಿರ ಚರ್ಚ್‌ಗಳನ್ನು ನಿರ್ಮಿಸಿದ ಲೋಕದ ಮನುಜರು ನಡೆವ ಹಾದಿಯಲ್ಲಿ ಬರೀ ಕಲ್ಲು ಮುಳ್ಳುಗಳು ಮೂಡಿದವು. ದಾರಿ ದುರ್ಗಮವಾಯಿತು ! ಇದು ಅಂಬಿಗರ ಚೌಡಯ್ಯಗಳ ಸಹಜ ಸೂತ್ರ .

**140**

**ಜ್ಞಾನಾಜ್ಞಾನವೆಂಬ ಉಭಯವ ನಾನರಿಯದೆ,**
**ಕಾಯ ಜೀವವೆಂಬ ಹೆಚ್ಚು ಕುಂದರಿಯದೆ,**
**ನಾನು ನೀನು ಎಂದೆಂಬ ಭ್ರಮೆ ಇನ್ನಾರಿಗೆ ?**
**ಹೇಳೆಂದಾತ ನಮ್ಮಂಬಿಗ ಚೌಡಯ್ಯ .**

ಕಾಯ ಜ್ಞಾನದಿಂದ ಭರಿತವಾಗಿದ್ದರೂ ಅಜ್ಞಾನ ಕಾಯವನ್ನು ಆವರಿಸಿಕೊಂಡಿದೆ. ಮನ ಕ್ಷಣ ಕ್ಷಣಕ್ಕೂ ಅಜ್ಞಾನವನ್ನು ಆಮಂತ್ರಣ ಮಾಡಿಕೊಳ್ಳುತ್ತಲಿದೆ. ಅದು ಮನದ ಸ್ವಭಾವ. ಅಜ್ಞಾನವೆಂದರೆ ಮನಕ್ಕೆ ಬಲು ಸುಖ.

ಜ್ಞಾನ, ಕಾಯದಲ್ಲಿ ಸಹಜವಾಗಿದೆ. ಸಹಜತೆ ಎನ್ನುವುದು ಕಾಯದ ಗುಣ. ಆದರೂ ಕಾಯ ಹೊತ್ತ ಪ್ರತಿ ಕಾಯವೂ ಪ್ರತಿ ಜೀವಿಯೂ ಕಾಯದ ಜ್ಞಾನಾಜ್ಞಾನವನ್ನು ತಿಳಿದು ಕೊಂಡು ಜ್ಞಾನದಲ್ಲಿ ನಿಲ್ಲುವ ಕಾಯಕ ಕಾಯ ಮಾಡಲೇಬೇಕಾಗಿದೆ. ಜ್ಞಾನದ ಕಾಯಕ ಮಾಡುವ ಕಾಯವೇ ಕೈಲಾಸವಾಗುತ್ತದೆ. ಜ್ಞಾನದ ಕಾಯಕವೂ ಕೈಲಾಸವೇ ಆಗಿದೆ. ಕಾಯ ಉಪ ಜೀವನಕ್ಕಾಗಿ ಮಾಡುವ ಪ್ರತಿ ಕೆಲಸವೂ ಕಾಯಕವಲ್ಲ ಎನ್ನುವುದನ್ನು ಕಾಯ ತಿಳಿಯಲೇಬೇಕು.

ಕಾಯದಲ್ಲಿ ಸಂಗಮವಾದ ಅರಿವಿನ ಕಾಯಕವನ್ನು ಕಾಯವನ್ನು ಆವರಿಸಿದ ಮನ ವಿಶ್ವಾಸದಿಂದ ಮಾಡಿದರೆ ಸಾಕು ನಾನು-ನೀನು ಎನ್ನುವ ಭ್ರಮೆ ಕಾಯದಿಂದ ದೂರ ಸರಿಯುತ್ತದೆ. ಏಕೆಂದರೆ ನಾನು ಎನ್ನುವ ಅಜ್ಞಾನವೇ ಕಾಯದಲ್ಲಿ ಸಂಗಮವಾದ ಜ್ಞಾನವೆಂಬ ಜ್ಞಾನೇಶ್ವರನು ಹೇಳುವ ಕಾಯಕದಲ್ಲಿ ನಿರತವಾಗಿದೆ. ನಾನು ಎನ್ನುವ ಮನ ಅವನು ಎನ್ನುವ ಸಂಗಮನಾಥನಲ್ಲಿ ಒಂದಾಯಿತು. ಕಾಯ ಜೀವವೆಂಬ ಅಜ್ಞಾನದ ಹೊಲಿಗೆ ಬಿಚ್ಚಿಕೊಂಡು ಅವೆರಡೂ ಜ್ಞಾನದಲ್ಲಿ ಸಂಗಮವಾದವು. ಕಾಯವೇ ಕೈಲಾಸವಾಯಿತು.

**141**

**ಜ್ಞಾನಿಯಾದಲ್ಲಿ ಧ್ಯಾನ ಮೋನಂಗಳಲ್ಲಿರಲೇತಕ್ಕೆ ?**
**ಅರಿವು ಕರಿಗೊಂಡಲ್ಲಿ ಸುರುಳಿ ಸುರುಳಿ ಬಿಡಲೇತಕ್ಕೆ ?**
**''ತಲೆಯೊಡೆಯಂಗೆ ಕಣ್ಣು ಹೊರತೆ'' ಎಂಬ ತುಡುಗಣಿತನವೆ ?**
**ಆ ಗುಣ ಬಿಡುಮುಡಿಯಲ್ಲ ಎಂದನಂಬಿಗ ಚೌಡಯ್ಯ.**

ಜ್ಞಾನಿ ಸಹಜ. ಆತನಿಗೆ ಧ್ಯಾನವಿಲ್ಲ ; ಮೌನವೂ ಇಲ್ಲ. ಧ್ಯಾನ ಮೌನ ಎನ್ನುವುದು ಢೋಂಗಿ ವಿದ್ಯೆ. ಹರಿದಾಡುವ ಗಾಳಿಯನ್ನು ಧ್ಯಾನ ಮಾಡಿಸಲು ಸಾಧ್ಯವೆ ? ಮೌನದಿಂದ ಇರು ಎಂದು ಹೇಳಿದರೆ ಅದು ಮೌನ ತಾಳುವುದೇ ? ಸುಳಿದು ಬೀಸುವುದು ಅದರ ಛಾಳಿ. ಸುಂಟರ ಗಾಳಿಯಂತೆ ಬೀಸಿ ಪ್ರಕೃತಿಯನ್ನು ಕಲಕುವುದು ಅದರ ಛಾಳಿ. ಎಷ್ಟು ವರ್ಷದವರೆಗೆ ಧ್ಯಾನ ಮಾಡಲು ಹೇಳಿದರೆ ಮನ ಧ್ಯಾನ ಮಾಡಲು ಸಾಧ್ಯವೆ ? ಮೌನದಿಂದ ಇರಲು ಸಾಧ್ಯವೆ ?

ಕಾಯವನ್ನು ಆವರಿಸಿದ ಮನ ಕಾಯವನ್ನು ಧ್ಯಾನದ ಭಂಗಿಯಲ್ಲಿ ಕೂಡಿಸಿ ತಾನು ವಿಹಾರಕ್ಕೆ ಹೊರಡುವುದು. ಹಾಗೆಯೇ ಕಾಯವನ್ನು ಮೌನದಲ್ಲಿ ಕೂಡಿಸಿ ತಾನು ಬಸವಿಯಂತೆ ಅಲೆದಾಡಲು ಹೋಗುವುದು.

ಬಸವಿ, ಹಾದರಗಿತ್ತಿ, ಸೂಳೆ ಎನ್ನುವ ಶಬ್ದಗಳು ಕಾಯಕ್ಕೆ ಇಟ್ಟ ಹೆಸರುಗಳಲ್ಲ. ಇವೆಲ್ಲ ಮನಕ್ಕೆ ಇಟ್ಟ ಹೆಸರುಗಳು. ಜ್ಞಾನದ ತಂತ್ರಜ್ಞಾನವನ್ನು ತಿಳಿಯದ ಗುರು ಮಠಾಧಿಪತಿ ಆಶ್ರಮವಾಸಿ ಜಗದ್ಗುರುವಾದರೇನು ? ಆ ಕಾಯದ ಮನ ಬಸವಿ, ಹಾದರಗಿತ್ತಿ, ಸೂಳೆಯೇ ಆಗಿದೆ. ವೇಷ ಎನ್ನುವುದು ಸೂಳೆಗೆ ಹೊರತು ಗರತಿ ಕಾಯಕ್ಕಲ್ಲ. ಮನವೆಂಬ ಸೂಳೆ ಜ್ಞಾನಿಯ ವೇಷ ಧರಿಸಿ ಧ್ಯಾನ ಮೌನಂಗಳಲ್ಲಿ ಕಾಯವನ್ನು ತೋರಿಕೆಗೆ ಕೂಡಿಸಿ ತಾನು ವಿಹಾರಕ್ಕೆ ಹಾದರಕ್ಕೆ ಹೊರಡುತ್ತದೆ.

ಮನವೆಂಬುದು ಒಂದು ಕಾಯ. ಇದನ್ನು ಸೂಕ್ಷ್ಮಕಾಯ ಎಂದು ಕರೆಯುತ್ತಾರೆ. ಜ್ಞಾನವೆಂಬುದು ಒಂದು ಕಾಯ. ಇದನ್ನು ಕಾರಣ ಕಾಯ ಎಂದು ಕರೆಯುತ್ತಾರೆ. ದೇಹವೆಂಬುದು ಒಂದು ಕಾಯ. ಇದನ್ನು ಸ್ಥೂಲ ಕಾಯ ಎಂದು ಕರೆಯುತ್ತಾರೆ. ಸೂಕ್ಷ್ಮ ಕಾಯ ಜ್ಞಾನ ಕಾಯಗಳೆರಡು ಸ್ಥೂಲ ಕಾಯವನ್ನು ಉಪಕರಣ ಮಾಡಿಕೊಂಡಿವೆ. ಬಸವಿಯಂತೆ ಸುಳಿದಾಡುವ ಸೂಕ್ಷ್ಮಕಾಯ ಸ್ಥೂಲ ಕಾಯವನ್ನು ತನ್ನಿಚ್ಛೆಗನು ಗುಣವಾಗಿ ಬಳಸುತ್ತದೆ. ಜ್ಞಾನಿಯ ವೇಷ ಹಾಕಿ ಧ್ಯಾನ ಮೌನಂಗಳ ಭಂಗಿಯಲ್ಲಿ ಕಾಯವನ್ನು ಕೂಡಿಸಿ ತಾನು ಬಸವಿಯಂತೆ ಹಾದರ ಮಾಡುತ್ತದೆ. ಜ್ಞಾನಿ ವೇಷ,ಶಾಸಕ ಸಚಿವನ ವೇಷ,ಗುರು ಶಿಷ್ಯನ ವೇಷ, ಹೆಣ್ಣು ಗಂಡಿನ ವೇಷಗಳ ಮೂಲಕ ಮನ ಕಾಯವನ್ನು ಉಪಕರಣದಂತೆ ಬಳಸುತ್ತದೆ. ಮನ ಸ್ಥೂಲಕಾಯದ ಮೂಲಕ ಮಾಡುವ ಕೆಲಸಗಳೆಲ್ಲ ಸುಳ್ಳು. ಸುರುಳಿ ಸುರುಳಿಯಂತೆ ಬರೀ ರೀಲು ಬಿಡುತ್ತದೆ. ಅರಿವು ಕರಿಗೊಂಡ ಕಾಯವಲ್ಲ ಎನ್ನುವುದು ಜ್ಞಾನಿಗೆ ಗೊತ್ತಾಗುತ್ತದೆ. ಸಕಲ ಕಾಯಗಳಿಗೂ ಗೊತ್ತಾಗುತ್ತದೆ. ಗೊತ್ತಾಗುವುದು ಸ್ವಲ್ಪ ತಡವಾಗಬಹುದು ಅಷ್ಟೆ. ಏಕೆಂದರೆ ಕಾಯ ಸಿನಿಮಾ ನೋಡಲು ಹೋದಾಗ ಅದು ಪಾತ್ರವಲ್ಲವೆಂದು ತಿಳಿದು ಕಣ್ಣೀರು ಸುರಿಸಿ, ಕೇಕೆ, ಸಿಳ್ಳು ಹೊಡೆದು ಕುಣಿದು ಕುಪ್ಪಳಿಸುತ್ತದೆ. ಹೊರಗೆ ಬಂದ ಮೇಲೆ ತಾನು ನೋಡಿದ್ದೆಲ್ಲ ಪಾತ್ರವೆಂದು ಖಚಿತ ಮಾಡಿ ಮಾಡಿಕೊಳ್ಳುತ್ತದೆ.

ಸ್ಥೂಲಕಾಯದ ಒಡೆಯನೆಂದರೆ ಕಾರಣ ಕಾಯ ; ಜ್ಞಾನ ಕಾಯ. ಆತನ ಕಣ್ಣು ನಿಜಕಣ್ಣು . ಅದು ಬರೀ ಕಣ್ಣಲ್ಲ ಮುಕ್ಕಣ್ಣನ ಕಣ್ಣು. ಸ್ಥೂಲ ಕಣ್ಣಿನಲ್ಲಿ ಸಂಗಮವಾದ ಅರಿವಿನ ಕಣ್ಣು. ಅದು ಸಹಜ ಕಣ್ಣು. ಈ ಕಣ್ಣಿಗೆ ತುಡುಗುಣಿತನವೆಂಬುದೇ ಇಲ್ಲ. ಬರೀ ಅರಿವಿನಿಂದ ಭರಿತವಾಗಿದೆ. ಇದಕ್ಕೆ ವೇಷ ಬೇಡ. ಜ್ಞಾನಿ ಅಲ್ಲದವನಿಗೆ ಜ್ಞಾನಿಯ ವೇಷ ; ಜ್ಞಾನಿಗೆ ವೇಷವೆ ? ಸಕಲ ವೇಷಗಳನ್ನು ಕಳಚಿ ಸತ್ಯ ನೋಡುವ ಕಣ್ಣು. ಈ ಕಣ್ಣಿಗೆ ಹೆಣ್ಣು ಗಂಡು ಕಾಣವುದಿಲ್ಲ. ಜಾತಿ ಮತ ಪಂಥ ಧರ್ಮ ಕಾಣುವುದಿಲ್ಲ. ಕಾಯ ಕಾಣುತ್ತದೆ. ಕಾಯದ ಸತ್ಯ ಕಾಣುತ್ತದೆ. ಕಾಯದ ಸತ್ಯವೆಂದರೆ ಜ್ಞಾನ. ಅದು ಸಕಲ ಕಾಯಗಳಲ್ಲಿ ಸಂಗಮವಾಗಿದೆ. ಇದು ಜ್ಞಾನ ಕಾಯಕ್ಕೆ ಮಾತ್ರ ಕಾಣುತ್ತದೆ. ಸ್ಥೂಲಕಾಯ, ಸೂಕ್ಷ್ಮಕಾಯಗಳೆರಡೂ ಜ್ಞಾನ ಕಾಯಕ್ಕೆ ಕಾಣುವುದಿಲ್ಲ.

ಪಂಚಭೂತಗಳಲ್ಲಿ ನಾಲ್ಕುಭೂತಗಳಿಗೆ ಚಲನೆಯಿದೆ. ಬಯಲಿಗೆ ಚಲನೆಯಿಲ್ಲ. ಬಯಲಿನಲ್ಲಿ ಗಾಳಿ, ನೆಲ, ಜಲ, ಅಗ್ನಿ ಚಲಿಸುತ್ತವೆ. ಬಯಲಿಗೆ ಬಾಧೆಯಿಲ್ಲ. ಬಯಲಿನಿಂದಲೇ ಅವು ಸೃಷ್ಠಿಯಾಗಿವೆ. ಹಾಗೆಯೇ ಕಾಯದಲ್ಲಿ ಸಂಗಮವಾದ ಜ್ಞಾನ ಬಯಲು. ಅದಕ್ಕೆ ರೂಪವಿಲ್ಲ. ಚಲನೆಯಿಲ್ಲ. ಹೀಗಾಗಿ ಜ್ಞಾನಿಗಳು ಜ್ಞಾನ ಕಾಯ ವನ್ನು ನಿಶ್ಚಲ ಬ್ರಹ್ಮ ಎಂದು ಕರೆದರು.

ಸೂಕ್ಷ್ಮ ಕಾಯದಿಂದ ಜ್ಞಾನ ತಿಳಿದರೆ ಜ್ಞಾನಿಯಾಗುವುದಿಲ್ಲ. ಬದಲಾಗಿ ಜ್ಞಾನದ ವೇಷ ಧರಿಸುತ್ತದೆ. ಜ್ಞಾನಿಯಂತೆ ಮಾತನಾಡಿ ಕಾಯದೊಂದಿಗೆ ವ್ಯವಹರಿಸುತ್ತಾ ಸುಖಿಸುತ್ತದೆ. ಇಂತಹ ಕಾಯ ಸಿನಿಮಾ ಇದ್ದಂತೆ ಕಾಯದ ವೇಷ ತಿಳಿಯುವುದಕ್ಕೆ ಸ್ವಲ್ಪ ಸಮಯ ಬೇಕಾಗುತ್ತದೆ. ವೇಷದ ಕಾಯವನ್ನು ಕಾಯಗಳು ನೋಡಿ ಮರುಳಾಗಿ ಪೂಜಿಸಿ ಆರಾಧಿಸುತ್ತವೆ. ಪಲ್ಲಕ್ಕಿಯಲ್ಲಿ ಹೊತ್ತು ಮೆರೆಸುತ್ತವೆ. ವೇಷ ಕಳಚಿದ ಮೇಲೆ ಪೂಜಿಸಿದ ಕಾಯಗಳೇ ಕಲ್ಲಿಲೆ ಹೊಡೆಯುತ್ತವೆ. ಹೊಡೆಸಿಕೊಳ್ಳುವ ಕಾಯ, ಹೊಡೆ ಯುವ ಕಾಯಗಳೆರಡೂ ಒಂದೇ. ಸೂಕ್ಷ್ಮಕಾಯ ಸ್ಥೂಲಕಾಯದಲ್ಲಿ ಪ್ರವೇಶ ಮಾಡಿ ಹಾದರ ಮಾಡುತ್ತವೆ.

ಜ್ಞಾನ ಕಾಯ ಎಂಬುದು ಪರಕಾಯ ! ಪರ ಎಂದರೆ ಸ್ವರ್ಗ ! ಇಹ ಎಂದರೆ ಮರ್ತ್ಯ ! ಮನವೆಂಬುದೇ ಇಹಕಾಯ, ಮನ ಸ್ಥೂಲಕಾಯ ಪ್ರವೇಶ ಮಾಡಿದರೆ ಅದು ಮರ್ತ್ಯ ಲೋಕದ ಕಾಯವಾಗುತ್ತದೆ. ಸಾತ್ವಿಕ ರಾಜಸ ತಾಮಸ ಗುಣಗಳನ್ನು ಪ್ರಕಟ ಮಾಡುತ್ತ ಸುಖ ದುಃಖಗಳನ್ನು ಅನುಭವಿಸುತ್ತಾ ಒಮ್ಮೆ ಇಲ್ಲವಾಗುತ್ತದೆ.

ಮನ ಜ್ಞಾನ ಕಾಯವೆಂಬ 'ಪರಕಾಯ ' ಪ್ರವೇಶ ಮಾಡಿದರೆ ಅದು ನಿಶ್ಚಲ ಬ್ರಹ್ಮ ನಾಗುತ್ತದೆ. ಸದಾ ಜ್ಞಾನದ ಸುಖವನ್ನು ಅನುಭವಿಸುತ್ತದೆ. ಅದಕ್ಕೆ ವೇಷವಿಲ್ಲ.

**142**

**ಜ್ಯೋತಿ ನಾಲ್ಕರೊಳಗೆ ಆತ್ಮನೈದಾನೆ**
**ಆತ್ಮನೊಳಗೆ ಸಾಕಾರನೈದಾನೆ**
**ಸಾಕಾರನೊಳಗೆ ಸೂಕ್ಷ್ಮನೈದಾನೆ**
**ಈಸುವನರಿದಾತಂಗೆ ಆ ಕಾಯ ಕೆಡದೆಂದನಂಬಿಗ ಚೌಡಯ್ಯ**

ದೇಹವನ್ನು ದೇವಾಲಯ ಎಂದು ಕರೆದರು ಬಸವಣ್ಣನವರು. ದೇಹದಲ್ಲಿ ಮಂದಾಗ್ನಿ

ಜ್ಯೋತಿಯಾಗಿ ದೇಹವನ್ನು ಬೆಳಗುತ್ತಲಿದೆ. ಗಾಳಿ ಅಗ್ನಿಗೆ ಉರಿಯುವುದಕ್ಕೆ ಸಹಕರಿಸಿ ಜ್ಯೋತಿಯನ್ನು ಬೆಳಗಿಸಿ ತಾನು ಬೆಳಗುತ್ತಲಿದೆ. ಶೀತಲ ಜಲ ಜುಳುಜುಳನೆ ಹರಿಯುತ್ತ ದೇಹದ ತುಂಬ ವಿರಕ್ತವಾಗಿ ಬೆಳಗುತ್ತಲಿದೆ. ಇವುಗಳಿಗೆ ದೇಹಪ್ರಣತಿಯಾಗಿ ಬತ್ತಿಯಾಗಿ ಎಣ್ಣೆಯಾಗಿ ಸಾಕಾರದಿಂದ ಜ್ಯೋತಿಯಾಗಿ ಬೆಳಗುತ್ತಲಿದೆ. ಈ ನಾಲ್ಕು ಜ್ಯೋತಿಯ ಬೆಳಗಿನಲ್ಲಿ ಮಹಾ ಬೆಳಗಾಗಿ ಆತ್ಮ ಪ್ರಜ್ವಲಿಸುತ್ತಲಿದೆ.

ಈ ನಾಲ್ಕೂ ನಿರಾಕಾರವಾದರೂ ದೇಹದ ಮೂಲಕ ಅರಿತರಿತು ನೋಡಲು ಹೋದರೆ ಸಾಕಾರವಾಗಿಯೇ ಬೆಳಗುವುದು ಕಾಣುತ್ತದೆ. ಈ ಬೆಳಗುವ ಮಹಾಜ್ಯೋತಿಯಲ್ಲಿ ಸೂಕ್ಷ್ಮ ಜ್ಯೋತಿಯೊಂದು ಇದೆ. ತಿಳಿದರೆ ಇದು ಕಾಯ ಬೆಳಗುವುದಕ್ಕೆ ಸಹಕರಿಸುತ್ತದೆ. ತಿಳಿಯದಿದ್ದರೆ ಕಾಯ ನಂದಿ ಕುಂದಿ ಕಶ್ರನೆ ಕರಗುವಂತೆ ಮಾಡುತ್ತದೆ.

ಆತ್ಮವನ್ನು ಬೆಳಗುವ ನಾಲ್ಕು ಜ್ಯೋತಿಗಳನ್ನು ಈ ಸೂಕ್ಷ್ಮದಿಂದಲೇ ತಿಳಿಯಬೇಕು. ತಿಳಿದ ಅಂತಹ ಕಾಯಗಳು ಕೆಡುವುದಿಲ್ಲ. ಕೈಲಾಸವಾಗಿ ಬೆಳಗಿಂಗೆ ಬೆಳಗಾಗಿ ಬೆಳಗುತ್ತವೆ.

ಬೆಳಗುವ ಈ ತಂತ್ರಜ್ಞಾನವನ್ನುಅರಿಯದ ಯಾವ ಕಾಯಗಳೂ ಬೆಳಗುವುದಿಲ್ಲ. ಕಶ್ರನೆ ಕಂದಿ ಕುಂದಿ ಬೆಳಗಿದಂತೆ ಗೋಚರಿಸಿ ಇತರ ಕಾಯಗಳಿಗೆ ತೋರುತ್ತವೆ. ಸ್ವತಹ ಕಶ್ರನೆ ಕಂದಿ ಕುಂದುತ್ತವೆ.

**143**

**ತಟಾಕ ಒಡೆದಡೆ ಕಟ್ಟುವಡೆವುದಲ್ಲದೆ.**
**ಅಂಬುಧಿ ತುಂಬಿ ಮೇರೆದಪ್ಪಿದಲ್ಲಿ ಕಟ್ಟಿಂಗೆ ಹಿಂಗಿ ನಿಂದುದುಂಟೆ?**
**ಅರಿಯದವಂಗೆ ಅರಿಕೆಯ ಹೇಳಿದಡೆ ಅರಿವನಲ್ಲದೆ**
**ಅರಿದು ಮರೆದವಂಗೆ ಬೇರೊಂದೆಡೆಯ ಹೇಳಿಹೆನೆಂದಡೆ,**
**ಕಡೆ ನಡು ಮೊದಲಿಲ್ಲಾ ಎಂದನಂಬಿಗ ಚೌಡಯ್ಯ .**

ಅರಿಯದವನಿಗೆ ಅರಿವು ಹೇಳಿದರೆ, ಅರಿದರಿದು ಅರಿಯುವ ಸೂತ್ರ ಹೇಳಿದರೆ ಅರಿಯುತ್ತಾನೆ. ಆ ಅರಿವೇ ತಾನಾಗಲು ಪ್ರಯತ್ನಿಸುತ್ತಾನೆ. ಆ ಅರಿವಿನ ಮಾರ್ಗದಲ್ಲಿಯೇ ನಡೆಯುತ್ತಾನೆ.

ಅರಿತು, ಅರಿತ ಅರಿವನೆ ಮರೆತು ಆ ಅರಿವೇ ತಾನಾದವನಿಗೆ, ಸಹಜನಾದವನಿಗೆ, ಅರಿವು ಹೇಳಿದರೆ ಹಸನ್ಮುಖನಾಗುತ್ತಾನೆ. ಹುಸಿನಗೆಯ ಬೀರುತ್ತಾನೆ. ಅರಿವು ಕೇಳಿಯಾನೆ. ಕೇಳುವುದಿಲ್ಲ. ಏಕೆಂದರೆ ಅರಿಯಬೇಕಾದ ಅರಿವೇ ಅರಿತು ಅರಿತುದನ್ನು ಮರೆತು ಸಹಜನಾಗಿದ್ದಾನೆ.

ಸಾಗರ ಎಂಬುದು ಅನಂತ. ಎಲ್ಲಿ ನೋಡಿದರೂ ಜಲರಾಶಿ. ಹಳ್ಳ ಕೊಳ್ಳ ಕೆರೆ ನದಿ ತುಂಬಿ ಹರಿದು ಬಂದು ಅನಂತವಾಗಿದೆ. ಅಂತಹ ಅನಂತ ಸಾಗರವನ್ನು ಕೆರೆಯ ಕಟ್ಟೆ ಹಿಂಗಿ ಖಾಲಿ ಮಾಡಲು ಸಾಧ್ಯವೆ?

ಸಾಗರ ಆಕಾಶಗಂಗೆಯಾಗಿ ಭುವಿಗೆ ಬಿದ್ದು ಬರಿದಾದ ಹಳ್ಳ ಕೊಳ್ಳ ಕೆರೆ ಕಟ್ಟೆಗಳನ್ನು ತುಂಬಲು ಸಾಧ್ಯ . ಇದನ್ನು ನೋಡಬಹುದು. ಕೆರೆಯ ತಟದ ಕಡೆ ಮೊದಲು ಕಣ್ಣಿನ ದೃಷ್ಟಿಗೆ ನಿಲುಕುತ್ತದೆ. ಅಂಬುಧಿಯ ಕಡೆ ಮೊದಲು ಕಣ್ಣಿನ ದೃಷ್ಟಿಗೆ ನಿಲುಕಲು ಸಾಧ್ಯವೆ?

ಹಳ್ಳ ಕೊಳ್ಳ ಕೆರೆ ನದಿಗಳಲ್ಲಿರುವುದು ಜಲರಾಶಿಯೇ, ಅಂಬುಧಿಯಲ್ಲಿರುವುದೂ ಜಲ ರಾಶಿಯೇ ಒಂದು ಹಾದಿ ಕ್ರಮಿಸಿ ಅನಂತವಾಗಿದೆ. ಮತ್ತೊಂದು ಸಾಧನೆಯ ಹಾದಿಯನ್ನು ಕ್ರಮಿಸುತ್ತಾ ಅನಂತದೆಡೆಗೆ ಹೊರಟಿದೆ. ಹೋರಾಟದ ಹಾದಿಯಲ್ಲಿದ್ದ ಕಾಯ ಅನಂತನ ವೇಷ ಹಾಕುವಂತಿಲ್ಲ. ಅನಂತನಂತೆ ನುಡಿಯುವಂತಿಲ್ಲ. ಅಂಬುಧಿಯಲ್ಲಿರುವ ಜಲರಾಶಿ ಅದರ ಇರುವಿಕೆಯನ್ನು ಕಂಡುಕೊಂಡು ಅನಂತವಾಗಿದೆ. ಅದು ವೇಷವಲ್ಲ. ಅದಕ್ಕೆ ವೇಷ ಬೇಕಿಲ್ಲ!

**144**

**ತಟ್ಟು ಗೋಣಿಸೊಪ್ಪು ಸಕಲಾತಿ ಅಲ್ಲಮು,**
**ತೊತ್ತಿನ ಮಗ ಭಕ್ತನಲ್ಲ ವಯ್ಯಾ,**
**ಹಿರಿಯ ದೇವತೆಗೆ ಬಿಟ್ಟ ಕೋಣ ಗೂಳಿಯಲ್ಲವಯ್ಯಾ.**
**ಕಂಡ ತೊತ್ತಿಗೆ ಹುಟ್ಟಿದವ ಜಂಗಮವಲ್ಲವಯ್ಯಾ.**
**ಹಣತಿ ನೆಕ್ಕುವ ಮಠಪತಿ ಪಂಚಮಠಕ್ಕೆ ಸಲ್ಲ.**
**ಈ ಮೂಳರಿಗೆ ಆದಿಯಲ್ಲಿ ಗುರು ಉಪದೇಶವ ತುಂಬಿಲ್ಲ.**
**ಈ ಮೂಳರ ಮೂಗು ಕೊಯ್ದು ಉಪ್ಪು ಸಾರು ತುಂಬಿ,**
**ನೆತ್ತಿಯ ಬೋಳಿಸಿ ಕತ್ತೆಯನೇರಿಸಿ,**
**ಮೇಲೆ ನಿಂಬೆಯ ಉಳಿಯ ಬಿಟ್ಟು,**
**ಪಡುವ ದಾರಿಗೆ ಹೊಡೆಯೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಮನಕ್ಕೆ ಜ್ಞಾನ ಬಯಕೆಯಾಗದಿದ್ದರೆ ಅದೊಂದು ಗೋಣಿಯ ತಟ್ಟು. ಅದರ ಸೊಪ್ಪು ಗೋಣಿ ನೇಯಲು ಬರುತ್ತದೆಯೇ ಹೊರತು ರೇಷ್ಮೆನೇಯ್ಗೆಗೆ ಯೋಗ್ಯವಲ್ಲ. ಗೋಣಿ ಗೋಣಿಯೇ ಹೊರತು ರೇಶ್ಮೆ ಆಗುವುದಿಲ್ಲ. ಗೋಣಿ ರೇಷ್ಮೆ ಹೇಗೆ ಆಗು ವುದಿಲ್ಲವೋ ಹಾಗೆಯೇ ಮನವೆಂಬ ತೊತ್ತು ಜ್ಞಾನಕ್ಕೆ ಹೋಗುವ ಭಕ್ತನಾಗಲು ಅರಿಯದು. ಮಾರಿ ಮಸಣಕ್ಕೆ ಬಿಟ್ಟಕೋಣ ಗೂಳಿಯಾಗಲು ಅರಿಯದು.

ಕೋಣ ಕೋಣವೇ ಆಗಿದೆ, ಗೂಳಿಯಾಗಲು ಅರಿಯದು. ಗೂಳಿ ಆಗಲು ಸಾಧ್ಯವಿಲ್ಲ ಕೂಡ. ಕಂಡ ತೊತ್ತಿಗೆ ಹುಟ್ಟಿದ ಮನ ಜಂಗಮವಲ್ಲ. ತೊತ್ತು ತೊತ್ತೇ ಜಂಗಮ ಜಂಗಮವೇ ಆಗಿದೆ. ತೊತ್ತು ಜಂಗಮವಾಗಲು ಸಾಧ್ಯವಿಲ್ಲ.

ಹಣತೆ ನೆಕ್ಕುವ ನಾಯಿಯೆಂಬ ಮನ ಐದು ಜ್ಞಾನ ಮಠಗಳಿಗೆ ಒಡೆಯನಾಗದು. ಕಣ್ಣು ಕಿವಿ ಮೂಗು ನಾಲಗೆ ಚರ್ಮದಲ್ಲಿ ಐದು ಮಠಗಳು ಸಂಗಮವಾಗಿವೆ. ಅವು ಜ್ಞಾನ ಮಠಗಳು. ಆ ಮಠಗಳನ್ನು ಮನವೆಂಬ ನಾಯಿ ಬಳಕೆ ಮಾಡಿಕೊಂಡರೆ ಕಣ್ಣು ನೋಡುವುದನ್ನು ನೋಡಲು ಅರಿಯದು. ಕಿವಿ ಕೇಳುವುದನ್ನು ಕೇಳಲು ಅರಿಯದು. ಚರ್ಮ ಮುಟ್ಟಿ ಮೂಗು ಮೂಸಿಸಿ ನಾಲಿಗೆ ರುಚಿಸುವುದನ್ನು ರುಚಿಸಲು ಅರಿಯದು. ಈ ಐದೂ ಜ್ಞಾನೇಂದ್ರಿಯಗಳನ್ನು ನಾಯಿ ತನಗೆ ಬೇಕಾದ ಸುಖಕ್ಕೆ ಹಣತೆಯಂತೆ ಬಳಸಿಕೊಂಡು ನೆಕ್ಕಿ ನೆಕ್ಕಿ ಸಾಯುತ್ತದೆ. ಜ್ಞಾನದ ಸವಿ ನಾಲಿಗೆಗೆ ಗೊತ್ತಾಗುವುದಿಲ್ಲ.

ಈ ಮೂಳ ಮನಕ್ಕೆ ಆದಿಯಲ್ಲಿ ಗುರುದೇವನು ಉಪದೇಶ ತುಂಬಿಲ್ಲ. ಅರಿವೆಂಬ

ಗುರುದೇವನ ಬೆಳಕಿನಿಂದ ಹುಟ್ಟಿದ ಕತ್ತಲೆಯೆ ಈ ಮೂಳ. ಇದಕ್ಕೆ ಭವಿಮನ ಎಂದು ಕರೆಯುತ್ತಾರೆ. ಅಂಬಿಗರ ಚೌಡಯ್ಯ ಶರಣರು ಇದನ್ನು ಗೋಣಿ, ತೊತ್ತಿನ ಮಗ, ಕೋಣ, ಹಣತೆ ನೆಕ್ಕುವ ಮಠಪತಿ, ಮೂಳ ಎಂದು ಕರೆದಿದ್ದಾರೆ. ಇಂತಹ ಮೂಳ ಮನಕ್ಕೆ ತಲೆಯ ಬೋಳಿಸಿ, ಕತ್ತೆಯ ಮೇಲೆ ಕೂಡಿಸಿ, ಮೂಗು ಕೊಯ್ದು ಉಪ್ಪು ಸಾರು ತುಂಬಿ, ಮೇಲೆ ನಿಂಬೆಯ ಉಳಿಯ ಬಿಟ್ಟು ಪಶ್ಚಿಮದ ದಾರಿಗೆ ನಿಲ್ಲಿಸಿ ಪಟಪಟನೆ ಹೊಡಿ ಎಂದಿದ್ದಾರೆ ಅಂಬಿಗ ಚೌಡಯ್ಯ ಶರಣರು.

ಚೌಡಯ್ಯ ಶರಣರು ತಮ್ಮ ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೆ ಅಂಬಿಗ ಚೌಡಯ್ಯ ಎಂದು ನಾಮಕರಣ ಮಾಡಿ, ಹಾಗೆಂದು ಆ ಗುರುದೇವನನ್ನು ಕರೆಯುತ್ತಾರೆ. ಆ ಗುರುದೇವ ನೊಂದಿಗೆ ಮಾತನಾಡುತ್ತಾರೆ. ಮನ ಭಕ್ತನಾದ ಮೇಲೆ ಆ ಭಕ್ತನು ಅರಿವು ಗುರುದೇವನೆಂದು ತಿಳಿದ ಮೇಲೆ ಅವರಿಬ್ಬರೂ ಮಾತನಾಡಬೇಕಲ್ಲ. ಅವರ ಮಾತು ತಮಗೆ ತಾವೇ ಆಡಿ ಕೊಂಡ ಮಾತು. ಮನ ಮತ್ತು ಅರಿವಿನ ಸಂಬಂಧವನ್ನು ರೇಷ್ಮೆ ದಾರದ ಮೂಲಕ ಹೆಣೆಯುವ ಮಾತು. ಅಲ್ಲಿ ಗೋಣಿಯ ಎಳೆ ಸುಟ್ಟು ರೇಷ್ಮೆಯದಾರವಾಗಿದೆ! ಕೋಣ ಸತ್ತು ಶಿವನಿಗೆ ನಂದಿಯೆಂಬ ವಾಹನವಾಗಿದೆ. ಮನವೆಂಬ ತೊತ್ತಿನ ಮಗ ಸತ್ತು ಜಂಗಮವಾಗಿದೆ. ಹಣತೆ ನೆಕ್ಕುವ ಮಠಪತಿಯೆಂಬ ನಾಯಿ ಸತ್ತು ಪಂಚಜ್ಞಾನ ಮಠಗಳಿಗೆ ಒಡೆಯನಾಗಿದ್ದಾನೆ.

ಗುರುದೇವನ ಕಿರಣಗಳಿಂದ ಹುಟ್ಟಿದ ಮೂಳ ಮನವೆಂಬ ಕತ್ತಲು ಗುರುವಿನ ಬೆಳಕಿನಲ್ಲಿ ಸತ್ತು ಗುರುವಾಗಿದೆ. ಗುರುದೇವನ ಪಾದರಕ್ಷೆಯ ಹೊಡೆತದಿಂದ ತಲ್ಲಣಿಸಿದ ಮನಕ್ಕೆ ಆದಿಯ ನೆನಪುಗಳು ಮರುಕಳಿಸಿದವು. ಕತ್ತಲು ಬೆಳಕಿನಲ್ಲಿ ಸಂಗಮವಾಗಿ ಬೆಳಕಾಯಿತು. ಮನ ಘನಮನವಾಯಿತು. ಗುರುದೇವನಿಂದ ಸೃಷ್ಟಿಯಾದ ಮನ, ಗುರುದೇವನಲ್ಲಿ ಸಂಗಮವಾಗಿ ಘನ ಮನವಾಯಿತು.

**145**

**ತಡಿ ನೆಲೆ ಇಲ್ಲದ ಮಹಾನದಿಯಲ್ಲಿ ಒಡಲಿಲ್ಲದಂಬಿಗ**
**ಬಂದೈದಾನೆ. ಹಿಡಿವ ಬಿಡುವ ಮನವ ಬೆಲೆಗೊಟ್ಟಡೆ**
**ಗಡಣವಿಲ್ಲದೆ ಹಾಯಿಸುವೆ ಹೊಳೆಯ. ನುಡಿಯಿಲ್ಲದ**
**ನಿಸ್ಸೀಮ ಗ್ರಾಮದಲಿರಿಸುವೆನೆಂದಾತನಂಬಿಗ ಚೌಡಯ್ಯ**

ತನುವಿನಲ್ಲಿ ಬ್ರಹ್ಮಾಂಡವೇ ಅಡಗಿ ಚುಳುಕಾಗಿದೆ. ಈ ತನುವನ್ನು ಶರಣರು ಬೇರಿಲ್ಲದ ಮರವೆಂದು ಕರೆದರು. ಸುಳಿದ ಜಾಗದಲ್ಲೆಲ್ಲ ಪರಿಮಳವೇ ಸೂಸುವ ಶಕ್ತಿಯಿದೆ ಈ ತನುವಿಗೆ.

ಚೌಡಯ್ಯ ಶರಣರು ತನುವನ್ನು ತಡಿನೆಲೆಯಿಲ್ಲದ ಮಹಾ ನದಿಗೆ ಹೋಲಿಸಿದ್ದಾರೆ. ಆ ನದಿಯ ಬಿಂದುವೆ ಚುಳುಕಾಗಿ ತನುವಾಗಿದೆ. ಮಹಾನದಿಯಾಗಿ ಜೀವಚೈತನ್ಯವಾಗಿದೆ. ಮಹಾನದಿ, ಪ್ರಾಣಿ ಪಶು ಪಕ್ಷಿ ಜಲಚರ, ಉರಗ, ಗಿಡ ಮರ ಬಳ್ಳಿಗಳಿಗೆ ಜೀವ ಸೆಲೆಯಾಗಿದೆ. ಆ ಜಲ ಬಿಂದುವೇ ಗರ್ಭಸೇರಿ ಪಾಕವಾಗಿ ಗಟ್ಟಿಗೊಂಡು ತನುವಾಗಿದೆ. ಈ ತನುವು ತಡಿನೆಲೆಯಿಲ್ಲದ ಮಹಾನದಿಯೂ ಹೌದು.

ತಡಿನೆಲೆಯಿಲ್ಲದ ತನುವೆಂಬ ಮಹಾನದಿಯಲ್ಲಿ ಒಡಲಿಲ್ಲದ ಅರಿವೆಂಬ ಅಂಬಿಗ ವಾಸ ಮಾಡಿದ್ದಾನೆ. ತನುವಿನ ಸೋಂಕು ಅಂಬಿಗನಿಗಿಲ್ಲ. ಅಂಬಿಗನ ಅರಿವು ತನುವಿಗಿಲ್ಲ. ತನುವಿನ ಸುಖ ಅಂಬಿಗನಿಗೆ ಬೇಕಿಲ್ಲ. ಅಂಬಿಗನ ಮಾತು ತನುವಿಗೆ ಹಿಡಿಸುವುದಿಲ್ಲ. ಮನದ ನಂಜಿನ ಸೆರಗು

ತನುವು ಹೊದ್ದ ಕಾರಣ ಅಂಬಿಗನ ಅರಿವಿನ ಮಾತು ತನುವು ಕೇಳುವುದೇ ಇಲ್ಲ. ಸುಖ-ದುಃಖ ವೆಂಬುದು ಮನಕ್ಕೆ ಹೊರತು ಅರಿವಿಗಲ್ಲ. ಮನ ತನುವಿನೊಂದಿಗೆ ಸುಖಿಸುತ್ತದೆ, ತನುವಿನೊಂದಿಗೆ ದುಃಖಿಸುತ್ತದೆ. ತನುವನ್ನು ವಿಕಾರ ಮಾಡುವ ಹಾಗೂ ಅರಳಿಸುವ ಅರ್ಥವಿಲ್ಲದ ಗುಣ ಹೊಂದಿದೆ. ಮನ ಶಬ್ದವನ್ನು ವಿಪರೀತ ಅರ್ಥದಲ್ಲಿ ಸ್ವೀಕರಿಸಿ ತನುವನ್ನು ಕುದಿಯುವಂತೆ, ಆತ್ಮಹತ್ಯೆಗೆ ಎಳೆಸುವಂತೆ, ಕೊಲೆ ಮಾಡುವಂತೆ ಪ್ರೇರೇಪಿಸುತ್ತದೆ.

ಕಂಡ ಕಂಡ ದೇವರುಗಳನ್ನು ಸೃಷ್ಟಿಸಿ ಕೈ ಮುಗಿಯುವಂತೆ ಮಾಡುತ್ತದೆ. ಸರಿ ಕಾಣದಿದ್ದರೆ ದೇವರನ್ನು ತೆಗಳುತ್ತದೆ. ನುಡಿದಂತೆ ನಡೆಯುವುದಿಲ್ಲ. ಮನ ಮಾಡಿದ ಅಪರಾಧಗಳೆಲ್ಲ ತನುವಿಗೇ ಮೂಲ. ಜನ ನೋಡುವುದು ತನುವನ್ನು ಹೊರತು ತನು ಹೊದ್ದ ಮನವನ್ನು ನೋಡಲು ಬರುವುದಿಲ್ಲ. 'ಕೋತಿ, ಮೊಸರನ್ನ ತಿಂದು ಮೇಕೆ ಮೋತಿಗೆ ಒರಸಿದಂತೆ' ತಿಂದ ಮನವೆಂಬ ಕೋತಿ ಪಾರಾಗುತ್ತದೆ. ತಿನ್ನದ ಮೇಕೆಯೆಂಬ ತನು ಸಿಕ್ಕಿ ಬೀಳುತ್ತದೆ.

ಅರಿವೆಂಬ ಅಂಬಿಗನ ಪಾಠ ತನುವಿಗೆ ಹಿಡಿಸಿದರೆ ಅದು ಅರಿವಿನ ತನುವು. ಮರೆವೆಂಬ ಮನದ ಸುಖ ತನುವಿಗೆ ಹಿಡಿಸಿದರೆ ಅದು ಹಾದರದ ತನು. ಮನದ ತನುವಿನ ಪೂಜೆ ಅರ್ಥವಿಲ್ಲದ್ದು. ಮನದ ತನುವಿನ ವೇಷವೂ ಅರ್ಥವಿಲ್ಲದ್ದು, ಶಾಸ್ತ್ರ ಹೇಳಿ ಹಾದರ ಮಾಡುವ ಗುಣ ಮನದ್ದು. ತನುವಿನ ತುಂಬಾ ಅರಿವು ತನ್ಮಯವಾಗಿದ್ದರೂ ಮನದೊಂದಿಗೆ ಸುಖಿಸುವ ಸುಖ-ದುಃಖಗಳು ಅರಿವಿಗೆ ಸಂಬಂಧವಿಲ್ಲ. ಅರಿವು ''ಒಡಲೊಳಗಿದ್ದು, ಒಡಲಿಂಗಾಧಾರವಾಗಿ, ಒಡಲ ಸೋಂಕದೆ ಒಡಲ ಬೆಳಗುವ ಪರಿಯ ನೋಡಾ. ಬೆಳಗಿಂಗೆ ಬೆಳಗಾಗಿ ಬೆಳಗುವ ಪರಿಯ ನೋಡಾ ಗುಹೇಶ್ವರಾ'' ಒಡಲೊಳಗೆ, ಒಡಲಿಂಗಾಧಾರವಾಗಿದೆ ಒಡಲು ಸೋಂಕದೆ ಬೆಳಗಿಂಗೆ ಬೆಳಕಾಗಿ ಬೆಳಗುತ್ತಿದೆ.

ಮನ ಆಭರಣ ನೋಡಿ ತನುವನ್ನು ಕಳುವಿಗೆ ಪ್ರಚೋದಿಸಿದರೆ, ಅರಿವು ಲೋಹ ನೋಡಿ ತನುವಿಗೆ ಕಳುವು ಮಾಡದಿರಲು ಪಾಠ ಮಾಡುತ್ತದೆ. ಮನ ಚರ್ಮ ನೋಡಿ ತನುವಿಗೆ ಸುಖಿಸಲು ಹೇಳಿದರೆ, ಸುಖ ನಿನ್ನಲ್ಲಿಯೇ ಇದೆ. ಅದು ನಿನ್ನಂತೆಯೇ ಇರುವ ಚರ್ಮದ ತನುವೆಂದು ಎಚ್ಚರಿಸುತ್ತದೆ.

ಮನ ನುಡಿಯುತ್ತದೆ. ನುಡಿದಂತೆ ನಡೆಯದಿರಲು ತನುವಿಗೆ ಪುಸಲಾಯಿಸುತ್ತದೆ. ಜನ ತನುವನ್ನು ತನುವಿಗಿಟ್ಟ ಹೆಸರನ್ನು ನಿಂದಿಸುತ್ತಾರೆ. ಮನ ತನುವಿಗೆ ಕಾವಿ, ಖಾದಿ, ಖಾಕಿ ಹಾಕಿಸುತ್ತದೆ. ತನುವಿನೊಂದಿಗೆ ಹಾದರ ಮಾಡಲು ಉದ್ದೀಪಿಸುತ್ತದೆ. ಸಿಕ್ಕಿ ಬಿದ್ದರೆ ಜನ ನೋಡಿ ಮರ್ಯಾದೆ ಕಳೆದರೆಂದು ತನುವನ್ನು ಆತ್ಮಹತ್ಯೆಗೆಳೆಸುತ್ತದೆ.

ಮನ ತನು ಹಿಡಿದು ಅನಂತ ಕೋಟಿ ತಪ್ಪು ಮಾಡಿದರೂ ಅರಿವು ಮೈದಡವಿ ಮತ್ತೊಮ್ಮೆ ಮಾಡದಿರಲು ಸಾಂತ್ವನದ ತನಿಯ ಮಾತುಗಳಾಡಿ ಸರಿದಾರಿಗೊಯ್ಯುತ್ತದೆ.

ಭೌತಿಕ ವಸ್ತುಗಳಿಗೆ ಸೆರೆಯಾಳಾಗಿ ತನುವಿನೊಂದಿಗೆ ಸುಖಿಸುವ ಮನಕ್ಕೆ ಒಡಲೊಳಗಿದ್ದ ಒಡಲಿಲ್ಲದ ಅರಿವೆಂಬ ಅಂಬಿಗನ ಪರಿಚಯವಾದರೆ ಸಾಕು ತಡಿನೆಲೆಯಿಲ್ಲದ ಮಹಾ ನದಿಯಲ್ಲಿ ಯಾವ ಗಂಡಾಂತರವಿಲ್ಲದೆ ಸುಖಕರ ಪ್ರಯಾಣ ಸಾಗುತ್ತದೆ. ತನುವು ಅರಿವೆಂಬ ಅಂಬಿಗನ ವಶವಾಗಿ ನುಡಿಯಿಲ್ಲದ ನಿಸ್ಸೀಮ ಗ್ರಾಮವಾಗುತ್ತದೆ. ಅರಿವಿನ ನುಡಿಯದು ನುಡಿಯಲ್ಲದ ನುಡಿ. ನೋಡುವ ನೋಟದಲ್ಲಿ ಅರಿವು ತುಂಬಿ ಎಲ್ಲರೂ ತನ್ನಂತೆ ಕಾಣುತ್ತಾರೆ. ಕೇಳುವ ಶಬ್ದದಲ್ಲೆಲ್ಲಾ ಅರಿವೇ ತುಂಬಿ ಶಬ್ದ ನಿಶಬ್ದ ಬ್ರಹ್ಮವಾಗುತ್ತದೆ. ರುಚಿಸಿದ ಪದಾರ್ಥವೆಲ್ಲ ಪ್ರಸಾದವಾಗುತ್ತದೆ.

ವಾಸನೆಯೆಲ್ಲಾ ಪರಿಮಳವಾಗುತ್ತದೆ. ಸ್ಪರ್ಶಿಸಿದ ಚರ್ಮವೆಲ್ಲ ಓಂಕಾರವಾಗುತ್ತದೆ. ಇದು ಚೌಡಯ್ಯ ಶರಣರ ನುಡಿಯಿಲ್ಲದ ನಿಸ್ಸೀಮ ಗ್ರಾಮದೊಡೆಯನ ಪರಿಚಯದ ಸೂತ್ರ .

**146**

**ತನ್ನ ತನ್ನಿಚ್ಛೆಗೆ ಬಹಲ್ಲಿ ಪಿನಾಕಿ ಬೋಸರಗಿತ್ತಿಯ ಹಾಸೆ ?**
**ಮನವ ಕಟ್ಟಿ, ಐದನೆಯ ಭೂತವ ಸುಟ್ಟಡೆ, ಎನ್ನ ದೇವನುಂಟಿಲ್ಲೆನ್ನಬೇಡ.**
**ಮನಗಾಯಲಾರದೆ ತನುಗಾಯಹೋದಡೆ,**
**ಎನ್ನ ದೇವ ಸೆರೆಯಲ್ಲೆಂದಾತನಂಬಿಗ ಚೌಡಯ್ಯ.**

ಮನವನ್ನು ಸಕಲ ಶರಣ ಸಂತರು ಸೂಳೆ ಹಾದರಗಿತ್ತಿ ಎಂದು ಕರೆದಿದ್ದಾರೆ. ಅದು ತನುವನ್ನು ತನ್ನ ಇಚ್ಛೆಗನುಗುಣವಾಗಿ ಬಳಸಿಕೊಳ್ಳುತ್ತದೆ. ಹಾದರಕ್ಕೆ ತನುವನ್ನು ಕರೆದೊಯ್ದು ತಾನು ಸುಖಿಸುತ್ತದೆ. ತನು ಸಿಕ್ಕಿ ಹಾಕಿಕೊಂಡಾಗ ಪುನಃ ಆ ತನುವನ್ನು ಆತ್ಮಹತ್ಯೆಗೆ ಕರೆದೊಯ್ಯುತ್ತದೆ. ದೇಹವನ್ನು ಹಾದರಕ್ಕೆ ಕರೆದುಕೊಂಡು ಹೋಗಿ ಅನ್ಯ ದೇಹದೊಂದಿಗೆ ಮನ, ಸುಖಿಸಿ ಸಂತೋಷ ಪಡುತ್ತದೆ. ಆ ಹಾದರ ಅನ್ಯ ದೇಹಗಳಿಗೆ ಗೊತ್ತಾದಾಗ ಸುಖಿಸಿದ ದೇಹವನ್ನೇ ಆತ್ಮಹತ್ಯೆಗೆ ಕರೆದುಕೊಂಡು ಹೋಗಿ ಮನ ಸುಖಿಸುತ್ತದೆ. ಮನಕ್ಕೆ ಹಾದರ ಮತ್ತು ಆತ್ಮಹತ್ಯೆಗಳೆರಡೂ ಸುಖವೇ ಆಗಿದೆ.

ತನ್ನ ಇಚ್ಛೆಗೆ ಅನುಸಾರವಾಗಿ ಬರುವಂತೆ ಮನವೆಂಬ ಹಾದರಗಿತ್ತಿ ಸೂಳೆ ತನುವನ್ನು ತನ್ನ ಕಬಂಧ ಬಾಹುವಿನ ಪಾಶದಲ್ಲಿ ಬಂಧಿಸಿಕೊಂಡಿದೆ. ಇಂತಹ ಮನವನ್ನು ಕಟ್ಟಬೇಕು ಎಂದು ಯಾವ ದೇಹ ಕೂಡಾ ಚಿಂತನೆ ಮಾಡುವುದೇ ಇಲ್ಲ. ಮನ ಅಪರಾಧಿ ; ತನು ಅಪರಾಧಿ ಅಲ್ಲ ಎಂದು ಯಾವ ತನು ಕೂಡಾ ಹೇಳುವುದೇ ಇಲ್ಲ. ಹಾದರ ಮಾಡುವುದು ಮನ. ಅದು ತನುವನ್ನು ಬಳಸಿಕೊಂಡು ಹಾದರಕ್ಕೆ ಕಳುವಿಗೆ ಹೋಗುತ್ತದೆ. ಮನ ಸುಖಿಸುತ್ತದೆ. ತನು ಸಿಕ್ಕಿ ಹಾಕಿಕೊಳ್ಳುತ್ತದೆ. ಆಗ ತನುಗಳು ಸಿಕ್ಕಿ ಹಾಕಿಕೊಂಡ ತನುವನ್ನು ದಂಡಿಸುತ್ತವೆ ; ಮನವನ್ನು ಮುಟ್ಟುವುದೇ ಇಲ್ಲ. ಮನವನ್ನು ದಂಡಿಸುವ ವಿಧಾನ ಅಥವಾ ಶಿಕ್ಷಣ ತನುಗಳಿಗೆ ಗೊತ್ತಾಗುವುದೇ ಇಲ್ಲ. ಇದು ಜಗತ್ತಿನ ಯಾವ ನ್ಯಾಯಾಲಯಕ್ಕೂ ಹೊಳೆಯುವುದಿಲ್ಲ.

ಅಪರಾಧವೆಸಗಿದ್ದು ಮನ. ದಂಡನೆಗೆ ಒಳಗಾಗಿದ್ದು ತನು ! ಅದು ತನ್ನಂತೆಯೇ ಇರುವ ತನುವಿನೊಂದಿಗೆ ತನು ದಂಡನೆಗೆ ಒಳಗಾಗುತ್ತದೆ. ಇದು ಆಶ್ಚರ್ಯ ; ಪರಮಾಶ್ಚರ್ಯ . ತನ್ನ ಮೂಕ ವೇದನೆಯನ್ನು ತನು ಯಾರ ಮುಂದೆ ಹಂಚಿಕೊಳ್ಳಬೇಕು ? ಇದು ತನ್ನ ತಪ್ಪಲ್ಲ. ಪಿನಾಕಿ ಬೋಸರಗಿತ್ತಿಯೆಂಬ ಮನ ಮಾಡಿದ ತಪ್ಪು. ಅದು ತನ್ನ ಸುಖಕ್ಕಾಗಿ ನನ್ನನ್ನು ಬಳಸಿಕೊಂಡಿದೆ ಎಂದು ತನು ತನುಗಳಿಗೆ ಹೇಳಿದರೂ ಅದರ ಮೂಕವೇದನೆ ತನುಗಳಿಗೆ ಅರ್ಥವಾಗುವುದೇ ಇಲ್ಲ. ಇದು ಜ್ಞಾನಿ ಎಂದು ಹೆಸರು ಪಡೆದ ತನುಗಳ ವಿಪರ್ಯಾಸವಲ್ಲವೆ ? ಒಮ್ಮೆ ತನುಗಳು ತಮ್ಮನ್ನು ಆವರಿಸಿದ ಮನಗಳ ಮೇಲೆ ದಂಗೆ ಏಳಬಾರದೆ ? ಯುದ್ಧ ಸಾರಿ ವಿಜಯ ಸಾಧಿಸಬಾರದೆ ? ಇದು ಯಾಕೆ ಸಾಧ್ಯವಾಗುತ್ತಿಲ್ಲ ಎಂಬ ಕಳವಳ ಶರಣರದು.

ತನುವಿಗೆ ತನ್ನನ್ನು ಆವರಿಸಿದ ಮನವನ್ನು ಕಟ್ಟಿಹಾಕಲು ಬರುವುದಿಲ್ಲ. ತನುವನ್ನು ಹಾದ ರಕ್ಕೆ ಬಳಸಿಕೊಳ್ಳುವ ಮನವನ್ನು ದಂಡಿಸಲು ಬರುವುದಿಲ್ಲ. ಗಾಳಿಯಂತೆ ಎಲ್ಲೆಡೆ ಸುಳಿಯುವ ಮನವನ್ನು

ದಂಡಿಸುವುದಾದರೂ ಹೇಗೆ ? ಸುಳಿದು ಬೀಸುವ ಗಾಳಿಯ ಅಂಶವೇ ಮನ ಆಗಿದೆ. ಗಾಳಿಯನ್ನು ಸುಡುವ ಬಗೆ ಹೇಗೆ ಅದು ಒಂದು ಭೂತ. ತನುವಿಗೆ ಅತ್ಯಂತ ಸಹ ಕಾರಿಯಾದ ಭೂತ. ತನು ಬದುಕಿರುವುದೇ ಗಾಳಿಯಿಂದ ! ತನು ಸುಖಿಸುವುದೇ ಮನದಿಂದ ! ತನು ದುಃಖಿಸುವುದೇ ಮನದಿಂದ ! ಅಂತಹ ಮನವನ್ನು ಅದಕ್ಕೆ ಸಂಬಂಧಿಸಿದ ಗಾಳಿಯನ್ನು ಸುಡುವ ಬಗೆ ಹೇಗೆ ?

ಮನವ ಕಟ್ಟಿ, ಐದನೆಯ ಭೂತವ ಸುಟ್ಟಡೆ, ಎನ್ನದೇವನುಂಟೆಲ್ಲೆನ್ನಬೇಡ. ಮನಗಾಯಲಾರದೆ ತನುಗಾಯ ಹೋದಡೆ, ಎನ್ನದೇವ ಸೆರೆಯಲ್ಲೆಂದಾತನಂಬಿಗ ಚೌಡಯ್ಯ ಎಂದು ಮನ ಕಟ್ಟುವ ಸೂತ್ರವನ್ನು ಶರಣರು ಹೇಳಿದ್ದಾರೆ.

ಶರಣರಿಗೆ ಮಾತ್ರ ಮನ ಕಟ್ಟಲು ಬರುತ್ತದೆ; ಮನವನ್ನು ಸುಟ್ಟು ಘನಮನವನ್ನಾಗಿಸಲು ಬರುತ್ತದೆ. ಮನಕ್ಕೆ ಸಂಬಂಧಿಸಿದ ಐದನೇ ಭೂತವನ್ನು ಸುಟ್ಟು ಅದರ ಭಸ್ಮವನ್ನು ಧರಿಸಿಕೊಂಡು ಶಿವ ಶರಣನಾಗಲು ಬರುತ್ತದೆ. ಮನ ಕಟ್ಟಿದರೆ ತನುವಿನಲ್ಲಿ ದೇವನಿದ್ದಾನೆ ಎಂದು ನೋಡಿಕೊಳ್ಳಲು ಬರುತ್ತದೆ. ಉಳಿದ ತನುಗಳಲ್ಲಿಯ ದೇವನನ್ನು ತನಗೆ ಕಾಣಲು ಬರುತ್ತದೆ. ಮನ ಕಾಯಬೇಕು ; ತನುಗಳನ್ನು ಕಾಯಬಾರದು ಎಂದು ಕಂಡುಕೊಳ್ಳಲು ಬರುತ್ತದೆ.

ಮನ ಕಾಯಲಾರದೆ ತನು ಕಾಯ ಹೋದಡೆ ತನುವಿನಲ್ಲಿಯೇ ಸಂಗಮವಾದ ತನುವಿನ ಅರಿವೆಂಬ ಮಹಾದೇವ ತನುವಿನಲ್ಲಿಯೇ ಸೆರೆಯಾಗಿ ಇರುತ್ತಾನೆ. ಮಹಾದೇವನಿದ್ದ ತನುವೆಂದು ತನುವಿಗೆ ಪರಿಚಯವಾಗುವುದಿಲ್ಲ.

ಮನವೆಂಬುದು ಪತಂಗ. ಅದಕ್ಕೆ ಬೆಂಕಿ ಎಂದರೆ ಬಲು ಇಷ್ಟ. ಅದನ್ನು ತಿನ್ನಲು ಹೋಗಿ ಪ್ರಾಣ ಬಿಡುತ್ತದೆ. ಸುಟ್ಟು ಬೂದಿಯಾಗುತ್ತದೆ. ತನುವಿನಲ್ಲಿ ಜ್ಞಾನಾಗ್ನಿಯೆಂಬ ಮಹಾದೇವ ಸಂಗಮವಾಗಿದ್ದಾನೆ. ಮನಕ್ಕೆ ಜ್ಞಾನದ ಅಗ್ನಿ ತಿನ್ನಲು ಇಚ್ಛೆಯಾದರೆ ಅದನ್ನು ತಿನ್ನಲು ಹೋಗಿ ಸುಟ್ಟು ಬೂದಿಯಾಗುತ್ತದೆ. ಅದನ್ನು ಮಹಾದೇವ ಧರಿಸುತ್ತಾನೆ. ಆಗ ಅಂಗದಲ್ಲಿಯೇ ಸಂಗಮವಾದ ಐದನೇಯ ಭೂತವೆಂಬ ಗಾಳಿ ತನ್ನ ಬುಸುಗುಡುವ ವೇಗವನ್ನು ಕಳೆದುಕೊಂಡು ಶಾಂತವಾಗುತ್ತದೆ.

**147**

**ತನ್ನ ಬುದ್ಧಿ ತನ್ನ ಚಿತ್ತದಲ್ಲಿ ಅಡಗಿದ ಮತ್ತೆ**
**ನಾಡೆಲ್ಲರ ಕೂಡಿ ಓದಿ ಹಾಡಿ ಕೇಳಲೇತಕ್ಕೆ ?**
**ತನ್ನ ತಾನರಿದಲ್ಲಿ ಕಾಬ ಇದಿರು**
**ತನಗೆ ಅನ್ಯ ಭಿನ್ನವಿಲ್ಲಾ ಎಂದನಂಬಿಗ ಚೌಡಯ್ಯ .**

ತನ್ನನ್ನು ತಾನು ತಿಳಿಯುವುದಕ್ಕಾಗಿ ಎಷ್ಟೊಂದು ಪುಸ್ತಕಗಳು ಹುಟ್ಟಿಕೊಂಡಿವೆ. ಎಷ್ಟೊಂದು ಗುರುಗಳು ಮಠಗಳು ಆಶ್ರಮಗಳು ಚರ್ಚ್ ಮಸೀದೆ ಮಂದಿರಗಳು ಹುಟ್ಟಿಕೊಂಡಿವೆ. ಒಮ್ಮೆ ನೆನಪು ಮಾಡಿಕೊಂಡರೆ ಆಶ್ಚರ್ಯವೆನಿಸುತ್ತದೆ. ಆದರೂ ತನ್ನನ್ನು ತಾನು ಅರಿಯಲು ಸಾಧ್ಯವಾಗುತ್ತಿಲ್ಲ. ಇತರರು ತನಗೆ ಸಹಕರಿಸಬಲ್ಲರೆ ? ಸಹಕರಿಸಿದರೂ ತನ್ನನ್ನು ತಾನೇ ಅರಿಯಬೇಕಲ್ಲ !

ತನ್ನನ್ನು ತಾನು ಅರಿಯುವ ತನ್ನ ಚಿತ್ತ ತನ್ನ ಅರಿವಿನ ಮೇಲೆ ನೆಟ್ಟರೆ ಆ ಅರಿವೆ ತನಗೆ

ಬೋಧಿಸುತ್ತದೆ. ಹರಿದಾಡುವ ಆ ಚಿತ್ತ ಅರಿವಿನಲ್ಲಿ ಸಂಗಮವಾಗಿ ವಿಶ್ರಮಿಸುತ್ತದೆ. ಹೀಗಾಗದೆ ಚಿತ್ತ ಕುರಾನಿನಲ್ಲಿ ನೆಟ್ಟರೆ ದೇಹವನ್ನು ಮುಸಲ್ಮಾನನನ್ನಾಗಿ ಮಾಡುತ್ತದೆ. ಭಗವದ್ಗೀತೆ ಬೈಬಲ್‌ಗಳಲ್ಲಿ ನೆಟ್ಟರೆ ಹಿಂದು, ಕ್ರಿಶ್ಚಿಯನನ್ನಾಗಿ ಮಾಡು ತ್ತದೆ. ಹೆಣ್ಣಿನಲ್ಲಿ ನೆಟ್ಟರೆ ತನ್ನ ದೇಹವನ್ನು ಗಂಡನ್ನಾಗಿ ಮಾಡುತ್ತದೆ. ಗಂಡಿನಲ್ಲಿ ನೆಟ್ಟರೆ ತನ್ನ ದೇಹವನ್ನು ಹೆಣ್ಣಾಗಿ ಮಾಡುತ್ತದೆ. ಕಾಮ ಕೆರಳುವಂತೆ ದೇಹದಲ್ಲಿ ರಸಾಯನ ಸೃಷ್ಟಿ ಮಾಡಿ ಭೋಗಕ್ಕೆಳೆಸುತ್ತದೆ.

ಚಿತ್ತ ಹಳದಿ ಲೋಹದಲ್ಲಿ ನೆಟ್ಟರೆ ದೇಹವನ್ನು ಆ ಲೋಹ ಖರೀದಿಸಿ ಶ್ರೀಮಂತನನ್ನಾಗಿ ಮಾಡುತ್ತದೆ. ಚಿತ್ತ ಅಧಿಕಾರ, ಪದವಿ, ಪಾಂಡಿತ್ಯ ಶಾಸ್ತ್ರದಲ್ಲಿ ನೆಟ್ಟರೆ ಅದನ್ನು ಪಡೆಯವುದಕ್ಕಾಗಿ ದೇಹವನ್ನು ಪ್ರೇರೇಪಿಸುತ್ತದೆ.

ಭಗವದ್ಗೀತೆ, ಬೈಬಲ್,ಕುರಾನ್‌ಗಳನ್ನು ಓದಿ, ಅವುಗಳನ್ನು ಹೊಗಳುವಂತೆ ಚಿತ್ತ ದೇಹವನ್ನು ಪ್ರೇರೇಪಿಸುತ್ತದೆ. ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನದ ಮೇಲೆ ಚಿತ್ತ ನೆಟ್ಟರೆ ಆ ಜ್ಞಾನದಿಂದಲೇ ಬಂದ ಪುಸ್ತಕಗಳು ಇವು ಎಂದು ತಿಳಿದು ಆ ಜ್ಞಾನದಲ್ಲಿಯೇ ಸಂಗಮವಾಗುತ್ತದೆ.

ಅಂಗ ಹೆಣ್ಣಾದರೇನು, ಗಂಡಾದರೇನು, ಹಿಂದು ಮುಸಲ್ಮಾನ ಕ್ರಿಶ್ಚಿಯನ್ ಆದರೇನು? ಅದು ಭಾರತ ದೇಶದ್ದಾದರೇನು, ಅನ್ಯದ್ದಾದರೇನು ? ಅಂಗ ಒಂದೇ. ಅಂಗದಲ್ಲಿ ಸಂಗಮವಾದ ಮಹಾಜ್ಞಾನ ಒಂದೇ. ಅದನ್ನು ಶ್ರೀ ಕೃಷ್ಣ ವಿರಾಟ ಸ್ವರೂಪ ಎಂದು ಕರೆದ. ಆ ಜ್ಞಾನ ಸಕಲ ಅಂಗಗಳಲ್ಲಿಯೂ ಸಂಗಮವಾಗಿದೆ. ಅದು ಭಗವಂತನ ಗೀತೆ. ಆ ಗೀತೆಯ ಮೂಲಕ ಸಾಕ್ಷಾತ್ ಭಗವಂತನೇ ಅಂಗವನ್ನು ಆವರಿಸಿದ ಮನಕ್ಕೆ ಬೋಧಿಸುತ್ತಾನೆ ಎಂದು ಅರ್ಜುನನಿಗೆ ಹೇಳಿದ. ನಿನಗೆ ನೀನೇ ಕೇಳಿಕೋ. ನಿನ್ನನ್ನು ನೀನೆ ತಿಳಿ ಎಂದು ಸಂತ ಪೈಗಂಬರರು ಏಸು ಕ್ರಿಸ್ತರೂ ಹೇಳಿದರು. ಚಿತ್ತ ಹೇಳಿದವರ ಮೇಲೆ ನೆಟ್ಟಿತು. ಅಂಗ ಕೃಷ್ಣನನ್ನು ಕ್ರಿಸ್ತನನ್ನು ಆರಾಧಿಸಿತು. ಅಂಗದಲ್ಲಿಯೇ ಇದ್ದ ಅಲ್ಲಾನನ್ನು ಮರೆತು ಮಸೀದೆ ಮಂದಿರ ಚರ್ಚ್‌ಗಳಲ್ಲಿ ಹುಡುಕಿತು. ಅಂಗ ಅಂಗವನ್ನೇ ದ್ವೇಶಿಸಿತು. ಅಂಗಕ್ಕೆ ಅಂಗವೇ ವೈರಿಯಾಯಿತು.

ಅಂಗ ತನ್ನನ್ನು ತಾನು ಅರಿಯಲಿಲ್ಲ. ತನ್ನಂತೆಯೇ ಇರುವ ಇತರ ಅಂಗಗಳನ್ನು ತನ್ನಂತೆಯೇ ತಿಳಿಯಲಿಲ್ಲ. ತನ್ನನ್ನು ತಾನೇ ಅರಿಯುವ ಅರಿವು ತನುವಿನಲ್ಲಿಯೇ ಉಳಿಯಿತು. ವಿರಾಟಸ್ವರೂಪಿ, ಮಹಾ ಜ್ಞಾನಿ, ಸಾಕ್ಷಾತ್ ಭಗವಂತನೇ ಆಗಬೇಕಾದ ಅಂಗ ಹಿಂದೂ ಮುಸಲ್ಮಾನ ಕ್ರೈಸ್ತನಾಯಿತು. ಬೌದ್ಧ ಜೈನ ಫಾರ್ಸಿಯಾಯಿತು ! ತನ್ನ ಜ್ಞಾನದಲ್ಲಿ ನೆಡದ ಚಿತ್ತದ ಪ್ರಯಾಣ ತನಗೇ ಬಲು ದೂರ ವಾಯಿತು !

**148**

**ತನ್ನುವ ಮರೆದು ದೇವರ ಕಂಡೇನೆಂಬ ಕಾರಣ,**
**ಹರಿ ಸುರ ಬ್ರಹ್ಮಾದಿಗಳೆಲ್ಲರು ತಲೆ ಕೆಳಗಾಗಿ ಹೋದರು !**
**ಆ ದೇವರ ಮರೆದು ತನ್ನುವನರಿದುದುಂಟಾದರೆ,**
**ತಾನೇ ದಿಟವೆಂಬನಂಬಿಗ ಚೌಡಯ್ಯ .**

ಬ್ರಹ್ಮ ವಿಷ್ಣುವಿಗೆ ಶಿವನನ್ನು ನೋಡುವ ಬಯಕೆಯಾಯಿತು. ಬ್ರಹ್ಮ ಶಿವನ ಮುಕುಟವನ್ನು ನೋಡಲು ಆಕಾಶಕ್ಕೆ ನೆಗೆದ. ವಿಷ್ಣು ಶಿವನ ಪಾದಗಳನ್ನು ನೋಡಲು

ಪಾತಾಳಕ್ಕೆ ಇಳಿದ. ಶಿವ ಸಿಗಲಿಲ್ಲವೆಂದು ವಿಷ್ಣು ಬರಿಗೈಯಿಂದ ಬಂದ. ಬರಿಗೈಲಿ ಹೋದರೆ ಬ್ರಹ್ಮನಿಗೆ ಅಪಮಾನ. ಆಕಾಶ ಕಾಯದಲ್ಲಿ ಬೆಳೆದ ಕೇದಿಗೆಯನ್ನು ಹಿಡಿದುಕೊಂಡು ನಾನು ಶಿವನನ್ನು ಕಂಡೆ. ಆತನ ಜಟೆಯೇ ಇದೆಂದು ಸಾಕ್ಷಿಯಾಗಿ ಕೇದಿಗೆಯನ್ನು ತೋರಿಸಿದ. ಸುಳ್ಳು ಹೇಳಿದ ತಪ್ಪಿಗಾಗಿ ಕೂಡಲೇ ಬ್ರಹ್ಮನ ಶಿರವೊಂದು ಕೆಳಗೆ ಉರುಳಿತು.

ಜಗದಗಲ ಮುಗಿಲಗಲ ಶಿವ, ಪಾತಾಳದಿಂದಲೂ ಅತ್ತತ್ತ , ಬ್ರಹ್ಮಾಂಡದಿಂದಲೂ ಅತ್ತತ್ತಲಿದ್ದ ಶಿವ. ಪಂಚಭೂತಗಳಿಂದಲೂ ಅತ್ತತ್ತಲಿದ್ದ ಶಿವ. ಅಂಗದಗಲಕ್ಕೆ ಬಂದು ಚುಳುಕಾಗಿದ್ದಾನೆ. ಯಾರೂ ಪ್ರಮಾಣಿಸಲು ಬಾರದ ಶಿವ, ಯಾರ ಗಮನಕ್ಕೆ ಬಾರದ ಶಿವ, ಅಗಮ್ಯ ಅಪ್ರತಿಮ ಶಿವ ಅರಿವಿನ ಲಿಂಗವಾಗಿ ಅಂಗದಲ್ಲಿ ಬಂದು ಚುಳುಕಾಗಿದ್ದಾನೆ. ಅಂಗದಲ್ಲಿ ಸಂಗಮವಾದ ಶಿವನನ್ನು ಹರಿ ಹೊರಗಡೆ ಹುಡುಕಿದರೆ ಸಿಕ್ಕಾನೆಯೆ ? ಅಜ ಹೊರಗಡೆ ಹುಡುಕಿದರೆ ಸಿಕ್ಕಾನೆಯೆ ? ತಮ್ಮನ್ನು ಮರೆತು ದೇವರನ್ನು ಕಾಣುತ್ತೇವೆ ಎನ್ನುವ ಕಾರಣ ಹರಿ ಸುರ ಬ್ರಹ್ಮಾದಿಗಳು ತಲೆ ಕೆಳಗಾಗಿ ಹೋದರು ! ದೇವರು ಸಿಕ್ಕಲಿಲ್ಲ.

ಹೊರಗಿನ ದೇವಾಲಯಗಳಲ್ಲಿರುವ ಆ ದೇವರುಗಳನ್ನು ಮರೆತು ; ದೇಹವೇ ದೇಗುಲವೆಂದು ತಿಳಿದು ಆ ದೇಹದಲ್ಲಿಯೇ ಹುಡುಕಿದರೆ ತಾನೇ ಆ ದೇವರೆಂದು ತನಗೆ ಅರಿವಾಗುತ್ತದೆ.

**149**

**ತನ್ನುವ ಹುಸಿ ಮಾಡಿ, ಇನ್ನೊಂದು ದಿಟಮಾಡುವ ಅಣ್ಣಂಗೆ**
**ನಂಬುಗೆ ಇನ್ನಾವುದಯ್ಯಾ ?**
**ತನ್ನೊಳಗಿರ್ದ ಘನವ ತಾ ತಿಳಿಯಲರಿಯದೆ,**
**ಪರಬ್ರಹ್ಮಕ್ಕೆ ತಲೆಯಿಕ್ಕಿ ತೆಗೆದೆನೆಂಬ ಅಣ್ಣ**
**ಗಾವಿಲನೆಂದನಂಬಿಗ ಚೌಡಯ್ಯ.**

ಅಂಗ ಕೆತ್ತಿದ ಕಲ್ಲು ಮಸೀದೆ ಚರ್ಚ್ ದೇವಾಲಯವಾಗಿ, ದೇವರಾಗಿ ಅಂಗದ ಹೆಗಲು ಏರಿದೆ. ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗವನ್ನು ಹುಸಿ ಮಾಡಿ, ಕೆತ್ತಿದ ಕಲ್ಲನ್ನೇ ದೇವರೆಂದು ದಿಟ ಮಾಡಿದ ಅಂಗಕ್ಕೆ ಏನೆನ್ನಬೇಕು? ಆ ಅಂಗಕ್ಕೆ ಯಾರು ಬೋಧೆ ಮಾಡಬೇಕು? ಅಂತಹ ಅಂಗವನ್ನು ನೀನೆ ದೇವರೆಂದು ಯಾವ ಅಂಗ ನಂಬಿಕೆ ಉಂಟು ಮಾಡಬೇಕು.

ಅಂಗ ಗುರಿವಿನದಾದರೇನು, ಶಿಷ್ಯನದಾದರೇನು? ಅಂಗ ಅಂಗವಲ್ಲವೆ? ಅಂಗದೊಳಗಿದ್ದ ಘನವನ್ನು ಅಂಗವೇ ತಿಳಿಯಬೇಕಲ್ಲದೆ ಅಂಗಕ್ಕೆ ಮತ್ತೊಂದು ಅಂಗ ಬೋಧೆ ಮಾಡಲು ಸಾಧ್ಯವೇ? ಸಕಲ ಅಂಗಗಳಲ್ಲಿ ಅರಿವು ಸಂಗಮವಾಗಿದೆ. ಆ ಅರಿವೇ ಗುರು. ಅಂತಹ ಗುರುದೇವನಿಗೆ ಮತ್ತೊಂದು ಅಂಗ ಗುರುವಾಗಿ ಬೋಧಿಸಲು ಸಾಧ್ಯವೇ? ಅಂಗದೊಳಗೆ ಅರಿವೆಂಬ ಗುರುದೇವನು ಇದ್ದಾನೆ. ಆ ಗುರುದೇವನನ್ನು ತಿಳಿಯುವ ಮನವೆಂಬ ಶಿಷ್ಯನು ಅಂಗವನ್ನು ಆವರಿಸಿದ್ದಾನೆ. ಶಿಷ್ಯನಾದವನು ಗುರುದೇವನನ್ನು ತಿಳಿಯಬೇಕು. ಆ ಗುರುದೇವನಿಗೆ ಗುಲಾಮನಾಗಬೇಕು.

ದಾರಿ ಕೇಳುವುದು ಅಂಗದ ಧರ್ಮ. ದಾರಿ ಹೇಳುವುದು ಅಂಗದ ಧರ್ಮ. ದಾರಿ

ಕೇಳಿದ ಅಂಗ ಶಿಷ್ಯನಲ್ಲ, ದಾರಿ ಹೇಳಿದ ಅಂಗ ಗುರುವಲ್ಲ! ಊರ ದಾರಿ ಹೇಳಿದ ಅಂಗವನ್ನು ಕೇಳಿದ ಅಂಗ ಗುರು ಮಾಡಿಕೊಳ್ಳಲು ಸಾಧ್ಯವೇ? ನಡೆದು ಗವ್ಯ ಸೇರಿ ಸುಖ ಅನುಭವಿಸುತ್ತದೆಯೇ ಹೊರತು ದಾರಿ ಹೇಳಿದವನನ್ನು ಪೂಜಿಸುವುದಿಲ್ಲ. ಏಕೆಂದರೆ ಆ ದಾರಿಯನ್ನು ತಾನೇ ನಡೆಯಬೇಕಾಗಿದೆ.

ದಾರಿ ಹೇಳಿದ ಗುರುವಿನ ಬೆನ್ನು ಬಿದ್ದು ಕೇಳಿದ ಅಂಗಗಳು ದಾರಿ ನಡೆಯದೆ ಕಂಗಾಲಾಗುತ್ತವೆ. ಇದು ಗುರು ಶಿಷ್ಯರ ಭ್ರಮೆ. ಬ್ರಹ್ಮವನ್ನು ಗುರುವೂ ಹುಡುಕಬೇಕು; ಶಿಷ್ಯನೂ ಹುಡುಕಬೇಕು. ಹುಡುಕುವ ಆ ಬ್ರಹ್ಮ ಭ್ರಮೆಯ ಹಿಂದೆಯೇ ಅಡಗಿದ್ದಾನೆ. ಮನವೆಂಬ ಭ್ರಮೆ ಬ್ರಹ್ಮ ಹೊರಗಿದ್ದಾನೆಂದು ಅಂಗದೊಂದಿಗೆ ಹುಡುಕುತ್ತದೆ. ತನ್ನೊಳಗಿದ್ದ ಬ್ರಹ್ಮ ತನಗೆ ತಿಳಿಯುವುದಿಲ್ಲ. ಭ್ರಮೆಯೇ ಅಹಂ ಬ್ರಹ್ಮಾಸ್ಮಿ ಎಂದರೆ ಅದು ಅದರ ಅಹಂಕಾರ. ಅಹಂಕಾರಿಗೆ ಬ್ರಹ್ಮ ಬಲುದೂರ. ಆದರೂ ವೇಷ ಹಾಕಿಕೊಂಡು ಬ್ರಹ್ಮನಾಗುತ್ತಾನೆ. ಅಹಂ ಬ್ರಹ್ಮಾಸ್ಮಿ ಎಂದು ಭ್ರಮೆಗೆ ಬೋಧಿಸುತ್ತಾನೆ. ಇವರೆಡೂ ಭ್ರಮೆಗಳ ಕೆಲಸ. ಬ್ರಹ್ಮ ಸಿಕ್ಕದಿದ್ದರೆ ಭ್ರಮೆ ಏನು ಮಾಡೀತು? ಬ್ರಹ್ಮನ ವೇಷ ಹಾಕಿ ಭ್ರಮೆಯೇ ಬ್ರಹ್ಮನೆಂದು ಘೋಷಿಸಿಕೊಳ್ಳುತ್ತದೆ. ಬ್ರಹ್ಮ ಒಪ್ಪುವುದಿಲ್ಲ. ಭ್ರಮೆಯ ಹಿಂದೆಯೇ ಬ್ರಹ್ಮನಿದ್ದಾನೆ. ಆ ಬ್ರಹ್ಮನನ್ನು ತಿಳಿದರೆ ಭ್ರಮೆಯ ಭ್ರಮೆ ತೊಲಗುತ್ತದೆ. ಬ್ರಹ್ಮನೇ ತಾನಾಗುತ್ತದೆ. ಆಗ ಬ್ರಹ್ಮನೇ ಅಹಂ ಬ್ರಹ್ಮಾಸ್ಮಿ ಎಂದು ತನ್ನನ್ನು ತಾನೇ ಕರೆದುಕೊಳ್ಳುತ್ತಾನೆ. ಪರಿಚಯಿಸಿಕೊಳ್ಳುತ್ತಾನೆ. ಇದು ವೇಷವಲ್ಲ; ಅಹಂಕಾರವೂ ಅಲ್ಲ. ಸುಖ, ಸುಖದ ಸುಖ. ಈ ಸುಖ ಗೊತ್ತಿಲ್ಲದವನು ಕುರುಡ. ತಾನೇ ಬ್ರಹ್ಮನಾಗಿದ್ದರೂ ಬ್ರಹ್ಮನನ್ನು ಹುಡುಕುವ ಕುರುಡ. ನೀನೇ ಬ್ರಹ್ಮನೆಂದು ಭ್ರಮೆಗೆ ಹೇಗೆ ಪರಿಚಯಿಸಬೇಕು! ನೀನು ಬೆಳಕಿನಿಂದ ಬಂದವನು; ನೀನು ಕತ್ತಲಲ್ಲ.

ನಿನ್ನನ್ನು ನೀನು ತಿಳಿ ಎಂದು ಕತ್ತಲಿಗೆ ಹೇಳಿಕರೆ ಕತ್ತಲು ಬೆಳಕಾಗಲು ಸಾಧ್ಯವೇ? ಸಾಧ್ಯ . ಕತ್ತಲು ಬೆಳಕಿದ್ದಲ್ಲಿಗೆ ಹೋಗಿ; ಆ ಬೆಳಕಿನಲ್ಲಿ ಪ್ರವೇಶ ಮಾಡಬೇಕು. ಆ ಬೆಳಕೇ ತಾನಾಗಬೇಕು. ತನಗೆ ತಾನೇ ತನ್ನ ಕತ್ತಲನ್ನು ತಾನೇ ಕಳೆದುಕೊಳ್ಳಬೇಕು.

**150**

**ತರು, ನೀರು, ಕಲ್ಲಿನ ಘಟದ ಮಧ್ಯದಲ್ಲಿ ತೋರುವ ಅಗ್ನಿ**
**ಕೆಡದೆ ಉರಿಯದೆ ಅಡಗಿಪ್ಪ ಭೇದವನರಿತಡೆ**
**ಪ್ರಸಾದಲಿಂಗಿಯೆಂದನಂಬಿಗ ಚೌಡಯ್ಯ.**

ಕಲ್ಲಿನಲ್ಲಿ, ನೀರಲ್ಲಿ, ಮರದಲ್ಲಿ, ಅಗ್ನಿ ಸಂಗಮವಾಗಿದೆ. ಅದು ಕೆಡುವುದಿಲ್ಲ ; ಉರಿಯುವುದಿಲ್ಲ ಇರುವುದು ಗೊತ್ತಾಗುವುದಿಲ್ಲ. ಅವು ಸಹಜ. ಅಗ್ನಿಯ ಇರುವಿಕೆ ಅಂಗಕ್ಕೆ ಗೊತ್ತಾಗಿದೆ. ಅಂಗದಲ್ಲಿ ಸಂಗಮವಾದ ಮಂದಾಗ್ನಿಯಿಂದಲೇ ಅಂಗ ಲಿಂಗಾಂಗವಾಗಿ ಉಸಿರಾಡುತ್ತಲಿದೆ. ಅಂಗಕ್ಕೆ ಬಡಿದ ಶಬ್ದ ಅಂಗಕ್ಕೆ ಅರಿವಾಗದಿದ್ದರೆ ಅಂಗದಲ್ಲಿ ಅಡಗಿದ ಅಗ್ನಿ ಜ್ವಾಲೆಯಾಗಿ ಉರಿಯುತ್ತದೆ. ರಕ್ತ ಕುದಿಯುತ್ತದೆ. ಕಣ್ಣು ಕೆಂಪಾಗಿ ಅಗ್ನಿ ಚಿಮ್ಮುತ್ತದೆ. ರಕ್ತನಾಳಗಳು ಒಡೆದು ಕಿವಿ ಮೂಗಿನ ಮೂಲಕ ಹರಿಯುತ್ತದೆ. ಹೃದಯ ಹೊಡೆದು ಅದರ ಕ್ರಿಯೆ ಸ್ಥಗಿತ ಗೊಳ್ಳುತ್ತದೆ.

ಅಂಗದಲ್ಲಿ ಅಡಗಿದ ಅಗ್ನಿ ಅರಿವಿನಿಂದಾಗಿ ಮಂದಾಗ್ನಿಯಿಂದ ಉರಿದು ಅಂಗಕ್ಕೆ ಸಹಕಾರಿಯಾಗಿದೆ. ಅಗ್ನಿಯಿದೆಯೆಂದು ಅಂಗಕ್ಕೆ ಗೊತ್ತಾಗುವುದಿಲ್ಲ ; ಅರಿವು ಇದೆಯೆಂದೂ ಅಂಗಕ್ಕೆ ಗೊತ್ತಾಗುವುದಿಲ್ಲ. ಮನವೆಂಬ ಮರೆವಿನಿಂದ ಕೇಳಿದ ಶಬ್ದದಿಂದಾಗಿ ಅಗ್ನಿ ಕಲಕಿ ಜ್ವಾಲೆಯಾಗಿ ಉರಿದು ಬಿರಿಯುವಂತೆ ಮಾಡುತ್ತದೆ. ಅರಿವಿನಿಂದ ಕೇಳಿದರೆ ಅಗ್ನಿ ಉರಿಯುವುದಿಲ್ಲ ; ಅಂಗ ಬಿರಿಯುವುದಿಲ್ಲ. ಮನದ ಅಜ್ಞಾನದಿಂದಾಗಿ ಅರಿವಿನ ಪಾಠ ಅಂಗಕ್ಕೆ ಕೇಳುತ್ತಿಲ್ಲ. ಮನಕ್ಕೆ ಸುಖವೆಂದರೂ ಇಷ್ಟ , ದುಃಖ ವೆಂದರೂ ಇಷ್ಟ. ಮನ ತನ್ನ ಇಷ್ಟದನುಗಣಕ್ಕೆ ತಕ್ಕಂತೆ ಶಬ್ದ ಸ್ಪರ್ಶ ದೃಶ್ಯ ವಾಸನೆ ರುಚಿಯನ್ನು ಬಳಸಿಕೊಂಡು ಅಂಗದಲ್ಲಿ ಅಡಗಿದ ಬೆಂಕಿಯನ್ನು ಕಲಕುತ್ತದೆ.

ಸುಖ ದುಃಖಗಳು ಮನಕ್ಕೆ ಪ್ರಸಾದವಾಗುವುದಿಲ್ಲ. ಅರಿವಿಗೆ ಪ್ರಸಾದವಾಗುತ್ತದೆ. ಹೀಗಾಗಿ ಅರಿವನ್ನೇ ಗುರುವೆಂದು ಕರೆದರು ಪುರಾತನರು. ಮನಕ್ಕೆ ಈ ಶಬ್ದ ತಿಳಿಯದ ನಿಮಿತ್ತ ಅಂಗದಲ್ಲಿ ಸಂಗಮವಾದ ಅರಿವಿಗೆ ಶರಣು ಹೋಗಲಿಲ್ಲ ; ಆ ಅರಿವೇ ತಾನಾಗಲಿಲ್ಲ. ಮನ ಮತ್ತೊಂದು ಗುರುವನ್ನು ಮಾಡಿಕೊಂಡಿತು. ವೇಷಧಾರೀ ಗುರುವು ಅಂಗಕ್ಕೆ ವೇಷ ಹಾಕಿ ಆ ಅಂಗದಲ್ಲಿಯೇ ಉಳಿದ. ಅಂಗದಲ್ಲಿ ಸಂಗಮವಾದ ಗುರುದೇವನೂ ಅಂಗದಲ್ಲಿಯೇ ಉಳಿದ. ನಿಜ ಗುರುವಿನ ಪಾಠವನ್ನು ವೇಷದ ಗುರು ಕೇಳಲು ಸಾಧ್ಯವೆ ? ಕೆಡದೆ ಉರಿಯದೆ ಅಡಗಿಪ್ಪ ನಿಜ ಗುರುದೇವನನ್ನು ನೋಡಲು ವೇಷದ ಗುರುವಿಗೆ ಸಾಧ್ಯವಾಗುವುದಿಲ್ಲ. ಹೀಗಾಗಿ ನೋಡುವ ನೋಟ, ಕೇಳುವ ಶಬ್ದ, ಚರ್ಮದ ಸ್ಪರ್ಶ, ಮೂಗಿನ ಪರಿಮಳ, ನಾಲಿಗೆಯ ರುಚಿ ಮನಕ್ಕೆ ಪ್ರಸಾದವಾಗಲಿಲ್ಲ. ಐದು ಭಾಗಗಳಿಂದ ಬಡಿದ ಹೊಡೆತದಿಂದಾಗಿ ಅಂಗದಲ್ಲಿ ಅಡಗಿದ ಅಗ್ನಿ ಅಂಗದಲ್ಲಿಯೇ ಉರಿದು ಅಂಗ ಇಲ್ಲವಾಗುತ್ತದೆ. ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗ ಅಂಗಕ್ಕೆ ಪರಿಚಯವಾಗದೆ ಅಂಗ, ಬಂದ ಹಾದಿಗೆ ಸುಂಕವಿಲ್ಲವೆಂದು ಅದೇ ಹಾದಿ ಹಿಡಿದು ಹೋಗುತ್ತದೆ.

ತನ್ನ ಮನೆಯ ಕಿಚ್ಚು ತನ್ನ ಸುಟ್ಟಲ್ಲದೆ ನೆರೆಮನೆಯ ಸುಡದು ನೋಡಾ ಎನ್ನುವ ಬಸವಣ್ಣನವರ ಸೂತ್ರ ಅಂಗಕ್ಕೆ ಪರಿಚಯವಾಗದೆ ವೇಷದ ಮನಕ್ಕೆ ಸಿಕ್ಕು ವೇದಿಕೆಗೆ ಆಹಾರವಾಗುತ್ತದೆ.

**151**

**ತಾನು ಮಾಡುವ ಭಕ್ತಿ ಲಿಂಗದ ಉಪದೇಶವನರಿಯದ ಕಾರಣ**
**ಕಂಡ ಕಂಡ ದೈವಕ್ಕೆ ಹೋಗಿ,**
**ಮಂಡೆ ಮುಂದಲೆಯ ಕೊಟ್ಟನಾದಡೆ ಆತ ಭಕ್ತನಲ್ಲ ,**
**ಆತನ ಸಂಗಡ ಹೋಗಿ ಉಪದೇಶವ ಮಾಡಿದಾತನು ಗುರುವಲ್ಲ,**
**ಅಂಥವರ ಮನೆಯಲ್ಲಿ ಹೊಕ್ಕು ಉಂಬಾತ ಜಂಗಮವಲ್ಲ.**
**ಈ ಭಕ್ತ ಜಂಗಮದ ಭೇದವೆಂತೆಂದಡೆ :**
**ಒಡಲ ಕಿಚ್ಚಿಗೆ ಹೋಗಿ ತುಡುಗುಣಿ ನಾಯಿ ಹೊಕ್ಕು,**
**ತನ್ನ ಒಡಲ ಹೊರೆದಂತಾಯಿತಯ್ಯ ಎಂದು**
**ಪೊಡವಿಯೊಳಗೆ ಡಂಗುರವನಿಕ್ಕಿ ಸಾರಿದಾತ**
**ನಮ್ಮ ಅಂಬಿಗ ಚೌಡಯ್ಯ .**

ಒಡಲು ಹೊರೆಯುವುದಕ್ಕಾಗಿ ಅಧಿಕಾರಕ್ಕಾಗಿ ಮನ ಮಠಾಧೀಶನಾಗುವುದು. ತನುವಿಗೆ ಕಾವಿ ಹಾಕಿ ಒಡಲು ತುಂಬಿಸಿಕೊಳ್ಳುವುದಕ್ಕಾಗಿ ಉಪದೇಶ ಮಾಡುವುದು. ಉಪದೇಶಕ್ಕೆ ಒಳಗಾದ ಅಂಗ ಶಿಷ್ಯನಾದರೆ ಉಪದೇಶ ಮಾಡಿದ ಅಂಗ ಗುರುವಾಗುವುದು. ಅಂಗದಲ್ಲಿ ಸಂಗಮವಾದ ಸ್ವದೈವವನ್ನು ಮರೆತು ಅನ್ಯ ದೈವಕ್ಕೆರಗಿ ಮಂಡೆ ಮುಂದಲೆ ಬೋಳಿಸಿಕೊಂಡು ಧನ್ಯನಾದೆ ಎಂದು ಮೆರೆಯುವುದು. ಹಾಗೆ ಮಾಡಲು ಹೇಳಿದಾತ ಗುರುವಲ್ಲ. ಹಾಗೆ ಮಾಡಿದಾತ ಶಿಷ್ಯನಲ್ಲ. ಅಂಥವರ ಮನೆಯಲ್ಲಿ ಉಂಬಾತನು ಜಂಗಮನಲ್ಲ.

ಗುರು ಭಕ್ತ ಜಂಗಮ ಈ ಮೂವರೂ ತಿಳಿಯದವರು. ತುಡುಗುಣಿ ನಾಯಿಯಂತೆ ಒಡಲ ಹೊರೆಯುವುದಕ್ಕಾಗಿ ಅನ್ಯರ ಮನೆಗಳ ಬಾಗಿಲುಗಳನ್ನು ಆಯ್ಕೆ ಮಾಡಿಕೊಂಡವರು ಎಂದು ಡಂಗುರವನಿಕ್ಕಿ ಸಾರಿದಾತ ನಮ್ಮ ಅಂಬಿಗರ ಚೌಡಯ್ಯ .

ಗುರು ಭಕ್ತ ಜಂಗಮವನ್ನು ಹೇಗೆ ಕಂಡುಕೊಳ್ಳಬೇಕೆಂದು ತಿಳಿಯದವರನ್ನು ಯಾರೂ ನಿಂದಿಸಬೇಕಿಲ್ಲ. ಅವರು ಮಾಡುವ ನಾಯಿತನವನ್ನು ಅವರಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಡಂಗುರ ಹೊಡೆದು ಎಚ್ಚರಿಸಿ,ಅವರ ಅಪರಾಧವನ್ನು ಅವರಿಗೇ ಮನವರಿಕೆ ಮಾಡಿ, ಬೆಕ್ಕು ಇಲಿಯೊಂದಿಗೆ ಚಿನ್ನಾಟವಾಡಿದಂತೆ ಆಡಿ ಆಡಿ ನಿಧಾನವಾಗಿ ಕೊಲ್ಲುತ್ತಾನೆ. ರುದ್ರನನ್ನು ಅರಿಯದ ತನು ರುದ್ರನಿಗೆ ಆಹುತಿಯಾಗುತ್ತದೆ.

**152**

**ತಿಂಬ ಜಾತಿಗೆ ಮೇವ ಹಾಕಿ**
**ಹೇರಳ ಬಂಡವ ಕೊಯಿದು ತಿಂಬವನಂತೆ,**
**ದಾತನಿಗೆ ಛಂದದ ಮಾತನಾಡಿ**
**ಮೂರು ಮಲದಂದವ ಸಂಧಿಸಿಕೊಂಬವಂಗೆ,**
**ಲಿಂಗವಿಲ್ಲಾ ಎಂದನಂಬಿಗ ಚೌಡಯ್ಯ .**

ಮನ ತನುವಿನ ಮೂಲಕ ತನಗೆ ರುಚಿಕರವಾದ ಪದಾರ್ಥಗಳನ್ನು ತಿನ್ನುತ್ತದೆ. ಮನ ಬಯಕೆ ಮಾಡಿದ ಪದಾರ್ಥ ತನುವಿನ ಆರೋಗ್ಯಕ್ಕೆ ಹಾನಿ. ಆದರೂ ತನು ಮನ ಹೇಳಿದ ಮಾತು ಕೇಳಲೇಬೇಕು. ಏಕೆಂದರೆ ತನು ಮನದ ಗುಲಾಮನಾಗಿದೆ.

ಹೆಂಡ ಖಂಡ ತಿಂದು, ಅದನ್ನು ಕೊಡುವ ದಾತನಿಗೆ ಬಣ್ಣದ ಮಾತನಾಡಿ ಸೋಗಲಾಡಿ ತನದಿಂದ ಮೆರೆಯುತ್ತದೆ. ತನುವಿನ ಬಲ ಮನಕ್ಕೆ ಪುಷ್ಠಿ! ತನುವಿನ ಬಲ ತನುವಿಗೆ ಮುಳುವು !

ಮನದಿಂದಾಗಿ ತನು ಮನಕ್ಕೆ ತೋಚಿದ್ದನ್ನು ತಿಂದು ಸಾತ್ವಿಕ ರಾಜಸ ತಾಮಸ ಗುಣಗಳಿಂದ ಮೆರೆದು ತನುವಿನ ಜ್ಞಾನವನ್ನು ತನುವೇ ಮರೆತು ಹೋಗಿದೆ.

ತನುವಿನ ಜ್ಞಾನ ತನುವಿಗೆ ಲಭ್ಯವಾದರೆ ಅದು ಸಾತ್ವಿಕ ರಾಜಸ ತಾಮಸಗಳನ್ನು ಸುಟ್ಟು ಹಾಕಿ ಅರಿವೆಂಬ ಗುರುದೇವನಿಗೆ ಗುಲಾಮನಾಗುತ್ತದೆ. ಆಗ ಮನ ಜ್ಞಾನದಲ್ಲಿ ಸುಟ್ಟು ತನು ವಿಗೆ ಭಸ್ಮವಾಗಿ ಬಳಕೆಯಾಗುತ್ತದೆ.

**ಮೂರು ಮರದಂದವ ಸಂಧಿಸಿಕೊಂಬವಂಗೆ ಲಿಂಗವಿಲ್ಲ ಎಂದನಂಬಿಗ ಚೌಡಯ್ಯ:**

ಮನವೆಂಬ ಮಂಗ ಸಾತ್ವಿಕ ರಾಜಸ ತಾಮಸ ಗುಣಗಳ ಮೂಲಕ ತನುವಿನಲ್ಲಿ ಹರಿದಾಡುತ್ತದೆ. ಮೂರು ಗುಣಗಳೆಂಬ ಮರದ ಮೂಲಕ ಮೂರು ವಿಧದ ಫಲಗಳನ್ನು ಮನವೆಂಬ ಮಂಗ ಮೆದ್ದು, ತನುವಿಗೆ ಆಯಾ ಪದವಿಯ ಹಣೆಪಟ್ಟಿ ಕಟ್ಟುತ್ತದೆ.

ಬೆಳಿಗ್ಗೆ ಸ್ನಾನ ಪೂಜಾದಿಗಳನ್ನು ಮುಗಿಸಿಕೊಂಡು ತನುವಿಗೆ ಗಂಧ ವಿಭೂತಿ ರುದ್ರಾಕ್ಷಿ ಲಿಂಗ ಜನಿವಾರ ಧರಿಸಿ ತನುವಿಗೆ ಸಾತ್ವಿಕನ ವೇಷ ಧರಿಸುತ್ತದೆ. ಸಾತ್ವಿಕ ಎಂದು ಕರೆಯಿಸಿಕೊಳ್ಳಲು ಮನಕ್ಕೆ ಬಲು ಸಂತೋಷ.

ಸಾತ್ವಿಕ ಎಂದು ಕರೆಯಿಸಿಕೊಳ್ಳುವುದು ನಿಜವಲ್ಲ. ಅದು ಮನದ ವೇಷ. ಮನ ತನುವಿಗೆ ಹಾಕಿದ ವೇಷ. ತನುವಿನ ಸಾತ್ವಿಕ ಮರದ ಫಲವನ್ನು ಮನ ಸುಖದಿಂದ ಉಣ್ಣುತ್ತದೆ.

ಮನ ತನುವಿನ ಮೂಲಕ ಪೂಜೆ ಪ್ರಾರ್ಥನೆ ನಮಾಜ ಮಾಡಿ ಸಾತ್ವಿಕ ಎಂದು ಕರೆಯಿಸಿಕೊಂಡು ಕಾರ್ಯಾಲಯ, ವ್ಯವಹಾರದ ಮೂಲಕ ರಾಜಸನಾಗಿ ಅಧಿಕಾರ ಚಲಾಯಿಸುತ್ತದೆ. ಲಂಚ ಭ್ರಷ್ಟಾಚಾರದ ಮೂಲಕ ತನು ತನುಗಳನ್ನೇ ತೊಂದರೆಗೆ ಈಡು ಮಾಡುತ್ತದೆ. ಇದು ತನುವಿನ ತಪ್ಪಲ್ಲ; ಮನದ ತಪ್ಪು. ತನು ಮನದ ಗುಲಾಮ !

ಮನ ತನುವಿನ ಮೂಲಕ ಅಧಿಕಾರ ಚಲಾಯಿಸಿ ರಾಜಸ ಎಂದು ಕರೆಯಿಸಿಕೊಂಡು ರಾತ್ರಿ ಕುಡಿದು ತಿಂದು ಜೂಜು ಹಾದರದಲ್ಲಿ ಭಾಗಿಯಾಗಿ ತಾಮಸನೆಂದು ಕರೆಯಿಸಿಕೊಂಡು ಸುಖಿಸುತ್ತದೆ.

ತನು ತನುವಿಗೆ ಗುಲಾಮನಾಗುವುದು ಗುಲಾಮನಲ್ಲ. ಅದು ತನು ಮತ್ತೊಂದು ತನುವಿಗೆ ಮಾಡುವ ಸೇವೆ ! ತನು ಮನಕ್ಕೆ ಗುಲಾಮನಾಗುವುದೇ ಗುಲಾಮಗಿರಿ. ಅಂದರೆ ತನಗೆ ತಾನೇ ಗುಲಾಮನಾದದ್ದು ತನುವಿಗೆ ಗೊತ್ತಾಗುವುದೆ ಇಲ್ಲ. ಮೇಕೆ ಕೊರಳಿಗೆ ಬೇವಿನ ತಳಿರು ಕಟ್ಟಿ ಪೂಜಿಸಿ ಕೊಂದಂತೆ. ಮೇಕೆಗೇನು ಗೊತ್ತು ತನ್ನನ್ನು ಕೊಲ್ಲಲು ತಳಿರು ಕಟ್ಟಿದ್ದಾರೆಂದು. ಮೇಕೆ ಕೊರಳಿಗೆ ಕಟ್ಟಿದ ತಳಿರು ಮೇಯುತ್ತಾ ಕಟುಕನಿಗೆ ಬಲಿಯಾಗುತ್ತದೆ. ಅದು ಮೇಕೆ; ಅದಕ್ಕೆ ಗೊತ್ತಿಲ್ಲ. ತನುವಿಗೆ ಗೊತ್ತಾಗುವುದು ಬೇಡವೆ ? ತಾನು ಅರಿವೆಂಬ ಗುರು ದೇವನಿಗೆ ಗುಲಾಮನಾಗಬೇಕೆಂಬುದು ! ಮೂರು ಮಲದಂದವ ಸಂಧಿಸಿಕೊಂಬ ಅಂಗಕ್ಕೆ ಲಿಂಗವಿಲ್ಲವೆಂದನು ಅಂಬಿಗರ ಚೌಡಯ್ಯ !

**153**

**ತಿರುಳು ಒಡೆದ ಬಿತ್ತು ಮರಳಿ ಪೈರಪ್ಪುದೆ ?**
**ತ್ರಿವಿಧಕ್ಕೆ ಮನವೊಡ್ಡದೆ ತೆರಳಿ ತೀರ್ಚಿದವಂಗೆ ಮರಳಿ ಮುಟ್ಟಿದಡೆ,**
**ಆಚಾರಕ್ಕೆ ಹುರುಳಿಲ್ಲ ಎಂದನಂಬಿಗ ಚೌಡಯ್ಯ .**

ಬಿತ್ತುವ ಬೀಜದ ತಿರುಳು ಮೊಳಕೆ ಒಡೆಯುವುದಕ್ಕೆ ಆಧಾರ. ತಿರುಳು ಕಳೆದ ಬೀಜ ಬಿತ್ತಿದರೆ ಮತ್ತೆ ಮರಳಿ ಪೈರಾಗಿ ಫಲ ಕೊಡುವುದೆ ? ಹುರಿದ ಬೀಜ ಪ್ರಸಾದಕ್ಕೆ ಯೋಗ್ಯ. ಬಿತ್ತುವುದಕ್ಕೆ ಅಲ್ಲ. ಬಿತ್ತಿ ಬೆಳೆಯುವುದಕ್ಕೆ ಅಲ್ಲ.

ಗುರು ಲಿಂಗ ಜಂಗಮಕ್ಕೆ ಮನ ಒಡ್ಡದೆ, ಮರಳಿ ಆಚಾರದಲ್ಲಿ ನಿರತವಾದರೆ ಅಂತಹ ಆಚಾರಕ್ಕೆ ಹುರುಳಿಲ್ಲ. ರುದ್ರಾಭಿಷೇಕ, ವರದ ಶಂಕರ ಕತೆ, ಪ್ರಾರ್ಥನೆ ಪೂಜೆಯಿಂದ ಮನದ

ರೋಗ ತೊಲಗುವುದಿಲ್ಲ. ಗುರುಪೂಜೆ, ಲಿಂಗಪೂಜೆ, ಜಂಗಮನ ಪೂಜೆಯಿಂದಲೂ ಮನದ ಸೆಗಣಿಯ ಗುಣ ಸುಟ್ಟು ವಿಭೂತಿಯಾಗುವುದಿಲ್ಲ.

ಗುರುವೆಂದರೆ ವ್ಯಕ್ತಿಯಲ್ಲ. ಲಿಂಗವೆಂದರೆ ಅಂಗದ ಮೇಲೆ ಧರಿಸಿಕೊಂಡ ಲಿಂಗವೂ ಲಿಂಗವಲ್ಲ. ಜಂಗಮವೆಂದರೂ ವ್ಯಕ್ತಿಯಲ್ಲ. ಒಂದು ಜಾತಿಯಲ್ಲಿ ಜನಿಸಿದವನನ್ನು ಜಂಗಮ ಎನ್ನುವಂತಿಲ್ಲ.

ಗುರುವೆಂದರೆ ವ್ಯಕ್ತಿಯಲ್ಲಿರುವ ಅವ್ಯಕ್ತ ಅರಿವು. ಅದನ್ನು ಧಾರಣೆ ಮಾಡಿ ಕೊಂಡ ಅಂಗವೇ ಲಿಂಗಾಂಗ. ಅಂಗಕ್ಕೆ ಉಂಟಾಗುವ ಅಜ್ಞಾನದ ಆಪತ್ಕಾಲವನ್ನು ಅಂಗದಲ್ಲಿಯೇ ಸಂಗಮವಾದ ಜ್ಞಾನದಿಂದ ಕತ್ತರಿಸುವವನೇ ಜಂಗಮ. ಇವನು ಕೂಡಾ ಅಂಗದಲ್ಲಿಯೇ ಇರುವ ಅವ್ಯಕ್ತ.

ಗುರುದೇವನೂ ತಾನೇ, ಲಿಂಗದೇವನೂ ತಾನೇ, ಜಂಗಮದೇವನೂ ತಾನೇ ಎಂದು ತಿಳಿದು ಜ್ಞಾನದ ಆಚಾರದಲ್ಲಿ ತೊಡಗಿದವನೇ ಗುರು ಲಿಂಗ ಜಂಗಮ ಎಂದು ಕರೆಯಿಸಿಕೊಳ್ಳುತ್ತಾನೆ.

ಮನ, ಗುರು ಲಿಂಗ ಜಂಗಮಕ್ಕೆ ಮರುಳಾಗಿ ಅವುಗಳಿಗೆ ಗುಲಾಮನಾದರೆ ಅದು ಮತ್ತೆ ಹುಟ್ಟುವುದಿಲ್ಲ. ಹುಟ್ಟಿ ಹುಟ್ಟಿ ನರಕ ಯಾತನೆಯನ್ನು ಅನುಭವಿಸುವುದಿಲ್ಲ. ಹುರಿದ ಬೀಜ ಬೆಳೆಯದಂತೆ ತನುವಿಗೆ ಹೇಗೆ ಪ್ರಸಾದವಾಗುತ್ತದೋ ಹಾಗೆಯೇ ಮನ ಗುರು ಲಿಂಗ ಜಂಗಮಕ್ಕೆ ಪ್ರಸಾದವಾಗುತ್ತದೆ. ಹೀಗಾಗಿ ಗೋಚರಿಸುವ ಆಚಾರಕ್ಕೆ ಹುರುಳಿಲ್ಲ.

**154**

**ತುತ್ತಿನಾಸೆಗೆ ಲಿಂಗವ ಕೊಟ್ಟು ಹೋಹ ವ್ಯರ್ಥ ಮೂಳ**
**ನಿಮಗೆ ಗುರುವಾದನ್ನೆಸೆ ?**
**ಸತ್ಯ ಸದಾಚಾರವ ಬಲ್ಲಡೆ ತತ್ವಜ್ಞಾನವ ಬೋಧಿಸಿ,**
**ಆ ಮಹಾಲಿಂಗಕ್ಕೂ ನಿಮಗೂ ಸಂಬಂಧವ ಮಾಡದಿಹ**
**ಕತ್ತೆ ಗುರುವಿನ ಪಾದವ ಹಿಡಿದು ಕೆಟ್ಟಿರಲ್ಲಾ !**
**ಹತ್ತಿರಿದ್ದ ಲಿಂಗವ ಕಿರಿದು ಮಾಡಿ, ಕ್ಷೇತ್ರದ ಲಿಂಗವ ಹಿರಿದು ಮಾಡಿ ;**
**ಕಂಕುಳ ಹತ್ತಿರದ ಲಿಂಗವ ಕಿರಿದು ಮಾಡಿ,**
**ಕೊಂಕಣ ಹತ್ತಿರದ ಲಿಂಗವ ಹಿರಿದು ಮಾಡಿ ;**
**ಎಂತುಂಟೋ ನಿನ್ನ ಲಿಂಗವ ಕೊಡಲಾರದಿದ್ದಡೆ !**
**ಹರುಗೋಲು ಹೊರಲಾರ, ಭೋಂಕನೆ ಮುಳುಗುವನೆಂದಾತ**
**ನಮ್ಮ ಅಂಬಿಗರ ಚೌಡಯ್ಯ .**

ಲಿಂಗ ಒಳಗೊ ಹೊರಗೊ ಬಲ್ಲಡೆ ನೀವು ಹೇಳಿರೇ, ಲಿಂಗ ಎಡನೊ ಬಲನೊ ಬಲ್ಲಡೆ ನೀವು ಹೇಳಿರೆ, ಲಿಂಗ ಮುಂದೊ ಹಿಂದೊ ನೀವು ಹೇಳಿರೆ, ಲಿಂಗ ಸ್ಥೂಲವೊ ಸೂಕ್ಷ್ಮವೊ ಬಲ್ಲಡೆ ನೀವು ಹೇಳಿರೆ ? ಲಿಂಗ ಪ್ರಾಣವೊ ಪ್ರಾಣ ಲಿಂಗವೊ ಬಲ್ಲಡೆ ನೀವು ಹೇಳಿರೆ ಗುಹೇಶ್ವರ ಲಿಂಗವನು.

ಲಿಂಗ ಒಳ ಹೊರಗೆನ್ನದೆ, ಎಡಬಲ ಎನ್ನದೆ, ಸ್ಥೂಲ ಸೂಕ್ಷ್ಮವೆನ್ನದೆ, ಲಿಂಗ ಪ್ರಾಣವಾಗಿ ಅಂಗದಲ್ಲಿ ಸಂಗಮವಾಗಿದೆ. ಲಿಂಗಾಂಗವಾಗಿದೆ. ಅಂತಹ ಲಿಂಗವನ್ನು ಅಂಗದ ಮೇಲೆ ಕಟ್ಟಲು

ಬರುತ್ತದೆಯೇ ? ಲಿಂಗವಿಲ್ಲದ ಅಂಗ ಜಗತ್ತಿನಲ್ಲಿ ಒಂದೂ ಇಲ್ಲ. ಅಂಗದಲ್ಲಿ ಸಂಗಮವಾದ ಲಿಂಗವನ್ನು ಮನದ ಮೂಲಕ ಅಂಗ ಕಂಡುಕೊಳ್ಳಬೇಕಾಗಿದೆ. ಹಾಗೆ ಕಂಡುಕೊಂಡು ಲಿಂಗಾಂಗವೇ ಆದ ಅಂಗ ಮತ್ತೊಂದು ಅಂಗಕ್ಕೆ ಸೂಚಿಸಬಹುದಾಗಿದೆ. ಅದನ್ನು ಬಿಟ್ಟು ತುತ್ತಿನ ಆಸೆಗಾಗಿ ಜಂಗಮನ ವೇಷ ಹಾಕಿಕೊಂಡು ಲಿಂಗವನ್ನು ಅಂಗದ ಮೇಲೆ ಕಟ್ಟಿ ಹೋಗುವ ವ್ಯರ್ಥ ಮೂಳ ಅಂಗಕ್ಕೆ ಗುರುವಾಗಬಲ್ಲನೆ ?

ಸತ್ಯ ಗೊತ್ತಿದ್ದರೆ, ಅಂಗ ಲಿಂಗವನ್ನು ಕಂಡುಕೊಂಡು ಲಿಂಗಾಂಗವಾಗಿದ್ದರೆ, ಅಂತಹ ಅಂಗ, ಅಂಗದಲ್ಲಿ ಸಂಗಮವಾದ ಲಿಂಗ ಸಂಬಂಧವನ್ನು ಹೇಳಬೇಕು. ಅಂಗಕ್ಕೂ ಲಿಂಗಕ್ಕೂ ಸಂಬಂಧವನ್ನು ಮಾಡಿಸಬೇಕು. ಹಾಗೆ ಮಾಡಲು ಅರಿಯದ ಅಂಗ ತುತ್ತಿನ ಆಸೆಗೆ ಲಿಂಗವನ್ನು ಕೊಟ್ಟು ಹೋಗುವ ವ್ಯರ್ಥಮೂಳವದು. ಅಂತಹ ಅಂಗ ಗುರುವಾಗದು ; ತುತ್ತಿನಾಸೆಗಾಗಿ ಗುರುವಾದುದು. ಅದರ ಪಾದವ ಹಿಡಿದು ಕೆಟ್ಟರಲ್ಲಾ.

ಹತ್ತಿರವಿದ್ದ ಅರಿವೆಂಬ ಲಿಂಗವನ್ನು ಅರಿಯದೆ ಕಿರಿದು ಮಾಡಿದಿರಿ. ಕೆಲಸಕ್ಕೆ ಬಾರದ ಗುರು ತೋರಿಸಿದ ಕ್ಷೇತ್ರವ ಹಿರಿದು ಮಾಡಿದಿರಿ. ಕೊಂಕಳದಲ್ಲಿದ್ದ ಅರಿವೆಂಬ ಲಿಂಗವನ್ನು ಕಿರಿದು ಮಾಡಿದಿರಿ. ಅದು ನನ್ನಲ್ಲಿಯೇ ಇದೆಯೆಂಬ ಪರಿಚಯವೂ ನಿಮಗಾಗಲಿಲ್ಲ. ಅಂಗದ ಮೇಲೆ ಧರಿಸಲು ಹೇಳದ ನಕಲಿಗುರು ಜ್ಞಾನವೆಂಬ ಹರಗೋಲನ್ನು ಹೊರಲಾರ. ಅಜ್ಞಾನದ ಸಾಗರವನ್ನು ದಾಟಿಸಲಾರ. ತುತ್ತಿನಾಸೆಗಾಗಿ ಅಂಗದ ಮೇಲೆ ಲಿಂಗ ಹೊರಿಸಿ ತಾನೂ ಹೊತ್ತು ಅಜ್ಞಾನದ ಸಾಗರದಲ್ಲಿ ಮುಳುಗಿ ಮುಳುಗಿ ಸಾಯಿಸಿ ಒಮ್ಮೆ ತಾನೂ ಸಾಯುವ.

**155**

**ತೋಯವಿಲ್ಲದ ಕುಂಭ, ಜ್ಞಾನವಿಲ್ಲದ ಘಟ, ದೇವರಿಲ್ಲದ ಗುಡಿ**
**ಇವು ಹಾಳು ದೇಗುಲ ಸಮವು.**
**ಎಲೆ ಪರವಾದಿಗಳಿರಾ : ಗುರುವು ಎಂಬ ನಾಮವು ಪರಶಿವನು,**
**ಪರಶಿವನೇ ಇಷ್ಟ ಲಿಂಗವು.ಆ ಇಷ್ಟ ಲಿಂಗದ ಪೂಜೆಯಲ್ಲಿ ಲೋಲುಪ್ತನಾಗಿರಬೇಕು,**
**ಆ ಗುರು ಮಂತ್ರದಲ್ಲಿ ಮಗ್ನನಾಗಿರಬೇಕು.**
**ಚರಭಕ್ತಿಯಲ್ಲಿ ಯುಕ್ತನಾಗಿರಬೇಕು.**
**ಈ ತ್ರಿವಿಧವ ಬಿಟ್ಟು ಮಲತ್ರಯಕ್ಕೆ ಒಳಗಾಗಿ**
**ಬಂಧನಕ್ಕೆ ಹೋಗುವರ ನೋಡಿ**
**ಮನ ನಾಚಿತ್ತೆಂದಂಬಿಗ ನಮ್ಮ ಅಂಬಿಗರ ಚೌಡಯ್ಯ ನಿಜಶರಣರು .**

ನೀರಿಲ್ಲದ ಗಡಿಗೆ, ಜ್ಞಾನವಿಲ್ಲದ ದೇಹ, ದೇವರಿಲ್ಲದ ಆಲಯ ಇವು ಹಾಳು ಹಾಳು. ಹಾಳುಬಿದ್ದ ದೇಗುಲಕ್ಕೆ ಸಮವು.

ದೇಹದಲ್ಲಿ ಅರಿವಿನ ದೇವರಿದ್ದಾನೆ. ಮನ ದೇವರನ್ನು ದೇವಾಲಯದಲ್ಲಿ ಹುಡುಕುತ್ತದೆ. ಅದು ಬರೀ ಕಲ್ಲೆಂದು ಮನಕ್ಕೆ ತಿಳಿಯುತ್ತಿಲ್ಲ. ಲೋಕದ ದೇಹಗಳೆಲ್ಲ ದೇವರು ಹೊರಗಿ ದ್ದಾನೆಂದು ಭಾವಿಸಿ ಹೊರಗಡೆಯೇ ಪೂಜಿಸುತ್ತಿವೆ. ಅಂತಹ ದೇಹಗಳನ್ನು ಕುರಿತು ಚೌಡಯ್ಯ ಶರಣರು ಈ ಕೆಳಗಿನಂತೆ ನುಡಿದಿದ್ದಾರೆ :

ಎಲೆ ಪರವಾದಿಗಳಿರಾ, ಗುರುವು ಎಂಬ ನಾಮವು ಪರಶಿವನು. ಆ ಪರಶಿವನೇ ಇಷ್ಟ ಲಿಂಗವು. ಆ ಇಷ್ಟ ಲಿಂಗದ ಪೂಜೆಯಲ್ಲಿ ಲೋಲುಪ್ತನಾಗಿರಬೇಕು. ಆ ಗುರುಮಂತ್ರದಲ್ಲಿ ಮಗ್ನನಾಗಿರಬೇಕು.

ಗುರು ಹೊರಗಿದ್ದಾನೆಂದು ಭಾವಿಸಿ ಭ್ರಮೆಗೊಂಡ ಮನವೇ, ಗುರು ಎನ್ನುವ ಶಬ್ದವೇ ಶಿವ. ಅವನು ಕೂಡಾ ಹೊರಗಿಲ್ಲ. ನಿನ್ನ ಅರಿವೇ ನಿನಗೆ ಗುರು. ಆ ಗುರುದೇವನೇ ಮಹಾದೇವ. ಸದಾಶಿವ ! ಸಾಕ್ಷಾತ್ ಪರಬ್ರಹ್ಮನೇ ಆಗಿರುವನು. ಪರಶಿವನೇ ಆಗಿರುವನು. ಆ ಪರ ಶಿವನೇ ನಿನಗೆ ಇಷ್ಟಲಿಂಗವಾಗಬೇಕು. ಎಲೆ ಮನವೇ ಆ ಇಷ್ಟಲಿಂಗದಲ್ಲಿ ನೀನು ಸದಾ ಲೋಲುಪ್ತನಾಗಿರಬೇಕು. ಆ ಗುರುದೇವನ ಮಂತ್ರದಲ್ಲಿ ಮಗ್ನನಾಗಿರಬೇಕು. ಆ ಭಕ್ತಿಯಲ್ಲಿ ನೀನು ಯುಕ್ತನಾಗಿರಬೇಕು.

ಲಿಂಗಪೂಜೆ, ಗುರುಪೂಜೆ, ಚರಭಕ್ತಿಯೆಂಬ ತ್ರಿವಿಧವ ಬಿಟ್ಟು ಮಲತ್ರಯಗಳಿಗೆ ಮಾರು ಹೋಗುವ ಮನವನ್ನು ನೋಡಿ ನಾಚಿತ್ತೆನ್ನ ಮನ ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಶರಣರು ಯಾವ ವ್ಯಕ್ತಿಯನ್ನು ನಿಂದಿಸುವುದಿಲ್ಲ. ವ್ಯಕ್ತಿಯಲ್ಲಿ ಅವ್ಯಕ್ತ ಸಂಗಮವಾಗಿ ದ್ದಾನೆ. ವ್ಯಕ್ತಿಯನ್ನು ಮನ ಆವರಿಸಿದೆ. ವ್ಯಕ್ತಿಯಲ್ಲಿರುವ ಅವ್ಯಕ್ತ ಪರಶಿವನೇ ಆಗಿದ್ದಾನೆ. ಆ ಪರಶಿವನಿಗೆ ಪೂಜೆ ಸಲ್ಲಿಸಬೇಕಾದ ಮನ ಕಲ್ಲನ್ನೇ ಲಿಂಗವನ್ನಾಗಿಸಿ ಅಂಗದ ಮೇಲೆ ಧರಿಸಿ ಲಿಂಗಪೂಜೆ ಮಾಡುತ್ತದೆ. ಅದು ಇಷ್ಟ ಲಿಂಗವಲ್ಲ. ಬರೀ ಕಲ್ಲೆಂದು ಮನಕ್ಕೆ ತಿಳಿಯುವುದಿಲ್ಲ.

ದೇಹವೇ ದೇವಾಲಯ.ಆ ದೇವಾಲಯದಲ್ಲಿ ಸಾಕ್ಷಾತ್ ಪರ ಶಿವನಿದ್ದಾನೆ.ಎಲೆ ಮನವೇ ನಿನ್ನ ಅರಿವೆಂಬ ಶಿವನನ್ನು ನೀನೇ ಪೂಜಿಸು. ನೀನೇ ಅದಕ್ಕೆ ಭಕ್ತಿ ಮಾಡು. ಜ್ಞಾನವಿಲ್ಲದ ದೇಹವೇ ಇಲ್ಲ. ಇದನ್ನು ತಿಳಿಯದ ದೇಹವೇ ಹಾಳುಬಿದ್ದ ದೇವರಿಲ್ಲದ ದೇಗುಲ. ನೀರಿಲ್ಲದ ಕುಂಭಕ್ಕೆ ಸಮ. ಜ್ಞಾನವಿಲ್ಲದ ಘಟಕ್ಕೆ ಸಮ.

**156**

**ದೃಷ್ಟವ ಕಂಡುದಕ್ಕೆ ಮತ್ತೆ ಮೂದಲೆ ಉಂಟೆ?**
**ವ್ರತಗೆಟ್ಟವಂಗೆ ಆಚಾರಭ್ರಷ್ಟಂಗೆ ಪರಸತಿ ಪರಧನ ದುರ್ಭಿಕ್ಷಂಗೆ**
**ಪರ ಅಪರವನರಿಯದ ಪಾತಕಂಗೆ ಅಘೋರ ನರಕಕ್ಕೆಡೆಯಿಲ್ಲ**
**ಎಂದನಂಬಿಗ ಚೌಡಯ್ಯ.**

ಬೆಳಕು ಕಂಡವನಿಗೆ ಕತ್ತಲೆಯು ಇಲ್ಲ. ಲೋಕಕ್ಕೆ ಕತ್ತಲೆ ಉಂಟು, ಬೆಳಕು ಉಂಟು. ಅವನಿಗೆ ಬೆಳಕಿನಲ್ಲಿಯೂ ಕತ್ತಲೆಯೇ ಕತ್ತಲೆಯಲ್ಲಿಯೂ ಕತ್ತಲೆಯೇ, ಕತ್ತಲೆಯ ಸುಖ ಕಂಡ ಲೋಕಕ್ಕೆ ಬೆಳಗಿನಲ್ಲಿಯೂ ಕತ್ತಲೆಯ ಸುಖವೇ ಕಾಣುತ್ತದೆ.

ಬೆಳಕಿನ ಸತ್ಯ ಕಂಡ ಶರಣನಿಗೆ ಹಾಗಲ್ಲ. ಆತನಿಗೆ ಕತ್ತಲೆಯೇ ಇಲ್ಲ. ಬೆಳಗಿನಲ್ಲಿಯೂ ಬೆಳಗೇ; ಕತ್ತಲೆಯಲ್ಲಿಯೂ ಬೆಳಗೇ ಕಾಣುತ್ತದೆ. ಏಕೆಂದರೆ ಕತ್ತಲು ಬೆಳಕಿನ ಒಂದಂಶ. ಬೆಳಕಿನಿಂದಲೇ ಕತ್ತಲೆಯ ಜನನ ವೆಂದ ಮೇಲೆ ಕತ್ತಲೆ ಬೆಳಕಿನ ಒಂದಂಶ ಅಲ್ಲವೇ? ಹೀಗಾಗಿ ಶರಣ ಕತ್ತಲೆಯಲ್ಲಿಯೂ ಬೆಳಕಿನ ಆಚರಣೆ ಮಾಡುತ್ತಾನೆ. ಆತನಿಗೆ ಎಲ್ಲೆಲ್ಲೂ ಬೆಳಕು. ಲೋಕದ ಆಚರಣೆ

ಶರಣನಿಗೆ ವಿರೋಧ, ಶರಣನ ಆಚರಣೆ ಲೋಕಕ್ಕೆ ವಿರೋಧ. ಹೀಗಾಗಿ ಶರಣ ವ್ರತ ಕೆಡಿಸಿಕೊಂಡವನು. ಲೋಕದ ಆಚಾರವನ್ನು ಕೆಡಿಸಿಕೊಂಡವನು, ಲೋಕಕ್ಕೆ ವಿರೋಧಿಯಾದವನು, ಆಚಾರ ಭ್ರಷ್ಟನು, ಅಗೋಚರದ ಆಚಾರ ಹಿಡಿದವನು.

ಶರಣನೆಂದರೆ ಮಹಾಜ್ಞಾನಿ, ಆತನ ಆಚಾರ ಲೋಕದ ಆಚಾರದಂತಲ್ಲ. ಲೋಕದ ಆಚಾರವೆಂದರೆ ತ್ರಿಕಾಲ ಸ್ನಾನ ಮಾಡುವುದು. ದೇವಾಲಯ, ಚರ್ಚ್, ಮಸೀದಿಗಳಿಗೆ ಹೋಗಿ ಪ್ರಾರ್ಥಿಸಿ ಪೂಜಿಸುವುದು. ಜಟೆ, ಗಡ್ಡ, ಜುಟ್ಟು ಬಿಟ್ಟು ಜನಿವಾರ ಹಾಕುವುದು. ಶಿಲುಬೆ , ಲಿಂಗಗಳನ್ನು ಧರಿಸುವುದು. ನಿಲುವಂಗಿ, ಕಾವಿ, ಖಾದಿ ಧರಿಸಿ ಅಪ್ಪಟ ಪೂಜಕನಂತೆ, ಸಾತ್ವಿಕನಂತೆ, ವ್ರತ ಆಚಾರ ಸಕಲ ನಿತ್ಯ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುವುದು. ಇದು ಲೋಕದ ಆಚಾರ ಲೋಕದ ಈ ಆಚಾರ ಲೋಕಕ್ಕೆ ಕಾಣುತ್ತದೆ.

ಶರಣನ ಆಚಾರ ಲೋಕಕ್ಕೆ ಕಾಣುವುದಿಲ್ಲ. ಲೋಕದ ಆಚಾರ ಶರಣ ಪಾಲನೆ ಮಾಡುವುದಿಲ್ಲ. ಆತನಿಗೆ ಪರಸತಿ ಪರಧನ ಪರದೈವವೆಂದರೆ ಆಗುವುದಿಲ್ಲ. ಜುಟ್ಟು ಬಿಟ್ಟು ಜನಿವಾರ ಹಾಕುವುದಿಲ್ಲ. ಗಡ್ಡ ಜಟೆ ಬಿಡುವುದಿಲ್ಲ. ಮಂಡೆ ಬೋಳಿಸಿಕೊಂಡು ದೇವಾಲಯಕ್ಕೆ ಹೋಗುವುದಿಲ್ಲ. ಮಸೀದೆ ದೇವಾಲಯಗಳಿಗೆ ಹೋಗಿ ಪ್ರಾರ್ಥಿಸುವುದಿಲ್ಲ. ಅಂಗದ ಮೇಲೆ ಲಿಂಗ ಧರಿಸುವುದಿಲ್ಲ. ಅಂಗವೇ ಅರಿವಿನ ಲಿಂಗವೆಂದು ಬಲವಾಗಿ ಕಂಡುಕೊಂಡಿರುತ್ತಾನೆ. ಹೀಗಾಗಿ ಲೋಕದ ವ್ರತವನ್ನು ಕೆಡಿಸಿಕೊಂಡವನು. ಲೋಕದ ವ್ರತ ಭ್ರಷ್ಟನು. ಪರಸತಿ ಪರಧನವನ್ನು ಬೇಡದವನು . ಪರ ಅಪರವನು ಅರಿಯದ ಪಾತಕನು ಎಂದು ಶರಣನನ್ನು ಲೋಕ ಮೂದಲಿಸಿ ನುಡಿಯುತ್ತದೆ. ಶರಣ ಲೋಕದ ಈ ನುಡಿಯನ್ನು ಕೆಡಿಸಿ ಕೇಳಿ ಸುಖಿಸುವವನು.

ಶಬ್ದ ಸ್ಪರ್ಶ ದೃಶ್ಯ ರುಚಿ ವಾಸನೆಗಳೆಂದರೆ ಲೋಕಕ್ಕೆ ಬಲು ಸುಖ. ಹಾಗೆಯೇ ಬಲು ದುಃಖ ! ಏಕೆಂದರೆ ದ್ರೌಪದಿಯ ಶಬ್ದ ಕೇಳಿ ದುರ್ಯೋಧನನ ಅಪಾರ ಸೈನ್ಯ ತಮ್ಮಂದಿರು ಬಂಧು ಬಳಗ ಯುದ್ಧದಲ್ಲಿ ನಾಶವಾಯಿತು. ತಾನೂ ಸತ್ತ . ಶಬ್ದ ಮಹಾಭಾರತದ ಯುದ್ಧಕ್ಕೆ ನಾಂದಿ ಹಾಡಿತು.

ಸೀತಾದೇವಿಯನ್ನು ನೋಡಿ ರಾವಣನ ರಾಕ್ಷಸ ಸೈನ್ಯ ನಾಶವಾಯಿತು. ಅಪಾರ ಸಂಪತ್ತು ಹಾಳಾಯಿತು. ಆತನ ಹತ್ತು ತಲೆಗಳು ಭೂಮಿಗೆ ಉರುಳಿ ಬಿದ್ದವು. ಸೀತೆಯನ್ನು ನೋಡಿ ರಾವಣನಿಗೆ ಸುಖವಾಯಿತು. ಅವನ ಆ ನೋಟವೇ ಅವನಿಗೆ ಮುಳುವಾಯಿತು.

ಲೋಕ ಬದುಕಿರುವಾಗಲೇ ಸ್ವರ್ಗ ಸುಖವನ್ನು ಅನುಭವಿಸುತ್ತದೆ. ಘೋರವಾದ ನರಕದ ದುಃಖವನ್ನು ಅನುಭವಿಸುತ್ತದೆ. ಇವೆರಡನ್ನೂ ಕಳೆದು ಅರಿವಿನ ಸುಖದ ಸುಖವನ್ನು ಅನುಭವಿಸುವ ಶಕ್ತಿ ಲೋಕಕ್ಕಿಲ್ಲ. ಏಕೆಂದರೆ ಅದು ಅಂಗದಲ್ಲಿಯೇ ಅಡಗಿದೆ. ಅದನ್ನು ಹುಡುಕಿ ಅನುಭವಿಸುವ ಶಕ್ತಿ ಲೋಕಕ್ಕಿಲ್ಲ.

ಶರಣ ಹಾಗಲ್ಲ. ಅಂಗದಲ್ಲಿ ಸಂಗಮವಾದ ಅರಿವಿನ ಸುಖವನ್ನು ನೋಡಿ ಕೇಳಿ ಮುಟ್ಟಿ ರುಚಿಸಿ ಮೂಡಿಸಿ ಈ ಐದರ ಅರಿವಿನ ಪರಿಮಳ ವನ್ನು ಅನುಭವಿಸುತ್ತಾನೆ. ಅಂಗದ ಈ ಐದು ಇಂದ್ರಿಯಗಳು ಜ್ಞಾನೇಂದ್ರಿಯಗಳಾಗಿ ಮಾರ್ಪಡುತ್ತವೆ. ಈ ಐದೂ ಜ್ಞಾನೇಂದ್ರಿಯಗಳ ಮೂಲಕ ಶರಣ ಲೋಕದಂತೆ ಸುಖವನ್ನು ಅನುಭವಿಸುವುದಿಲ್ಲ; ದುಃಖವನ್ನೂ ಅನುಭವಿಸುವುದಿಲ್ಲ ! ಬರೀ ಸುಖದ ಅರಿವಿನ ಸಹಜ ಸುಖವನ್ನು ಮಾತ್ರ ಅನುಭವಿಸುತ್ತಾನೆ. ಹೀಗಾಗಿ ಶರಣ ಲೋಕದ ದೃಷ್ಟಿಯಲ್ಲಿ ಪರ ಅಪರವನು ಅರಿಯದ ಪಾತಕಿ ಲೋಕದಂತೆ ಆತನಿಗೆ

ಅಘೋರ ನರಕಕ್ಕೆಡೆಯಿಲ್ಲ. ಸ್ವರ್ಗ ನರಕಗಳೂ ಆತನಿಗಿಲ್ಲ. ಸುಖ ದುಃಖಗಳೂ ಆತನಿಗಿಲ್ಲ. ಆತನ ಭಾಷೆಯೇ ಬೇರೆ. ಆತನ ದೃಶ್ಯವೇ ಬೇರೆ. ತನಗೆ ತನ್ನಲ್ಲಿಯೇ ತಾನೇ ಕಂಡುಕೊಂಡ ಭಾಷೆ. ತನ್ನಲ್ಲಿಯೇ ಕಂಡುಕೊಂಡ ದೃಶ್ಯ .

157

**ದೇಹಾರವ ಮಾಡುವಣ್ಣಗಳಿರಾ, ಒಂದು ತುತ್ತು ಆಹಾರವನಿಕ್ಕಿರೆ,**
**ದೇಹಾರಕ್ಕೆ ಆಹಾರವೆ ನಿಚ್ಚಣಿಗೆ.**
**ದೇಹಾರವ ಮಾಡುತ್ತ ಆಹಾರವನಿಕ್ಕದಿರ್ದಡೆ,**
**ಆ ಹರನಿಲ್ಲೆಂದನಂಬಿಗ ಚೌಡಯ್ಯ .**

ದೇವರ ಪೂಜೆಯ ಮಾಡುತ್ತಲೇ ದೇಹವನ್ನು ಗಟ್ಟಿಗೊಳಿಸಬೇಕು. ದೇಹಕ್ಕೆ ದೇಹಾರ ಬೇಕೇ ಬೇಕು. ದೇಹದ ದೇವರೆ ದೇಹಾರ. ದೇವರೆಂದರೆ ಯಾರು? ದೇಹದಿಂದ ಮಾಡಿದ ದೇವರು ದೇವರೆ ? ದೇಹವನ್ನು ಮಾಡಿ ಆ ದೇಹದಲ್ಲಿಯೇ ವಾಸ ಮಾಡಿದ ದೇವರು ದೇವರೆ?

ದೇಹ ಮಾಡಿದ ದೇವರು ದೇವರಲ್ಲ.ಅದು ಕಲ್ಲು. ಕಲ್ಲನ್ನೇ ಕಟೆದು, ದೇವರೆಂದು ಭಜಿಸುತ್ತಾ, ಅದಕ್ಕೆ ನಾನಾ ಭಕ್ಷಗಳ ನೈವೇದ್ಯವನು ಇಕ್ಕಿ ದೇವರನ್ನು ಪೂಜಿಸುವ ಅಣ್ಣಗಳಿರಾ ಒಂದು ತುತ್ತು ಜ್ಞಾನದ ಆಹಾರವನು ಇಕ್ಕಿರೇ.

ಜ್ಞಾನವೇ ದೇಹಕ್ಕೆ ನಿಚ್ಚಣಿಕೆ. ಅದು ದೇಹದಲ್ಲಿಯೇ ಇದೆ. ಜ್ಞಾನವಿಲ್ಲದ ದೇಹಗಳೇ ಇಲ್ಲ. ಆದರೂ ದೇಹ ದೇವರನ್ನು ಪೂಜಿಸುತ್ತದೆ. ದೇವರೆಂದರೆ ಜ್ಞಾನ ಎಂಬುದನ್ನು ದೇಹವೇ ಮರೆತು ಹೋಗಿದೆ. ದೇವರು ದೇಹದ ನಿಚ್ಚಣಿಕೆ. ದೇವಾಲಯದಲ್ಲಿದ್ದ ದೇವರು ದೇವರಲ್ಲ. ಮಸೀದೆ ಚರ್ಚ್‌ಗೆ ಹೋಗಿ ದೇವರನ್ನು ಆರಾಧಿಸಬೇಕಿಲ್ಲ. ದೇವರು ಅಲ್ಲಿಲ್ಲ. ದೇವರು ದೇಹದಲ್ಲಿಯೇ ಇದ್ದಾನೆ.

ದೇಹವೆಂದರೆ ಮುಸಲ್ಮಾನನೇ? ಕ್ರಿಶ್ಚಿಯನ್‌ನೇ ? ಏನು ಹಿಂದುವೆ ? ಜೈನನೇ ಅಥವಾ ಬೌದ್ಧನೆ ? ಇವೆಲ್ಲ ಇಲ್ಲದ ಮುನ್ನ ದೇಹ ಇರಲಿಲ್ಲವೆ ? ಆ ದೇಹದಲ್ಲಿ ಜ್ಞಾನವೆಂಬ ದೇವರು ಇರಲಿಲ್ಲವೆ ? ದೇಹಾರಕ್ಕೆ ಆಹಾರವೇ ನಿಚ್ಚಣಿಕೆ !

ದೇಹ ಮಾಡಿದ ದೇವಾಲಯ ಮಸೀದೆ ಚರ್ಚ್‌ಗಳು ದೇಹದ ಹೆಗಲೇರಿವೆ. ದೇಹ ಮಾಡಿ ದೇಹದಲ್ಲಿಯೇ ವಾಸ ಮಾಡಿದ ದೇವರ ಹೆಗಲೂ ಏರಿವೆ ! ಏನೀ ಆಶ್ಚರ್ಯ ! ಆದರೂ ದೇಹದಲ್ಲಿರುವ ಅರಿವಿನ ದೇವರನ್ನು ಪೂಜಿಸಬೇಕೆಂದು ದೇಹಕ್ಕೆ ಅರಿವಾಗುತ್ತಿಲ್ಲ. ಹತ್ತಿ ಸುಖಿಸಬೇಕಾದ ನಿಚ್ಚಣಿಕೆಯನ್ನು ಹೊತ್ತು ತಿರುಗುತ್ತಲಿದೆ ದೇಹ.

ದೇಹವೆಂದರೆ ಜ್ಞಾನ. ಅದು ದೇವರು. ಅದು ಅಲ್ಲಾ. ಅದು ಗಾಡ್. ಜ್ಞಾನವೇ ಬುದ್ಧ. ಜ್ಞಾನವೇ ಜಿನ. ಜ್ಞಾನದ ಹೊರತಾಗಿ ದೇವರಿಲ್ಲ.ಆದರೂ ದೇಹ ದೇವರನ್ನು ಮಾಡಿ ಕುಂತಿದೆ. ಅದು ಮಸೀದೆ ಮಂದಿರ ಚರ್ಚ್ ಆಗಿ ದೇಹದ ಹೆಗಲೇರಿದೆ. ಅದನ್ನು ಕೊಡವಿ ದೇಹಕ್ಕೆ ದೇಹವೇ ಜ್ಞಾನದ ಆಹಾರವನ್ನು ತುತ್ತು ಮಾಡಿ ಉಣ್ಣಿಸುವುದು ಸುಲಭದ ಮಾತಲ್ಲ. ದೇಹಾ ರವ ಮಾಡುತ್ತ ಜ್ಞಾನದ ಆಹಾರವನ್ನು ಇಕ್ಕದಿದ್ದಡೆ ಆ ಹರನಿಲ್ಲೆಂದ ನಂಬಿಗ ಚೌಡಯ್ಯ .

ದೇಹ ದೇವರ ಪೂಜೆಯ ಮಾಡಲೇಬೇಕು. ದೇಹ ಮಾಡಿದ ದೇವರನ್ನು ಮರೆತು ;

ದೇವರು ಮಾಡಿದ ದೇಹದಿಂದ ಆ ದೇವರನ್ನು ಅರಿಯಬೇಕು. ದೇಹದಲ್ಲಿಯೇ ದೇವರು ಸಂಗಮವಾಗಿದ್ದಾನೆ. ದೇಹವನ್ನು ಆವರಿಸಿದ ಮನದಿಂದಾಗಿ ದೇಹ ಮಂಗವಾಗಿದೆ. ಆ ಮಂಗವೆಂಬ ಮನದಿಂದಲೇ ದೇವರನ್ನು ಅರಿಯಬೇಕಾಗಿದೆ.

**158**

**ದೊಡ್ಡ ದೊಡ್ಡ ಶೆಟ್ಟಿಗಳ ಕಂಡು ಅಡ್ಡಗಟ್ಟಿ ಹೋಗಿ ಶರಣಾರ್ಥಿ ಎಂಬ**
**ಎಡ್ಡುಗಳ್ಳತನಕ್ಕೆ ತಮ್ಮ ಮಠಕ್ಕೆ ಬನ್ನಿ ಹಿರಿಯರೇ ಎಂಬರು.**
**ಹೋಗಿ ಶರಣಾರ್ಥಿ ಭಕ್ತನೆಂದೊಡೆ ಕೇಳದ ಹಾಗೆ**
**ಅಡ್ಡ ಮೋರೆಯ ನಿಕ್ಕಿಕೊಂಡು ಸುಮ್ಮನೆ ಹೋಗುವ**
**ಹೆಡ್ಡ ಮೂಳರಿಗೆ ದುಡ್ಡೇ ಪ್ರಾಣವಾಯಿತ್ತು .**
**ದುಡ್ಡಿಸ್ತರ ಕುರುಹನರಿಯದೆ ಮೊಳಪಾದದ ಮೇಲೆ**
**ಹೊಡ ಹೊಡಕೊಂಡು ನಗುತಿರ್ದಾತ ನಮ್ಮ ಅಂಬಿಗರ ಚೌಡಯ್ಯ .**

ಲೋಕದ ಗುರುಗಳಿಗೆ ಶ್ರೀಮಂತರೆಂದರೆ ಬಲು ಇಷ್ಟ. ಬಡವರೆಂದರೆ ಬಲು ಕಷ್ಟ. ನಿಜ ಗುರುಗಳ ದೃಷ್ಟಿಯಲ್ಲಿ ಶ್ರೀಮಂತರು ಬಡವರೇ ; ಬಡವರೂ ಬಡವರೇ ಆಗಿ ಕಾಣುತ್ತಾರೆ. ಇವರಿಬ್ಬರೂ ನಿಜವನರಿಯದ ಬಡವರು. ತನುವಿನ ಶ್ರೀಮಂತಿಕೆಯನರಿಯದ ಬಡವರು. ಹಾಗೆಯೇ ಲೋಕದ ಗುರುಗಳು ಕೂಡಾ ನಿಜ ಗುರುವಿಗೆ ಬಡವರೇ ಆಗಿ ಕಾಣುತ್ತಾರೆ. ಹೀಗಾಗಿ ಈ ಮೂವರ ಮೇಲೆ ನಿಜ ಗುರುವಿನ ಕರುಣೆ ಅಪಾರ. ಈ ಮೂವರೂ ಅರಿವಿನ ಶ್ರೀಮಂತರಾಗಿದ್ದರೂ ಕೂಡ ಅರಿವನು ಅರಿಯದ ಬಡವರಾಗಿಯೇ ಉಳಿಯುತ್ತಾರೆ.

ಲೋಕದ ಗುರುವಿಗೆ ಹಣಬೇಕು. ಹೀಗಾಗಿ ಕಾವಿ ಹೊದ್ದು ಪೀಠದ ಮೇಲೆ ಕುಳಿತಿದ್ದಾನೆ. ತನುವಿನಲ್ಲಿರುವ ಅರಿವಿನ ಶ್ರೀಮಂತಿಕೆಯನ್ನು ಮರೆತಿದ್ದಾನೆ. ಹಣವುಳ್ಳ ಶ್ರೀಮಂತರನ್ನು ಮಠಕ್ಕೆ ಆಮಂತ್ರಣ ನೀಡುತ್ತ ಹಣಕ್ಕಾಗಿ ಆಯುಷ್ಯವೂ ವ್ಯಯ ಮಾಡುತ್ತಿದ್ದಾನೆ. ಹೀಗಾಗಿ ಈ ಗುರು ಎಲ್ಲವನ್ನು ತೊರೆದರೂ ಈತನ ಗುಣಗಳು ಈತನನ್ನು ಬಾಧಿಸದೇ ಬಿಡುವುದಿಲ್ಲ. ಹೀಗಾಗಿ ಈತ ಬಡವ. ಹಣವುಳ್ಳ ಶ್ರೀಮಂತನನ್ನು ಮಾತ್ರ ಈತ ಶಿಷ್ಯನನ್ನಾಗಿ ಸ್ವೀಕರಿಸುತ್ತಾನೆ.

ಹಣವಿದ್ದರೂ ಗುಣಗಳ ಬಾಧೆಯಿಂದ ಬಳಲಿ ಮಠಕ್ಕೆ ಬೇಡಲು ಬರುವ ಶ್ರೀಮಂತ ಭಕ್ತ, ಗುರುವಿಗೆ ಕಾಣಿಕೆ ರೂಪದ ಭಿಕ್ಷೆ ನೀಡಿ ಧನಿಕನಾಗಿ ಮೆರೆಯುತ್ತಾನೆ. ನಿರ್ಗುಣ ಶ್ರೀಮಂತಿಕೆ ತಿಳಿಯದೆ ಶ್ರೀಮಂತ ಬಡವನಾಗಿಯೇ ಉಳಿಯುತ್ತಾನೆ.

ಹಣದಿಂದ ಶ್ರೀಮಂತನಾಗಬೇಕೆಂಬ ಬಯಕೆ ಹೊತ್ತುಕೊಂಡು ಬಡವ ಗುರುವಿನ ದರ್ಶನಕ್ಕಾಗಿ ಮಠಕ್ಕೆ ಹೋಗುತ್ತಾನೆ. ಹಣವೇ ಇಲ್ಲದ ಬಡಗುರು ಬಡವನನ್ನು ಮೂಸಿಯೂ ನೋಡುವುದಿಲ್ಲ. ಬಡವ ಬಡವನನ್ನು ಬೇಡಲು ಹೋದಂತೆ. ಮೂವರೂ ಬಡವರೇ ಆಗಿದ್ದಾರೆ. ಕೊಡುಕೊಳ್ಳುವ ಬಡವರಿವರು. ಕೊಡದೆ ಕೊಂಬದೆ ಶ್ರೀಮಂತರಾಗುವ ತಂತ್ರ ಗಾರಿಕೆ ಹೇಳಿ ಕೊಡುವ ಗುರುವಿರುವುದು ಈ ಮೂವರಿಗೂ ತಿಳಿಯುವುದಿಲ್ಲ. ಆತ ಹೊರಗಿಲ್ಲ. ತನುವಿನಲ್ಲಿಯೇ ತನ್ಮಯವಾಗಿದ್ದಾನೆ.

ದುಡ್ಡೇ ಪ್ರಾಣವಾದ ಹೆಡ್ಡ ಮೂಳರನ್ನು ಕಂಡು ಗಹಗಹಿಸಿ ನಗುತ್ತಿದ್ದಾನೆ. ಶ್ರೀಮಠದ

ಗುರುವಿಗೂ ಗುರುವಿನ ಪರಿಚಯವಿಲ್ಲ. ಗುರುವಿಗೆ ನೀಡಿ ಧನ್ಯನಾದೆನೆಂಬ ಧನಿಕನಿಗೂ ಗುರುವಿನ ಪರಿಚಯವಿಲ್ಲ. ಧನಿಕನಾಗಬೇಕೆಂದು ಬೇಡಲು ಬಂದ ಬಡವನಿಗೂ ಗುರುವಿನ ಪರಿಚಯವಿಲ್ಲ. ಈ ಮೂವರೂ ಹೆಡ್ಡರೇ. ಈ ಹೆಡ್ಡರನ್ನು ಕಂಡು ಮೊಳಕಾಲಿಗೆ ಹೊಡೆ ಹೊಡೆದುಕೊಂಡು ನಗುತಿರ್ದ ನಮ್ಮ ಅಂಬಿಗರ ಚೌಡಯ್ಯ.

ಅಂಗದ ಮೂಲಕ ಗುರುವಾಗಿದ್ದಾನೆ. ಅಂಗದ ಮೂಲಕ ಶ್ರೀಮಂತನಾಗಿದ್ದಾನೆ. ಅಂಗದ ಮೂಲಕ ಬಡವನಾಗಿದ್ದಾನೆ. ಅಂಗ ಗುರುತನಕ್ಕೂ, ಶ್ರೀಮಂತಿಕೆಗೂ ಬಡತನಕ್ಕೂ ಮಾಧ್ಯಮ.ಅಂಗದಲ್ಲಿ ಅರಿವು ಸಂಗಮವಾಗಿದೆ.ಆ ಅರಿವಿನ ಉಪಕರಣವಾಗಬೇಕಾಗಿತ್ತು ಅಂಗ! ಹಾಗಾದರೆ ಅಂಗದ ಗುರುತನ, ಅಂಗದ ಬಡತನ, ಅಂಗದ ಶ್ರೀಮಂತಿಕೆಯ ಅಜ್ಞಾನ ತನ್ನಷ್ಟಕ್ಕೆ ತಾನೇ ದೂರವಾಗುತ್ತದೆ. ಅಂಗ ನಿಜ ಶ್ರೀಮಂತಿಕೆಯಿಂದ ಮೆರೆಯುತ್ತದೆ.

**159**

**ನಂಬಿಯಣ್ಣ ಮಾಡುವ ಭಕ್ತಿ ನಾಡೆಲ್ಲ ಮಾಡಬಹುದಯ್ಯಾ,**
**ಕುಂಬಾರ ಗುಂಡಯ್ಯ ಮಾಡುವ ಭಕ್ತಿ ಊರೆಲ್ಲ ಮಾಡಬಹುದಯ್ಯಾ,**
**ಬಸವಣ್ಣ ಮಾಡುವ ಭಕ್ತಿ ಶಿಶುವೆಲ್ಲ ಮಾಡಬಹುದಯ್ಯಾ,**
**ಇದೇನು ದೊಡ್ಡಿತ್ತೆಂಬರು.**
**ಸರ್ವರಿಗೆ ವಶವಾಗದ ಭಕ್ತಿ ಅವರ ಮನ-ಜ್ಞಾನದಂತೆ ಇರಲಿ ಶರಣಾರ್ಥಿ.**
**ಈ ವಸುಧೆಯೊಳಗೆ ಶುದ್ಧ ಭಕ್ತಿಯನರಿತು**
**ನಡೆದುದು ಬಟ್ಟೆಯಾಗದೆ ? ನುಡಿದುದು ಸಿದ್ಧಿಯಾಗದೆ ?**
**ದೇಹಕ್ಕೆ ಕಷ್ಟ-ನಷ್ಟ,ರೋಗ-ರುಜೆಗಳು ಬಂದು ಅಟ್ಟಿ ಮುಟ್ಟಿದವಾಗಿ,**
**ದೃಢವಾಗಿದ್ದು ಶರಣನ ಮನವು ನಿಶ್ಚಯಿಸಿ,**
**ದೃಢಶೀಲಂಗಳಂ ಬಿಡದೆ ನಡೆವಾತ**
**ದೊಡ್ಡ ಭಕ್ತನೆಂದಾತ ನಮ್ಮ ಅಂಬಿಗರ ಚೌಡಯ್ಯ.**

ಮನ ಸರ್ವ ಶಕ್ತನಂತೆ ನುಡಿಯುತ್ತದೆ. ಆದರೆ ತನುವಿನ ಮೂಲಕ ನಡೆಯಲು ಆಗುವುದಿಲ್ಲ. ನಂಬಿಯಣ್ಣನಂತೆ, ಕುಂಬಾರ ಗುಂಡಯ್ಯನಂತೆ, ಬಸವಣ್ಣನಂತೆ ಭಕ್ತಿ ಮಾಡಬಹುದು ಅದೇನು ದೊಡ್ಡದು ಎಂದು ಮನ ಸರಳವಾಗಿ ನುಡಿಯುತ್ತದೆ.

ಶರಣರಂತೆ ಸರ್ವರಿಗೆ ಜ್ಞಾನ ವಶವಾಗದು. ಹಾಗೆಯೇ ಉದಾಸೀನ ಮಾಡುವಂತಿಲ್ಲ. ಜ್ಞಾನ ಸರ್ವರಿಗೆ ವಶವಾಗದಿದ್ದರೇನಂತೆ ? ತನಗೆ ವಶವಾದರೆ ಸಾಕು ; ಸರ್ವರಿಗೂ ವಶವಾದಂತೆ ! ಅವರವರು ಅವರ ಮನ-ಜ್ಞಾನದಂತಿರಲಿ. ಅವರೆಲ್ಲರಿಗೆ ಶರಣಾರ್ಥಿ :

ಸಕಲ ಕಾಯಗಳಲ್ಲಿ ಜ್ಞಾನವಿದೆ. ಆ ಜ್ಞಾನವನ್ನು ತಿಳಿದು ; ಆ ಮಹಾಜ್ಞಾನಕ್ಕೆ ಭಕ್ತಿ ಮಾಡಿ ; ಶರಣು ಹೋಗುವ ಮನವಿದೆ. ಆ ಜ್ಞಾನಕ್ಕೆ ಶರಣಾರ್ಥಿ. ಆ ಮನಕ್ಕೆ ಶರಣಾರ್ಥಿ. ಜ್ಞಾನ-ಮನವನ್ನು ಹೊತ್ತುಕೊಂಡ ಕಾಯಕ್ಕೆ ಶರಣಾರ್ಥಿ !

ಈ ಜಗದೊಳಗಿರುವ ಸಕಲ ಕಾಯಗಳಿಗೂ ಜ್ಞಾನವಿದೆ. ಜ್ಞಾನವಿಲ್ಲದ ಕಾಯ ಒಂದೂ ಇಲ್ಲ. ಮನ ಜ್ಞಾನವನ್ನು ತಿಳಿಯದಿದ್ದರೇನಂತೆ ? ಜ್ಞಾನ ಸಂಗಮವಾದ ಕಾಯವಲ್ಲವೆ ? ಅದನ್ನು

ತಿಳಿಯುವ ಮನವಿಲ್ಲವೆ ? ಜ್ಞಾನ ವಶವಾದ ಕಾಯಕ್ಕೆ ಮಾತ್ರ ಸಕಲ ಕಾಯಗಳೂ ಜ್ಞಾನ ಕಾಯಗಳೆಂದು ತಿಳಿಯುತ್ತದೆ. ಸಕಲ ಕಾಯಗಳನ್ನು ಜ್ಞಾನ ಕಾಯಗಳಂತೆ ನೋಡಿ ಆ ಕಾಯಗಳಿಗೆ ಶರಣು ಶರಣಾರ್ಥಿ ಎಂದು ಆನಂದದಿಂದ ನಮಸ್ಕರಿಸುತ್ತಾನೆ.

ಜ್ಞಾನಿ ನಡೆದುದೆಲ್ಲ ದಾರಿ. ನುಡಿದುದೆಲ್ಲ ಸಿದ್ಧಿ. ಕಾಯಕ್ಕೆ ಕಷ್ಟ-ನಷ್ಟ, ರೋಗ ರುಜಿನೆಗಳು ಬರಬಹುದು. ಜ್ಞಾನಕ್ಕೇನೂ ಕೊರತೆಯಿಲ್ಲ. ಅದಕ್ಕೆ ಸುಖ-ದುಃಖಗಳು ಉಂಟಾಗುವುದಿಲ್ಲ. ಏಕೆಂದರೆ ಅದು ಸಹಜ ; ಬಯಲು.

ಬಯಲ ಗರ್ಭದಲ್ಲಿಯೇ ಬೆಂಕಿ ಗಾಳಿ ಜಲ ನೆಲ ಆಕಾಶ ಕಾಯಗಳು. ಸೂರ್ಯ ಚಂದ್ರ ನಕ್ಷತ್ರಗಳು. ಆದರೂ ಇವುಗಳ ಬಾಧೆ ಬಯಲಿಗಿಲ್ಲ. ಬಯಲು ಇವುಗಳನ್ನು ಸೃಷ್ಟಿ ಮಾಡಿ ತನ್ನ ಗರ್ಭದಲ್ಲಿ ಬಂಧಿಸಿಕೊಂಡಂತೆ ! ಜ್ಞಾನ ಬಯಲಿನ ಅಂಶ. ಅದು ಬಯಲಿನಂತೆ ಸಹಜ. ಅದಕ್ಕಿಂತ ದೊಡ್ಡದು ಯಾವುದೂ ಇಲ್ಲ. ಅದು ಎಲ್ಲರಿಗೂ ತಂದೆ.

''ಎನಗಿಂತ ಕಿರಿಯರಿಲ್ಲ ; ಶಿವಭಕ್ತರಿಗಿಂತ ಹಿರಿಯರಿಲ್ಲ'' ಸಕಲ ಕಾಯಗಳು ಶಿವ ಜ್ಞಾನವನ್ನು ಹೊತ್ತ ಕಾಯಗಳು. ನನಗೆ ತಿಳಿದರೆ ನಾನು ಅದನ್ನು ತಿಳಿಯಬಲ್ಲೆ. ಜಾತಿ-ಮತ ಪಂಥಗಳನ್ನು ಕಡೆಗಣಿಸ ಬಲ್ಲೆ. ಹೆಣ್ಣು ಗಂಡು ಎನ್ನದೆ ಸಕಲ ಕಾಯಗಳನ್ನು ಹಿರಿಯ ಕಾಯಗಳೆಂದು ಗೌರವಿಸಬಲ್ಲೆ. ಇಂತಹ ಶಿವ ಜ್ಞಾನವನ್ನು ತಿಳಿದ ಕಾಯ ತನಗೆ ತಾನೇ ಕಿರಿಯದಾಗುತ್ತದೆ ; ಕಿಂಕರನಾಗುತ್ತದೆ. ಏಕೆಂದರೆ ಆ ಕಾಯಕ್ಕೆ ಸಕಲ ಕಾಯಗಳು ಶಂಕರನಂತೆ ಕಾಣುತ್ತವೆ.

**160**

**ನಮಗೊಬ್ಬರೆಂಜಲು ಸೇರದೆಂದು, ಶುಚಿತನದಲ್ಲಿ ಬದುಕುತ್ತೈದೇನೆ**
**ಎಂದುಯೆಂಬ ಬರಿಯ ಮಾತಿನ ರಂಜಕರು ನೀವು ಕೇಳಿರೋ ಅಣ್ಣಗಳಿರಾ:**
**ನೀವು ತಂದು ಕುಡಿವ ನೀರು ಜಲಚರರದೆಂಜಲು, ಮೃಗ ಪಶುಪಕ್ಷಿಯ ಎಂಜಲು.**
**ಭಾವಿಗೆ ಹೋಗಿ ಕೈಕಾಲು ತೊಳೆದು ಬಾಯಿಮುಕ್ಕಳಿಸುವಲ್ಲಿ ಮಾನವರೆಂಜಲು**
**ಇಂತೀ ಹಲವೆಂಜಲ ಬೆರಸಿದ ಆ ಎಂಜಲ ತಿಂದು ಬೆಳೆದು ಬೆಳೆಸಿದ**
**ಆ ಎಂಜಲಿಂದ ಬೆಳೆವ ಪದಾರ್ಥಂಗಳು, ಆ ಎಜಲಿಂದಾದ ಪಾಕವನು,**
**ನಲಿನಲಿದುಂಡು ಕುಡಿವಲ್ಲಿ ಎಂಜಲು ಹಿಂಗಿದ ಠಾವ ತೋರಿರಣ್ಣಾ!**
**ಇದ ಬಲ್ಲ ಭಕ್ತರು ಸರ್ವಪದಾರ್ಥಂಗಳನು**
**ಶಿವಮಂತ್ರದಲೆ ಹಸ್ತಸ್ಪರ್ಶನವ ಮಾಡಿ, ವಿಭೂತಿಯಿಂದ ಶುದ್ಧ ಮಾಡಿ,**
**ಲಿಂಗಕ್ಕೆ ಕೊಟ್ಟು, ಕೊಂಬಲ್ಲಿ ಗುರುಪ್ರಸಾದವಾಯಿತ್ತು.**
**ಇಂತೀ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವಕೊಂಬಲ್ಲಿ**
**ಸರ್ವ ಎಂಜಲ ಹೊಲೆಯವ ನೀಗಿದ**
**ಇದನರಿಯದಿರ್ದಡೆ ಮಿಕ್ಕಿನವರೆಲ್ಲರು**
**ಹಲವರೆಂಜಲ ಹೊಲೆಯೊಳಗೆ ಮುಳುಗಿ**
**ಉಂಡರೆಂದಾತ ನಮ್ಮ ಅಂಬಿಗರ ಚೌಡಯ್ಯ**

ಎಂಜಲು ಎನ್ನುವ ಶಬ್ದ ಮನುಷ್ಯನಿಗೊಂದೇ ಗೊತ್ತು. ಉಳಿದ ಪ್ರಾಣಿಗಳಿಗೆ ಅದು

ಸಹಜ. ಮನುಷ್ಯನಿಗೆ ಎಂಜಲೆಂದರೆ ಸೇರದು. ಜಲಚರದೆಂಜಲು, ಮೃಗ ಪಕ್ಷಿಯ ಎಂಜಲು, ಮನುಷ್ಯಬಾವಿಯಲ್ಲಿಳಿದು ಬಾಯಿ ಮುಕ್ಕಳಿಸಿ ಅಲ್ಲಿಯೇ ಉಗುಳುವ ಎಂಜಲು ಆ ಎಂಜಲ ಜಲದಿಂದ ಬೆಳೆದ ಬೆಳೆಯೂ ಎಂಜಲು. ಆ ಎಂಜಲಿನಿಂದಾದ ಪಾಕ ಪದಾರ್ಥವನು ನಲಿನಲಿದುಂಡು ಕುಡಿಯುವಲ್ಲಿ ಎಂಜಲಿಲ್ಲ. ಎಂಜಲು ಮರೆತು ಕುಡಿಯುತ್ತಾನೆ. ಕುಡಿದದ್ದನ್ನು ಕುಡಿಯುವುದಿಲ್ಲ. ಎಂಜಲೆಂದು ಬೊಗಳುತ್ತಾನೆ.

ಎಂಜಲ ಮಾತೆಂದರೆ ಬಲು ಇಷ್ಟ. ಅದನ್ನೇ ಕೇಳುತ್ತಾನೆ. ಬಾಯಿ ಮೂಲಕ ಎಂಜಲ ಮಾತನಾಡುತ್ತಾನೆ. ಇದೆಲ್ಲ ಎಂಜಲೆಂದು ಅರಿತು ಅರಿಯುವ ಆ ಅರಿವೆಂಬ ಲಿಂಗಕ್ಕೆ ಅರ್ಪಿಸಿ ಪದಾರ್ಥ ವನ್ನು ಸ್ವೀಕರಿಸಿದರೆ ಅದು ಗುರುಪ್ರಸಾದವಾಯಿತು. ಅದು ಶುದ್ಧ ಸಿದ್ಧ ಪ್ರಸಾದ. ಸರ್ವ ಎಂಜಲದ ಹೊಲೆಯವನು ನೀಗಿದ ಪ್ರಸಾದ .

**ಸರ್ವ ಪದಾರ್ಥಗಳನು ಲಿಂಗಕ್ಕೆ ಕೊಟ್ಟು ಕೊಂಬಲ್ಲಿ ಗುರುಪ್ರಸಾದವಾಯಿತು:**

ಜಲ ಅನ್ನ ಮುಂತಾದ ತಿನ್ನುವ ಪದಾರ್ಥಗಳನ್ನು ಅಂಗದ ಮೇಲೆ ಕಟ್ಟಿಕೊಂಡ ಲಿಂಗಕ್ಕೆ ಕೊಟ್ಟು ಕೊಳ್ಳಬಹುದು. ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಲಿಂಗವೋ ಅಥವಾ ತುತ್ತು ನುಂಗುವ ಮುನ್ನ ಹಣೆಗೆ ತೋರಿಸಿ ಉಣ್ಣುವ ಸಂಪ್ರದಾಯದಿಂದ ಎಂಜಲ ಪ್ರಸಾದವಾಗುವುದೇ ಹೇಗೆ ಎನ್ನುವುದನ್ನು ತನಗೆ ತಾನೇ ಕಂಡುಕೊಳ್ಳಬೇಕು.

ಎಂಜಲ ಎಂದು ಗೊತ್ತಾದರೆ ಉಂಡ ಅನ್ನ ಜೀರ್ಣವಾಗದೆ ಹೊರಗೆ ಬರುತ್ತದೆ. ಅದು ಅಂಗಕ್ಕೆ ಪ್ರಸಾದವಾಗುವುದಿಲ್ಲ. ಅಂಗ ಅಜೀರ್ಣದಿಂದ ವಿಲಿವಿಲಿ ಒದ್ದಾಡುತ್ತದೆ.

ಎಂಜಲನ್ನು ಅರಿವಿನಿಂದ ಅರಿಯಲು ಹೋದರೆ ಎಂಜಲ ಎಂಬುದು ಇಲ್ಲವೇ ಇಲ್ಲ. ಅರಿಯುವ ಆ ಅರಿವಿಗೆ ಎಂಜಲ ಪ್ರಸಾದ ವಾಗುತ್ತದೆ. ಉಂಡ ಅನ್ನ ಒಂದು ಪದಾರ್ಥ; ಅದು ಅಂಗಕ್ಕೆ ಪ್ರಸಾದವಾಗಬಹುದು. ನೋಡಿದ ನೋಟ , ಕೇಳಿದ ಶಬ್ದ, ಮುಟ್ಟಿದ ಸ್ಪರ್ಶ; ಮೂಸಿಸಿದ ಸುಗಂಧ ದುರ್ಗಂಧ, ರುಚಿಸಿದ ರುಚಿ ಪ್ರಸಾದವಾಗಬೇಕಲ್ಲ ? ಇವೆಲ್ಲವುಗಳು ಕೂಡ ಪದಾರ್ಥಗಳೇ ಆಗಿವೆ.

ಕಣ್ಣು ಎಂಜಲ ನೋಟಕ್ಕೆ ಒಳಗಾಗಿ ರಂಜನೆಯಿಂದ ಸುಖಿಸುತ್ತದೆ. ಕಣ್ಣಿನ ಆ ರಂಜನೆಯ ಎಂಜಲ ಸುಖವನ್ನು ನಿರಂಜನನೆಂಬ ಲಿಂಗಕ್ಕೆ ಅರ್ಪಿಸುವ ಬಗೆ ಹೇಗೆ? ಎಂಬುದನ್ನು ಶರಣನ ಮೂಲಕವೇ ತಿಳಿದು ಸೂತ್ರ ಹಿಡಿದು ಅರ್ಪಿಸಲು ಹೋದರೆ ಪ್ರಸಾದವಾಗಲು ಸಾಧ್ಯ. ಸ್ಪರ್ಶ, ನೋಟ, ವಾಸನೆ, ಶಬ್ದಗಳು ಕೂಡ ಪದಾರ್ಥಗಳು. ಹೇಗೆ ಜಲ ಜಲಚರದ ಎಂಜಲೋ ಹಾಗೆಯೇ ಪಂಚ ಜ್ಞಾನೇಂದ್ರೀಯಗಳ ಎಂಜಲು. ಈ ಎಂಜಲೆಂದರೆ ಅವುಗಳಿಗೆ ಬಲು ಸುಖ. ನೋಡುವ ನೋಟ ಒಂದಾದರೆ ಆಡುವ ಮಾತು ಬೇರೆಯೇ ಆಗಿರುತ್ತದೆ. ಇವೆರಡೂ ಎಂಜಲುಗಳು ಪ್ರಸಾದವಾಗದೆ ಅಜೀರ್ಣವಾಗಿ ತನುವಿನಲ್ಲಿಯೇ ಉಳಿದು ತನುವನ್ನು ಮತ್ತೆ ಮತ್ತೆ ಬಾಧೆಗೆ ಒಳಪಡಿಸುತ್ತದೆ.

ತನು ತಂತ್ರಜ್ಞಾನಿಯಾದರೆ ಮಾತ್ರ ಸ್ವೀಕರಿಸಿದ ಎಂಜಲನ್ನು ಅರಿವೆಂಬ ಲಿಂಗಕ್ಕೆ ಅರ್ಪಿಸಿ ಗುರುಪ್ರಸಾದವನ್ನಾಗಿ ಮಾಡಿಕೊಂಡು ಸ್ವೀಕರಿಸಲು ಬರುತ್ತದೆ.

**161**

**ನವನಾಳ ಪದ್ಮದ ಅಷ್ಟದಳದೊಳಗೆ**

**ಎಪ್ಪತ್ತು ಮೂರು ನಾಳ ನೋಡಾ.**
**ಸುಳಿದು ಬೀಸುವ ವಾಯು,**
**ಒಳಗೆ ಆತ್ಮಜ್ಯೋತಿ,**
**ಅಲ್ಲಿಂದೊಳಗಿಪ್ಪ ಹಂಸನ ಗೃಹವ ನೋಡಾ.**
**ಹಿರಿದೊಂದು ಭೂತನು ಹುದುಗಿಪ್ಪ ಭೇದವ**
**ನಿಲುಕಿ ನೋಡಿಯೇ ಕಂಡನಂಬಿಗರ ಚೌಡಯ್ಯ .**

ತನುವಿಗೆ ಬೇಕಾದ ಬಾಹ್ಯ ಸಂಪತ್ತನ್ನು ಕಂಡು ಹಿಡಿಯುವ ತವಕ ವಿಜ್ಞಾನಿಗೆ. ತನುವಿನಲ್ಲಿಯೇ ತನ್ಮಯವಾದ ಜ್ಞಾನ ಸಂಪತ್ತನ್ನು ಕಂಡುಕೊಳ್ಳುವ ತವಕ ಜ್ಞಾನಿಗೆ.

ಒಂಭತ್ತು ನಾಳಗಳ ಅಷ್ಟದಳಗಳುಳ್ಳ ಕಮಲದೊಳಗೆ ಎಪ್ಪತ್ತು ಮೂರು ನಾಳ ! ಎಂಭತ್ತೆರಡು ನಾಳಗಳ ಮೂಲಕ ಸುಳಿದು ಬೀಸುವ ಗಾಳಿ ! ಬೇರಿಲ್ಲದೆ ಜಲದ ಆಧಾರವೂ ಇಲ್ಲದೆ ಸುಂದರವಾಗಿ ಅರಳಿದ ತನುವಿನ ಈ ಕಮಲದೊಳಗೆ ಆತ್ಮಜ್ಯೋತಿ ಬೆಳಗುತ್ತಲಿದೆ ! ಅದರ ಒಳಗೆ ಪರಮಹಂಸನ ಮನೆಯಿದೆ.

ಏನೇನೋ ಕಲ್ಪಿಸಿಕೊಂಡು ಭ್ರಮಿಸುವ ಎಲೆ ಮನವೇ ನಿನ್ನ ಆಳದ ಅಂತರಂಗವನು ನೀನೇ ನೋಡು ಒಮ್ಮೆ.ಅರಳಿದ ಕಮಲದೊಳಗೆ ಹಿರಿದಾದ ಭೂತವೊಂದು ಅಡಗಿದೆ. ಇಣಕಿ ನೋಡಿಯೇ ಕಂಡುಕೋ ಆ ಸತ್ಯದ ಬೆಳಕನ್ನು . ಬೆಳಗಿಂಗೆ ಬೆಳಗಾಗಿ ಬೆಳಗುವೀ ನೀ.

ತನಗೆ ತಾನೇ ಅನುಭವಿಸುವ ಪರಮ ಹಂಸನ ಪರಮ ಸುಖವಿದು. ಅನುಭವಿಸಿಯೇ ಕಂಡುಕೊಳ್ಳಬೇಕು. ಹಂಚಲು ಬರುವುದಿಲ್ಲ.ಮತ್ತೊಬ್ಬರಿಂದ ಪಡೆಯಲು ಸಾಧ್ಯವಿಲ್ಲ.

ಕಮಲ ಕೆಸರನುಂಡು ಕೆಸರಿನಲ್ಲಿಯೇ ಅರಳಿದಂತೆ. ಕೆಸರು ಕಮಲಕ್ಕೆ ಆಹಾರ. ಹಾಗೆಯೇ ತನುವಿನ ಅರಿವು ತನುವಿಗೆ ಹೊಳೆದರೆ ತನುವು ಕೂಡಾ ಕಮಲದಂತೆ ಅರಳಿ ಅರಿವಿನ ಪರಿಮಳವನ್ನು ಬೀರುತ್ತದೆ. ಅದಕ್ಕೆ ಸುಂದರವಾದ ಕುಟೀರ ಕಟ್ಟಡ ರಸ್ತೆಗಳ ಅವಶ್ಯಕತೆಯಿಲ್ಲ. ಬುದ್ಧನಂತೆ ನಡೆದಾಡುವ ಬೋಧೀ ವೃಕ್ಷವಾಗುತ್ತದೆ. ಬೇರಿಲ್ಲದೆ ನಡೆದಾಡುತ್ತ ಮಾತನಾಡುವ ಮರವಾಗುತ್ತದೆ.

**162**

**ನಾದದ ಬಲದಿಂದ ವೇದಂಗಳಾದವಲ್ಲದೆ, ವೇದ ಸ್ವಯಂಭುವಲ್ಲ.**
**ಮಾತಿನ ಬಲದಿಂದ ಶಾಸ್ತ್ರಂಗಳಾದವಲ್ಲದೆ, ಶಾಸ್ತ್ರ ಸ್ವಯಂಭುವಲ್ಲ.**
**ಪಾಷಾಣದ ಬಲದಿಂದ ಸಮಯಂಗಳಾದವಲ್ಲದೆ,ಸಮಯ ಸ್ವಯಂಭುವಲ್ಲ ನಿಲ್ಲು.**
**ಇಂತೀ ಮಾತಿನ ಬಣಬೆಯ ಮುಂದಿಟ್ಟುಕೊಂಡು ಆತನ ಕಂಡೆಹೆನೆಂದಡೆ,**
**ಆತನತ್ಯತಿಷ್ಟದ್ದ ಶಾಂಗುಲ.**
**ಆತನೆಂತು ಸಿಲುಕುವನೆಂದಾತನಂಬಿಗ ಚೌಡಯ್ಯ .**

ವೇದ ಸ್ವಂಭುವಲ್ಲ. ಶಾಸ್ತ್ರ ಸ್ವಯಂಭುವಲ್ಲ. ಶೃತಿ ಸ್ಮೃತಿಗಳು ಸ್ವಯಂಭುವಲ್ಲ. ಹಾಗೆನ್ನುವುದು ಮನದ ಭ್ರಮೆ ! ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗದಿಂದಲೇ ವೇದ ಶಾಸ್ತ್ರ ಶೃತಿ ಸ್ಮೃತಿ ಪುರಾಣ ಉಪನಿಷತ್ತುಗಳು ಹೊರಬಂದವು. ಅವುಗಳನ್ನು ಕೇಳಿ, ಓದಿ ಸಂತೋಷದಿಂದ

ಸಂಭ್ರಮಿಸಿದ ಮನ ಭ್ರಮೆಯಿಂದಾಗಿ ಆರಾಧಿಸಹತ್ತಿತು.

ಓದಿ ಕೇಳಿ ಸಂತೋಷಪಟ್ಟದ್ದು ತಾನೇ. ತನ್ನ ತನುವಿನಲ್ಲಿ ಸಂತೋಷ ಸಂಭ್ರಮ ತನ್ಮಯವಾಗಿದೆ. ಓದಿದ ಅಕ್ಷರಗಳಿಂದ ಕೇಳಿದ ನುಡಿಯಿಂದ ತನುವಿಗೆ ಸಂತೋಷವಾಯಿತು. ಓದಿದ ಅಕ್ಷರಗಳು, ಕೇಳಿದ ನುಡಿ, ತನುವಿನ ಸಂತೋಷ ಒಂದೇ ಆಗಲಿಲ್ಲವೆ ?

ನುಡಿದ ತನು ಬ್ರಾಹ್ಮಣನಾದರೇನು ? ಶಾಸ್ತ್ರಿ ಪಂಡಿತ ಜ್ಞಾನಿಯಾದರೇನು ? ಕ್ರಿಷ್ಣ ಕ್ರಿಸ್ತ ಬುದ್ಧ ಪೈಗಂಬರ ಮಹಾವೀರ ಶರಣ ದಾಸವರೇಣ್ಯರಾದರೇನು ? ಅವರ ನುಡಿ ಕೇಳಿ ಓದಿ ಸಂತೋಷ ಸಂಭ್ರಮ ಆನಂದ ಉಂಟಾದದ್ದು ತನ್ನ ತನುವಿಗೆ. ಅಂದ ಮೇಲೆ ವೇದ ಶಾಸ್ತ್ರಗಳ ಓದಿನಲ್ಲಿ, ಸಂತರ ನುಡಿಗಳಲ್ಲಿ, ತನ್ನ ತನುವಿನಲ್ಲಿರುವ ಸತ್ಯ ಒಂದೇ. ಇದನ್ನು ಮನ ಅರಿಯದೆ ವೇದ ಶಾಸ್ತ್ರ ಶೃತಿ ಸ್ಮೃತಿ ಸ್ವಯಂಭು ಎಂದು ಘೋಷಿಸಿ ತನಗೆ ತಾನೇ ದಡ್ಡನಾ ಯಿತು. ವೇದ ಶಾಸ್ತ್ರಗಳನ್ನು ಕಲಿತು ಮನ ಪಂಡಿತನಾಯಿತು. ಶಾಸ್ತ್ರಿಯಾಯಿತು. ಮಾತಿನ ಬಣವೆಯ ಮೆದ್ದ ಪಶುವಿನಂತಾಯಿತು ! ಹಾಗೆನ್ನಲೂ ಬರುವುದಿಲ್ಲ. ಏಕೆಂದರೆ ಪಶು ದಂಟು ತಿಂದು ಹಾಲು ಕೆರೆಯುತ್ತದೆ. ಮನ ಶಾಸ್ತ್ರವೆಂಬ ಮಾತುಗಳ ಬಣವೆಯ ಮೆದ್ದು ವಿಷ ಕಕ್ಕುತ್ತದೆ.

ಪಂಡಿತನಂತೆ ಜ್ಞಾನಿಯಂತೆ ಮಾತು ಕಲಿತು ಅದೇ ಮಾತುಗಳನ್ನು ಆಡಿ ವ್ಯವಹರಿಸಬಹುದೆ ವಿನಹ ವಿರಾಟ ಸ್ವರೂಪಿ ತಾನಾಗುವುದಿಲ್ಲ. ಓದಿದ ಅಕ್ಷರ ಕೇಳಿದ ಮಾತುಗಳನ್ನು ತಾನು ಮೆದ್ದು ಸಂಭ್ರಮಿಸಿ ಆನಂದ ಪಟ್ಟು ಪ್ರಸಾದವಾದರೆ ಸಾಕು ಆ ಮಾತೇ ಅನಂತದೊಂದಿಗೆ ಸೇರಿ ಅನಂತನ ಮಾತುಗಳೆ ಹೊರ ಬರುತ್ತವೆ. ಇಲ್ಲದಿದ್ದರೆ ಬರೆದ ಗ್ರಂಥಗಳು ಆಡಿದ ಮೂತುಗಳೇ ಶ್ರೇಷ್ಠವಾಗಿ ತನು ಕನಿಷ್ಟವಾಗುತ್ತದೆ. ಭ್ರಮೆಯಿಂದ ಕೇಳಿಸಿಕೊಂಡ ; ಭ್ರಮೆ ಯಿಂದ ಓದಿದ, ಭ್ರಮೆಯ ಮನಕ್ಕೆ ಮಹಾದೇವನು ಒಲಿಯಲಾರ !

**ಆತನ ತ್ಯತಿಷ್ಟದ್ದ ಶಾಂಗುಲ.ಆತನೆಂತು ಸಿಲುಕುವನು ಎಂದಾತ ಅಂಬಿಗರ ಚೌಡಯ್ಯ:**

ಅತ್ಯತಿಷ್ಟದ್ದ ಶಾಂಗುಲಂ. ಜಗದಗಲ ಮುಗಿಲಗಲ ವ್ಯಾಪಿಸಿಕೊಂಡು, ಪಾತಾಳದಿಂದ ತ್ತತ್ತಲೂ ಬ್ರಹ್ಮಾಂಡದಿಂದತ್ತತ್ತಲೂ ವ್ಯಾಪಿಸಿಕೊಂಡು ದಶದಿಕ್ಕುಗಳಲ್ಲಿಯೂ ವ್ಯಾಪಿಸಿಕೊಂಡು ದಶ ಅಂಗುಲದಲ್ಲಿ ಸಂಗಮವಾದ ಸಂಗಮನಾಥನನ್ನು ವೇದ ಶಾಸ್ತ್ರಂಗಳಲ್ಲಿ ಶೃತಿ-ಸ್ಮೃತಿಗಳಲ್ಲಿ ಆಗಮ ಉಪ ನಿಷತ್ತುಗಳಲ್ಲಿ ಪಂಡಿತ ಶಾಸ್ತ್ರಗಳು ಆಡುವ ಮಾತಿನಲ್ಲಿ ಹುಡುಕಿದರೆ ಸಿಗಬಲ್ಲನೆ? ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮವಾದ ಅರಿವೆಂಬ ಕರಸ್ಥಲದಲ್ಲಿ ಬಂದು ಚುಳುಕಾಗಿದ್ದಾನೆ. ದಶಾಂಗುಲದಲ್ಲಿ ಬಂದು ಚುಳುಕಾಗಿದ್ದಾನೆ. ಆತನೆಂತು ಸಿಕ್ಕುವನು ? ಪುಸ್ತಕದಲ್ಲಿ ಪ್ರವಚನದಲ್ಲಿ ಪುಣ್ಯಕ್ಷೇತ್ರಗಳಲ್ಲಿ ಹುಡುಕುವ ಮನವೆಂಬ ಮಂಗಗಳಿಗೆ ?

**163**

**ನಾದ ಬಿಂದುವಿನಲ್ಲಿ ಸಾಧಿಸಿದ ಹದಿನಾರು ದಳ ಕಳೆಯಸುಳಿಯೊಳಗೆ**
**ತಾವರೆಯ ಪದ್ಮದ ಜ್ಞಾನಮೇಲುದ ಹಾಸಿ,**
**ದೇವನಾತ್ಮನಲ್ಲಿ ಕುಳ್ಳಿರ್ದ ಭಾವ ಮುಂದಟ್ಟಿ, ಕಾಯವ ನಿಲಿಸಿ**
**ದೇವನೋಲಗದೊಳಗಿರ್ದನಂಬಿಗ ಚೌಡಯ್ಯ.**

ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ; ಭಕ್ತಿ ಪ್ರಿಯನು ಕೂಡಲ

ಸಂಗಮದೇವ, ನಾದ ವೇದಗಳು ಕಾಯದಿಂದ ಹೊರಬಂದರೂ, ಕಾಯದಲ್ಲಿಯೇ ಅಕಾಯನಾದ ಅರಿವಿನ ಸಂಗಯ್ಯ ಸಂಗಮವಾಗಿದ್ದರೂ ನಾದಕ್ಕೂ ವೇದಕ್ಕೂ ಕಾಯಕ್ಕೂ ಅಂಟದವನು. ಭಕ್ತಿಗೆ ಅಂಟಿದವನು.

ಜ್ಞಾನವೆಂದರೆ ಒಂದು ವಸ್ತುವಿನಿಂದ ಮತ್ತೊಂದು ವಸ್ತು ತಿಳಿಯುವುದಲ್ಲ. ಒಂದು ಕಾಯದಿಂದ ಮತ್ತೊಂದು ಕಾಯ ತಿಳಿಯುವುದಲ್ಲ. ಕಾಯವಲ್ಲ. ಕಾಯಕ್ಕೆ ಜ್ಞಾನ ಅಂಟಿಕೊಂಡಿಲ್ಲ. ಕಾಯ ಜ್ಞಾನವಲ್ಲ. ಜ್ಞಾನ ಕಾಯವಲ್ಲ. ಅದು ಒಡಲಿಂಗೆ ಆಧಾರವಾಗಿದೆ; ಒಡಲಲ್ಲ. ಒಡಲೊಳಗೆ ಇದೆ ; ಒಡಲಿಗೆ ಅಂಟಿಕೊಂಡಿಲ್ಲ. ಒಡಲನ್ನು ಬೆಳಗುತ್ತಲಿದೆ; ಬೆಳಗಿಂಗೆ ಬೆಳಗಾಗಿ ಬೆಳಗುತ್ತಲಿದೆ.

ಬ್ರಹ್ಮವೆಂದರೆ ಜ್ಞಾನ. ವಿಷ್ಣುವೆಂದರೆ ದೇಹ. ಆ ದೇಹದ ಹೊಕ್ಕುಳದ ಮೂಲಕ ಬಳ್ಳಿಯೊಂದು ಬೆಳೆದು ಆ ದಂಟಿನ ಕೊನೆಗೆ ಕಮಲವೊಂದು ಅರಳಿ ಅದರ ದಳಗಳ ಮೇಲೆ ಕುಳಿತವನೇ ಬ್ರಹ್ಮ. ಈ ಚಿತ್ರ ನೋಡಿದ ಅನುಭವ ಸಕಲ ಕಾಯಗಳಿಗೂ ಇದೆ. ವಿಷ್ಣು ಹಾವಿನ ಮೇಲೆ ಮಲಗಿದ ಚಿತ್ರ. ಹಾವು ನೀರಿನ ಮೇಲೆ ಮಲಗಿದ ಚಿತ್ರ. ವಿಷ್ಣುವಿನ ಕೈಯಲ್ಲೊಂದು ಕಮಲ. ಆ ಕಮಲದ ಮೇಲೆ ಬ್ರಹ್ಮ ಕುಳಿತ ಚಿತ್ರ.

ಈ ಚಿತ್ರ ಬರೆದ ಕಲಾವಿದ ಅದೆಷ್ಟು ಜಾಣ ! ಸಾವಿರಾರು ವರ್ಷ ಗಳ ಹಿಂದಿನಿಂದಲೂ ನಾದ ವೇದಗಳ ಮೂಲಕ ಹೇಳಿದರೂ ತಿಳಿಯದೇ ಇರುವ ಜ್ಞಾನವನ್ನು ಒಂದು ಚಿತ್ರದ ಮೂಲಕ ಕಲಾವಿದ ಹೇಳಿಬಿಟ್ಟಿದ್ದಾನೆ. ಬರೆದು ಕಣ್ಮರೆಯಾಗಿದ್ದಾನೆ. ಅದನ್ನು ಯಾರು ಬರೆದಿದ್ದಾರೆಂದು ಯಾರಿಗೂ ಗೊತ್ತಿಲ್ಲ. ಆದರೂ ಈ ಚಿತ್ರ ಎಲ್ಲೆಲ್ಲೂ ಇದೆ.

ಜ್ಞಾನವೆಂದರೇನೆಂದು ಹಾವನ್ನು ಹೊತ್ತ ಜಲಕ್ಕೆ ಗೊತ್ತಿಲ್ಲ. ಹಾವಿನ ಮೇಲೆ ಮಲಗಿದ ವಿಷ್ಣುವಿಗೂ ಗೊತ್ತಿಲ್ಲ. ವಿಷ್ಣು ಹೊತ್ತ ಕಮಲದ ಮೇಲೆ ಅರಳಿದ ಬ್ರಹ್ಮನಿಗೂ ಗೊತ್ತಿಲ್ಲ. ಇವರೆಲ್ಲರ ಭಕ್ತಿಗೆ ಪ್ರಿಯವಾದಾತನೇ ಶಿವ ! ಆಶಿವನೇ ಮಹಾಜ್ಞಾನ !

ಜಲವೂ ಇದೆ; ಜಲದ ಮೇಲೆ ಹಾವೂ ಇದೆ; ಹಾವಿನ ಮೇಲೆ ವಿಷ್ಣು ಮಲಗಿದ್ದಾನೆ. ವಿಷ್ಣುವಿನಿಂದ ಹುಟ್ಟಿದ ಕಮಲ ದಲ್ಲಿ ಬ್ರಹ್ಮ ಕುಳಿತಿದ್ದಾನೆ. ಇದೊಂದು ಪಟದಲ್ಲಿದ್ದ ಚಿತ್ರ. ಚಿತ್ರದಲ್ಲಿ ಶಿವನಿಲ್ಲ. ಆ ಶಿವನನ್ನು ವಿಷ್ಣು ಬ್ರಹ್ಮ ಹುಡುಕಲು ಹೋದ ಕತೆಯಿದೆ.

ಶಿವನನ್ನು ಹುಡುಕಲು ವಿಷ್ಣು ಪಾದವನ್ನು ಅರಸಿ ಪಾತಾಳಕ್ಕೆ ಜಿಗಿದ. ಬ್ರಹ್ಮ ಶಿವನ ಜಟೆಯನ್ನು ಅರಸಿ ಆಕಾಶಕ್ಕೆ ನೆಗೆದ. ವಿಷ್ಣು ಬರಿಗೈಯಿಂದ ಬಂದ. ನಾನು ಶಿವನನ್ನು ನೋಡಿದೆನೆಂದು ಕೇದಿಗೆ ಯೊಂದನ್ನು ತಂದು ಇದು ಶಿವನ ಜಟೆಯೆಂದು ಬ್ರಹ್ಮ ಸುಳ್ಳು ಹೇಳಿದ. ಆಗ ಬ್ರಹ್ಮನ ಶಿರವೊಂದು ಕಳಚಿ ಬಿತ್ತು. ಇದು ಕತೆ. ಇದು ಸತ್ಯವೂ ಕೂಡ.

ಜಲದಿಂದಾದ ತನು. ಜಲದಿಂದಾದ ಹಾವು. ಹಾವಿನ ಮೇಲೆ ವಿಷ್ಣು ಮಲಗಿದ್ದಾನೆ. ಜಲಬಿಂದು ಗರ್ಭಕ್ಕೆ ಹರಿದು ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ ಚರ್ಮದ ಕವಚದೊಂದಿಗೆ ತನುವಾಗಿ ಅರಳಿದೆ. ಆ ತನುವಿಗೆ ಕಣ್ಣು ಕಿವಿ ಮೂಗು ನಾಲಗೆ ಚರ್ಮವೆಂಬ ಜ್ಞಾನೇಂದ್ರಿಯಗಳು. ಇವು ಮನವೆಂಬ ಹಾವಿನ ರಕ್ಷಣೆಯಲ್ಲಿವೆ. ನೋಡುವ ಕೇಳುವ ರುಚಿಸುವ ಮುಟ್ಟುವ ಮೂಸಿಸುವ ಈ ಐದೂ ಜ್ಞಾನೇಂದ್ರಿಯಗಳು ಒಂದು ಕಮಲವೆಂಬ ಮಹಾಜ್ಞಾನದ ಮೂಲಕ ಅರಳಿವೆ. ಅದರ ವಾರಸುದಾರನೇ ಬ್ರಹ್ಮ. ವಿಷ್ಣುವಿಗೂ ಬ್ರಹ್ಮನಿಗೂ ಸರಳವಾಗಿ ನಿಲುಕದಂತೆ ಆ ಜ್ಞಾನ ದೇವನಿದ್ದಾನೆ. ಆ ಜ್ಞಾನದೇವನನ್ನು ಶಿವನೆಂದು ಕರೆದಿದ್ದಾನೆ.

ಕಲಾವಿದ.

ತನುವಿನಲ್ಲಿ ಜಲವಿದೆ ; ಆ ಜಲಕ್ಕೆ ಜ್ಞಾನಗೊತ್ತಿಲ್ಲ. ತನುವನ್ನು ಮನ ಹಾವಿನಂತೆ ಆವರಿಸಿದೆ. ಆ ಮನಕ್ಕೆ ಜ್ಞಾನ ಗೊತ್ತಿಲ್ಲ. ಸ್ವತಹ ತನುವಿಗೂ ಜ್ಞಾನ ಗೊತ್ತಿಲ್ಲ. ಮನದ ಭ್ರಮೆ ಕಳೆದರೆ ಆ ಮನವೇ ಬ್ರಹ್ಮ ; ತನುವೇ ವಿಷ್ಣು. ತನುವಿನಲ್ಲಿ ಸಂಗಮವಾಗಿದ್ದರೂ ತನುವಿಗೂ ಮನಕ್ಕೂ ಗೊತ್ತಿಲ್ಲದಾತನೇ ಶಿವ. ಆ ಶಿವನೇ ಮಹಾಜ್ಞಾನ.

ಮನದ ನೆರಳಿನಲ್ಲಿ ತನುವಿದೆ. ತನುವೇ ವಿಷ್ಣು . ಮನವೇ ಬ್ರಹ್ಮ. ಮಹಾಜ್ಞಾನವೇ ಶಿವ. ತನುವೆಂಬುದು ಬ್ರಹ್ಮ ವಿಷ್ಣು ಶಿವ ಸಂಗಮದ ಮಹಾಕ್ಷೇತ್ರ. ಒಬ್ಬರು ಮತ್ತೊಬ್ಬರನ್ನು ಅರಿಯದ ಕೈಲಾಸಪರ್ವತ. ಒಬ್ಬರು ಮತ್ತೊಬ್ಬರನ್ನು ಅರಿಯದ ಮಹಾ ಸಾಗರ; ಮಹಾ ಬಯಲು!

ಕಾಯವ ನಿಲಿಸಿ ಓಲಗದೊಳಗೆ ಇದ್ದ ದೇವನನ್ನು ಕಂಡ ಕಾಯವೇ ಧನ್ಯ . ಅದಕ್ಕದೇ ಸಾಕ್ಷಿ! ಕಾಯದ ಜ್ಞಾನದ ಶಕ್ತಿಯನ್ನು ಪಡೆದ ಕಾಯಕ್ಕೆ ಕಾಯದ ಸುಖ ಗೊತ್ತಲ್ಲದೆ ಅನ್ಯ ಕಾಯಗಳಿಗೆ ಗೊತ್ತಾಗುವುದಿಲ್ಲ. ಇದು ಕಾಯದ ಮರ್ಮ. ಅದರ ಭೇದವನು ಅದೇ ಭೇದಿಸಬೇಕು. ಅದಕ್ಕದೇ ಸಾಕ್ಷಿ .

**164**

**ನಾಯಿ ಬಲ್ಲುದೆ ದೇವರ ಬೋನವ ?**
**ದ್ರೋಹಿ ಬಲ್ಲನೆ ಗುರು-ಲಿಂಗ-ಜಂಗಮದ ನೆಲೆಯ ?**
**ಅಜ್ಞಾನಿ ಬಲ್ಲನೆ ಸುಜ್ಞಾನಿಯ ನೆಲೆಯ ?**
**ಕುಕ್ಕುರ ಬಲ್ಲುದೆ ಸುಭಿಕ್ಷದ ಸವಿಯ ?**
**ಇಂತಪ್ಪ ಆಚಾರ ಭ್ರಷ್ಟರ ಕಡೆಗೆ ನೋಡೆನೆಂದಾತ**
**ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.**

ನಾಯಿ ದ್ರೋಹಿ ಅಜ್ಞಾನಿ ಎಂದು ಅಂಬಿಗರ ಚೌಡಯ್ಯ ಶರಣರು ಯಾವ ಕಾಯವನ್ನೂ ಕರೆಯಲಿಲ್ಲ. ಕಾಯಗಳೆಲ್ಲ ಕೈಲಾಸವೇ ಆಗಿವೆ. ನಾಯಿಯೆಂಬ ಮನ ಕಾಯವನ್ನು ಆವರಿಸಿಕೊಂಡಿದೆ. ಆ ನಾಯಿಗೆ ಅರಿವಿನ ದೇವರ ಬೋನ ಗೊತ್ತಿಲ್ಲ. ಗುರು ಲಿಂಗ ಜಂಗ ಮದ ನೆಲೆಯೂ ಗೊತ್ತಿಲ್ಲ. ಸುಜ್ಞಾನಿಯ ನೆಲೆಯೂ ಗೊತ್ತಿಲ್ಲ. ಸುಭಿಕ್ಷದ ಸವಿಯೂ ಗೊತ್ತಿಲ್ಲ.

ಮನು ಆವರಿಸಿದ ತನುವಿನಲ್ಲಿಯೇ ದೇವರ ಬೋನ ಅಡಗಿದೆ. ಅದು ಎಂದೆಂದೂ ಹಳಸದ ಬೋನವೆಂದು ಮನವೆಂಬ ನಾಯಿಗೆ ಗೊತ್ತಿಲ್ಲ. ಹೀಗಾಗಿ ಬೋನಕ್ಕಾಗಿ ನೆರೆಮನೆಯ ಬಾಗಿಲು ಕಾಯುತ್ತಿದೆ.

ವೇಷ ಹಾಕಿದ ಗುರುವಾದರೇನು ? ಜ್ಞಾನಿಯಾದರೇನು ? ಪಂಡಿತ, ಶಾಸ್ತ್ರಿಯಾದರೇನು ? ಜಂಗಮನಾದರೇನು ? ಇವರಾರೂ ದೇವರ ಬೋನವನು ಕಂಡವರಲ್ಲ. ಗುರುಲಿಂಗ ಜಂಗಮದ ನೆಲೆಯನ್ನು ಕಂಡವರಲ್ಲ. ಸುಜ್ಞಾನ ಸುಭಿಕ್ಷದ ಸವಿಯನ್ನು ಉಂಡವರಲ್ಲ. ಗೋಚರದ ಆಚಾರಕ್ಕೆ ಮರುಳಾದ ಬ್ರಷ್ಟರಿವರು. ಇವರ ವೇಷಕ್ಕೆ ಇವರ ಈ ಇರುವಿಕೆಗೆ ಕಾರಣ ವಾದುದು ಮನ !

ದೇವರ ಬೋನವನು ಉಣ್ಣಬೇಕೆಂಬ ಬಯಕೆ ನಾಯಿ ಮನಕ್ಕೆ ಹುಟ್ಟಬೇಕಲ್ಲ ? ಗುರುಲಿಂಗ ಜಂಗಮು, ಜಂಗಮುದ ನೆಲೆಯನ್ನೂ, ಸುಜ್ಞಾನದ ನೆಲೆಯನ್ನೂ, ಸುಭಿಕ್ಷದ ಸವಿಯ ನೆಲೆಯನ್ನು ಕಂಡುಕೊಳ್ಳಬೇಕೆಂಬ ಬಯಕೆ ನಾಯಿ ಮನಕ್ಕೆ ಹುಟ್ಟಿದರೆ ಸಾಕು ಅಂತಹ ಮನ ಘನಮನದ ಹಾದಿಯತ್ತ ಸಾಗುತ್ತದೆ. ಘನಮನವೇ ತಾನಾಗುತ್ತದೆ.

ಮನ ತಾನೇ ಮಹಾದೇವನಾಗಿದ್ದರೂ ತನವಿಗೆ ಭಕ್ತನ ವೇಷ ಹಾಕಿ ಆ ತನುವಿನ ಮೂಲಕ ಮಹಾದೇವನನ್ನು ಆರಾಧಿಸುತ್ತದೆ. ತಾನು ಪೂಜಿಸುವ ಮಹಾದೇವನು ಮಹಾದೇವನಲ್ಲ. ಅದು ತಾನೇ ಕಟೆದ ಕಲ್ಲು. ಅದನ್ನು ಪೂಜಿಸಿದರೆ. ಅದಕ್ಕೆ ನೈವೇದ್ಯ ಮಾಡಿ ಆ ನೈವೇದ್ಯವನು ತಾನು ಉಂಡರೆ ಅದು ದೇವರ ಬೋನವಾದೀತೆ ? ಇದು ತನಗೆ ತಾನೇ ಬಗೆದುಕೊಂಡ ದ್ರೋಹ. ತನಗೆ ತಾನೇ ಬಗೆದುಕೊಂಡ ಅಜ್ಞಾನದ ಭ್ರಷ್ಟತೆ. ಇಂತಹ ಗೋಚರದ ಆಚಾರ ಭ್ರಷ್ಟರನ್ನು ಅರಿವಿನ ದೇವರು ನೋಡುವುದಿಲ್ಲ. ಅಗೋಚರದ ಆಚಾರಿಗಳನ್ನು ಅಪ್ಪಿಕೊಳ್ಳದೆ ಬಿಡುವುದಿಲ್ಲ !

ಶರಣರು ಅಗೋಚರದ ಆಚಾರಿಗಳು. ಕಲ್ಲನ್ನು ಕಲ್ಲೆಂದು ತಿಳಿದು ಆ ಕಲ್ಲಿಗೆ ಪೂಜಿಸದವರು. ಕಲ್ಲೊಳಗಣ ಬೆಲ್ಲ ಮೆದ್ದವರು. ಕಲ್ಲನ್ನು ದೇವರೆಂದು ತಿಳಿದು ಪೂಜಿಸುವವರನ್ನು ಪೂಜಿಸಿದವರು. ದೇವರು ಕಲ್ಲಿನಲ್ಲಿಲ್ಲ ; ಪೂಜಿಸುವ ಪ್ರತಿ ತನುವಿನಲ್ಲಿಯೂ ಸಂಗಮವಾಗಿದ್ದಾನೆ. ಆ ಸಂಗಮನಾಥನೆಂಬ ಅರಿವಿನ ದೇವರನ್ನು ಅಗೋಚರ ಆಚಾರದಿಂದ ಪೂಜಿಸಿದರು. ದೇವರ ಬೋನವನು ಉಂಡು ಪರಮ ತೃಪ್ತರಾದರು. ಬೋನಕ್ಕಾಗಿ ಯಾರ ಬಾಗಿಲೂ ಕಾಯಲಿಲ್ಲ. ತನಗೆ ತಾನೇ ಉಂಡ ಉಣ್ಣದ ಊಟವನು ಉಂಡರು. ಅಂಗದಲ್ಲಿಯೇ ಗುರು ಲಿಂಗ ಜಂಗಮದ ನೆಲೆಯನು ಕಂಡರು. ಅಂಗದಲ್ಲಿ ಸುಜ್ಞಾನದ ನೆಲೆಯನ್ನು ಕಂಡರು. ಅಂಗದಲ್ಲಿಯೇ ಸುಭಿಕ್ಷೆಯ ಸವಿಯನು ಸವಿದರು.

ಅರಿವಿನ ದೇವರನು ಕಂಡುಕೊಂಡು ಆ ದೇವರಿಗೆ ಶರಣು ಹೋದವರೆ ನಿಜ ಶರಣರು. ಇವರು ಅಗೋಚರ ಆಚಾರಿಗಳು. ಶರಣರ ಆಚಾರ ಯಾರಿಗೂ ಕಾಣುವುದಿಲ್ಲ. ಅವರ ಕಣ್ಣಿನಲ್ಲಿ ಅರಿವಿನ ಕಿರಣಗಳು ಹರಿಯುತ್ತವೆ. ಆ ಕಿರಣಗಳ ಮೂಲಕವೇ ದೇವರ ಬೋನವನು ಉಣ್ಣುತ್ತಾರೆ.

**165**

**ನಾರಿವಾಳವ ತಂದು ನಾಯ ಮುಂದೆ ಹಾಕಿದಡೆ,**
**ಒಡೆಯಲರಿಯದು, ತಿನಲರಿಯದು**
**ಅದರವೊಲು ಜಂಗಮದೊಳಗೆ ಲಿಂಗವನರಿಯದವ ಭಂಗಿಯ ತಿಂದಂತೆ**
**ತನ್ನ ಹೊದಿದ್ದ ತನ್ನ, ತಾ ತಿಳಿಯಲರಿಯದಿದ್ದಡೆ**
**ತೆಂಗತಿನಲರಿಯದ ನಾಯಂತೆ ಎಂದನಂಬಿಗ ಚೌಡಯ್ಯ.**

ಮನವೂ ಹಾಗೆಯೇ. ತನುವಿನಲ್ಲಿ ಅರಿವಿನ ಅಮೃತ ತನ್ಮಯವಾಗಿದೆ. ತನುವನ್ನು ಆವರಿಸಿದ ಮನ ತನುವಿನೊಂದಿಗೆ ನಾಯಿಯಂತೆ ತಿಪ್ಪೆ ಕೆದರುತ್ತದೆ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂದರೆ ಮನಕ್ಕೆ ಬಲು ಪ್ರೀತಿ. ಅಷ್ಟ ಮದಗಳೊಂದಿಗೆ ಸಪ್ತ ವ್ಯಸನಗಳೊಂದಿಗೆ ತನು ಕುದಿಯುತ್ತದೆ. ಭೂಮಿ ಹೇಮ ಕಾಮಕ್ಕಾಗಿ ಕಾಯ ಕಾತರಿಸುತ್ತದೆ. ಕಾಯದೊಂದಿಗೆ ಕಾಯ ಕಾಮಿಸುತ್ತದೆ. ಕಾಯದೊಂದಿಗೆ ಕಾಯ ಬಡಿದಾಡುತ್ತದೆ.

ಕಾಯದೊಂದಿಗೆ ಕಾಯ ವೈರತ್ವ ಹಗೆತನ ಕಟ್ಟಕೊಂಡು ಕಾಯ ಹಗಲಿರುಳೆನ್ನದೆ ಕತಕತನೆ ಕುದಿಯುತ್ತದೆ.

ಕಾಯವನ್ನು ಮನವೆಂಬ ಮಾಯೆ ನಾಯಿಯಂತೆ ಕಾಡುತ್ತದೆ. ಕಾಯದೊಳಗೆ ಕೈಲಾಸವಿದೆ. ಅದು ಮನವೆಂಬ ನಾಯಿಗೆ ಗೊತ್ತಿಲ್ಲ. ಒಡೆಯಲರಿಯದು, ತಿನಲರಿಯದು.

ತೆಂಗಿನ ಪೀಚು ಬಿಚ್ಚಿ ಕರಟ ಹೊಡೆಯುವುದಕ್ಕಾಗಿ ಮನಕಾಯಕ್ಕೆ ಕಾವಿ ಹಾಕಿ ಗುರುವಾಗಿದೆ ಮತ್ತೊಂದು ಕಾಯವನ್ನು ಶಿಷ್ಯನನ್ನಾಗಿಸಿಕೊಂಡಿದೆ. ಕಾಯವೇ ರಾಜ, ಕಾಯವೇ ಮಂತ್ರಿ, ಕಾಯವೇ ಪ್ರಧಾನಿ, ಕಾಯವೇ ಕಾಲಾಳು ; ಪೇದೆ, ಆದರೂ ಕಾಯದ ಕಾಯಿ ಒಡೆಯುತ್ತಿಲ್ಲ. ಪೇಚು ಹರಿದು ಕರಟ ಬಿಚ್ಚಿ, ಕಾಯಿಯ ತಿರುಳ ಕಾಯಕ್ಕೆ ನಿಲುಕುತ್ತಿಲ್ಲ. ಕಾಯದಲ್ಲಿಯೇ ಕೈಲಾಸವಿದೆಯೆಂದು ಕಾಯವನ್ನು ಆವರಿಸಿದ. ಮನವೆಂಬ ನಾಯಿಗೆ ತಿಳಿಯುತ್ತಿಲ್ಲ.

ಜಂಗಮದೊಳಗೆ ಲಿಂಗವನರಿಯದವ ಭಂಗಿಯ ತಿಂದಂತೆ. ತನ್ನ ಹೊದ್ದಿದ್ದ ತನ್ನ, ತಾ ತಿಳಿಯಲರಿಯದಿದ್ದಡೆ ತೆಂಗತಿನೇರಿಯದ ನಾಯಂತೆ ಎಂದು ಅಂಬಿಗರ ಚೌಡಯ್ಯ ಹೇಳಿದ್ದಾರೆ.

ಕಾಯವನ್ನು ಆವರಿಸಿದ ಮನವೆಂಬ ಮಾಯೆಯೇ ಸಾಗರ ಕಾಯವೇ ದೋಣಿ, ಕಾಯದಲ್ಲಿ ಭರಿತವಾದ ಅರಿವೆಂಬ ಗುರುದೇವನೇ ಅಂಬಿಗ. ಕಾಯದಲ್ಲಿಯೇ ಕುಳಿತು ಹುಟ್ಟು ಹಾಕಿ, ಮಾಯಾಸಾಗರವನ್ನು ದಾಟಿ ದಡಸೇರಬೇಕಾಗಿದೆ. ಕಾಯದಲ್ಲಿರುವ ಕೈಲಾಸವನ್ನು ಕಾಯವೇ ಕಾಣಬೇಕಾಗಿದೆ.

**166**

**ನಾಲ್ಕು ವೇದವನೋದಿದ ನಂತರ ಮನೆಯ ಬೋನವ**
**ಶಿವಭಕ್ತರ ಮನೆಯಲ್ಲಿರುವ ನಾಯಿ ಮೂಸಿ ನೋಡಲಾಗದು.**
**ಸಾಮವೇದಿ ಹೋಗುತ್ತಿರಲು**
**ಶ್ವಪಚಯ್ಯಗಳು ತಮ್ಮ ಪಾದುಕದಿಂದ ಪಾಕವ ಮುಚ್ಚಿದರು.**
**'ಶಾವನೋ ಶ್ರೇಷ್ಠ'ವೆಂದು ಇಕ್ಕಿದೆನು ಮುಂಡಿಗೆಯ.**
**ಎತ್ತಿರೋ ಜಗದ ಸಂತೆಯ ಸೂಳೆಯ ಮಕ್ಕಳು.**
**ಜಗಕ್ಕೆ ಪಿತನೊಬ್ಬನಲ್ಲದೆ ಇಬ್ಬರೆಂದು ಬೊಗಳುವವರ ಮೋರೆಯ ಮೇಲೆ**
**ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.**

ವೇದಗಳು ನಾಲ್ಕು. ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದ. ಈ ನಾಲ್ಕು ವೇದಗಳು ಹೊರಬಂದದ್ದು ದೇಹವೆಂಬ ಮನೆಯಿಂದ. ದೇಹವನ್ನು ಆವರಿಸಿದ ಮನಕ್ಕೆ ವೇದಗಳೆಂದರೆ ಬಲು ಇಷ್ಟ. ಬಲು ರುಚಿ. ವೇದಗಳು ತನ್ನ ಮನೆಯಿಂದ ಹೊರಬಂದ ಎಂಜಲು ಎಂದು ಮನ ಅರಿಯದು.

ನಾಲ್ಕು ವೇದಗಳನ್ನು ಓದಿದ ನಂತರ ಶಿವ ಭಕ್ತರ ಮನೆಯಲ್ಲಿರುವ ಬೋನವ ನಾಯಿ ಕೂಡ ಮೂಸಿ ನೋಡದು. ನಾಯಿ ಮನಕ್ಕೆ ಹೊರಗಿನ ಬೋನ ಹೊರಗಿನ ಎಂಜಲೆಂದರೆ ಬಲು

ಪ್ರೀತಿ. ವೇದ ಕೇಳಿದರೆ ಸಂತೋಷವಾಗುತ್ತದೆ. ಓದಿದರೂ ಸಂತೋಷವಾಗುತ್ತದೆ. ನುಡಿದರೂ ಸಂತೋಷವಾಗುತ್ತದೆ. ಆದರೆ ನುಡಿದಂತೆ ನಡೆಯಲು ದುಃಖವಾಗುತ್ತದೆ.

ವೇದಗಳನ್ನು ಓದಲು ಕೇಳಲು ನುಡಿಯಲು ಸಂತೋಷವೇ ಹೊರತು ನುಡಿದಂತೆ ನಡೆಯಲು ಬರುವುದಿಲ್ಲ. ಏಕೆಂದರೆ ಅದು ಹೊರಗಿನಿಂದ ಬಂದ ರುಚಿ. ಮತ್ತೊಂದು ಮನೆಯ ಎಂಜಲು ರುಚಿ. ಆ ಎಂಜಲು ತಿನ್ನುವ ಮನಕ್ಕೆ ಮತ್ತೆ ಮತ್ತೆ ಬಯಕೆ ಹೆಚ್ಚುತ್ತದೆಯೇ ಹೊರತು ಇರಲು ಬರುವುದಿಲ್ಲ.

ವೇದವೆಂಬುದು ಮನೆಯ ಬೋನ. ಅದು ದೇಹವೆಂಬ ಮನೆಯಿಂದ ಹೊರಬಂದು ವೇದವೆಂಬ ಹೆಸರು ಪಡೆದು ತಾಳೋಲೆಯಲ್ಲಿ ಬಂಧಿಯಾಗಿದೆ. ಅದರ ರುಚಿಯನ್ನು ಸವೆದ ಮನವೆಂಬ ನಾಯಿ ಮನೆಯ ಬೋನವನು ಮೂಸಿಯೂ ನೋಡದು.

ವೇದವನ್ನು ಓದಿ ಸೈ ಎನ್ನಿಸಿಕೊಂಡ ಸಾಮವೇದಿಯೊಬ್ಬ ಹಾದಿ ಹಿಡಿದು ಹೋಗುತ್ತಿರಲು ಶ್ವಪಚಯ್ಯನೆಂಬ ಶರಣ ತನ್ನ ಕೆರವಿನಿಂದ  ಪಾಕವನ್ನು ಮುಚ್ಚಿದರು. ಸಾಮವೇದಿಯ ನೆರಳು ಪಾಕದ ಮೇಲೆ ಬೀಳದಿರಲೆಂದು. ಸಾಮವೇದಿಗಿಂತ ನಾಯಿಯೇ ಶ್ರೇಷ್ಠವೆಂದು! ತಾವು ಮಾಡುತ್ತಿರುವ ಸತ್ತ ನಾಯಿಯ ಪಾಕವೇ ಶ್ರೇಷ್ಠವೆಂದು ಸಾಮವೇದಿಯ ನೆರಳು ಆ ಪಾಕದ ಮೇಲೆ ಬೀಳದಿರಲೆಂದು ತಮ್ಮ ಕೆರವು ತೆಗೆದು ಆ ಪಾಕದ ಮೇಲೆ ಮುಚ್ಚಿದರು.

'ಶ್ವಾನೋ ಶ್ರೇಷ್ಠ' ವೆಂದು ಇಕ್ಕಿದರು ಮುಂಡಿಗೆಯ. ಸಾಧ್ಯವಾದರೆ ಎತ್ತಿರೊ ಜಗದ ಸಂತೆಯ ಸೂಳೆಯ ಮಕ್ಕಳು :

ಸಾಮವೇದವನು ಓದಿ ಲೀಲಾಜಾಲವಾಗಿ ಪ್ರವಚನ ಮಾಡುವ ಸಾಮವೇದಿಗಿಂತ ಸತ್ತ ನಾಯಿಯೇ ಶ್ರೇಷ್ಠ . ಆ ನಾಯಿಯಿಂದ ತಯಾರಿಸಲ್ಪಟ್ಟ ಪಾಕವೇ ಶ್ರೇಷ್ಠ ! ಸಾಮವೇದವನು ಓದಿ ಸಾಮವೇದಿ ಎನ್ನಿಸಿಕೊಂಡ. ವೇದದಿಂದ ಹೊಟ್ಟೆ ಹೊರೆಯಲು ಸಾಧ್ಯವಾಯಿತೇ ಹೊರತು ಆ ವೇದವೇ ತಾನಾಗಲಿಲ್ಲ. ವೇದವನು ಉಂಡ ; ವೇದದ ಎಂಜಲನ್ನೇ ತೇಗಿದ. ವೇದ ಮತ್ತೊಂದು ಮನೆಯ ಬೋನ. ಅದನ್ನು ಉಂಡರೆ ತನ್ನ ಮನೆಯ ಬೋನ ಹಾಗೆಯೇ ಉಳಿಯಲಿಲ್ಲವೆ ? ತನ್ನ ಮನೆಯ ಬೋನವೇ ಮೀಸಲು ಎಂದು ಸಾಮವೇದಿ ತಿಳಿಯಲಿಲ್ಲ.

ಶ್ವಪಚಯ್ಯ ಶರಣರು ತಮ್ಮ ಮನೆಯ ಬೋನವ ತಾವೇ ಉಂಡವರು. ದೇಹವೆಂಬ ಮನೆ ಬ್ರಹ್ಮನ ಸಂಪತ್ತು ; ಶಿವನ ಸಂಪತ್ತು . ವೇದ ಆಗಮ ಉಪ ನಿಷತ್ತು ಸಕಲ ಪುರಾಣಗಳು ದೇಹವೆಂಬ ಮನೆಯ ಮೂಲಕವೇ ಹುಟ್ಟಿದವು. ಮನೆಯಿಂದ ಹೊರಗೆ ಬಂದ ಪುಸ್ತಕಗಳು ಮನೆಯನ್ನು ಬೆಳಗಬಲ್ಲವೆ ? ಬೆಳಗಲಾರವು !

ವೇದಗಳನ್ನು ಓದಿ ಹೊಟ್ಟೆ ಹೊರೆದುಕೊಳ್ಳುವ ಬ್ರಾಹ್ಮಣೋತ್ತಮರಿಗೆ ಪಂಡಿತರಿಗೆ ಶಾಸ್ತ್ರಿಗಳಿಗೆ ಅನುಕೂಲವಾಯಿತೇ ಹೊರತು ಅವರು ಅನುಭಾವಿಗಳು ಆಗಲಿಲ್ಲ.ಆಚಾರ ಹೇಳುವುದಕ್ಕೆ ಬದನೇಕಾಯಿ ತಿನ್ನುವುದಕ್ಕೆ ಎಂದಂತಾಯಿತು.

**ಜಗಕ್ಕೆ ಪಿತನೊಬ್ಬನಲ್ಲದೆ ಇಬ್ಬರೆಂದು ಬೊಗಳುವರ ಮೋರೆಯ ಮೇಲೆ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣರು :**

ಜಗದ ದೇಹಗಳೆಲ್ಲ ಒಂದೇ. ಆ ದೇಹಗಳನ್ನು ಹಡೆದ ತಂದೆ ಒಬ್ಬನೇ ಆಗಿದ್ದಾನೆ. ದೇಹವನ್ನು ಹಡೆದು ದೇಹದಲ್ಲಿಯೇ ಸಂಗಮವಾಗಿ ಸಂಗಮನಾಥನೆಂಬ ಹೆಸರು ಪಡೆದಿದ್ದಾನೆ. ಆ ಸಂಗಯ್ಯನನ್ನು ಕುರಿತು ಬಸವಣ್ಣ ಹೀಗೆ ಹಾಡಿದ್ದಾರೆ.

ತಂದೆ ನೀನು ತಾಯಿ ನೀನು ; ಬಂಧು ನೀನು ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲವಯ್ಯ; ಕೂಡಲಸಂಗಮದೇವಾ ಹಾಲಲ್ಲಾದರೂ ಅದ್ದು, ನೀರಲ್ಲಾದರೂ ಅದ್ದು ನಿಮ್ಮ ಧರ್ಮ. ಅರಿಯದ ಮನ ಹಲವು ದೇವರನ್ನು ಸ್ತುತಿಸುತ್ತದೆ, ತನ್ನ ದೇವರನ್ನೇ ಮರೆತಿದೆ.

**167**

**ನಾಲ್ಕೈದು ಹದಿನೆಂಟು ಪುರಾಣ**
**ಇಪ್ಪತ್ತೆಂಟು ದೇವತಾಗಮಂಗಳು**
**ಚೌಷಷ್ಟಿ ಅಖಿಳ ವಿದ್ಯಂಗಳ ಸಾಧಿಸಿ**
**ನನಗಾರು ಸರಿ ಎಂಬ ಹೊಲೆ ಮಾದಿಗರ ಎನಗೊಮ್ಮೆ ತೋರದಿರಯ್ಯಾ .**
**ಅದೇನು ಕಾರಣವೆಂದಡೆ :**
**ಸಕಲಶಾಸ್ತ್ರಂಗಳಿಗೆ ಚೌಷಷ್ಟಿ ಕಳಾವಿದ್ಯಕ್ಕೆ ನಿಲುಕದ ಪರಶಿವನ**
**ಕಾಯ ಜೀವ ಪ್ರಸಾದದಲ್ಲಿ ನೆಲೆಗೊಳಿಸಲರಿಯದೆ**
**ಒಡಲ ಹೊರೆವ ಹೊಲೆ ಮಾದಿಗರಾದಂತಾಯಿತ್ತೆಂದಡೆ**
**ಶುಕ ನುಡಿದಂತಾಯಿತ್ತೆಂದಾತ ನಮ್ಮ ಅಂಬಿಗರ ಚೌಡಯ್ಯ.**

ಸಕಲ ದೇಹಗಳು ಅರಿವಿನ ಶ್ರೀಮಂತಿಕೆಯಿಂದ ಭರಿತವಾಗಿವೆ. ದೇಹದಿಂದ ಹೊರ ಬಂದ ಶ್ರೀಮಂತಿಕೆಯೆಂದರೆ ಅರಿವು. ಅದು ವೇದ ಆಗಮ ಪುರಾಣ ಉಪ ನಿಷತ್ತು ಶಾಸ್ತ್ರ ಹಲವಾರು ಸಿದ್ಧಾಂತಗಳ ರೂಪದಲ್ಲಿ ಹೊರಬಂದು ತಾಳೋಲೆ ಕಟ್ಟು ಪುಸ್ತಕಗಳಲ್ಲಿ ಸೇರಿವೆ. ಅದನ್ನೇ ಓದಿ ಅರವತ್ನಾಲ್ಕು ವಿದ್ಯೆಗಳನ್ನು ಸಾಧಿಸಿದೆನೆಂದು, ನನಗಾರು ಸರಿ ಎಂದು ಸವಾಲು ಹಾಕುವ ದೇಹವನ್ನು ಎನಗೊಮ್ಮೆ ತೋರದಿರಾ.

ಸಕಲ ಶಾಸ್ತ್ರಗಳು, ಅರವತ್ನಾಲ್ಕು ವಿದ್ಯೆಯ ಕಲೆಗಳು ದೇಹದಲ್ಲಿಯೇ ಸಂಗಮವಾಗಿವೆ. ದೇಹದಿಂದಲೇ ಹೊರಬಂದಿವೆ. ಇಂತಹ ದೇಹಕ್ಕೆ ಮಾಲೀಕನೊಬ್ಬನೇ ಇದ್ದಾನೆ. ಆತ ದೇಹದ ಮಾಲೀಕ. ದೇಹದ ಒಡೆಯ. ಈತನನ್ನು ಒಡಲೊಡೆಯ ಎಂದು ಕರೆದಿದ್ದಾರೆ ಶರಣರು.

ಸಕಲ ದೇಹಗಳಲ್ಲಿಯೂ ಈ ಒಡಲೊಡೆಯನಿದ್ದಾನೆ. ಒಡಲೊಡೆಯನಿಲ್ಲದ ಒಂದು ದೇಹವೂ ಈ ಜಗದಲ್ಲಿ ಇಲ್ಲ. ಆತನಿಂದಲೇ ಬಂದ ಸಕಲ ವಿದ್ಯೆಗಳಿಗೆ ಸಕಲ ಅರವತ್ನಾಲ್ಕು ಕಲೆಗಳಿಗೆ ಆತ ನಿಲುಕುವಾತನಲ್ಲ. ಕಾಯದಲ್ಲಿ ಜೀವದಲ್ಲಿ ಕಾಯದ ಕಣಕಣದಲ್ಲಿ ಅರಿವೆಂಬ ಗುರುದೇವನು ನೆಲೆಗೊಂಡಿದ್ದಾನೆ. ಆ ಗುರುದೇವನನ್ನೇ ಮಹಾದೇವ ಸದಾಶಿವ ಸಾಕ್ಷಾತ್ ಪರಬ್ರಹ್ಮನೆಂದು ಕರೆದಿದ್ದಾರೆ.

ಇಂತಹ ಒಡಲೊಡೆಯನಿಂದ ಬಂದ ವಿದ್ಯವನ್ನು ಒಡಲ ಹೊರೆಯುವುದಕ್ಕಾಗಿ ಅನ್ಯ ಒಡಲುಗಳಿಗೆ ಮಾರಿಕೊಳ್ಳುವ ಒಡಲನ್ನು ಅಂಬಿಗರ ಚೌಡಯ್ಯ ಶರಣರು ಮಾದಿಗರೆಂದು ಕರೆದಿದ್ದಾರೆ. ಆ ಒಡಲ ಪಂಡಿತನೆಂದು, ಶಾಸ್ತ್ರಿಯೆಂದು ಬಿರುದು ಪಡೆದರೇನು ? ಒಡಲೊಡೆಯನನ್ನು ಅರಿಯದ ಒಡಲು. ಅದು ನುಡಿದರೇನು ? ಒಡಲೊಡೆಯನನ್ನು ಅರಿಯದೆ ನುಡಿದ ನುಡಿಗಳೆಲ್ಲ ಗಿಳಿ ನುಡಿದಂತೆ ; ಗಿಳಿ ಓದಿದಂತೆ. ಒಡಲೊಡೆಯನನ್ನು ಅರಿಯದೆ ಒಡಲ ವಿದ್ಯೆಯನ್ನು ಒಡಲಿಗೆ ಮಾರಿಕೊಂಡ ಅಜ್ಞಾನಿ ಒಡಲನ್ನು ಮಾದಿಗನೆಂದು ಕರೆದಿದ್ದಾರೆ.

168

**ನಿಜಗಂಡನ ಸಂಗವನೊಲ್ಲದೆ ಬೊಜಗರ ಸಂಗ ಮಾಡುವ**
**ಬೋಸರತೊತ್ತಿಗೆಲ್ಲಿಯದೋ ನಿಜ ಮುತ್ತೈದೆತನ ?**
**ತ್ರಿಜಗವಂದಿತ ಲಿಂಗವ ಕರಕಮಲದಲ್ಲಿ ಹಿಡಿದುಕೊಂಡಿರ್ದ ಬಳಿಕ**
**ಅಲ್ಲಿ ನಂಬಿ ಪೂಜಿಸಿ ಮುಕ್ತಿಯ ಪಡೆಯಲರಿಯದೆ**
**ಲೋಕದ ಗಜಿಬಿಜಿ ದೈವಂಗಳಿಗೆರಗುವ**
**ಕುನ್ನಿ ಮಾನವರ ಕಂಡರೆ ಯಮನು ಜಗಿದೆಳೆದೊಯ್ದು ಕೊಲ್ಲದಿಪ್ಪನೆ ?**
**ಹಾಗೆ ಸಾಯಲೆಂದಾತ ನಮ್ಮ ಅಂಬಿಗರ ಚೌಡಯ್ಯ.**

ಅರಿವೇ ಗುರುವೆಂದು, ಮಹಾದೇವನೆಂದು, ಸದಾಶಿವ ಸಾಕ್ಷಾತ್ ಪರಬ್ರಹ್ಮನೆಂದು ಜ್ಞಾನಿಗಳು ಸಾರಿದರು. ಅರಿವೇ ಗಂಡನೆಂದು ತತ್ವಪದಕಾರರು ಜಾನಪದರು ದಾಸರು ಸಾರಿದರು. ಹೆಂಡತಿಗೂ ಗಂಡನಿದ್ದಾನೆ ; ಗಂಡನಿಗೂ ಗಂಡನಿದ್ದಾನೆ. ಲೋಕದ ಗಂಡ ಹೆಂಡಿರಿಬ್ಬರೂ ಗಂಡನನ್ನು ಹುಡುಕಬೇಕು. ಆ ಅರಿವಿನ ಗಂಡ ಅಂಗದಲ್ಲಿಯೇ ಸಂಗಮಗೊಂಡಿದ್ದಾನೆ. ಅರಿವಿನ ಗಂಡನ ಸಂಗವನ್ನು ಗಂಡ ಹೆಂಡತಿ ಮಾಡಲೇಬೇಕಾಗಿದೆ. ಆತನ ಸಂಗ ಮಾಡದೆ ಬೊಜಗನ ಸಂಗ ಮಾಡುವ ಬೋಸರತೊತ್ತಿಯರಿಗೆಲ್ಲಿಯದೊ ನಿಜ ಮುತ್ತೈದತನ ಎಂದು ಮನವನ್ನು ಪ್ರಶ್ನಿಸಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಜಗತ್ತು ಅರಿವನ್ನು ಆರಾಧಿಸುತ್ತದೆ. ಅಂತಹ ಅರಿವು ಅಂಗದಲ್ಲಿಯೇ ಸಂಗಮವಾಗಿದೆ. ಅಂಗ ಲಿಂಗಾಂಗವಾಗಿದೆ. ಅಂಗದಲ್ಲಿಯೇ ಹಿಡಿದಿಟ್ಟುಕೊಂಡ ಲಿಂಗವನ್ನು ಅಂಗ ಪೂಜಿಸಲರಿಯದೆ ಲೋಕದ ಗಜಿಬಿಜಿ ದೈವಂಗಳಿಗೆರಗುವ ಕುನ್ನಿ ಮಾನವರ ಕಂಡರೆ ಯಮನು ಜಗಿದೆಳೆದೊಯ್ದು ಕೊಲ್ಲದಿಪ್ಪನೆ ?

ಅಂಗದಲ್ಲಿ ಅರಿವಿದೆ. ಅರಿತರೆ ಅದೇ ಮುಕ್ತಿ . ಮರೆತರೆ ತನ್ನಂಗವೇ ತನಗೆ ನರಕ. 'ಸ್ವರ್ಗ ಲೋಕ ಮರ್ತ್ಯ ಲೋಕವೆಂಬುದು ಬೇರಿಲ್ಲ ಕಾಣಿಭೋ. ಸತ್ಯವ ನುಡಿವುದೇ ಸ್ವರ್ಗ ಲೋಕ, ಮಿಥ್ಯವ ನುಡಿವುದೇ ಮರ್ತ್ಯ ಲೋಕ '.

ಸತ್ಯ ಅಸತ್ಯದ ಪರಿಚಯವಿದ್ದರೂ ಅಂಗವನ್ನು ಆವರಿಸಿದ ಮನಕ್ಕೆ ನಿರ್ಣಯವಿಲ್ಲದ್ದಕ್ಕಾಗಿ ಮತ್ತೆ ಮತ್ತೆ ಸೋಲುತ್ತದೆ. ಯಮನ ಬಾಧೆಗೆ ತಲ್ಲಣಿಸುತ್ತದೆ. ಇಲಿಗೆ ಪ್ರಾಣ ಸಂಕಟವಾದರೆ ಬೆಕ್ಕಿಗೆ ಚೆನ್ನಾಟವೆಂದಂತೆ ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವ ಹಾಗೆ ಸಾಯ ಲೆಂದು ಉದಾಸೀನವ ಮಾಡುತ್ತಾನೆ. ಇದು ಸೂಕ್ಷ್ಮಾತಿ ಸೂಕ್ಷ್ಮ ವಿಷಯ. ಅನುಭವಕ್ಕೆ ಬಂದರೆ ಮಾತ್ರ ಗೊತ್ತಾಗುತ್ತದೆ.

169

**ನಿಲ್ಲಿಸಬಹುದಯ್ಯ ಒಂದೇ ಮಂತ್ರದಲ್ಲಿ ಕಾಳೋರಗನ,**
**ನಿಲ್ಲಿಸಬಹುದಯ್ಯ ಒಂದೇ ಮಂತ್ರದಲ್ಲಿ ಹಾರುವ ಪಕ್ಷಿಯನು**
**ನಿಲ್ಲಿಸಬಹುದಯ್ಯ ಒಂದೇ ಮಂತ್ರದಲ್ಲಿ ಹೆಬ್ಬುಲಿಯ**

**ನಿಲ್ಲಿಸಬಹುದಯ್ಯ ಒಂದೇ ಮಂತ್ರದಲ್ಲಿ ಹೊಯ್ವ ಹೆಮ್ಮಾರಿಯ,**
**ನಿಲ್ಲಿಸಬಹುದಯ್ಯ ಒಂದೇ ಮಂತ್ರದಲ್ಲಿ ಬರುವ ಉರಿಬಾಣವ**
**ಇಂತಿವೆಲ್ಲವನು ಒಂದೇ ಮಂತ್ರದಲ್ಲಿ ನಿಲ್ಲಿಸಬಹುದು,**
**ಲೋಭವೆಂಬ ಗ್ರಹಣ ಹಿಡಿದವರ ಏತರಿಂದಲೂ ನಿಲ್ಲಿಸಲಾಗದು.**
**ಈ ಲೋಭಕ್ಕೆ ದಾರಿದ್ರ್ಯವೇ ಔಷಧವು**
**ಹೇಳಿದರೆ ಕೇಳರು, ತಾವು ತಿಳಿಯರು,**
**ಶಾಸ್ತ್ರವ ನೋಡರು, ಭಕ್ತಿಯ ಹಿಡಿಯರು**
**ಇಂತಹ ಗೊಡ್ಡು ಮೂಳ ಹೊಲೆಯರಿಗೆ**
**ಕರ್ಮವೆಂಬ ಶರಧಿಯಲ್ಲಿ ಬಿದ್ದು ಉರುಳಾಡುವುದೇ ಸತ್ಯವೆಂದಾತ**
**ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.**

ಕಾಳೋರಗವನು, ಹಾರುವ ಪಕ್ಷಿಯನು, ಹೆಬ್ಬುಲಿಯನು, ಹೆಮ್ಮಾರಿಯನು, ಉರಿಬಾಣವನು ಒಂದೇ ಮಂತ್ರದಲ್ಲಿ ನಿಲ್ಲಿಸಬಹುದು. ಆದರೆ ಲೋಭವೆಂಬ ಗ್ರಹಣ ಹಿಡಿದವರನ್ನು ಏತರಿಂದಲೂ ನಿಲ್ಲಿಸಲಾಗದು.

ಹಾವು ತಿಂದವರ ನುಡಿಸಬಹುದು. ಸಿರಿಗರ ಹಿಡಿದವರ ನಿಲ್ಲಿಸಲಾಗದು ಎಂದು ಬಸವಣ್ಣನವರು ಕೂಡ ಹೇಳಿದ್ದಾರೆ.

**ಲೋಭವೆಂಬ ಗ್ರಹಣ ಹಿಡಿದವರ ಏತರಿಂದಲೂ ನಿಲ್ಲಿಸಲಾಗದು :**

ಪ್ರತಿಯೊಂದು ದೇಹವೂ ಶ್ರೀಮಂತಿಕೆಯಿಂದ ತುಂಬಿದೆ.

ಆದರೂ ದೇಹ ಶ್ರೀಮಂತಿಕೆಯನ್ನು ಬಯಸುತ್ತದೆ. ತಾನು ಮಾಡಿದ ವಸ್ತುಗಳನ್ನು ತಾನೇ ಸಂಗ್ರಹಿಸಿ ಶ್ರೀಮಂತನೆಂದು ಬೀಗುವುದು ಶ್ರೀಮಂತಿಕೆಯೋ ? ದೇಹದಲ್ಲಿದ್ದ ಅರಿವಿನ ಶ್ರೀಮಂತಿಕೆಯೇ ಶ್ರೀಮಂತಿಕೆಯೋ ಎನ್ನುವುದು ದೇಹಗಳಿಗೆ ಸ್ಪಷ್ಟವಾಗಿ ಗೋಚರಕ್ಕೆ ಬರುತ್ತಿಲ್ಲ.

ಹೇಳಿದರೆ ಕೇಳರು, ತಾವು ತಿಳಿಯರು, ಶಾಸ್ತ್ರವ ನೋಡರು, ಭಕ್ತಿಯ ಹಿಡಿಯರು, ಇಂತಹ ಗೊಡ್ಡು ಮೂಳ ಹೊಲೆಯರಿಗೆ ಕರ್ಮವೆಂಬ ಶರಧಿಯಲ್ಲಿ ಬಿದ್ದು ಉರುಳಾಡುವುದೇ ಸತ್ಯ ಎಂದು ದೇಹದಲ್ಲಿ ಭರಿತವಾದ ಶ್ರೀಮಂತ ಅರಿವಿನ ಮಾಲೀಕ ಆಯಾ ದೇಹಗಳಿಗೆ ನಿಷ್ಠುರವಾಗಿ ನುಡಿಯುತ್ತಾನೆ.

ಶರಣರ ಮಾತುಗಳು ಸಾಹಿತಿಗಳಿಗೆ ಸಂಶೋಧಕರಿಗೆ ವಿಮರ್ಶಕರಿಗೆ ವಿಶ್ವವಿದ್ಯಾಲಯಗಳಿಗೆ ಉಪನ್ಯಾಸಕರಿಗೆ ತಿಳಿಯುವುದಿಲ್ಲ. ಅವರ ಮಾತುಗಳನ್ನು ತಮ್ಮ ಮಾತುಗಳಿಗೆ ಹೋಲಿಸಿ ನುಡಿಯುತ್ತಾರೆ.

ಪರಧನ ಪರಸತಿ ಪರದೈವಕ್ಕೆ ಅಳುಪಿದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಎಂದು ಶರಣರು ಸ್ವದೈವವೇ ಆದ ಅರಿವಿನ ಮೇಲೆ ಆಣೆ ಇಟ್ಟು ಹೇಳಿದ್ದಾರೆ. ಅಂದ ಮೇಲೆ ಸಕಲದೇಹಗಳಿಗೂ ಸ್ವದೈವ ಸ್ವಸತಿ ಸ್ವಧನ ಇರಲೇಬೇಕಲ್ಲ! ಹೀಗಂದರೇನೆಂದು ತನ್ನ ದೇಹದಾಳಕ್ಕೆ ತಾನೇ ಹೋದರೆ ತನಗೆ ಉತ್ತರ ಸಿಗುತ್ತದೆ. ಗುಡಿಗುಂಡಾರಗಳು ಮುಚ್ಚಿ ಹೋಗುತ್ತವೆ. ಸೃಷ್ಟಿ ಮಾಡಿಕೊಂಡ ಜಾತಿ ಮತ ಪಂಥ ಧರ್ಮ ಹೆಣ್ಣು ಗಂಡು ಎಂಬ ಅಜ್ಞಾನ ಸುಟ್ಟು ಹೋಗುತ್ತದೆ.

ದೇಹವೆಂದರೆ ಹೆಣ್ಣಲ್ಲ ಗಂಡಲ್ಲ, ಅದೊಂದು ಅರಿವಿಗೂ ಮನಕ್ಕೂ ಬಳಕೆಯಾಗುವ

ಉಪಕರಣವೆಂದು ಸಿದ್ಧವಾಗುತ್ತದೆ. ಮನ ಸತಿಯಾಗಿ ಅರಿವು ಪತಿಯಾಗಿ ದೇಹದಲ್ಲಿ ಕೂಡುತ್ತದೆ. ಈ ಕೂಡುವಿಕೆಯನ್ನು ಶರಣರು ಶರಣಸತಿ ಲಿಂಗಪತಿ ಎಂದು ಕರೆದರು.

ದೇಹವನ್ನು ಆವರಿಸಿದ ಮನಕ್ಕೆ ದೇಹದಲ್ಲಿ ಸಂಗಮವಾದ ಅರಿವೇ ದೇಹದ ದೇವರು ಎಂದು ಮನವರಿಕೆಯಾಗುತ್ತದೆ. ಆಗಮನ ಸ್ವದ್ವೈವಕ್ಕೆ ಮೊರೆ ಹೋಗುತ್ತದೆ. ಆ ಅರಿವೇ ಸಂಪತ್ತೆಂದು ತಿಳಿದು ಅರಿವಿಗೆ ಮೊರೆ ಹೋಗುತ್ತದೆ . ಆಗ ಸ್ವಧನ ಲಭ್ಯ ವಾಗುತ್ತದೆ. ಮನ ಸತಿಯಾಗಿ ಅರಿವು ಪತಿಯಾಗಿ ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ಎಂಬ ಮಂತ್ರ ತನಗೆ ತಾನೇ ಸಿದ್ಧಿಯಾಗುತ್ತದೆ.

ದೇಹ ಬಾಹ್ಯ ಶ್ರೀಮಂತಿಕೆಯಿಂದ ಮನ ಸೊಕ್ಕಿದ್ದರೆ ಅದರ ಅರಿವಿನ ಶ್ರೀಮಂತಿಕೆ ಅರ್ಥವಾಗುವುದಿಲ್ಲ. ಆಗ ಮನ ದೇಹದಲ್ಲಿರುವ ಅರಿವೆಂಬ ಸ್ವಶ್ರೀಮಂತಿಕೆಯನ್ನು ಬಳಸದೆ ಜಿಪುಣನಾಗುತ್ತದೆ. ಬಡತನವೆಂಬ ಮಂತ್ರವಾದಿ ಹೋಗಲು ಅರಿವಿನ ಶ್ರೀಮಂತಿಕೆಯನ್ನು ಅರಿಯಲು ಮನ ತೊಡಗುತ್ತದೆ.

**170**

**ನೀರೊಳಗಣ ನೆಯಿದಿಲು ತಾವರೆಯಂತೆ,**
**ಅದಾರಿಗೆ ಸುಖ ಅದಾರಿಗೆ ದುಃಖವೆಂಬುದ ಆರೈದಲ್ಲಿ,**
**ಆ ಉಭಯವು ನೀರಿನ ಆರೈಕೆಯಿಂದ ಲೇಸೆಂದನಂಬಿಗಚೌಡಯ್ಯ .**

ನೀರಲ್ಲಿಯೇ ತಾವರೆ ಹುಟ್ಟಿ, ಆ ನೀರೆ ತಾವರೆಯಾಗಿ, ತಾವರೆಗೆ ನೀರು ಆಸರೆಯಾಗಿದೆ. ಆಹಾರವಾಗಿದೆ. ನೀರು ತಾವರೆಗೆ ಸುಖವಾಗಿದೆ; ಆ ನೀರೆ ದುಃಖವಾಗಿದೆ. ನೀರು ತಾವರೆಗೆ ಕೊಡುವ ಆಹಾರ ಅದರ ರಭಸದಿಂದ ಉಂಟಾಗುವ ದುಃಖಗಳೆರಡೂ ತಾವರೆ ಉಂಡು ಹೂವಾಗಿ ಅರಳಿದೆ.

ತಾವರೆಯೆಂತೆಯೇ ತನುವಿನ ಸುಖ ದುಃಖಗಳು. ತನುವಿನಲ್ಲಿಯೇ ಸುಖ, ತನುವಿನಲ್ಲಿಯೇ ದುಃಖ. ಅನ್ಯ ತನುವಿನಿಂದ ಸುಖವಾಯಿ ತೆಂದು ದುಃಖವಾಯಿತೆಂದು ಮನ ತನುವಿಗೆ ಸಂದೇಶ ನೀಡುತ್ತದೆ. ಅದು ಸುಳ್ಳೆಂದು ದೇಹ ತಿಳಿಯುವುದಿಲ್ಲ. ನಂಬುತ್ತದೆ. ಅರಿತರಿತು ನೋಡಿದರೆ ಅನ್ಯ ತನು ದುಃಖಕ್ಕೆ ನೆಪವೆಂದು, ಸುಖಕ್ಕೆ ನೆಪವೆಂದು ಗೋಚರಕ್ಕೆ ಬರುತ್ತದೆ.

ಅನ್ಯ ತನುವಿನ ಶಬ್ದ ತನು ತಿಳಿಯದೆ ತನುವಿನಲ್ಲಿ ದುಃಖ ಉಂಟಾಗುತ್ತದೆ ; ಸುಖ ಉಂಟಾಗುತ್ತದೆ.

ನೀರಿನ ಅಲೆ ತಾವರೆಯ ಎಲೆಗೆ ರಭಸದಿಂದ ತಾಗಿದರೆ ಆ ನೀರು ಕೊಡವಿಕೊಂಡು, ಕೊಡವಿಕೊಂಡ ಆ ನೀರನೇ ಉಂಡು ಮತ್ತೆ ನೀರಲ್ಲಿಯೇ ಎದ್ದು ಮೇಲೆ ಅರಳುತ್ತದೆ.

ತಾವರೆಗೆ ಅರಳುವ ಸುಖ. ಹಾಗೆಯೇ ತನು ಸಕಲ ಶಬ್ದ ಸ್ಪರ್ಶ ರೂಪು ಗಂಧ ರುಚಿಯನು ಜ್ಞಾನದಿಂದ ಉಂಡು ಅರಗಿಸಿ ಜ್ಞಾನದಿಂದಲೇ ತಾವರೆಯಂತೆ ಅರಳಬೇಕು.

ಕಾಯದ ಕಾಯಕ ಕಾಯ ತಿಳಿಯದಿದ್ದರೆ ಕಾಯಕ್ಕೆ ಅಸಹ್ಯವಲ್ಲವೆ? ನೀರಿನ ಗುಣ ತಾವರೆಗೆ ತಿಳಿಯದಿದ್ದರೆ ತಾವರೆ ನೀರಲ್ಲಿ ಹೇಗೆ ಬೆಳೆದೀತು?

ತಾವರೆಗೆ ಅರಳುವಿಕೆಯ ಸಹಜತೆಯಿದೆ. ಕಾಯ ಅರಿವಿನಿಂದ ಅರಳುವ ಸಹಜ

ಕಲೆಯನು ಕಾಯದ ಲ್ಲಿಯೇ ಮರೆಮಾಡಿಕೊಂಡಿದೆ. ಹೀಗಾಗಿ ಕಾಯಕ್ಕೆ ಕಾಯದಿಂದಲೇ ದುಃಖ; ಕಾಯದಿಂದಲೇ ಸುಖ.

ಕಾಯದ ಜನನವೂ ನೀರಿನಿಂದಲೇ ; ತಾವರೆಯ ಜನನವೂ ನೀರಿನಿಂದಲೇ ! ನೀರಲ್ಲಿದ್ದ ಅಗ್ನಿ ತಾವರೆ ಅರಳುವಿಕೆಗೆ ಸಹಕಾರಿ ಯಾಯಿತು. ಹೂ ತಾನು ಅರಳುವುದಕ್ಕಾಗಿ ಜಲದಲ್ಲಿಯ ಅಗ್ನಿಯನ್ನು ಆನಂದದಿಂದ ಸ್ವೀಕರಿಸಿತು. ಕಾಯ ತಾವರೆಯಂತಲ್ಲ. ಕಾಯವನ್ನು ಮನ ತಾವರೆಯ ಬೇರಿ ನಂತೆ ಕಾಯವನ್ನೇ ಹೆಣೆದುಕೊಂಡಿದೆ. ಜಲದಲ್ಲಿಯ ಅಗ್ನಿಯನ್ನು ಮನ ಸ್ವೀಕರಿಸಿ ಕಾಯವನ್ನು ಬಡಬಾಗ್ನಿಯಿಂದ ಕುದಿಯುವಂತೆ ಮಾಡುತ್ತದೆ.

ಉದಕದೊಳಗೆ ಬಯಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು ! ಜಲದೊಳಗಣ ಕಿಚ್ಚು ಜಲಕ್ಕೆ ತಂಪೆರೆದಿದೆ. ಜಲದೊಳಗೆ ಅಡಗಿದ ಜಲಜನಕ + ಉಮ್ಲಜನಕದಿಂದಲೇ ಜಲ ಜಲವಾಗಿ ಕಾಣುತ್ತದೆ. ಸುಳಿದು ಬೀಸುವ ಗಾಳಿ ಸುಡುವ (ಜಲಜನಕ) ಅಗ್ನಿಗಳೆರಡೂ ಕೂಡದಿದ್ದರೆ ಜಲವೇ ಇಲ್ಲ. ಜಲ ಇವೆರಡನ್ನೂ ಉಂಡು ಜಲವಾಗಿದೆ. ಇಡೀ ಪ್ರಕೃತಿಗೆ ಸಾಕ್ಷಿಯಾಗಿದೆ. ಪ್ರಕೃತಿಯ ಸೃಷ್ಟಿಗೆ ಪ್ರಪಂಚದ ಹುಟ್ಟಿಗೆ ಜಲ ಕಾರಣವಾಗಿದೆ.

ಪ್ರಕೃತಿ ಭರಿತವಾದ ಅಂಗಕ್ಕೆ ಅರಿವಿದೆ. ಇದೆಲ್ಲವನ್ನು ತಾನೇ ಸೃಷ್ಟಿಸಿದೆನೆಂದು ತಿಳಿದಿದೆ. ಇದು ಸತ್ಯ ಕೂಡಾ. ಆದರೆ ಗೋಚರಕ್ಕೆ ಬಾರದಂತೆ ಅಂಗದಲ್ಲಿಯೇ ಸಂಗಮವಾಗಿದೆ.

ಜಲಕ್ಕೆ ತಿಳಿಯುವುದಿಲ್ಲ ತಾನು ಪ್ರಪಂಚವನ್ನು ಪ್ರಕೃತಿಯನ್ನು ಸೃಷ್ಟಿಸಿದೆನೆಂದು ! ಜಲದಿಂದಲೇ ಹುಟ್ಟಿದ ಅಂಗಕ್ಕೆ ತಿಳಿಯಬೇಡವೆ ? ತನ್ನಿಂದಲೇ ಜಗತ್ತು ಸೃಷ್ಟಿಯಾಯಿತೆಂದು ! ಹೀಗೆ ತಿಳಿದ ಅಂಗ ಮಾತ್ರ ಲಿಂಗಾಂಗವಾಯಿತು. ತಾನೇ ಬ್ರಹ್ಮನಾಯಿತು. ಶಂಕರ ಬುದ್ಧ ಮಹಾವೀರ ಬಸವ ದಾಸವರೇಣ್ಯನಾಯಿತು.

ಉಳಿದ ಅಂಗಗಳು ಲಿಂಗಾಂಗಗಳೇ ಆಗಿದ್ದರೂ ಅಂಗಗಳನ್ನು ಪೂಜಿಸಿದವು, ಅಂಗಗಳನ್ನೇ ದ್ವೇಷಿಸಿದವು, ಅಂಗಗಳನ್ನೇ ಪ್ರೇಮಿಸಿದವು, ಅಂಗಗಳನ್ನೇ ಕಾಮಿಸಿದವು. ಅಂಗದಲ್ಲಿ ಜ್ಞಾನದ ಹೂ ಅರಳಿ ಅಂಗ ಲಿಂಗಾಂಗವಾಗಲಿಲ್ಲ. ಅರಿವಿಗೆ ನಷ್ಟವಿಲ್ಲ ; ಅಂಗಕ್ಕೆ ನಷ್ಟ ತಪ್ಪಿದ್ದಲ್ಲ ! ಉಭಯ ಒಂದಾದ ಪರಿ ಅರಿಯದಿದ್ದರೆ.

**171**

**ನೀರೊಳಗಿಕ್ಕಿದ ಕೋಲಿನಂತೆ,ಭೇದವನೊಳಗೊಂಡ ವಾದ್ಯದಂತೆ,**
**ನಾದದಲ್ಲಿ ಸೋಂಕಿದ ಶೂನ್ಯದಂತೆ,**
**ಭೇದಾಭೇದಂಗಳಲ್ಲಿ ಅಭೇದ್ಯವ ಭೇದಿಸಬಲ್ಲಡೆ,**
**ನಾದ ಬಿಂದು ಕಳೆಗೆ ಅತೀತನೆಂದನಂಬಿಗ ಚೌಡಯ್ಯ .**

ನೀರೊಳಗಿಕ್ಕಿದ (ಬಾಣ) ಕೋಲು ಯುದ್ಧಕ್ಕೆ ಸಲ್ಲದು. ಭೇದಪನು ಒಳಗೊಂಡ ವಾದ್ಯ ನುಡಿಸಲು ಬಾರದು. ನಾದದಲ್ಲಿ ಮಗ್ನನಾಗಿ ಶೂನ್ಯಾವಸ್ಥೆಗೆ ತಲುಪುವುದು ಕೂಡಾ ಒಂದು ಭ್ರಮೆ. ನಾದವ ನುಡಿಸಿದ ರಾವಣಂಗೆ ಅರೆ ಆಯುಷ್ಯವಾಯಿತ್ತು ಎಂದು ಅಣ್ಣನವರು ಹೇಳಿದಂತೆ.

**ಭೇದಾಭೇದಂಗಳಲ್ಲಿ ಅಭೇದ್ಯವ ಭೇದಿಸಬಲ್ಲಡೆ ನಾದ ಬಿಂದು ಕಳೆಗೆ ಅತೀತನೆಂದ ನಂಬಿಗ ಚೌಡಯ್ಯ :**

ನಾದವನ್ನು ಬಿಂದುವನ್ನು ಕಲೆಯನ್ನು ಒಲಿಸಿಕೊಳ್ಳಬಹುದು. ಈ ಮೂರನ್ನು ಭೇದಿಸಿ ನಾದ ಬಿಂದು ಕಲೆಗೆ ಅತೀತನಾದವನನ್ನು ಒಲಿಸಿಕೊಳ್ಳುವುದು ಜಟಿಲ.

ನಾದದಲ್ಲಿ ದೇವರನ್ನು ಹುಡುಕುವುದು, ಬಿಂದುವಿನಲ್ಲಿ ದೇವರನ್ನು ಹುಡುಕುವುದು, ಕಲೆಯಲ್ಲಿ ದೇವರನ್ನು ಹುಡುಕುವುದು. ದೇವರು ಈ ಮೂರೂ ವಿಧಾನಗಳಿಗೆ ಅತೀತನಾದವನು ಎಂದು ತಿಳಿಯುವುದರೊಳಗಾಗಿ ಅನೇಕ ಕಾಯಗಳ ಆಯುಷ್ಯವೇ ಮುಗಿದು ಹೋಗಿರುತ್ತದೆ.

ಕಾಯ ತಾನು ಕಲಿತುಕೊಂಡ ಕಲೆಗಳಿಗೆ ಮರುಳಾಗಬೇಕೋ? ಕಾಯ ಕಾಯಕ್ಕೆ ಮರುಳಾಗಬೇಕೋ ಎಂದು ಕಾಯಕ್ಕೆ ತಿಳಿಯುವುದಿಲ್ಲ. ಬಿಂದುವನ್ನು ಹುಡುಕಲು ಕಾಡಿಗೆ ಹೋದ ಸಿದ್ಧಾರ್ಥನಿಗೆ ಬಿಂದುವು ಸಿಕ್ಕಲೇ ಇಲ್ಲ.ಇನ್ನೇನು ಕಾಯದ ಸಂತೆ ಮುಗಿಯಿತು ಎನ್ನುವುದು ಮನವರಿಕೆಯಾದ ಕೂಡಲೇ ಸಿದ್ಧಾರ್ಥನಿಗೆ ತೀಕ್ಷಣವಾಗಿ ಹೊಳೆಯಿತು. ಉಂಡು ತಿಂದು ಲಕ್ಷಣವಾಗಿ ಅರಿವಿನಿಂದ ತನ್ನ ಅಂಗದಲ್ಲಿಯೇ ಹುಡುಕ ಹತ್ತಿದ. ಕ್ರಮೇಣ ರಾಜ ಸಿದ್ಧಾರ್ಥ ಹೆಳವನಾದ ! ಸಿದ್ಧಾರ್ಥನೊಳಗಣ ಬುದ್ಧ ಬಲಿಷ್ಠನಾದ.

ಯುದ್ಧ ಕಲೆಯಲ್ಲಿ, ಬಿಂದುವಿನಲ್ಲಿ, ಶಾಸ್ತ್ರದಲ್ಲಿ ಪ್ರಾವೀಣ್ಯತೆ ಪಡೆದು ಸಿದ್ಧಾರ್ಥ ಅವೆರಡನ್ನು ತನ್ನಿಂದ ಹೊರಚೆಲ್ಲಿದ. ಇವೆರಡನ್ನು ಹೊರಚೆಲ್ಲಿದ ಸಿದ್ಧಾರ್ಥ ಕಾಯವನ್ನು ಭೇದಿಸಿ ತಾನೂ ಹೊರಬಂದ. ಆಗ ಕಾಯದಲ್ಲಿ ಬುದ್ಧನೊಬ್ಬನೇ ಉಳಿದ. ಕಾಯ ಶೂನ್ಯವನ್ನು ಅರಸ ಲಿಲ್ಲ ಬದಲಾಗಿ ತಾನೇ ಶೂನ್ಯವಾಯಿತು. ಶೂನ್ಯದಲ್ಲಿ ಏನಿಲ್ಲ ? ಪಂಚಭೂತಗಳು ಶೂನ್ಯದಲ್ಲಿ ಅಡಗಿವೆ. ಶೂನ್ಯದ ಆಶ್ರಯ ಪಡೆದು ಅವು ಬದುಕಿವೆ. ಬದುಕಿದ ಅವುಗಳಿಗೆ ನಾಶ ಉಂಟು. ಶೂನ್ಯಕ್ಕೆ ನಾಶವಿಲ್ಲ.

ಶೂನ್ಯ ಅಂದೂ ಇದೆ, ಇಂದೂ ಇದೆ, ಎಂದೆಂದೂ ಇರುತ್ತದೆ. ಅದು ಸದಾ ಸಹಜಾನಂದ! ಕಾಯ ಶೂನ್ಯದ ಬೀಜವೆಂಬುದನ್ನೇ ಮರೆತುದಕ್ಕಾಗಿ ಕಾಯ ಶೂನ್ಯವನ್ನು ಹೊರಗೆ ಹುಡುಕ ಹತ್ತಿತು. ಅದರ ಸಹಜ ಕಲೆಯನ್ನು ಹೊರಗೆ ಹುಡುಕ ಹತ್ತಿತು. ಅದರಿಂದ ಹೊರಡುವ ನಾದವನ್ನು ಹೊರಗಡೆಯೇ ಹುಡುಕಿ ಪ್ರತ್ಯಕ್ಷ ಮಾಡಿಕೊಳ್ಳಲು ಹವಣಿಸಿತು.ಕಾಯಕ್ಕೆ ಮುಪ್ಪಾ ಯಿತು. ಶೂನ್ಯದ ಬೀಜ ಕಾಯದಲ್ಲಿಯೇ ಉಳಿಯಿತು. ಬೆದೆಗೆ ಬಂದು ಬೇರಿಲ್ಲದ ಮರವಾ ಗಲಿಲ್ಲ. ಅದಕ್ಕೆ ಜ್ಞಾನದ ಹೂ ಅರಳಲೇ ಇಲ್ಲ.

ಜ್ಞಾನದಿಂದ ಅರಳಿದ ಕಾಯವನ್ನು ಕಾಯಗಳು ಪೂಜಿಸಿ ಧನ್ಯತೆ ಮೆರೆದವು. ಬುದ್ಧ ಬಸವ ಮಹಾವೀರ ಕ್ರಿಸ್ತ ಪೈಗಂಬರನೆಂದು ಕೊಂಡಾಡಿದವು. ಸ್ತೂಪ ಬಸದಿ ಮಠ ಮಂದಿರ ಚ್ಚರ್ಚ್ ಮಸೀದೆಗಳು ಮೊಳಕೆ ಹೊಡೆದವು. ಕಾಯದಿಂದ ನಿರ್ಮಾಣವಾಗಿ ಕಾಯದಿಂದಲೇ ಪೂಜಿಸಲ್ಪಟ್ಟವು. ಶೂನ್ಯದ ಬೀಜ ಕಾಯದಲ್ಲಿಯೇ ಉಳಿದು ಕಾಯ ವ್ಯರ್ಥ ಮಣ್ಣಿಗೆ ಸೇರಿತು.

ಬಯಲು ಬಯಲನೇ ಬಿತ್ತಿ ಬಯಲು ಬಯಲನೇ ಬೆಳೆಯಿತು. ಆದರೂ ಬಯಲಿಂದ ಬಂದ ಕಾಯ ಬಯಲೆಂದು ತಿಳಿಯಲಿಲ್ಲ. ಬಯಲನ್ನು ಪೂಜಿಸಲಿಲ್ಲ. ಬಯಲನ್ನು ನಂಬಲಿಲ್ಲ. ನಂಬಿದ ಕಾಯಗಳು ಇಂಬಿಲ್ಲದೆ ಬಯಲಾದವು.

ಭೇದಾಭೇದಂಗಳಲ್ಲಿ ಅಭೇದ್ಯವಾದ ಬಯಲನ್ನು ಭೇದಿಸಿ ಬಯಲಲ್ಲಿಯೇ ಬಯಲಾಗಿ ಉಳಿದವು. ಹಾಗೆ ಉಳಿದ ಕಾಯವೇ ಧನ್ಯ . ಆ ಕಾಯ ನಾದ ಬಿಂದು ಕಲೆಗಳಿಗೆ ಅತೀತ !

**ನುಡಿವ ಶಬ್ದವೆ ಕಾಯದ ಕಳವಳ,**
**ಒಡಲುಗೊಂಡವರೆಲ್ಲಾ ಕೇಳಿರಯ್ಯಾ**
**ಸಂಜೆ, ನೇಮ, ನಿತ್ಯ, ಜಪ, ತಪ, ಸಮಾಧಿ**
**ಏನೆಂದಳೇನೆಂದು ಬರೆವಂತೆ ಬರೆವ ನುಡಿಯೊಳಗಿರ್ದು**
**ನುಡಿ ತಪ್ಪಿದೆನೆಂಬ ಈ ನುಡಿಗೆ ನಾಚುವೆನೆಂದನಂಬಿಗರಚೌಡಯ್ಯ.**

ಕಾಯದಿಂದ ಜನ್ಮ ತಳೆದ ಶಬ್ದ, ಕಾಯದಿಂದ ಜನ್ಮ ತಳೆದ ಗ್ರಂಥಗಳು, ಕಾಯದಿಂದಲೇ ಜನ್ಮ ತಳೆದ ಸಂಧ್ಯಾ, ನೇಮ, ನಿತ್ಯ, ಜಪ, ತಪ, ಸಮಾಧಿ. ಈ ಎಲ್ಲ ನುಡಿಗಳು ಕಾಯದ ಗರ್ಭದಲ್ಲಿದ್ದಾಗ ಕಾಯಕ್ಕೆ ಕಳವಳವಿರಲಿಲ್ಲ. ಆಗ ಕಾಯ ಯಾವ ಆಚರಣೆಯನ್ನೂ ಮಾಡಲಿಲ್ಲ. ಕಾಯದಿಂದ ಹೊರಬಂದ ಶಬ್ಧಗಳು ಕಾಗದದ ಮೇಲೆ ಮೂಡುವಾಗಲೂ ನಪುಂಸಕವಾಗಿಯೇ ಇದ್ದವು. ಕಲಿಯುವಾಗಲೂ ನಪುಂಸಕವಾಗಿಯೇ ಇದ್ದವು.

ಶಬ್ದ ಬಳಕೆ ಮಾಡಿ ನುಡಿದಾಗ ಕಾಯದ ಕಳವಳ ಪ್ರಾರಂಭವಾಯಿತು. ನುಡಿದ ಶಬ್ದ, ಕಾಯ ನಡೆಯುವಂತೆ, ಎಡುವುವಂತೆ ಮಾಡಿತು. ಏನೆಲ್ಲಾ ಶಬ್ದ ಬರೆದದ್ದು, ನುಡಿದದ್ದು ಬರೆದ ಕಾಯಕ್ಕೆ ಮುಳುವಾಯಿತು. ನುಡಿ ತಪ್ಪಿದನೆಂದು, ನುಡಿದಂತೆ ನಡೆದನೆಂದು ಹೀಗೆ ಕಾಯ ಬರೆದ ಬರವಣಿಗೆಯಲ್ಲಾ ಕಾಯಕ್ಕೆ ನಿಯಮಗಳಾದವು. ಆಚರಿಸಿದರೆ ನಿಯಮ. ತಪ್ಪಿದರೆ ನಿಯಮ ಬಾಹಿರ ಕಾಯವೆಂದು ಕಾಯಗಳಲ್ಲಿಯೇ ಎರಡು ತೆರನಾದವು.

ಕೊಡಲಿಗೆ ಕಾವು ಆದ ಮರ, ಆ ಕಾವುಳ್ಳ ಕೊಡಲಿಯೇ ಮರಕ್ಕೆ ಮೃತ್ಯುವಾದಂತೆ. ಕಾಯದಿಂದ ಬಂದ ಶಬ್ದ ಕಾಯಕ್ಕೆ ಮೃತ್ಯುವೂ ಆಯಿತು. ಕಾಯಕ್ಕೆ ಕಿರೀಟವೂ ಆಯಿತು.

ಕೈಕೇಯಿಯ ಕಾಯದಿಂದ ಬಂದ ಎರಡು ಶಬ್ದ ರಾಮ, ಸೀತಾ, ಲಕ್ಷ್ಮಣರ ಕಾಯಗಳನ್ನು ಹದಿನಾಲ್ಕು ವರ್ಷ ಅಡವಿಗೆ ಅಟ್ಟಿತು. ನುಡಿದು ಆನಂದ ಪಡಬೇಕಾದ ಕೈಕೇಯಿಯೂ ದುಃಖದ ಮಡುವಿನಲ್ಲಿ ಮುಳುಗಿದಳು.

ನುಡಿದ ನುಡಿಗೆ ಕಾಯ ನಾಚಲಿಲ್ಲ. ಜನ್ಮ ಕೊಟ್ಟ ಶಬ್ದವನ್ನು ಜನ್ಮಕೊಟ್ಟ ಕಾಯದಲ್ಲಿಯೇ ಭಸ್ಮ ಮಾಡುವುದು ಕಾಯಕ್ಕೆ ತಿಳಿಯಲಿಲ್ಲ. ಏನೀ ಕಾಯದ, ಕಾಯದಿಂದ ಬಂದ ಶಬ್ದದ ಕರಾಮತ್ತು !

ಕಾಯದಿಂದ ಬಂದ ' ವಾಕಟ್ಸುಮೊ ' ಎನ್ನುವ ಒಂದೇ ಒಂದು ಶಬ್ದ ಎರಡನೇ ಮಹಾಯುದ್ಧಕ್ಕೆ ಕಾರಣವಾಯಿತು. ಒಂದು ಲಕ್ಷ ತೊಂಭತ್ತೈದು ಸಾವಿರ ಕಾಯಗಳು ನೆಲಕ್ಕುರುಳಿದವು. ರಕ್ತದ ಕಾಲುವೆಯೇ ಹರಿಯಿತು, ಪ್ರಪಂಚದ ತುಂಬಾ ನೆಲೆಸಿರುವ ಕಾಯಗಳು ತಲ್ಲಣಗೊಂಡವು. ಕಾಯದಿಂದ ಬಂದ ಪದ ಕಾಯ ತಿಳಿಯದೇ ಹೋಯಿತು.

ಜಪಾನಿನ ಸಚಿವ ಸಂಪುಟದಲ್ಲಿ ನಿರ್ಣಯಿಸಿ ದಾಖಲಿಸಲ್ಪಟ್ಟ ವಾಕಟ್ಸುಮೋ ಎನ್ನುವ ಪದಕ್ಕೆ ಅಷ್ಟೊಂದು ಪದಾರ್ಥಗಳನ್ನು ನಾಶ ಮಾಡುವ ಶಕ್ತಿಯಿದೆಯೇ ? ಪದಾರ್ಥ ದೊಡ್ಡದೋ ? ಪದಾರ್ಥದಿಂದ ಬಂದ ಪದ ದೊಡ್ಡದೋ ?

ಪದಾರ್ಥದಿಂದ ಬಂದ ಒಂದು ಪದ ಪದಾರ್ಥಕ್ಕೆ ಆಹಾರವಾಗಲಿಲ್ಲ; ಕಾಳಕೂಟ ವಿಷವಾಯಿತು. ಅಣುಬಾಂಬು ಕೆಲವರನ್ನೇ ಕೊಂದು ಹಾಕಬಹುದು. ಒಂದೇ ಒಂದು

ಪದ ಪ್ರಪಂಚವನ್ನೇ ತಲ್ಲಣಗೊಳಿಸಿತು. ಪದ ನಷ್ಟ ಮಾಡುವ ಪ್ರಯೋಗದಲ್ಲಿ ಪದಾರ್ಥ ತೊಡಗದಿರುವುದೇ ಇದಕ್ಕೆ ಕಾರಣ. ಆ ಕಲೆಯ ಶಿಕ್ಷಣದಲ್ಲಿ ಪ್ರಪಂಚದ ಸರಕಾರಗಳು ತೊಡಗದಿರುವುದೇ ಇದಕ್ಕೆ ಕಾರಣ. ಆನೆ, ಹುಲಿ, ಸಿಂಹ, ತಿಮಿಂಗಲ, ಡೈನೋಸಾರ, ಭಯಾನಕ ಉರುಗಗಳನ್ನು ಪಳಗಿಸಿ ತನ್ನಂತೆ ಮಾಡಿಕೊಳ್ಳುವ ಕಾಯಕ್ಕೆ ಕಾಯದಿಂದ ಬಂದ ಶಬ್ದ ಸೀಳಲು ತಿಳಿಯಲಿಲ್ಲ.

ಸಂಧ್ಯಾ , ನೇಮ, ನಿತ್ಯ , ಜಪ, ತಪ, ಸಮಾಧಿ ಶಬ್ದಗಳನ್ನು ಕಾಯದಿಂದಲೇನುಡಿದ, ಕಾಯದಿಂದಲೇ ಬರೆದ, ಕಾಯದಿಂದಲೇ ನಡೆದ, ನುಡಿದಂತೆ ನಡೆ ತಪ್ಪಿದೆನೆಂದು ಕಳವಳ ಪಟ್ಟ. ನುಡಿಯುವ ಕಾಯ, ನಡೆಯುವ ಕಾಯ, ನುಡಿದಂತೆ ನಡೆಯಲಿಲ್ಲವೆಂದು ಕಳವಳಪಡವ ನುಡಿಗೆ ನಾಚಬೇಕಾಗಿದೆ. ಆ ಅರಿವು ಕಾಯದಲ್ಲಿಯೇ ಇದೆ. ಅದು ಒಡ ಮೂಡಿದಾಗ, ನುಡಿದ ನುಡಿ ಬಡಿದ ನುಡಿಗಳೆರಡೂ ಮಾಯವಾಗುವವು. ಆಗ ಕಾಯ ನುಡಿದರೆ ನುಡಿಗೆಟ್ಟ ನುಡಿ ನುಡಿಯುವುದು. ನುಡಿದ ನುಡಿಗೆ ಕಳವಳವಿಲ್ಲ. ಕೇಳಿದ ನುಡಿಗೂ ಕಳವಳವಿಲ್ಲ. ಬಡಿದ ಶಬ್ದಗಳೆಲ್ಲಾ ಭೇದಿಸಿ ನಿಶ್ಯಬ್ದ ವೇದಿಯಾಗುವುದು. ಶಬ್ದಗಳ ಕ್ರಿಯೆ ನಿಂತು, ಶಬ್ದ ನಪುಂಸಕವಾಗವುದು. ಒಡಲಿಂದ ಬಂದ ಶಬ್ದ ಒಡಲು ಸೇರಿ ಭಸ್ಮವಾಗುವುದು.

**173**

**ನೆನೆವೆನೆ? ಮರೆದವನಲ್ಲ.**
**ನೆನೆಯನೆ? ಉದಾಸೀನಿಯಲ್ಲ.**
**ಕುರುಹೆಂಬೆನೆ? ತೆರಹಿಲ್ಲವಾಗಿ.**
**ಅರಿಯೆನಿನ್ನಾವ ಭಾವಂಗಳೆಂಬವನು.**
**ಎರಡಳಿದು ಒಂದುಳಿದ ಕಾರಣ**
**ನೆನೆಯಲಿಲ್ಲೆಂದನಂಬಿಗ ಚೌಡಯ್ಯ.**

ಕಾಯವೆಂಬುದು ಅರಿವಿನ ಕುರುಹು ಅರಿವಿನ ಉಪಕರಣ ಮನವೆಂಬ ಮರೆವು, ಕಾಯವನ್ನು ಆವರಿಸಿದೆ. ಅರಿವು ಕಾಯದಲ್ಲಿ ಭರಿತವಾಗಿದೆ. ಭರಿತವಾದ ಆ ಅರಿವೇ ಭಗವಂತ; ದೇವರು ; ಗುರುವೂ ಆಗಿದ್ದಾನೆ. ಆತ ಕಾಯವನ್ನು ಕೈ ಹಿಡಿದು ನಡೆಸುವ ಕರುಣಾಮಯಿ!

ಕಾಯವನ್ನು ಆವರಿಸಿದ ಮನ ಕಾಯವನ್ನು ಹಿಡಿದು ದೇವರನ್ನು ಪೂಜಿಸುವುದು ಪ್ರಾರ್ಥಿಸುವುದು ಬಿಟ್ಟಿಲ್ಲ. ಆತನನ್ನು ನೆನೆಯುವುದು ಬಿಟ್ಟಿಲ್ಲ. ಆದರೆ ಆತ ಕಾಯವನ್ನು ಎಂದೂ ಮರೆತವನಲ್ಲ. ಕ್ಷಣಕ್ಷಣಕ್ಕೂ ಅದರೊಂದಿಗಿದ್ದಾನೆ. ಕಾಯದ ಕಣಕಣದಲ್ಲಿ ನಾನಿದ್ದೇನೆ ಎಂದು ಸಾರಿ ಹೇಳುತ್ತಿದ್ದಾನೆ.

ಕಾಯದೊಡೆಯನ ಭಾಷೆ ಕಾಯವನ್ನು ಆವರಿಸಿದ ಮನಕ್ಕೆ ತಿಳಿಯುತ್ತಿಲ್ಲ. ಕಾಯದೊಂದಿಗೆ ಭಾವದಿಂದ ಆರಾಧಿಸುವ ಮನದ ಪೂಜೆಗೆ ಕಾಯದೊಡೆಯ ಕರುಣೆ ತೋರುತ್ತಿಲ್ಲ. ಏಕೆಂದರೆ ಮನ ಪೂಜೆ ಮಾಡುವುದು ಹೊರಗಿನ ದೇವರನ್ನು ನೆನೆವನೆ? ಮರೆದವನಲ್ಲ. ನೆನೆಯನೆ? ಉದಾಸೀನಿಯಲ್ಲ. ಕುರುಹೆಂದು ಹೇಳಲು ಹೋದರೆ ಕಣಕಣದಲ್ಲಿ ಭರಿತನಾಗಿದ್ದಾನೆ. ಅರಿಯೆನು ಇನ್ನಾವ ಭಾವಂಗಳಲ್ಲಿ ನೆನೆಯಬೇಕೆಂಬುದನ್ನು ಎಂದು ಮನ

ಚಿಂತಿಸಿದರೂ ಕೂಡ ಕಾಯದೊಡೆಯನಿಗೆ ಕರುಣೆ ಬರುತ್ತಿಲ್ಲ.

ಎರಡಳಿದು ಒಂದುಳಿದ ಕಾರಣ ನೆನೆಯಲಿಲ್ಲೆಂದ ನಂಬಿಗ ಚೌಡಯ್ಯ :

ಓದುಗರಿಗೆ ಬಹಳ ಸುಲಭವಾದ ಸುಂದರವಾದ ಸೂತ್ರವನ್ನು ಕರುಣಿಸಿದ್ದಾರೆ ಅಂಬಿಗರ ಚೌಡಯ್ಯ ಶರಣರು. ಶರಣರು ಕಾಯ ದೊಡೆಯನಂತಲ್ಲ; ಸಕಲ ಕಾಯಗಳ ಕರುಣಾಮಯಿಗಳವರು. ಸಕಲ ಕಾಯಗಳನ್ನು ಕೈಲಾಸ ಮಾಡಿದ ಸಿದ್ದಿ ಪುರುಷರಿವರು. ಕಾಯದಲ್ಲಿ ಅರಿವು ಇದೆ. ಮನವೂ ಇದೆ. ಇವೆರಡಕ್ಕೆ ಕಾಯ ಉಪಕರಣವಾಗಿದೆ. ಮನ ಮೈ ಮರೆತು ಶಾಸ್ತ್ರದಲ್ಲಿ ಪುರಾಣದಲ್ಲಿ ವೇದ ಉಪನಿಷತ್ತುಗಳಲ್ಲಿ ಭಗವದ್ಗೀತೆ. ಬೈಬಲ್ ಕುರಾನ್‌ಗಳಲ್ಲಿ ಭಗವಂತನನ್ನು ಹುಡುಕುತ್ತಲಿದೆ. ಮನಕ್ಕೆ ಶಾಸ್ತ್ರದ ಈ ಅರಿವು ಉಂಟಾಗಿದೆ. ಆದರೆ ಹುಡುಕುವ ಜಾಗ ಬೇರೆ.

ಮನಕ್ಕೆ ಶಾಸ್ತ್ರ ಕರಗತವಾದರೆ ಭಗವಂತ ಸಿಗುತ್ತಾನೆಯೇ? ಸಿಗುವುದಿಲ್ಲ. ಹುಡುಕುವ ದಾರಿ ಇನ್ನೂ ದೂರವಾಗುತ್ತದೆ. ಶಾಸ್ತ್ರ ಸಿದ್ಧಿಯಾಗಿ ಮನ ಅರಿವಿನ ಅಹಂಕಾರಿಯಾಗುತ್ತದೆ. ಅರಿವಿದ್ದರೇನಂತೆ? ಅದು ಶಾಸ್ತ್ರದ ಅರಿವು. ಅದೇನಿದ್ದರೂ ಭಗವಂತನ ಹತ್ತಿರ ಹೋಗುವ ದಾರಿ. ಆ ದಾರಿಯನ್ನು ಹೇಳುವ ಶಾಸ್ತ್ರಗಳನ್ನೇ ಭಗವಂತ ಎಂದು ಕರೆಯಬಹುದೇ?

ಮನ, ತಾನು ಸಂಪಾದಿಸಿಕೊಂಡ ಅರಿವು. ಇವೆರಡೂ ಅಳಿದಾಗ ಕಾಯ ಕಾಯದಲ್ಲಿ ಭರಿತವಾದ ಭಗವಂತ ಮಾತ್ರ ಉಳಿಯುತ್ತಾನೆ. ಆಗ ಯಾರನ್ನೂ ನೆನೆವುದು.!

**174**

**ನೇಮಸ್ಥನೆಂಬವ ಕ್ರೂರಕರ್ಮಿ, ಶೀಲವಂತನೆಂಬವ ಸಂದೇಹಧಾರಿ.**
**ಭಾಷೆವಂತನೆಂಬವ ಬ್ರಹ್ಮೇತಿಕಾರ.**
**ಇವರು ಮೂವರು ಕುಳ್ಳಿರ್ದಲ್ಲಿ ಕುಳ್ಳಿರಲಾಗದು.**
**ಇವರು ಹೋದ ಬಟ್ಟೆಯ ಹೊಗಲಾಗದು.**
**ಇವರು ಮೂವರಿಗೂ ಗುರುವಿಲ್ಲ, ಲಿಂಗವಿಲ್ಲೆಂದಾತ ನಂಬಿಗ ಚೌಡಯ್ಯ .**

ನೇಮ ಮಾಡುವವ ಕ್ರೂರಕರ್ಮಿ, ಶೀಲವಂತ ಸಂದೇಹಧಾರಿ. ಭಾಷೆವಂತನೆಂಬವ ಬ್ರಹ್ಮೇತಿಕಾರ ಅಂದರೆ ಬ್ರಾಹ್ಮಣನನ್ನು ಹತ್ಯೆ ಮಾಡುವವ. ಇವರು ಮೂವರು ಕುಳಿತ ಜಾಗದಲ್ಲಿ ಕುಳಿತುಕೊಳ್ಳಲಾಗದು. ಇವರು ಮೂವರು ಹೋದ ಹಾದಿಯಲ್ಲಿ ನಡೆಯಲಾಗದು. ಏಕೆಂದರೆ ಇವರಿಗೆ ಗುರುವಿಲ್ಲ, ಲಿಂಗವಿಲ್ಲ ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಈ ಮೂರೂ ಕಾಯಗಳಿಗೆ ಕಾರಣವಾದದ್ದು ಮನ; ತನುವಲ್ಲ ! ತನುವನ್ನು ಹಿಡಿದು ಗುರುತಿಸುವುದು ಲೋಕದ ನಿಯಮ. ಜ್ಞಾನಿ ಹಾಗಲ್ಲ. ಜ್ಞಾನಿಗೆ ಸಕಲ ತನುಗಳೂ ತನ್ನಂತೆಯೇ ಕಾಣುತ್ತವೆ.ತಾನು ನಿರೋಗಿ, ಸಕಲ ತನುಗಳು ಕೂಡಾ ನಿರೋಗಿಯೇ ಆಗಿವೆ. ಆದರೆ ಮನವೆಂಬ ವ್ಯಾಧಿ ತನುವನ್ನು ಆವರಿಸಿಕೊಂಡಿದ್ದರಿಂದ ತನು ರೋಗಿಯಂತೆ ಲೋಕಕ್ಕೆ ಕಾಣುತ್ತದೆ. ಹೀಗಾಗಿ ಲೋಕದ ಜನ ತನುವನ್ನು ಹೊಗಳುತ್ತಾರೆ. ತನುವನ್ನು ನಿಂದಿಸುತ್ತಾರೆ. ತನುವಿಗೆ ಶಿಕ್ಷೆ ವಿಧಿಸುತ್ತಾರೆ.

ತನು ತನುವನ್ನು ನಿಂದಿಸುವುದು ಹೊಗಳುವುದು ಶಿಕ್ಷಿಸುವುದು ಎಂದರೇನೆಂದು ತನುವಿಗೆ ತಿಳಿಯುವುದಿಲ್ಲ. ಏಕೆಂದರೆ ಮನಕ್ಕೆ ಅದು ಉಪಕರಣವಾಗಿದೆ. ತನು ಜ್ಞಾನಕ್ಕೆ

ಉಪಕರಣವಾಗಬೇಕಿತ್ತು .ಇದು ಸಾಧ್ಯವಾಗಬೇಕಾದರೆ ಮನ ಜ್ಞಾನದ ಮೊರೆ ಹೋಗಬೇಕು. ಹಾಗೆ ಜ್ಞಾನಕ್ಕೆ ಮೊರೆ ಹೋಗದೆ ನೇಮಕ್ಕೆ ಮೊರೆ ಹೋಗುತ್ತದೆ.

ನೇಮ ಮಾಡದ ತನುವನ್ನು ನೇಮ ಮಾಡುವ ತನು ಸೇರುವುದಿಲ್ಲ. ಮಡಿ, ಸ್ನಾನ, ಪೂಜೆ, ಪುಣ್ಯಕ್ಷೇತ್ರಗಳ ದರ್ಶನ, ದೇವಾಲಯದ ಪ್ರದಕ್ಷಿಣೆ ಊಟ ಉಡಿಗೆ ತೊಡಿಗೆ ಗಂಧ ತಿಲಕ ಜನಿವಾರ ಲಿಂಗ ಶಿಲುಬೆ ಗಡ್ಡ ಬಿಡುವುದು ನಿಲುವಂಗಿ ಧರಿಸಿ ಪ್ರಾರ್ಥಿಸುವುದು ಮುಂತಾದ ಗೋಚರದ ಆಚಾರಗಳಿಗೆ ತನುವನ್ನು ಬಂಧಿಯಾಗಿಸಿ ಮನ ತನುವಿನೊಂದಿಗೆ ಸುಖಿಸುತ್ತದೆ. ಈ ಆಚಾರಗಳಿಂದ ಸುಖಪಡುವ ಮೂಲಕ ಮನ ತನುವಿಗೆ ಘೋರ ಶಿಕ್ಷೆ ಕೊಡುತ್ತದೆ. ನಿರಪರಾಧಿ ತನುವಿಗೆ ಶಿಕ್ಷೆ ಕೊಡುವ ಕ್ರೂರಿಮನವನ್ನು ಕ್ರೂರಿಕರ್ಮಿ ಎಂದು ನುಡಿದಿದ್ದಾರೆ.

ಶೀಲ ಶಂಕಿಸಿ ರೇಣುಕಾ ಮಾತೆಗೆ ಘೋರ ಶಿಕ್ಷೆ ವಿಧಿಸುವ ಜಮದಗ್ನಿ ಸಂದೇಹಧಾರಿ. ತಾರಾ ಅರುಂಧತಿಯ ಪತಿಯರು ಕೂಡಾ ಹೀಗೆಯೇ ಶೀಲ ಶಂಕಿಸಿದರು. ಶೀಲ ಎನ್ನುವುದು ಹೋಗುವುದು ಅಲ್ಲ ; ಸಂಪಾದನೆ ಮಾಡುವುದೂ ಅಲ್ಲ ; ಅದನ್ನು ಯಾರೂ ಕಳೆದುಕೊಳ್ಳಲು ಕೂಡಾ ಬರುವುದಿಲ್ಲ.

ಶೀಲ ಎನ್ನುವುದು ತನುವಿನ ಜ್ಞಾನ. ಅದು ತೊಳೆದ ಬಂಗಾರದಂತೆ ಯಾರೂ ಬಳಸದೆ ಥಳ ಥಳನೆ ಹೊಳೆಯುತ್ತಲಿದೆ. ಅದು ಕೆಡುವ ವಸ್ತುವಲ್ಲ. ಗಳಿಸಿಕೊಳ್ಳುವ ವಸ್ತುವೂ ಅಲ್ಲ. ಇತರರಿಂದ ಸಂಗ್ರಹ ಮಾಡುವ ವಸ್ತುವೂ ಅಲ್ಲ.

ರೇಣುಕಾ ಮಾತೆಯನ್ನು ಶಂಕಿಸಿ ಕುಪಿತನಾದ ಜಮದಗ್ನಿ ಶೀಲ ಕಳೆದುಕೊಂಡನೊ ? ಏನು ರೇಣುಕಾ ಮಾತೆ ಶೀಲ ಕಳೆದುಕೊಂಡಳೋ ? ಸೀತಾಮಾತೆ ಶೀಲ ಕಳೆದುಕೊಂಡಳೋ ? ಏನು ಶಂಕೆ ಮಾಡಿದ ರಾಮ ಶೀಲ ಕಳೆದುಕೊಂಡನೊ ?

ಶೀಲ ಕಳೆದುಕೊಳ್ಳುವುದು ತನುವನ್ನು ಆವರಿಸಿದ ಮನ ಎಂಬುದು ಜಮದಗ್ನಿಗೆ, ರಾಮನಿಗೆ ತಿಳಿಯಲಿಲ್ಲ. ಏಕೆಂದರೆ ಇವರಿಬ್ಬರೂ ಮನ ಉಳ್ಳವರು. ಲೋಕದ ಮಾತಿಗೆ ಬಲಿಯಾದವರು.

ಮನ ಸಂದೇಹದ ಸುಳಿಯಿಂದ ತನ್ನನ್ನು ತಾನು ಬಂಧಿಸಿಕೊಂಡಿದೆ. ತನುವನ್ನು ತನ್ನ ಸುಖಕ್ಕೆ ದುಃಖಕ್ಕೆ ಸಂದೇಹಕ್ಕೆ ಉಪಕರಣ ಮಾಡಿ, ತನುವಿನತ್ತ ತನ್ನ ಬೆರಳು ತೋರುತ್ತದೆ.

ಶರಣರು ವೇಶ್ಯೆಯರನ್ನು ಪುಣ್ಯಸ್ತ್ರೀ ಎಂದು ಕರೆದರು. ಋಷಿಮುನಿ ಜಮದಗ್ನಿ ತನ್ನ ಪೂಜೆಗೆ ನೀರು ತರುವಲ್ಲಿ ತಡವಾಯಿಯಿತೆಂದು ಶಂಕಿಸಿ ರೇಣುಕಾ ಮಾತೆಯ ಕತ್ತು ಕಡಿದು ಹಾಕಿದ. ಮರ್ಯಾದಾ ಪುರುಷೋತ್ತಮನೆನ್ನಿಸಿಕೊಂಡ ರಾಮ ಸೀತಾಮಾತೆಯ ಶೀಲ ಶಂಕಿಸಿ ಮರ್ಯಾದೆ ಕಳೆದುಕೊಂಡ. ವೇಶ್ಯೆಯರೇ ಶೀಲ ಕಳೆದುಕೊಳ್ಳಲು ಬರುವುದಿಲ್ಲ ಎಂದ ಮೇಲೆ ಉಳಿದ ವರು ಶೀಲ ಕಳೆದುಕೊಳ್ಳಲು ಅಥವಾ ಕಳೆಯಲು ಬರುತ್ತದೆಯೆ ?

''ಭಕ್ತರ ಕಂಡರೆ ಬೋಳರಪ್ಪಿರಯ್ಯಾ ; ಸವಣರ ಕಂಡಡೆ ಬತ್ತಲೆಯಪ್ಪಿರಯ್ಯಾ ; ಹಾರುವರ ಕಂಡರೆ ಹರಿನಾಮವೆಂಬಿರಯ್ಯಾ ; ಅವರವರ ಕಂಡಡೆ ಅವರವರಂತೆ. ಸೂಳೆಗೆ ಹುಟ್ಟಿದವರ ಎನಗೆ ತೋರದಿರಯ್ಯಾ . ಕೂಡಲ ಸಂಗಮದೇವರ ಪೂಜಿಸಿ ಅನ್ಯದೈವಂಗಳಿಗೆರಗಿ ಭಕ್ತರೆನಿಸಿಕೊಂಬ ಅಜ್ಞಾನಿಗಳ ನಾನೇನೆಂಬೆನಯ್ಯಾ'' ಎಂದಿದ್ದಾರೆ ಬಸವಣ್ಣನವರು. ಶೀಲ ಕಳೆದುಕೊಂಡ ಮನ ಊಸರವಳ್ಳಿಯಂತೆ. ತನು ರಾಮನದಾದರೇನು, ಋಷಿ ಮುನಿಗಳದಾದರೇನು ತನುವನ್ನು ಆವರಿಸಿದ ಮನ ಶೀಲ ಕಳೆದುಕೊಂಡ ಸಂದೇಹಿ ಅದು. ಮನದ ಶೀಲ ಮರಳಿ

ಬರುವುದು ಅದು ಜ್ಞಾನವನ್ನು ಅಪ್ಪಿಕೊಂಡಾಗ ಮಾತ್ರ .

**ಭಾಷೆವಂತರ ಬ್ರಹ್ಮೇತಿಕಾರ :**

ಪರಶುರಾಮ ತಂದೆಗೆ ಭಾಷೆಕೊಟ್ಟು ತಾಯಿಯ ರುಂಡ ಚೆಂಡಾಡಿದ. ಭೀಷ್ಮ ತಂದೆಗೆ ಕೊಟ್ಟ ಭಾಷೆಯನ್ನು ನಡೆಸಿಕೊಡಲು ದ್ರೌಪದಿಯ ವಸ್ತ್ರಾಪಹರಣವನ್ನೂ ಸಹಿಸಿಕೊಂಡ. ಕಣ್ಣಾರೆ ನೋಡಿದ. ಕಿವಿಯಾರೆ ಕೇಳಿದ. ರಾಮ ತಂದೆಗೆ ಭಾಷೆ ಕೊಟ್ಟು ಹದಿನಾಲ್ಕು ವರ್ಷ ವನವಾಸಕ್ಕೆ ನಡೆದ. ಇವರೆಲ್ಲ ಭಾಷೆಯನ್ನು ತಿಳಿಯದ ಬ್ರಹ್ಮೇತಿಕಾರರು. ಅಂದರೆ ಭಾಷೆಯನ್ನು ಸೃಷ್ಟಿಸಿದ ಬ್ರಹ್ಮನನ್ನೇ ಹತ್ಯೆ ಮಾಡಿದವರು.

ಭಾಷೆ ಎಂಬುದು ಬ್ರಹ್ಮನದು. 'ನಿಶ್ಯಬ್ದಂ ಬ್ರಹ್ಮಮುಚ್ಯತೆ' 'ಶಬ್ದಂ ಬ್ರಹ್ಮ' ಎನ್ನುತ್ತಾರೆ. ಭಾಷೆ ಬ್ರಹ್ಮನದಾದ ಮೇಲೆ ಅದನ್ನು ಮತ್ತೊಬ್ಬರಿಗೆ ಕೊಡಲು ಬರುತ್ತದೆಯೆ ? ಭಾಷೆ ಎಂಬುದು ತನುವಿನಲ್ಲಿ ತನ್ಮಯವಾದ ಸಂಪತ್ತು . ತನುವನ್ನು ಆವರಿಸಿದ ಭ್ರಮೆಯು ಸಂಪತ್ತಲ್ಲ. ಭ್ರಮಾಧೀನರಾದ ಪರಶುರಾಮ, ಭೀಷ್ಮ, ರಾಮ ಭಾಷೆಯನ್ನು ತಂದೆಗೆ ಮಾರಿದರು. ಬ್ರಹ್ಮನನ್ನು ಕೊಂದರು. ಇವರು ಮೂವರು ಕುಳ್ಳಿರ್ದಲ್ಲಿ ಕುಳ್ಳಿರಲಾಗದು. ಇವರು ಹೋದ ದಾರಿಯ ಹೊಗಲಾಗದು ಎನ್ನುತ್ತಾರೆ ಅಂಬಿಗರ ಚೌಡಯ್ಯ ಶರಣರು.

ಘಟ್ಟಿವಾಳಯ್ಯ ಶರಣರು ಜಮದಗ್ನಿಯಂತೆ ಹೆಂಡತಿಯ ಶೀಲ ಶಂಕಿಸಲಿಲ್ಲ. ತನುವನ್ನು ದಂಡಿಸಲಿಲ್ಲ. ಆನಂದದಿಂದ ಹೋಳಿಗೆ ಮಾಡಿಸಿ ಮರು ಮದುವೆ ಮಾಡಿಸಿಕೊಟ್ಟರು. ಶೀಲ ಕಳೆದುಕೊಂಡ ಮನವನ್ನು ದಂಡಿಸಿದರು. ಋಷಿ ಮುನಿಗಳ ದಾರಿ, ರಾಮನ ದಾರಿ ತುಳಿಯಲಾಗದು ಏಕೆಂದರೆ ಸಂದೇಹಧಾರಿಗಳಿವರು.

**175**

**ನೇಮಸ್ಥನೇನು ಬಲ್ಲನಯ್ಯ ಲಿಂಗದ ಕುರುಹ ?**
**ಸೂಳೆಯ ಮಗನೇನು ಬಲ್ಲನಯ್ಯ ತಂದೆಯ ಕುರುಹ ?**
**ಜಂಗಮದ ಅನುವ ತೊತ್ತಿನ ಮಗನೇನು ಬಲ್ಲನಯ್ಯ ?**
**ಇಂತಪ್ಪ ಅಂಗವೇ ಲಿಂಗ, ಲಿಂಗವೇ ಅಂಗ,**
**ಲಿಂಗವೇ ಜಂಗಮವು, ಜಂಗಮವೇ ಲಿಂಗವೆಂದರಿಯದವನ**
**ಭಕ್ತರೆಂದರೆ ಅಘೋರನರಕವೆಂದಾತ**
**ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.**

ಲೋಕದ ತುಂಬಾ ನೇಮ ಮಾಡುವ ಭಕ್ತರೇ ತುಂಬಿದ್ದಾರೆ. ಅವರು ಅರಿವಿನ ಕುರುಹನು ಅರಿಯರು. ಲಿಂಗವನು ಅರಿಯದೇ ಇಹರು. ಲಿಂಗವೆಂದರೆ ಅಂಗದ ಮೇಲೆ ಧರಿಸಿದ ಲಿಂಗ ಲಿಂಗವಲ್ಲ. ಅಂಗದಲ್ಲಿ ಸಂಗಮವಾದ ಅರಿವೆಂಬುದನು ಲೋಕದ ಜನ ಅರಿಯರು.

ಅಂಗದ ಮೇಲೆ ಕಟ್ಟಿಕೊಂಡ ಲಿಂಗವೇ ಲಿಂಗ. ಅದು ಎನಗೆ ಲಿಂಗ ತಂದೆ ಎಂದು ಪೂಜಿಸಲು ಹೋದರೆ ಅದು ಕಲ್ಲುಕುಟಿಗನಿಗೆ ಹುಟ್ಟಿದ ಲಿಂಗ. ಆ ಲಿಂಗವನ್ನೇ ಲಿಂಗ ತಂದೆ ಎಂದು ಪೂಜಿಸುವ ಮನಕ್ಕೇನು ಗೊತ್ತು ತಂದೆಯ ಪರಿಚಯ ? ಲಿಂಗ ತಂದೆಗೆ ಹುಟ್ಟಿ ತಂದೆಯನ್ನೇ ಮರೆತ ಮನವದು. ಪುನಃ ತಂದೆಯನ್ನು ಅರಿಯಲು ಹೋದರೆ ಆತ ಅಂಗದಲ್ಲಿಯೇ

ಸಂಗಮವಾಗಿದ್ದಾನೆ. ಹಾಗೆ ನೋಡಿದ ಅಂಗವೇ ಲಿಂಗ. ಲಿಂಗವೇ ಅಂಗ. ಲಿಂಗವೇ ಜಂಗಮವು ಜಂಗಮವೇ ಲಿಂಗ. ಹೀಗೆಂದು ಅನುಭವಕ್ಕೆ ತಂದುಕೊಳ್ಳದವರನ್ನು ಭಕ್ತರೆನ್ನಲು ಬರುತ್ತದೆಯೆ ? ಅಂತಹವನನ್ನು ಭಕ್ತನೆಂದು ಕರೆದರೆ ಅಘೋರ ನರಕಕ್ಕೆ ಗುರಿಯಾಗುತ್ತಾನೆ ಎನ್ನುತ್ತಾರೆ ಅಂಬಿಗರ ಚೌಡಯ್ಯ ಶರಣರು.

176

**ಪನ್ನಗಂಗೆ ನನ್ನಿಯ ಗಾರುಡವಲ್ಲದೆ ಮಿಕ್ಕಾದ ದ್ವಯಜಿಹ್ವೆಗಳಿಗುಂಟೆ ?**
**ತಿಳಿದ ಸದ್ಯೆವಂಗೆ ಸದ್ಭಕ್ತಿ ಸದಾಚಾರವಲ್ಲದೆ,**
**ವಿಶ್ವಾಸ ಘಾತಕಂಗೆ ಅಪ್ರಮಾಣಂಗೆ ಮುಕ್ತಿ ವಿರಕ್ತಿಯಿಲ್ಲ,**
**ಎಂದನಂಬಿಗ ಚೌಡಯ್ಯ .**

ಹಾವಿನ ಮೇಲೆ ಮಲಗಿದ ಪರಮಾತ್ಮನಿಗೆ ಗಾರುಡ ವಿದ್ಯೆಯ ಅವಶ್ಯಕತೆಯಿಲ್ಲ. ಉಳಿದವರಿಗೆ ಅದು ಸಾಧ್ಯವೆ ? ಅವರ ನಾಲಗೆ ಎರಡು. ಎರಡು ನಾಲಗೆಯುಳ್ಳವನನ್ನು ಪನ್ನಗ ಶಯನ ಎಂದು ಕರೆಯಲು ಸಾಧ್ಯವಿಲ್ಲ. ಮನವೆಂಬ ಹಾವು ಇದೆ. ಅವನ ಹಾವು ಅವನನ್ನು ಕಚ್ಚದೆ ಬಿಡುವುದಿಲ್ಲ.

ಹಾವನ್ನೇ ಆಭರಣ ಮಾಡಿಕೊಂಡ ನಾಗಭೂಷಣನೊಬ್ಬ. ಹಾವನ್ನೇ ಹಾಸಿಗೆ ಮಾಡಿಕೊಂಡ ಪನ್ನಗ ಮನವೆಂಬನೊಬ್ಬ. ಇವರಿಬ್ಬರೂ ಹಾವನ್ನು ಪಳಗಿಸಿದವರು. ಹರಿಗೆ ಹಾವು ಹಾಸಿಗೆಯಾಯಿತು. ಹರನಿಗೆ ಹಾವು ಆಭರಣವಾಯಿತು. ಅವರಿಬ್ಬರಂತೆ ಹಾವು ಸಕಲರ ತನುವಿನಲ್ಲಿಯೂ ಇದೆ. ತನುವನ್ನು ಆವರಿಸಿಕೊಂಡಿದೆ. ಅದಕ್ಕೆ ಮನವೆಂದು ಹೆಸರಿಸಿದ್ದಾರೆ. ಆ ಮನ ಹಾವಾಗಿ ಕಚ್ಚುತ್ತದೆ. ಹರಿಗೆ ಹಾಸಿಗೆಯಾಗಿದೆ. ಹರನ ಕೊರಳಿಗೆ ಆಭರಣವಾಗಿದೆ.

ತಿಳಿದ ಸದ್ಯೆವಂಗೆ ಮನ ಪನ್ನಗನಂತೆ ಹಾಸಿಗೆಯಾಗುತ್ತದೆ. ವಿಶ್ವಾಸ ಘಾತುಕನಿಗೆ ಅಪ್ರಮಾಣಿಕನಿಗೆ ಹೊರಳಿ ಹೊರಳಿ ಕಚ್ಚುತ್ತದೆ. ಮನದ ವಿಷ ಕಾಳಕೋಟ ಹಾವಿನ ವಿಷಕ್ಕಿಂತ ಅಧಿಕ. ದುರ್ಯೋಧನನನ್ನು ಮನವೆಂಬ ಹಾವು ಶಬ್ದದ ಮೂಲಕ ಕಚ್ಚಿ ಅವನ ನೂರು ಸಹೋದರರರು ಸತ್ತರು. ಗುರು ಆಚಾರ್ಯ ವರ್ಗ ಸತ್ತಿತು. ಹದಿನೆಂಟು ಅಕ್ಷೋಹಿಣಿ ಸೈನ್ಯ ಸರ್ವನಾಶವಾಯಿತು. ದ್ರೌಪದಿಯ ಶಬ್ದದ ಮೂಲಕ ಹಾವಿನ ಕಾಳಕೋಟ ವಿಷ ಜ್ವಾಲೆಯಾಗಿ ಕೆನ್ನಾಲಿಗೆ ಮೂಲಕ ಅವನನ್ನೇ ಕಚ್ಚಿ ಕಚ್ಚಿ ಸುಡುತ್ತಿತ್ತು .

ವಿಶ್ವಾಸ ಘಾತುಕರಿಗೆ ಅಪ್ರಮಾಣರಿಗೆ ಮುಕ್ತಿಯಿಲ್ಲ ; ವಿರಕ್ತಿಯಿಲ್ಲ. ತನ್ನನ್ನು ತಾನೇ ಘಾಸಿ ಮಾಡಿಕೊಳ್ಳುವ ಶಕ್ತಿ ತನಗೆ ಮಾತ್ರ ಇದೆ. ಹಾಗೆಯೇ ತನಗೆ ತಾನೇ ಉದ್ಧಾರ ಮಾಡಿಕೊಳ್ಳುವ ಶಕ್ತಿ ತನಗೆ ಮಾತ್ರ ಇದೆ. ತಿಳಿಯಬೇಕು. ತಿಳಿದು ಸದ್ಭಕ್ತಿ ಸದಾಚಾರ ಮೆರೆಯಬೇಕು.

177

**ಪರಧನ-ಪರಸತಿ-ಪರನಿಂದೆಗಳಿರೆ**
**ಮುಂದೆ ನರಕವು ಎಂದು ಗುರುವಾಕ್ಯ ಸಾರುತ್ತಿದೆ.**
**ಪರಧನ-ಪರಸತಿ-ಪರಭೂಮಿಗಳುಪಿ**

**ಹತವಾಗಿ ಹೋದ ದುರ್ಯೋಧನ.**
**ಹರಿವ ನದಿಯ ಮಿಂದು ಗೋದಾನ ಮಾಡುವ**
**ನರಕಿಗಳ ನುಡಿಯ ಕೇಳಲಾಗದು.**
**ಹದಿನಾಲ್ಕು ಲೋಕಕ್ಕೆ ಕರ್ತೃ ಶಿವನೊಬ್ಬನೇ**
**ಎಂದು ಶ್ರುತಿಗಳು ಪೊಗಳುತ್ತಿಹವು.**
**ಅರತ ದೇವರ ಪೂಜೆಯ ಮಾಡಿ, ಇಷ್ಟಲಿಂಗವ ಮರೆವ**
**ಮೂಳ ಹೊಲೆಯರಿಗೆ ಮುಕ್ತಿ ಆಗದೆಂದಾತ**
**ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.**

ಮುಕ್ತಿ ಎಂದರೆ ಅಜ್ಞಾನದಿಂದ ಹೊರಗೆ ಬರುವುದು. ಜ್ಞಾನದಿಂದ ಬದುಕುವುದು. ಪರಧನ-ಪರಸತಿಗಾಗಿ ಆಸೆ ಮಾಡದಿರುವುದು. ಪರನಿಂದೆಯಿಂದ ಮುಕ್ತನಾಗಿ ಪರಭೂಮಿಗೆ ಆಸೆ ಮಾಡದೆ ಗುರುವಾಕ್ಯವನ್ನು ಪಾಲಿಸುವುದು. ಹರಿಯುವ ನದಿಯಲ್ಲಿ ಮಿಂದು ಗೋದಾನ ಮಾಡು ಎಂದು ಹೇಳುವವ ಗುರುವಲ್ಲ. ಅವನ ಮಾತು ಕೇಳುವವ ಶಿಷ್ಯನೂ ಅಲ್ಲ. ಇವರಿಬ್ಬರೂ ಪರಧನ ಪರಸತಿಗೆ ಆಸೆ ಪಟ್ಟವರು. ಪರನಿಂದೆ ಮಾಡುತ್ತ ಆಯುಷ್ಯ ಕಳೆಯುವ ನರಕಿಗಳು. ಇವರಿಗೆ ಗುರುವಾಕ್ಯ ರುಚಿಸದು.

ಗುರುವೆಂದರೆ ಅಂತರಂಗದ ಅರಿವು. ಆ ಅರಿವಿಗೆ ಸ್ವಧನ ಮಾತ್ರ ಗೊತ್ತು. ಸ್ವಸತಿ ಮಾತ್ರ ಗೊತ್ತು. ಪರಧನ-ಪರಸತಿಯರು ಆ ಅರಿವೆಂಬ ಗುರುದೇವನಿಗೆ ಗೋಚರಿಸುವುದೇ ಇಲ್ಲ. ಪರಭೂಮಿಗೆ ಆತ ಇಷ್ಟಪಡುವುದೇ ಇಲ್ಲ. ಸಕಲವನ್ನು ಅರಿವಿನಿಂದ ನೋಡುತ್ತಾನೆ. ಆನಂದದಿಂದ ಪರಮಹಂಸನಂತೆ ಬದುಕುತ್ತಾನೆ.

**ಹದಿನಾಲ್ಕು ಲೋಕಕ್ಕೆ ಕರ್ತೃ ಶಿವನೊಬ್ಬನೇ ಎಂದು ಶ್ರುತಿಗಳು ಪೊಗಳುತ್ತಿಹವು :**

ಅಂತರಂಗದ ಅರಿವೇ ಗುರು. ಆ ಗುರುದೇವನೇ ಮಹಾದೇವ. ಆ ಮಹಾದೇವನೇ ಸದಾಶಿವ. ಅಂದ ಮೇಲೆ ಅಂತರಂಗದ ಅರಿವಿಗೂ ಅದನ್ನು ಅರಿಯುವ ನನಗೂ ಏನಾದರೂ ವ್ಯತ್ಯಾಸವಿದೆಯೆ ?

ಅಂಗದಲ್ಲಿಯೇ ಸಂಗಮವಾದ ಅರಿವಿಗೂ ಅಂಗವನ್ನು ಆವರಿಸಿಕೊಂಡ ನನಗೂ ಏನಾದರೂ ಅಂತರವಿದೆಯೆ ? ಎಂದು ನನ್ನಿಂದ ಯೋಚಿಸಲು ಹೋದರೆ ಇಲ್ಲ ಎನ್ನುವ ಉತ್ತರ ನನಗೆ ದೊರೆಯುತ್ತದೆ.

ಅರಿವೆಂಬ ಗುರುದೇವನ ಆಚಾರ ನನಗೆ ಹಿಡಿಸುತ್ತಿಲ್ಲ. ನನ್ನ ಆಚಾರ ಆತನಿಗೆ ಸರಿಬರುತ್ತಿಲ್ಲ. ಪರಧನ ಪರಸತಿ ಪರನಿಂದೆಗಳೆಂದರೆ ನಾನು ಎಂಬ ಅಹಂಕಾರಿ ಮನಕ್ಕೆ ಬಲು ಇಷ್ಟ. ಅರಿವು ಎಂಬ ಅಂತರಂಗದ ಗುರುವಿಗೆ ಬಲುಕಷ್ಟ. ಆತನ ಆಚಾರ ಅಗೋಚರ ಆಚಾರ. ನನ್ನ ಆಚಾರ ಗೋಚರದ ಆಚಾರ. ಹೀಗಾಗಿ ನನಗೂ ಗುರುದೇವನಿಗೂ ಬಹಳ ಅಂತರ. ಈ ಅಂತರವನ್ನು ತಲುಪಲು ಎಂಬತ್ನಾಲ್ಕು ಜನ್ಮಗಳೇ ಕಳೆದವು. ಆದರೂ ದಾರಿ ಸವೆಯಲೊಲ್ಲದು. ಗುರಿ ತಲುಪಲೊಲ್ಲದು.

ಅರಿವಿನ ಗುರಿ ತಲುಪಲೆಂದೇ ನಾನು ಎನ್ನುವ ಮನ ನಾನಾ ದೇವರನ್ನು ಆರಾಧಿಸುತ್ತದೆ. ಪರಧನ ಪರಸತಿ ಪರಭೂಮಿ ಪರನಿಂದೆಗೆಳೆಸಿ ದುರ್ಯೋಧನನಂತೆ ಕೀಚಕನಂತೆ ರಾವಣನಂತೆ ಸತ್ತೂ ಸತ್ತೂ ನರಕಿಯಂತೆ ಬದುಕುತ್ತದೆ. ಇಂತಹ ಮೂಳ ಹೊಲೆ ಮನಕ್ಕೆ ಮುಕ್ತಿ ಆಗಲು ಸಾಧ್ಯವೇ

ಇಲ್ಲ ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**178**

**ಪರಪುರುಷಾರ್ಥವನರಿಯದೆ ಕೆಟ್ಟ ನರಗುರಿಗಳು ನೀವು ಕೇಳಿರೋ :**
**ಪರಪುರುಷಾರ್ಥಕ್ಕೆ ಪ್ರಾಣವ ಕೊಟ್ಟವರುಂಟು.**
**ಮರಳಿ ಕೊಟ್ಟದ್ದಕ್ಕೆ ಕೀರ್ತಿ ದೇಹವ ಪಡೆದವರ**
**ಪರಿಯ ಕೇಳು ಎಲೇ ಮನವೇ :**
**ಪರಪುರುಷಾರ್ಥಿಯಾದರೆ, ವೀರವಿಕ್ರಮನಂತಾಗಬೇಕು,**
**ಪರಪುರುಷಾರ್ಥಿಯಾದರೆ, ಬಸವಕುಮಾರನಂತಾಗಬೇಕು,**
**ಪರಪುರುಷಾರ್ಥಿಯಾದರೆ, ಕಪೋತಪಕ್ಷಿಯಂತಾಗಬೇಕು,**
**ಇಂತೀ ಪರಪುರುಷಾರ್ಥಕ್ಕೆ ಪ್ರಾಣವ ಕೊಟ್ಟವರುಂಟು.**
**ಹಣವೇನು ದೊಡ್ಡಿತ್ತು ? ಹೆಣ್ಣೇನು ದೊಡ್ಡಿತ್ತು ?**
**ಮಣ್ಣೇನು ದೊಡ್ಡಿತ್ತು ? ಅನ್ನವೇನು ದೊಡ್ಡಿತ್ತು ?**
**ಇಂತಿವುಗಳೊಳು ಒಂದನಾದರೂ**
**ಪರಪುರುಷಾರ್ಥಕೆ ನೀಡದೆ ಮಾಡದೆ,**
**ತನ್ನ ಶರೀರವ ಹೊರೆದುಕೊಂಡು ಬದುಕುವೆನೆಂಬ**
**ಹೊಲೆ ಮಾದಿಗರುಗಳಿಗೆ ಇಹ-ಪರ ನಾಸ್ತಿ**
**ಎಂದಾತ ನಮ್ಮ ಅಂಬಿಗರ ಚೌಡಯ್ಯ .**

ತನುವೆಂಬುದು ಒಂದು ಕುರಿ. ಅದಕ್ಕೆ ಪ್ರಾಣವಿದೆ. ಜೀವವಿದೆ. ಆದರೂ ಸ್ವತಂತ್ರವಲ್ಲ. ಪರಮ ಪುರುಷನ ಸ್ವಾಧೀನದಲ್ಲಿರಬೇಕಾದ ಕುರಿ ಮನದ ಆಧೀನದಲ್ಲಿದೆ. ಅದಕ್ಕಾಗಿಯೇ ಅಂಬಿಗರ ಚೌಡಯ್ಯ ಶರಣರು ತನುವನ್ನು ಕುರಿ ನರಕುರಿ ಎಂದು ಕರೆದರು.

ಪರಮ ಪುರುಷನನ್ನು ಅರಿಯದ ಮನ ತಾನೇ ಪುರುಷಾರ್ಥವನ್ನು ಮರೆಯಲು ಹೋಗುತ್ತದೆ. ಕೀರ್ತಿ ಪಡೆಯಲು ಹೋಗುತ್ತದೆ. ಇದರ ಕೀರ್ತಿ ಏನಿದ್ದರೂ ಹಣಕೊಟ್ಟು ಪುಣ್ಯ ಕಟ್ಟಿಕೊಳ್ಳುವುದು. ಹೆಣ್ಣು ಮಣ್ಣು ಕೊಟ್ಟು ಪುಣ್ಯ ಕಟ್ಟಿಕೊಳ್ಳುವುದು. ಭಾಷೆ ಕೊಟ್ಟು ಪುಣ್ಯ ಕಟ್ಟಿಕೊಳ್ಳುವುದು.

ಭೂಮಿ ಹೇಮ ಕಾಮಿನಿ ಎಂಬುದನ್ನು ಕೊಡಲು ಅದೇನು ತನ್ನ ಸ್ವತ್ತೇ ? ಅದನ್ನು ತಾನು ತಯಾರಿಸಿದನೆ. ಹಸು ಹಾಲು ಕೊಡುವುದು ತನ್ನ ಕರುವಿಗಾಗಿ. ಆ ಹಾಲನ್ನು ಬೆಣ್ಣೆ ತುಪ್ಪ ಮಸರು ಮಜ್ಜಿಗೆ ಅದರ ಚರ್ಮವನ್ನು ಆ ಹಸು ತನಗೆ ಕೊಟ್ಟು ಪುಣ್ಯ ಕಟ್ಟಿಕೊಂಡಂತೆ ; ತಾನೇನಾದರೂ ಇತರರಿಗೆ ತನ್ನ ವಸ್ತುಗಳನ್ನು ಕೊಡಲು ಬರುತ್ತದೆಯೆ ? ಭೂಮಿ ತನ್ನದಲ್ಲ, ಹೇಮವೂ ತನ್ನದಲ್ಲ, ಕಾಮಿನಿಯೂ ತನ್ನವಳಲ್ಲ; ಅಂದ ಮೇಲೆ ತಾನು ಕೊಟ್ಟು ಪರಪುರುಷಾರ್ಥವನ್ನು ಮೆರೆಯಬೇಕು?

ವಿಕ್ರಮನಂತೆ ಕಪೋತ ಪಕ್ಷಿಯಂತೆ ಪ್ರಾಣ ಕೊಡಲು ಸಾಧ್ಯವೇ ? ಹಾಗೆ ಕೊಟ್ಟು ಮತ್ತೆ ಬದುಕಿದವರ ಕತೆಯುಂಟು. ಆಯುಷ್ಯದ ವರ ಪಡೆದವರ ಕತೆಯುಂಟು. ಮಗನನ್ನು ಕಳೆದುಕೊಂಡ ಸಿರಿಯಾಳ ಮತ್ತೆ ಪಡೆಯಲಿಲ್ಲವೆ ? ಕಣ್ಣು ಕಳೆದುಕೊಂಡ ಕಣ್ಣಪ್ಪ ಮತ್ತೆ

ಪಡೆಯಲಿಲ್ಲವೆ ? ಇದೊಂದು ಬೆಡಗು. ಸತ್ಯವಲ್ಲ.

ಬೇಡದ ಕಣ್ಣನ್ನು ನಿಜಕಣ್ಣಿಗೆ ಕೊಟ್ಟು ಆ ನಿಜ ಕಣ್ಣನ್ನು ತಾನು ಪಡೆದ ಕಣ್ಣಪ್ಪ! ಮೋಹವೆಂಬ ಮಗನನ್ನು ಜಂಗಮನಿಗೆ ಉಣಬಡಿಸಿ ನಿಜ ಮಗನನ್ನು ಪಡೆದ ಸಿರಿಯಾಳ. ಇದು ಶರಣರ ಮಾತು. ಜ್ಞಾನಿಗಳ ಮಾತು. ತನುವಿನ ಅಜ್ಞಾನವನ್ನು ತನುವಿನ ಜ್ಞಾನಕ್ಕೆ ಬಲಿಕೊಡುವ ಜಾಣ ಮಾತು. ಇಂತಹ ಮಾತನ್ನು ಮಾತೆನ್ನಲು ಬರುವುದಿಲ್ಲ. ತನ್ನ ಶರೀರ ಹೊಡೆದುಕೊಂಡು ಬದುಕುವ ನರಕುರಿಗಳಿಗೆ ತಿಳಿಯದ ಮಾತು.

**179**

**ಪಿಸಿತ ನಡುವೆ ಇದ್ದ ಕಿರಾತಂಗೆ ಹೊಸ ವಾಸನೆಯ ಬಲ್ಲನೆ ?**
**ಸಕಲ ವ್ಯಾಪಾರದಲ್ಲಿ ಮೂಡಿ ಮುಳುಗುವವ ಸುಖದ ತದ್ರೂಪರ ಬಲ್ಲನೆ ?**
**ವಿಕಳತೆಗೊಂಡು ಅಖಿಳರ ಕೂಡಿ ಸುಖದುಃಖದಲ್ಲಿ ಬೇವವಂಗೆ**
**ಅಕಳಂಕತನವುಂಟೆ ? ಎಂದನಂಬಿಗ ಚೌಡಯ್ಯ.**

ಮಾಂಸದ ನಡುವೆ ಇದ್ದ ಕಟುಕ ಪರಿಮಳವ ಬಲ್ಲನೆ ? ಸಕಲ ವ್ಯಾಪಾರದಲ್ಲಿ ನಿರತನಾದವನು ನಿಜ ಸುಖಿಗಳ ತದ್ರೂಪವ ಬಲ್ಲನೆ ? ವಿಕಳತೆಗೊಂಡು ಸುಖ ದುಃಖದಲ್ಲಿ ಬೇಯುವವನಿಗೆ ಅಕಳಂಕತನವುಂಟೆ ? ಎಂದು ಪ್ರಶ್ನಿಸಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ತನು ಒಂದು ಮಾಂಸದ ಮುದ್ದೆ. ಮಾಂಸ ಮಾಂಸಕ್ಕೆ ಬಲಿಯಾಗುತ್ತದೆ. ಮಾಂಸವೆಂದರೆ ಮಾಂಸಕ್ಕೆ ಬಲು ಇಷ್ಟ. ಚರ್ಮ ಚರ್ಮಕ್ಕೆ ಬಲಿಯಾಗುತ್ತದೆ. ಚರ್ಮವೆಂದರೆ ಚರ್ಮಕ್ಕೆ ಬಲು ಇಷ್ಟ. ತನು ಮಾಂಸ. ಅನ್ಯ ತನುಗಳು ತನುವಿಗೆ ಬಲು ಇಷ್ಟ. ತನುವಿಗೆ ತನುವೆಂದರೆ ಬಲು ಕಷ್ಟ. ತನುವಿನಲ್ಲಿಯೇ ವೈರತ್ವ, ಮಿತ್ರತ್ವ, ಹಗೆತನ, ದ್ವೇಷ, ಅಸೂಯೆಗಳು ಒಡಮೂಡಿವೆ. ತನುವಿನಲ್ಲಿ ತನ್ಮಯವಾದ ಅರಿವಿನ ಪರಿಮಳ ತನುವಿಗೇ ಗೊತ್ತಾಗದಷ್ಟು ತನುವನ್ನು ಆರಿಷಡ್ವರ್ಗಗಳು ಮುತ್ತಿ ಕೊಂಡಿವೆ. ಕ್ಷಣ ಕ್ಷಣಕ್ಕೂ ಸುಟ್ಟು ತನುವಿನ ಮಾಂಸ ಬೆಂಕಿಯಿಲ್ಲದೆ ಬೇಯುವಂತೆ ಮಾಡಿವೆ.

ತನುವಿನಲ್ಲಿ ತನ್ಮಯವಾದ ಅರಿವಿನ ಪರಿಮಳ ತನುವಿಗೆ ದಕ್ಕಬೇಕಾದರೆ ತನುವಿನ ವ್ಯವಹಾರ ನಿಲ್ಲಬೇಕು. ತನುವು ಮಾಂಸದ ವಾಸನೆಗಾಗಿ ತನ್ನ ನಾಲಿಗೆ ಚಾಚದೆ, ಅರಿವಿನ ಪರಿಮಳಕ್ಕಾಗಿ ಹಾತೊರೆಯಬೇಕು.

ಕೆಸರಿನಲ್ಲಿ ಕೆಸರನೆ ಉಂಡು ಕಮಲ ಕೆಸರು ಮೆತ್ತಿಕೊಳ್ಳದೆ ಹೇಗೆ ಅರಳಿದೆಯೋ? ಹಾಗೆಯೇ ಮಾಂಸಮಯವಾದ ರಕ್ತಸಿಕ್ತವಾದ ತನುವಿನಲ್ಲಿ ಅರಿವಿನ ಪರಿಮಳ ಅರಳುತ್ತದೆ. ಅಲ್ಲಿ ಸುಖ ದುಃಖಗಳಿಲ್ಲ. ಬರೀ ಸುಖದ ಸುಖ. ಸುಖ ದುಃಖಗಳಿಗೆ ಮೀರಿದ ಸುಖದ ಸುಖ. ಆ ಅರಿವಿನ ಸುಖಕ್ಕಾಗಿ ತನು ಮನದ ಸಕಲ ವ್ಯಾಪಾರಗಳನ್ನು ಮರೆತು ಘನದಲ್ಲಿ ಬೆರೆಯಬೇಕು.

**180**

**ಪುಣ್ಯ ಪಾಪ ವಿರಹಿತ ಕಂಡಾ, ಕ್ರೀಯೇಕೆ?**
**ಒಬ್ಬನೇ ಕಂಡಾ, ಆರು ದರ್ಶನವೇಕೆ?**

**ಮಾಟವೆಂಬುದೆಲ್ಲವು ಕೋಟಲೆ ಎಂದು ಕಳದು**
**ದೂಟಿಸಿ ನುಡಿದಾತನಂಬಿಗ ಚೌಡಯ್ಯ**

ತನುವಿನಿಂದಲೇ ಆರು ದರ್ಶನಗಳು ಸೃಷ್ಟಿಯಾದವು. ಪುಣ್ಯ ಪಾಪ ಸೃಷ್ಟಿಯಾಯಿತು. ಮಂತ್ರ ತೀರ್ಥ ಯಜ್ಞ ವೇದಗಳು ಸೃಷ್ಟಿಯಾದವು. ಆದರೂ ತನುವೆಂದರೇನೆಂದು ತನುವಿಗೆ ಗೊತ್ತಾಗಲಿಲ್ಲ. ತನುವಿನಿಂದಲೇ ಹೊರಬಂದ ಶಾಸ್ತ್ರಗಳೆಲ್ಲ ತನುವಿಗೆ ಗೊತ್ತಾಯಿತು. ತನುವಿನಿಂದ ಹೊರ ಬಂದ ಶಾಸ್ತ್ರಗಳೇ ತನುವಿಗೆ ಪ್ರಧಾನವಾದವು. ಇದು ತನುವಿನ ದುರ್ದೈವ.

ನ ಪುಣ್ಯಂ ನ ಪಾಪಂ ನ ಸೌಖ್ಯಂ ನ ದುಃಖಂ । ನ ಮಂತ್ರೋ ನ ತೀರ್ಥಂನ ವೇದಾ ನ ಯಜ್ಞಾಃ ಅಹಂ ಭೋಜನಂ ನೈವ ಭೋಜ್ಯಂ ನ ಭೋಕ್ತಾ । ಚಿದಾನಂದ ರೂಪ ಶಿವೋಹಂ ಶಿವೋಹಂ ॥ ಎಂದು ಶ್ರೀ ಶಂಕರರು ತಮ್ಮ ನಿರ್ವಾಣ ಷಷ್ಟಕದಲ್ಲಿ ಹಾಡಿದ್ದಾರೆ.

ಶಂಕರರಾದರೇನು, ಚೌಡಯ್ಯ ಶರಣರಾದರೇನು? ಬಸವಾದಿ ಶರಣ ದಾಸವರೇಣ್ಯರಾದರೇನು? ತಮಗೆ ನಿರ್ವಾಣವಾದ ಮೇಲೆ ಇದ್ದ ಸತ್ಯವನ್ನೇ ಹೇಳಬೇಕಲ್ಲ. ಆ ಎಲ್ಲಾ ಸತ್ಯ ಒಂದೇ ಆಗಿದೆ. ಅದು ತನುವಿನಲ್ಲಿಯೇ ಇದ್ದ ಸಂಪತ್ತು . ತನುವಿಗೆ ಹೊಳೆದ ಸಂಪತ್ತು . ತನುವಿನಿಂದಲೇ ಹೊರ ಬಂದ ಸಂಪತ್ತು . ಅದನ್ನು ಹೇಗೆ ಬಳಸಿಕೊಳ್ಳಬೇಕೆಂಬುದನ್ನು ಹೊಳೆದ ತನುಗಳು ಶಾಸ್ತ್ರ ರೂಪದಲ್ಲಿ ಹೇಳಿದವು. ಆ ಎಲ್ಲಾ ಶಾಸ್ತ್ರಗಳು ತನುವಿನಿಂದಲೇ ಹೊರಬಂದವು. ತನುವಿಗಾಗಿ ಹೊರ ಬಂದವು. ತನುವನ್ನೇ ಮೀರಿ ನಿಂತು ತನುವಿನಿಂದಲೇ ಪೂಜಿಸಿಕೊಂಡವು. ಇದು ತನುವಿನ ಕರ್ಮ !

**ಮಾಟವೆಂಬುದೆಲ್ಲವು ಕೋಟಲೆ ಎಂದು ಕಳದು ದೂಟಿಸಿ ನುಡಿದಾತನಂಬಿಗ ಚೌಡಯ್ಯ:**

ತನು ತನುವಿಗಾಗಿ ಮಾಡುವುದು ಪುಣ್ಯವೇ? ತನು ತನುವಿಗಾಗಿ ಮಾಡುವುದು ಪಾಪವೇ? ತನು ತನುಗಳೆಲ್ಲ ಒಂದೇ ಎಂದು ತಿಳಿದರೆ ಪುಣ್ಯವಿಲ್ಲ ಪಾಪವಿಲ್ಲ. ಪುಣ್ಯ ಪಾಪ ಎಂಬುದು ತನುವನ್ನು ಆವರಿಸಿದ ಮನ ಮಾಡಿಕೊಂಡ ಮಾಟದ ಕೋಟಲೆ. ಮನವನ್ನು ಕಳೆದು ನೋಡಿದರೆ ತನು ಒಂದೇ. ತನುವಿನಲ್ಲಿ ತನ್ಮಯವಾದ ಅರಿವು ಒಂದೇ. ಅದರಿಂದಲೇ ಆರು ದರ್ಶನಗಳು ! ಸಕಲ ವೇದ ಶಾಸ್ತ್ರ ಪುರಾಣಗಳು. ಆಗಮ ಉಪನಿಷತ್ತುಗಳು. ಭಗವದ್ಗೀತೆ ಬೈಬಲ್ ಕುರಾನ್‌ಗಳು!

ಮನ ದೇವನಿಂದ ಉದ್ಭವವಾದ ಧರ್ಮಗ್ರಂಥಗಳೆಂದು ತಿಳಿಯಿತು. ದೇವನೇ ಬೇರೆ ತನುವೇ ಬೇರೆ ಎಂದು ತನುವಿನಿಂದ ಹೊರಬಂದ ಶಾಸ್ತ್ರ ಗಳಿಂದಲೇ ತನುವಿನ ಮೂಲಕ ಓದಿ ತನುವನ್ನೂ ಶಾಸ್ತ್ರವನ್ನೂ ಬೇರೆ ಬೇರೆ ಮಾಡಿತು. ಇದು ಮನದ ಮಾಟದ ಕೋಟಲೆ ಮನವನ್ನು ಮನದಿಂದಲೇ ಕಳೆಯಲು ಮನವೇ ಸಿದ್ಧವಾಗಬೇಕು. ಇದು ಸಾಧ್ಯವಾಗುವುದೇ ಇಲ್ಲ. ಏಕೆಂದರೆ ಮನ ಶಾಸ್ತ್ರವನ್ನು ಹಿಡಿದುಕೊಂಡು ಅದರ ಮೇಲೆ ಹತ್ತಿ ಕುಳಿತು ಸವಾರಿ ಮಾಡುತ್ತಲಿದೆ. ಅದಕ್ಕೆ ಭಗವದ್ಗೀತೆ ಬೈಬಲ್ ಕುರಾನ್‌ಗಳು ಹೇಳಿದ್ದು ವೇದವಾಕ್ಯ . ಅದಕ್ಕೆ ಅಪಚಾರವಾದರೆ ಅಪಚಾರ ಮಾಡಿದ ತನುವಿನ ಕತ್ತನ್ನೇ ಕತ್ತರಿಸುತ್ತದೆ. ಆ ತನುವಿನಿಂದಲೇ ತಾನು ಬಂದೆ ಎಂಬುದನ್ನು ಮರೆಯುತ್ತದೆ. ಇದು ಮನದ ಮಾಟದ ಕೋಟಲೆ ಇದನ್ನು ದೂರ ಸರಿಸಿ ನುಡಿಯುವುದು ಬಲು ಜಟಿಲ . ಚೌಡಯ್ಯ ಶರಣರಿಗೆ ಬಲು ಸರಳ!

181

**ಪುಷ್ಪವ ಕಂಡುದಕ್ಕೆ ಮತ್ತೆ ಮೂದಲೆ ಉಂಟೆ ?**
**ವ್ರತಗೆಟ್ಟವಂಗೆ, ಆಚಾರ ಭ್ರಷ್ಟಂಗೆ, ಪರಸತಿ ಪರಧನ ದುರ್ಭಿಕ್ಷಂಗೆ,**
**ಪರ ಅಪರವನರಿಯದ ಪಾತಕಂಗೆ**
**ಅಘೋರ ನರಕಕ್ಕೆಡೆಯಿಲ್ಲ ಎಂದನಂಬಿಗ ಚೌಡಯ್ಯ .**

ಕಂಡುಕೊಂಡ ಸತ್ಯ ಕಂಡುಕೊಂಡ ತನುವಿಗೆ ಮಾತ್ರ ಸುಖ ಕೊಡುತ್ತದೆ. ಆ ಸತ್ಯವನ್ನು ಮತ್ತೊಂದು ತನುವಿಗೆ ವಿವರಿಸುವುದಾಗಲಿ, ನಂಬಿಸುವುದಾಗಲಿ ಸಾಧ್ಯವಿಲ್ಲ. ಹಾಗೇನಾದರೂ ಮಾಡಬೇಕಾದರೆ, ಮತ್ತೊಂದು ತನುವಿಗೆ ಸತ್ಯ ಗೋಚರಕ್ಕೆ ಬರುವಂತೆ ಪ್ರಯತ್ನಿಸಬೇಕು. ಅದು ಬಲು ಜಟಿಲ ಕೆಲಸ.

ತನು ಕಂಡುಕೊಂಡ ಸತ್ಯವನ್ನು ಅನ್ಯ ತನುಗಳಿಗೆ ಹಂಚುವುದಕ್ಕಾಗಲಿ, ಸತ್ಯದ ಮಾಹಿತಿಯನ್ನು ನೀಡುವುದಕ್ಕಾಗಲಿ ಸಾಧ್ಯವಾಗುವುದಿಲ್ಲ. ಏಕೆಂದರೆ ಸಕಲ ತನುಗಳಲ್ಲಿಯೂ ಅರಿವಿನ ಸತ್ಯದ ಮೊಗ್ಗು ಇದೆ. ಅದು ಪುಷ್ಪವಾಗಿ ಅರಳಲಿಲ್ಲ, ಅಷ್ಟೆ. ಅದಕ್ಕೆ ಮನವೇ ಕಾರಣ. ಏಕೆಂದರೆ ಅದಕ್ಕೆ ಅರಳಬೇಕೆಂಬ ಅಥವಾ ಅರಳಿಸಬೇಕೆಂಬ ಆಸೆ ಅಂಕುರಿಸಿಲ್ಲ.

ಮನ ಹೊರಗಣ ಹೂವನ್ನು ನೋಡಿ ಸಂತಸಪಡುತ್ತದೆ. ಅದನ್ನು ಹಿರಿದು ತನ್ನ ಜುಟ್ಟಿಗೆ ಕಟ್ಟಿಕೊಂಡು ಆನಂದಪಡುತ್ತದೆ.

ತನುವೊಂದು ಮರ. ಅದರ ರೆಂಬೆಕೊಂಬೆಗಳಲ್ಲಿ ಮೊಗ್ಗು ಬಿಟ್ಟುಕೊಂಡಿದೆ. ಆ ಮೊಗ್ಗು ಬ್ರಹ್ಮಕಮಲವಾಗಿ ಅರಳಿ ಅರಿವಿನ ಪರಿಮಳ ದಶದಿಕ್ಕುಗಳಿಗೆ ಹರಡಬೇಕೆಂಬ ಇಚ್ಛೆ ಭ್ರಮಾಧೀನ ಮನಕ್ಕಿಲ್ಲ. ಏಕೆಂದರೆ ಅದು ವ್ರತಗೆಟ್ಟಿದೆ. ಆಚಾರ ಭ್ರಷ್ಟನಾಗಿದೆ. ಪರಸತಿ ಪರಧನ ಪರ ಪುಷ್ಪಕ್ಕೆ ಆಸೆ ಪಡುತ್ತಲಿದೆ. ಭಿಕ್ಷುಕನಂತೆ ಕೈ ಚಾಚುತ್ತಲಿದೆ. ಪರವೆಂದರೇನೆಂದು ಅರಿಯುತ್ತಿಲ್ಲ. ಅಪರವೆಂದರೇನೆಂದು ಅರಿಯುತ್ತಿಲ್ಲ. ಅಘೋರ ನರಕದಲ್ಲಿ ಆನಂದ ಪಡುತ್ತಲಿದೆ.

ನರಕದ ಬದುಕನ್ನೇ ಕಿತ್ತೆಸೆದರೆ ಸಾಕು ಅದರ ಹಿಂದೆಯೇ ಸ್ವರ್ಗವಿದೆ. ಭ್ರಮೆಯ ಹಿಂದೆಯೇ ಬ್ರಹ್ಮಕಮಲವಿದೆ. ಅದು ಕಂಡುದಕ್ಕೆ ಮತ್ತೆ ಮೂದಲೆ ಉಂಟೆ ? ಅದನ್ನು ವಿವರಿಸುವುದಾದರೂ ಹೇಗೆ ? ಅದಕ್ಕದೇ ಸಾಟಿ !

182

**ಪೃಥ್ವಿಯನೆತ್ತಿತ್ತು ಬಿಂದು,**
**ಬಿಂದುವನೆತ್ತಿತ್ತು ಶಬ್ದ.**
**ಶಬ್ದವನೆತ್ತಿತ್ತು ರೇಚಕ ಪೂರಕ ಕುಂಭಕ.**
**ಈ ರೇಚಕ ಪೂರಕ ಕುಂಭಕ, ಈಡ ಪಿಂಗಳ ಸುಷುಮ್ನವನೆತ್ತಿತ್ತು .**
**ಈ ಈಡ ಪಿಂಗಳ ಸುಷಮ್ನಯನೆತ್ತಿತ್ತು ರಜ್ಜು.**
**ರಜ್ಜುವನೆತ್ತಿತ್ತು ರೇಣು.**
**ಸಾಕಾರ ನಿರಾಕಾರ ಮೂರು ಲೋಕವ ನಿಲಿಸಿ ನೋಡೆ,**
**ಕಂಡೆನೆಂದಾತನಂಬಿಗರ ಚೌಡಯ್ಯ .**

ಜಲಬಿಂದುವೇ ಪೃಥ್ವಿಯಾಯಿತು. ಶಬ್ದವಾಯಿತು . ರೇಚಕ ಪೂರಕ ಕುಂಭಕವಾಯಿತು. ಈಡ ಪಿಂಗಳ ಸುಷುಮ್ನ ನಾಡಿಯಾಯಿತು. ಇವೆಲ್ಲವನ್ನು ಆ ಸೂತ್ರಧಾರನ ದಾರ ಎತ್ತಿತ್ತು . ಆ ದಾರವನ್ನು ಅರಿವಿನ ಪರಿಮಳದ ಧೂಳು ಎತ್ತಿತ್ತು. ಸಾಕಾರ ನಿರಾಕಾರವನ್ನು ನಿಲ್ಲಿಸಿ ನೋಡಲು ಅದೆಲ್ಲವೂ ತಾನೇ ಆಗಿತ್ತು .

ಜಲಬಿಂದುವಿನಲ್ಲಿ ಇಷ್ಟೆಲ್ಲ ಬಂಧಿಯಾಗಿದೆ. ಇದನ್ನು ನೋಡುವ ಶಕ್ತಿ ಜಲಬಿಂದುವಿಗೆ ಪ್ರಾಪ್ತಿಯಾಗಬೇಕು. ಏಕೆಂದರೆ ಅದು ಬಿಂದುವೂ ಆಗಿದೆ. ಅನಂತ ಸಾಗರವೂ ಆಗಿದೆ. ನದಿ ಕೆರೆ ಹಳ್ಳ ಬಾವಿಯಾಗಿದೆ. ಜಲಚರ ಉರಗ ಕೀಟ ಪಕ್ಷಿ ಪಶು ಸಸ್ಯ ಸಂಕುಲವಾಗಿದೆ. ಅನಂತದೊಂದಿಗೆ ಬೆರೆತು ಅನಂತವೇ ತಾನಾಗಿದೆ. ಭೂಮಿ ಅಗ್ನಿ ವಾಯು ಆಕಾಶವಾಗಿದೆ. ಬಿಂದು ಭೋರ್ಗರೆವ ಜಲವಾಗಿ ಪ್ರಪಂಚವೇ ತಾನಾಗಿ ಅಂಗದಲ್ಲಿ ಅಡಗಿ ಲಿಂಗಾಂಗವಾಗಿದೆ.

ಸಾಕಾರ ನಿರಾಕಾರವನ್ನು ನಿಲ್ಲಿಸಿ ನೋಡುವ ಶಕ್ತಿ ಬಿಂದುವಿಗೆ ಪಾಪ್ತವಾಗಬೇಕು. ಬಿಂದುವಿಗೆ ಶಾಸ್ತ್ರವನ್ನು ಯಾರು ಕಲಿಸಬೇಕು ? ಅದು ಅನಂತಕೋಟಿ ಶಾಸ್ತ್ರಗಳನ್ನು ಹುಟ್ಟು ಹಾಕಿದೆ. ಆ ಶಾಸ್ತ್ರಕ್ಕೆ ತಾನೇ ಮರುಳಾಗಿದೆ.

ಜಲ ಬಿಂದುವಿನಲ್ಲಿ ಏನಿಲ್ಲ ? ಇಷ್ಟೆಲ್ಲ ಇದ್ದು ಏನಿಲ್ಲದಂತೆ ಸುಮ್ಮನೆ ಕುಳಿತಿದೆ. ಇದರಲ್ಲಿ ಸಕಲ ಚರಾಚರವಡಗಿದೆ.ಮಾತು ಶಾಸ್ತ್ರ ಮೌನವೂ ಅಡಗಿದೆ. ಆಕಾರವೂ ಆಗಿದೆ. ನಿರಾಕಾರವೂ ಅಡಗಿದೆ.

ಬಿಂದುವಿನೊಳಗೆ ಅಡಗಿದ ಜಲಜನಕ ಆಮ್ಲಜನಕಗಳೆರಡೂ ಆಕಾರವಲ್ಲ. ಸೂತ್ರಧಾರ ಅವರೆಡನ್ನೂ ದಾರದೊಂದಿಗೆ ಬಿಗಿದ ಮೇಲೆ ಅದು ಜಲವಾಗಿ ಜಲಬಿಂದುವಾಗಿ ಸಾಕಾರವಾಯಿತು. ಸೂತ್ರಧಾರನ ದಾರದಿಂದ ಸರಿದ ಜಲವೇ ನೆಲವಾಯಿತು ! ಸಸ್ಯ ಸಂಕುಲವಾ ಯಿತು. ಪ್ರಾಣಿ ಪಶು ಪಕ್ಷಿ ಕೀಟ ಉರಗ ಜಲಚರವಾಯಿತು. ಅಂಗವಾಯಿತು. ಸಾಕಾರ ನಿರಾಕಾರವನ್ನು ತನಗರಿಯದಂತೆ ತನುವಿನಲ್ಲಿ ತಾನೇ ಬಂಧಿಸಿಕೊಂಡು ಪೂಜಿಸಿತು. ಹಾಡಿತು. ಆರಾಧಿಸಿತು.

ಅರಿತರೆ ಆ ಅರಿಯುವ ಅರಿವೆಲ್ಲ ತಾನೇ. ಬಿಂದು ತಾನೇ. ಪೃಥ್ವಿಯನು ಎತ್ತಿದ ಬಿಂದು ತಾನೇ. ಸುಳಿದು ಬೀಸುವ ಗಾಳಿ ತಾನೇ. ಇವೆಲ್ಲವನ್ನು ಬಂಧಿಸಿಕೊಂಡ ಅಂಗತಾನೇ. ಆ ಅಂಗದಲ್ಲಿ ಸಂಗಮವಾದ ಅರಿವೆಂಬ ಮಹಾಜ್ಞಾನವೂ ತಾನೇ. ಸಾಕಾರ ನಿರಾಕಾರ ನಿಲ್ಲಿಸಿ ನೋಟ ಪ್ರಾಪ್ತಿಯಾದರೆ ಸಾಕು !

**183**

**ಪೃಥ್ವಿ ಶುದ್ದವೆಂಬೆನೆ? ಪೃಥ್ವಿ ಶುದ್ದವಲ್ಲ.**
**ಜಲ ಶುದ್ಧವೆಂಬೆನೆ ? ಜಲ ಶುದ್ಧವಲ್ಲ.**
**ಅಗ್ನಿ ಶುದ್ಧವೆಂಬೆನೆ ? ಅಗ್ನಿ ಶುದ್ಧವಲ್ಲ,**
**ವಾಯು ಶುದ್ಧವೆಂಬೆನೆ? ವಾಯು ಶುದ್ಧವಲ್ಲ,**
**ಆಕಾಶ ಶುದ್ಧವೆಂಬೆನೆ ? ಆಕಾಶ ಶುದ್ಧವಲ್ಲ.**
**ಗುರುವೆ ನೀ ಕೇಳಯ್ಯ ,**
**ಹುಸಿ ಮಸುಳ ಕಳೆದು ಜ್ಞಾನವೆಂಬ ಬೆಳಗ ಸಾಧಿಸಬಲ್ಲಡೆ,**

**ಇದೊಂದೆ ಶುದ್ಧವೆಂದನಂಬಿಗ ಚೌಡಯ್ಯ .**

ಜಲ ನೆಲ ಅಗ್ನಿ ವಾಯು ಬೆಳಕು ಜನ್ಮ ಪಡೆದದ್ದು ಬಯಲಿನಿಂದ. ಅವು ಯಾವೂ ಶುದ್ಧವಲ್ಲ. ಶುದ್ಧವಾಗುವ ಬಯಕೆಯೂ ಅವುಗಳಿಗಿಲ್ಲ. ಜಲ ನೆಲ ಅಗ್ನಿ ವಾಯುವನ್ನು ತನುವಿನ ಗರ್ಭದಲ್ಲಿಟ್ಟುಕೊಂಡು ಅವುಗಳನ್ನು ಶುದ್ಧೀಕರಿಸುವ ಶಕ್ತಿ ತನುವಿನಲ್ಲಿ ತನ್ಮಯವಾದ ಜ್ಞಾನದ ಬೆಳಕಿಗೆ ಮಾತ್ರ ಇದೆ. ಹೀಗಾಗಿ ಆ ಜ್ಞಾನವನ್ನು ಕೋಟಿ ಸೂರ್ಯ ಸಮಪ್ರಭ ಎಂದಿದ್ದಾರೆ ಪುರಾತನರು.

ಕೋಟಿ ಸೂರ್ಯರನ್ನು ಬೆಳಗುವ ಶಕ್ತಿ ಜ್ಞಾನದ ಬೆಳಕಿಗಿದೆ. ಅದು ಒಡಲೊಳಗೆ ಇದೆ. ಒಡಲಿಗೆ ಆಧಾರವಾಗಿ ಇದೆ. ಆದರೆ ಒಡಲನ್ನು ಸೋಂಕಿಲ್ಲ. ಒಡಲನ್ನು ಬೆಳಗುತ್ತಲಿದೆ ! ಬೆಳಕಿಂಗೆ ಬೆಳಕಾಗಿ ಬೆಳಗುತ್ತಲಿದೆ ಎಂದು ಜ್ಞಾನದ ಬೆಳಗನ್ನು ಕುರಿತು ಹಾಡಿದ್ದಾರೆ ಅಲ್ಲಮಪ್ರಭುಗಳು.

**ಗುರುವೆ, ನೀ ಕೇಳಯ್ಯ , ದೇವರಾಯ ಹುಸಿಮಸುಳ ಕಳೆದು, ಜ್ಞಾನವೆಂಬ ಬೆಳಗ ಸಾಧಿಸಬಲ್ಲಡೆ ಅಲ್ಲಿ ತಾನಿಪ್ಪನೆಂದನಂಬಿಗ ಚೌಡಯ್ಯ :**

ಒಡಲು ತನ್ನೊಳಗೆ ಜಲ ಅಗ್ನಿ ವಾಯು ನೆಲವನ್ನು ಬಂಧಿಸಿಕೊಂಡಿದೆ. ಜ್ಞಾನವೆಂಬ ಬೆಳಗನ್ನು ಸಾಧಿಸಿ ಅದನ್ನು ಪಡೆದ ಶರಣರಿಗೆ ಮಾತ್ರ ಇದು ತಿಳಿದಿದೆ. ಉಳಿದ ಒಡಲುಗಳಲ್ಲಿ ಇವೆಲ್ಲ ಸಂಗಮವಾಗಿದ್ದರೂ ಅವುಗಳಿಗೆ ಈ ವಿಷಯ ತಿಳಿದಿಲ್ಲ. ತಿಳಿಯುವ ಗೊಡವೆಗೂ ಆ ಒಡಲುಗಳು ಹೋಗುತ್ತಿಲ್ಲ,ಏಕೆಂದರೆ ಹುಸಿಮಸುಳ ಸುಖದಲ್ಲಿ ಒಡಲುಗಳು ತನ್ಮಯವಾಗಿವೆ!

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು, ಸಪ್ತ ವ್ಯಸನಗಳು, ಅಷ್ಟ ಮದಗಳು ಒಡಲನ್ನು ಸುಖಕ್ಕೆ ಈಡು ಮಾಡಿ ದುಃಖಕ್ಕೆ ಒಳಗು ಮಾಡಿವೆ. ಒಡಲನ್ನು ಆವರಿಸಿದ ಮನಕ್ಕೆ ಈ ಸುಳ್ಳು ಸುಖವೆಂದರೆ ಬಲು ಸಂತೋಷ ! ಸುಳ್ಳು ದುಃಖವೆಂ ದರೂ ಮನಕ್ಕೆ ಬಲು ಸಂತೋಷ!

ಮನ ಒಡಲಿಗೆ ಸುಳ್ಳು ಸುಖವನ್ನು ಸುಳ್ಳು ದುಃಖವನ್ನು ಕೊಡುತ್ತ ತಾನು ಪರಮ ಸುಖಿಯಾಗಿರುತ್ತದೆ. ಇಂತಹ ಮನದಿಂದಲೇ ಒಡಲೊಳಗೆ ಸಂಗಮವಾದ ಜ್ಞಾನ ವೆಂಬ ಬೆಳಗನ್ನು ಸಾಧಿಸಬೇಕಾಗಿದೆ. ಆ ಜಾಗಕ್ಕೆ ಮನ ಪ್ರಯಾಣಿಸಿದಾಗ ಹುಸಿಮಸಳ ಕಳೆದುಕೊಂಡ ಮನ ಘನಮನವಾಗುತ್ತದೆ. ಜ್ಞಾನವೆಂಬ ಬೆಳಗಿನಲ್ಲಿ ಮುಳುಗಿ ಬೆಳಗೇ ಆಗುತ್ತದೆ. ಆಗ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ.

**184**

**ಪೊಡವಿಗೀಶ್ವರ ಗೌರಿಯೊಡನೆ ಮದುವೆಯಾದಂದು,**
**ಒಡನಾಡಿದ ಮಾಧವ ಗೋವನಾದ,**
**ಮಿಗೆ ಓದಿದ ಬ್ರಹ್ಮ ಹೋತನ ತಿಂದ,**
**ಎಡೆಯಲಾದ ಜನ್ನ ಉಟ್ಟುದ ತೊರೆದ.**
**ಇವರ ಪೊಡಮುಟ್ಟು ಪೊಡಮುಟ್ಟು ಧಾತುಗೆಟ್ಟವರ ಕೇಡಿಂಗೆ**
**ಕಡೆಯಿಲ್ಲೆಂದನಂಬಿಗ ಚೌಡಯ್ಯ .**

ಹರಿದಾಡುವ ಮನ ಗೌರಿಯಾಗಿ, ಪೊಡವಿಗೀಶ್ವರನನ್ನು ಕೂಡಿ ಮದುವೆಯಾದರೆ ಸಾಕು ಘನಮನ ಒಂದಾದ ಕಾಯವದು ಕೈಲಾಸವೇ ಆಗುವುದು.

ಒಡನಾಡಿದ ಮಾಧವ ಗೋವು ಕಾಯುವ ಗೊಲ್ಲನಾದ. ಪಂಚಭೂತಗಳನ್ನು ಅಭ್ಯಸಿಸಿ ಅದನ್ನು ಒಂದು ಮಾಡಿಕೊಂಡ ಬ್ರಹ್ಮ , ಆ ಬ್ರಹ್ಮನ ಮಗ ದಕ್ಷ , ಹೋತನ ತಿಂದ. ಹೋತೇ ತಾನಾದ. ಜನ ಉಟ್ಟುದನು ತೊರೆದು ಬತ್ತಲಾದ.

ಬತ್ತಲಾಗುವುದೆಂದರೆ ಉಟ್ಟುದನು ತೊರೆಯುವುದಲ್ಲ. ಗೋವರ್ಧನನಂತೆ ಗೋವು ಕಾಯುವುದೂ ಅಲ್ಲ. ಬ್ರಹ್ಮನಂತೆ ಓದುವುದೂ ಅಲ್ಲ. ಅದನ್ನು ತಿಳಿದು ಬಲಿಕೊಡುವುದೂ ಅಲ್ಲ. ಪೊಡವಿಗೀಶ್ವರನಂತೆ ಗೌರಿಯೊಂದಿಗೆ ಕೂಡುವುದು. ಅರ್ಧನಾರೀಶ್ವರನಾಗಿ, ನಾಗಭೂಷಣನಾಗಿ, ಚಂದ್ರಶೇಖರನಾಗಿ, ಗಂಗಾಧರನಾಗಿ ಕೂಡುವುದು.

ಅಗಲದೇ ಕೂಡಲು ಕೂಡಾ ಆಗದೆ ವಿಲಿವಿಲಿ ಒದ್ದಾಡುವ ಮನ ಘನವನ್ನು ಕೂಡುವುದು. ಮನ ಘನವನ್ನು ಕೂಡಿ ಮದುವೆಯಾಗುವುದು.

ಮನ ಗೌರಿಯಾದರೆ ಘನ ಈಶ್ವರ. ಹೀಗಾಗುವುದು ಬಿಟ್ಟು ದನ ಕಾಯ್ದರೆ, ಓದಿದ ಬ್ರಹ್ಮ ಹೋತ ತಿಂದರೆ, ಜಿನ ಉಟ್ಟುದನು ತೊರೆದರೆ, ಅಗಲಿದ ಮನ ಘನವನ್ನು ಕೂಡಿದಂತಲ್ಲ.

ಪೊಡಮಟ್ಟು ಪೊಡಮಟ್ಟು ಧಾತುಗೆಟ್ಟವರ ಕೇಡಿಂಗೆ ಕಡೆಯಿಲ್ಲ. ಬ್ರಹ್ಮ ಈಶ್ವರ ದೊರೆ ತಾನೆಂದು ಮುಕುಟದೆಡೆಗೆ ನಡೆ ನಡೆದು ಸೋತು ಸುಣ್ಣವಾದ. ವಿಷ್ಣು ಪಾದವನು ಅರಸಿ ಪಾತಾಳದತ್ತ ನಡೆ ನಡೆದು ಸೋತಿ ಸುಣ್ಣವಾದ. ಇವರಿಬ್ಬರಿಗೂ ತಲೆಬುಡಗಳೆರಡೂ ದಕ್ಕಲಿಲ್ಲ. ವಿಷ್ಣು ಲಕ್ಷ್ಮಿಯೊಂದಿಗೆ ಮದುವೆಯಾದಂತೆ ; ಬ್ರಹ್ಮ ಸರಸ್ವತಿಯೊಂದಿಗೆ ಮದುವೆಯಾದಂತೆ ಪೊಡವಿಗೀಶ್ವರ ಗೌರಿಯೊಡನೆ ಮದುವೆಯಾದ. ಮನ ಘನವನು ಸೇರಿ ಘನ ಮನಗಳೆರಡೂ ತನುವಿನಲ್ಲಿ ತನ್ಮಯವಾಗಿ ಒಂದಾದವು. ಮೂರೊಂದಾದ ಘನವಾಯಿತು. ತನಗೆ ತಾನೇ ಮದುವೆಯಾಗಿ ತನುವಿನಲ್ಲಿ ಒಂದಾಯಿತು.

**185**

**ಪ್ರಸಾದವ ನಂಬಿದಡೆ ಭಿಲ್ಲಮರಾಯನಂತೆ ನಂಬಬೇಕಯ್ಯಾ ,**
**ಪ್ರಸಾದವ ನಂಬಿದಡೆ ಬಿಬ್ಬ ಬಾಚಯ್ಯಗಳಂತೆ ನಂಬಬೇಕಯ್ಯಾ,**
**ಪ್ರಸಾದವ ನಂಬಿದಡೆ ವಾಮನ ಮುನೀಶ್ವರನ ಶಿಷ್ಯನಂತೆ ನಂಬಬೇಕಯ್ಯಾ ,**
**ಪ್ರಸಾದವ ನಂಬಿದಡೆ ಮರುಳು ಶಂಕರದೇವರಂತೆ ನಂಬಬೇಕಯ್ಯಾ.**
**ಇಂತು ನಂಬಿಕೊಂಡಡೆ ಮಹಾಪ್ರಸಾದ !**
**ನಂಬದೆ ಸಮಯದಾಕ್ಷಿಣ್ಯಕ್ಕೆ ಮನದಳುಕಿನಿಂ ಕೊಂಡಡೆ**
**ಅದು ತನಗೆ ಸಿಂಗಿಯ ಕಾಳಕೂಟವಿಷವೆಂದಾತನಂಬಿಗ ಚೌಡಯ್ಯ.**

ಪ್ರಸಾದ ಅಂದರೆ ಒಂದಗಳೂ ತಟ್ಟೆಯಲ್ಲಿ ಬಿಡದೆ ಸ್ವೀಕರಿಸುವುದು ಎಂದಲ್ಲ. ಕಣ್ಣಿಗೆ ಒತ್ತಿಕೊಂಡು ಸ್ಮರಣೆ ಮಾಡಿ ಧನ್ಯನಾದೆ ಎಂದು ಸ್ವೀಕರಿಸುವುದೂ ಅಲ್ಲ. ಪ್ರಸಾದವ ನಂಬುವುದು, ನಂಬಿ ಸ್ವೀಕರಿಸುವುದು. ಸ್ವೀಕರಿಸಿದ ಪ್ರಸಾದ ಅಜೀರ್ಣವಾಗದೆ ಸ್ವೀಕರಿಸುವುದು. ಸ್ವೀಕರಿಸಿದ ಅನ್ನ ಅಜೀರ್ಣವಾದರೆ ಹೊರಗೆ ಬರುವುದು. ಸ್ವೀಕರಿಸಿದ ಶಬ್ದ ಅಜೀರ್ಣವಾದರೆ ಕಾಳಕೂಟ ವಿಷವಾಗುವುದು. ಅದು ಇತರರನ್ನು ಕೊಲ್ಲುವುದಿಲ್ಲ. ತನ್ನನ್ನು ಕೊಲ್ಲದೆ ಬಿಡುವುದಿಲ್ಲ.

ರಾವಣ ಸೀತಾಮಾತೆಯನ್ನು ಎಳೆದೊಯ್ದ. ರಾಮ ರಾವಣನನ್ನು ಕೊಂದು

ಸೀತಾಮಾತೆಯನ್ನು ಕರೆತಂದ. ಮಡಿವಾಳನ ಮಾತು ಕೇಳಿ ಶೀಲ ಶಂಕಿಸಿದ. ಪುನಃ ಕಾಡಿಗೆ ತಳ್ಳಿದ. ಮಡಿವಾಳನ ಮಾತು ರಾಮನಿಗೆ ಪ್ರಸಾದವಾಗಲಿಲ್ಲ, ಸಂಗಿಯ ಕಾಳಕೂಟ ವಿಷವಾಯಿತು.

ಘಟ್ಟಿವಾಳಯ್ಯ ತನ್ನ ಸತಿ ಅನ್ಯ ಪುರುಷರೊಂದಿಗೆ ರಮಿಸುವುದನ್ನು ಕಣ್ಣಾರೆ ಕಂಡ. ದುಃಖಿಸಲಿಲ್ಲ. ದೃಶ್ಯ ಪ್ರಸಾದವಾಯಿತು. ಸಿಂಗಿಯ ಕಾಳಕೂಟ ವಿಷವಾಗಲಿಲ್ಲ! ಸತಿಗೆ ಹೋಳಿಗೆ ಮಾಡಲು ಹೇಳಿದ. ಅವರಿಬ್ಬರೊಂದಿಗೆ ತಾನೂ ಊಟ ಮಾಡಿದ. ಅವರಿಬ್ಬರನ್ನು ಸಂತೋಷದಿಂದ ಬದುಕಲು ಹೇಳಿದ. ಇದೆಲ್ಲವನ್ನು ಪ್ರಸಾದ ಮಡಿಕೊಂಡ ಘಟ್ಟಿವಾಳಯ್ಯನ ಗಟ್ಟಿತನ ಸಕಲರಿಗೂ ಬರಬೇಕಲ್ಲ? ಇದು ಪ್ರಸಾದದ ತಂತ್ರಗಾರಿಕೆ. ಈ ತಂತ್ರ ಗಾರಿಕೆಯನ್ನು ಬಲ್ಲ ನಿಪುಣ ಘಟ್ಟಿವಾಳಯ್ಯ.

ಪ್ರಸಾದದ ತಂತ್ರಗಾರಿಕೆ ಜಮದಗ್ನಿಗೆ ಬರಲಿಲ್ಲ. ರಾಮನಿಗೂ ಬರಲಿಲ್ಲ. ಬೃಹಸ್ಪತಿ, ಋಷಿಮುನಿಗಳಿಗೂ ಬರಲಿಲ್ಲ.ಶರಣರಿಗೆ ಮಾತ್ರ ಈ ಕಲೆ ತಿಳಿದಿತ್ತು. ಪ್ರಸಾದ ಎನ್ನುವ ಶಬ್ದ ಇಂದು ಸಂಪ್ರದಾಯಕ್ಕೆ ತುತ್ತಾಗಿದೆ. ಅದರಲ್ಲಿ ಮಹತ್ವ ಅಡಗಿದೆ. ಎಂಬುದನ್ನು ಭಿಲ್ಲಮರಾಯ, ಬಿಬ್ಬಿಬಾಚಯ್ಯಗಳಿಂದ ತಿಳಿಯಬೇಕು. ವಾಮನನ ಶಿಷ್ಯನಿಂದ, ಮರುಳ ಶಂಕರರಿಂದ ತಿಳಿಯಬೇಕು.

ಪ್ರಸಾದವೆಂದರೆ ಸಕಲವನ್ನು ಉಂಡು ಜೀರ್ಣಿಸಿಕೊಳ್ಳುವುದು. ನೋಡುವುದನ್ನು ನೋಟದಿಂದಲೇ ಉಣ್ಣಬೇಕು. ಕಣ್ಣಿನಲ್ಲಿ ನೋಟ ಸಂಗ್ರಹವಾದರೆ ಸಿಂಗಿಯ ಕಳಕೂಟ ವಿಷವಾಗುವುದು. ರಾವಣ ಸೀತಾ ಮಾತೆಯನ್ನು ನೋಡಿದ. ನೋಡಿದ ನೋಟ ರಾವಣನ ಕಣ್ಣಿನಲ್ಲಿ ಸಿಂಗಿಯ ಕಾಳಕೂಟ ವಿಷಯವಾಯಿತು.

ದುರ್ಯೋಧನ ದ್ರೌಪದಿಯ ಶಬ್ದ ಕೇಳಿದ. 'ಕುರುಡನ ಮಗ ಕುರುಡ'ಎನ್ನುವ ದ್ರೌಪದಿಯ ಶಬ್ದ ದುರ್ಯೋಧನನ ಕಿವಿಯಲ್ಲಿ ಸಂಗ್ರಹವಾಯಿತು. ಕಣ್ಣು ಕಿವಿ ಮೂಗು ಬಾಯಿಯ ಮೂಲಕ ಅಗ್ನಿ ಚಿಮಿತು. ಹದಿನೆಂಟು ಅಕ್ಷೋಹಿಣಿ ಸೈನ್ಯ ನಾಶವಾಯಿತು. ರಕ್ತದ ಕಾಲುವೆ ಹರಿಯಿತು. ನೂರು ಜನ ತಮ್ಮಂದಿರು ಸತ್ತರು. ಬಂಧು ಮಿತ್ರರು ಆಚಾರ್ಯರು ಗುರುಗಳು ಯುದ್ಧದಲ್ಲಿ ಮಡಿದರು. ಶಬ್ದ ಪ್ರಸಾದವಾಗಲಿಲ್ಲ. ಹೃದಯದ ಜ್ವಾಲೆ ಆರಲಿಲ್ಲ. ಭೀಮ ದುರ್ಯೋಧನನ ತೊಡೆ ಮುರಿದು ಜ್ವಾಲೆಯನ್ನು ನಂದಿಸಿದ. ದೇಹ ನಷ್ಟವಾಯಿತು. ದೇಹದಿಂದ ಹೊರ ಬಂದ ಶಬ್ದ ಸಿಂಗಿಯ ಕಾಳಕೂಟ ವಿಷಯವಾಗಿ ಇತಿಹಾಸದಲ್ಲಿ ಹಾಗೆಯೇ ಉಳಿಯಿತು. ಪ್ರಸಾದವಾಗಲಿಲ್ಲ.

ವ್ಯಾಸ ಮಹರ್ಷಿಗಳು ಶಬ್ದದ ಮಹಿಮೆ ಬಣ್ಣಿಸಿದರು. ಪ್ರಸಾದದ ತಂತ್ರಗಾರಿಕೆ ಹೆಣೆಯಲಿಲ್ಲ! ಸಿಂಗಿಯ ಕಾಳಕೂಟ ವಿಷ ; ಸರ್ಪಾಸ್ತ್ರವಾಗಿ ಕರ್ಣನ ಬತ್ತಳಿಕೆಯಲ್ಲಿ ಸೇರಿತು. ಇತಿಹಾಸವಾಯಿತೇ ಹೊರತು ಪ್ರಸಾದವಾಗಲಿಲ್ಲ.

ತನುವಿನಲ್ಲಿ ಸಿಂಗಿಯ ಕಾಳಕೂಟ ವಿಷವಾಗಿ ಚಿಮ್ಮುವ ಮನವೆಂಬ ಹಾವೂ ಇದೆ. ಅದನ್ನು ಪ್ರಸಾದ ಮಾಡಿಕೊಂಡು ಕಂಠದಲ್ಲಿ ಧರಿಸುವ ಶಿವಜ್ಞಾನವೂ ಇದೆ. ತನುವಿನ ತಂತ್ರಜ್ಞಾನ ತನುವಿಗೆ ಒಲಿಯಬೇಕು ಅಷ್ಟೇ.

**186**

**ಪ್ರಾಣ ಪ್ರಣವವೆಂಬರು, ಪ್ರಾಣಕ್ಕೂ ಪ್ರಣವಕ್ಕೂ ಏನು ಸಂಬಂಧ?**

**ಪ್ರಾಣವೆ ಪ್ರಳಯಕ್ಕೊಳಗಾಗಿ ತಿರುತಿರುಗಿ ಬಪ್ಪುದಕ್ಕೆ ಒಡಲಾಯಿತ್ತು,**
**ಪ್ರಣವವೇ ಪ್ರಸನ್ನ ವಾಗಿಪ್ಪುದೆಂದನಂಬಿಗ ಚೌಡಯ್ಯ.**

ಅಂಗವೆಂಬುದನ್ನು ಅರಿತರೆ ಅದು ಆರು ಅಕ್ಷರಗಳ ಸಂಗಮ. ಅಂಗದಿಂದ ಎಲ್ಲವನ್ನು ಅರಿಯಬಹುದು. ಅಂಗದಿಂದಲೇ ಅಂಗವನ್ನು ಅರಿಯಲು ಸಾಧ್ಯವಾಗತ್ತಿಲ್ಲ. ಹೀಗಾಗಿ ಅಂಗವೆಂಬುದು ಲಿಂಗಾಂಗವಾಗದೇ ಅಂಗವೇ ಆಗಿ ತನ್ನ ಆಯುಷ್ಯವನ್ನು ವ್ಯರ್ಥ ಕಳೆಯುತ್ತಲಿದೆ.

ಅಂಗದಲ್ಲಿ ಪ್ರಾಣ ಸಂಗಮವಾಗಿದೆ. ಪ್ರಾಣದಲ್ಲಿ ಪ್ರಣವ ಸಂಗಮವಾಗಿದೆ. ಪ್ರಾಣ ಇರುವವರೆಗೂ ತಾನು ಪ್ರಣವವೆಂದು ಪ್ರಾಣಕ್ಕೂ ಪ್ರಾಣವನ್ನು ಹೊತ್ತ ಅಂಗಕ್ಕೂ ಗೊತ್ತಾಗುವುದಿಲ್ಲ. ಹೀಗಾಗಿ ಪ್ರಾಣ ಶಬ್ದದ ಪ್ರಳಯಕ್ಕೆ ರೂಪು ಸ್ಪರ್ಶ ರುಚಿ ವಾಸನೆಯ ಪ್ರಳಯಕ್ಕೆ ಒಳಗಾಗಿ ವ್ಯರ್ಥವಾಗಿ ಪ್ರಾಣ ಕಳೆದುಕೊಳ್ಳುತ್ತದೆ. ತಾನು ಪ್ರಣವವೆಂದು ಪ್ರಾಣಕ್ಕೆ ಹೊಳೆಯುವುದೇ ಇಲ್ಲ.

ಒಳ ಹೊರಗೆ ಸಂದಿಲ್ಲದಂತೆ ಸರ್ವಾಂಗವೆಲ್ಲವೂ ಲಿಂಗಮಯವಾಗಿದೆ. ಸರ್ವಾಂಗದಲ್ಲಿ ಪ್ರಣವ ಭರಿತವಾಗಿದೆ. ಪ್ರಣವ ಪ್ರಾಣವೂ ಹೌದು. ಪ್ರಣವ ಸರ್ವಾಂಗಲಿಂಗವೂ ಹೌದು. ಪ್ರಾಣ ಅರಿಯದಿದ್ದಕ್ಕಾಗಿ ಪ್ರಾಣದಲ್ಲಿ ಪ್ರಳಯ ಉಂಟಾಗಿ ತಿರುತಿರುಗಿ ಬಂದು ಒಡಲಾಗಿದೆ. 'ಪುನರಪಿ ಜನನಂ, ಪುನರಪಿ ಮರಣಂ, ಪುನರಪಿ ಜನನೇ ಜಠರೇಶಯನಂ' ಎನ್ನುವಂತೆ. ಅರಿತರೆ ಪ್ರಾಣ ಪ್ರಣವಗಳೆರಡೂ ಪ್ರಸನ್ನವಾಗಿವೆ. ಪ್ರಾಣದಲ್ಲಿಯೇ ಪ್ರಣವ ವಿದೆಯೆಂಬುದನ್ನು ಪ್ರಾಣವೇ ಅರಿಯಬೇಕು.

'ತ್ವಙ್ಮಯವಾಗಿಹುದು ಓಂಕಾರ, ರುಧಿರಮಯವಾಗಿಹುದು ನಕಾರ, ಮಾಂಸಮಯವಾಗಿಹುದು ಮಕಾರ, ಮೇಧೋಮಯವಾಗಿಹುದು ಶಿಕಾರ, ಅಸ್ತಿಮಯವಾಗಿಹುದು ವಾಕಾರ, ಮಜ್ಜಾಮಯವಾಗಿಹುದು ವಾಕಾರ. ಇಂತೀ ಷಡ್ಧಾತುವೆ ಷಡಕ್ಷರವಾಗಿ, ಅವೆ ಲಿಂಗಾಂಗಳಾಗಿ, ಒಳಹೊರಗೆ ತೆರಹಿಲ್ಲದೆ ಸರ್ವಾಂಗವೆಲ್ಲವೂ ಲಿಂಗಮಯವಾದ ಇರವು. ಅದು ತಾನೇ ಶಿವನಿರವು, ಅದು ತಾನೇ ಶಿವನ ಭವನ. ಅದು ತಾನೇ ಶಿವನ ವಿಶ್ರಾಮ ಸ್ಥಾನ. ಇಂತೀ ಷಟಸ್ಥಲಬ್ರಹ್ಮವ ನರಿದಾತನೆ ಶರಣ, ಆತನೆ ಲಿಂಗೈಕ್ಯ. ಇಂತೀ ಷಟಸ್ಥಲ ಬ್ರಹ್ಮವೆಂಬುದು ಅಪ್ರಮಾಣ ಅಗೋಚರ ಅನಿರ್ವಾಚ್ಯವಾದ ಕಾರಣ, ವಚಿಸುತ್ತ ವಚಿಸುತ್ತ ವಚಿಸುತ್ತ ವಚನೆಗೆಟ್ಟಿತ್ತು . ಉಪ್ಪು ನೀರೊಳು ಕೂಡಿದಂತೆ, ವಾರಿಕಲ್ಲು ಅಂಬುಧಿಯೊಳು ಬಿದ್ದಂತೆ, ಶಿಖಿ ಕರ್ಪೂರ ಯೋಗದಂತೆ ಆದೆನಯ್ಯಾ ಕೂಡಲ ಚೆನ್ನ ಸಂಗಯ್ಯನಲ್ಲಿ, ಬಸವಣ್ಣನ ಭಾವಹಸ್ತ ಮುಟ್ಟಿದ ಕಾರಣ' ಎಂದು ಚೆನ್ನ ಬಸವಣ್ಣನವರು ಸರ್ವಾಂಗವೂ ಪ್ರಣವವೆಂದು ಘೋಷಿಸಿದ್ದಾರೆ. ಅವರ ಈ ಘೋಷಣೆ ಅಂಗದ ಅನುಭವಕ್ಕೆ ಬಂದರೆ ಸಾಕು ಸರ್ವಾಂಗವೆಲ್ಲವೂ ಲಿಂಗಮಯ !

**187**

**ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಉಡುವ ಚಿಂತೆ,**
**ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ,**
**ಹೆಂಡಿರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ,**

**ಬದುಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ,**
**ಇಂತೀ ಹಲವು ಚಿಂತೆಯಲ್ಲಿ ಇಪ್ಪವರ ಕಂಡೆನು.**
**ಶಿವನ ಚಿಂತೆಯಲ್ಲಿದ್ದವರರೊಬ್ಬರನೂ ಕಾಣೆನೆಂದಾತ**
**ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.**

ಅಂಗಕ್ಕೆ ಉಂಬುವ ಚಿಂತೆ,ಉಡುವ ಚಿಂತೆ, ಇಡುವ ಚಿಂತೆ, ಹೆಂಡಿರ ಚಿಂತೆ, ಮಕ್ಕಳ ಚಿಂತೆ, ಬದುಕಿನ ಚಿಂತೆ, ಕೇಡಿನ ಚಿಂತೆ, ಮರಣದ ಚಿಂತೆ. ಹೀಗೆ ತನ್ನದೇ ಆದ ಹಲವಾರು ಚಿಂತೆ ಉಂಟು ಅಂಗಕ್ಕೆ.ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನ ಚಿಂತೆ ಮಾಡುವ ಅಂಗ ಒಂದೂ ಕಾಣಲಾರದು. ಹಾಗೆ ಚಿಂತೆ ಮಾಡುವ ಅಂಗವೇ ಲಿಂಗಾಂಗ !

ಹೊರಗಿನದೆಲ್ಲವನ್ನು ಪಡೆಯಲು ಸಾಧ್ಯ . ಹೊರಗಿನ ಸುಖವೆಂದರೆ ಬಲು ಇಷ್ಟ ಅಂಗಕ್ಕೆ. ಆ ಇಷ್ಟವೇ ತನಗೆ ಕಷ್ಟವಾಗುವುದು ಎಂಬುದನ್ನು ಮಾತ್ರ ಅಂಗ ಅರಿಯುತ್ತಿಲ್ಲ.

**ಶಿವನ ಚಿಂತೆಯಲ್ಲಿದ್ದವರೊಬ್ಬರನೂ ಕಾಣೆನೆಂದಾತ ನಮ್ಮ ಅಂಬಿ ಗರ ಚೌಡಯ್ಯ ನಿಜ ಶರಣನು:**

ಅಂಬಿಗರ ಚೌಡಯ್ಯ ಶಿವನ ಚಿಂತೆಯಲ್ಲಿದ್ದಾತ ಎಂದು ತನಗೆ ತಾನೇ ಹೇಳಿ ಕೊಂಡಿದ್ದಾನೆ. ಅಂದರೆ ಚೌಡಯ್ಯನಿಗೆ ಶಿವನ ಪರಿಚಯವಿದೆ. ಅಂಗದಲ್ಲಿ ಸಂಗಮವಾದ ಶಿವನನ್ನು ಚೌಡಯ್ಯ , ಚೌಡಯ್ಯನೆಂದು ಕರೆದಿದ್ದಾನೆ. ಆ ಶಿವನಿಗೆ ಅಂಬಿಗರ ಚೌಡಯ್ಯನೆಂದು ಆತ ನಿಜ ಶರಣನೆಂದು ನಾಮಕರಣ ಮಾಡಿದ್ದಾನೆ. ಅಂದರೆ ಚೌಡಯ್ಯನೆಂಬ ಹೆಸರನ್ನು ಕಳೆದುಕೊಂಡು ಆ ಹೆಸರಿನಿಂದಲೇ ಚೌಡಯ್ಯ ಶಿವನನು ಕರೆದಿದ್ದಾನೆ.

ಹೆಸರಿಗೆ ಬಡತನದ ಚಿಂತೆ, ಹೆಸರಿಗೆ ಉಡುವ ಚಿಂತೆ, ಉಣ್ಣುವ ಚಿಂತೆ, ಇಡುವ ಚಿಂತೆ, ಹೆಂಡಿರ ಚಿಂತೆ, ಮಕ್ಕಳ ಚಿಂತೆ, ಆ ಹೆಸರಿಗೆ ಬದುಕುವ ಚಿಂತೆ. ಆ ಹೆಸರಿಗೆ ಕೇಡಿನ ಚಿಂತೆ, ಮರಣದ ಚಿಂತೆ. ಇಂತಹ ಚಿಂತೆಗಳೆಲ್ಲ ಅಂಗ ಇಟ್ಟು ಕೊಂಡ ಇಲ್ಲದ ಆ ಹೆಸರಿಗೆ ಉಂಟೇ ಹೊರತು ಅಂಗಕ್ಕಿಲ್ಲ. ಅಂಗ ಎನ್ನುವುದು ಹೆಸರಿಲ್ಲದ ವೃಕ್ಷ. ಅದಕ್ಕೆ ಹೂ ಕಾಯಿ ಹಣ್ಣು ಬಿಟ್ಟರೆ ಅದು ತಾನು ಇಟ್ಟುಕೊಳ್ಳುವುದಿಲ್ಲ. ಕಸಿದುಕೊಂಡರೆ ಹೊಡೆದು ತಿಂದರೆ ಅದು ಜಗಳ ಕಾಯುವುದಿಲ್ಲ. ಹೀಗಾಗಿ ಅದು ಹೆಸರಿಲ್ಲದ ವೃಕ್ಷ. ಆ ವೃಕ್ಷಕ್ಕೆ ನಾನು ಹೆಸರಿಟ್ಟರೇನಂತೆ ? ಆ ಹೆಸರಿನ ಪರಿ ಅದಕ್ಕಿಲ್ಲ. ಹಾಗೆಯೇ ಅಂಗಕ್ಕೆ ಯಾರೋ ಹೆಸರಿಟ್ಟಿದ್ದಾರೆ. ಆ ಹೆಸರು ಅಂಗಕ್ಕೆ ಸಂಬಂಧವಿಲ್ಲ. ಆದರೆ ಹೆಸರು ಅಂಗವನ್ನು ಹಗಲಿರುಳೆನ್ನದೆ ಬಾಧಿಸುಸುತ್ತಲಿದೆ. ಬಾಧಿಸುವ ಹೆಸರನ್ನೇ ಶಿವನಿಗೆ ಇಟ್ಟು ಶಿವನನ್ನು ಆ ಹೆಸರಿನಿಂದ ಕರೆದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**188**

**ಬಯಲ ಉದಕವ ಹಿಡಿದು ಮಜ್ಜನಕ್ಕೆರೆವೆನಯ್ಯ .**
**ಸಕಲವನುಳಿದೊಂದು ಪುಷ್ಪದ ಪೂಜೆಯ ಮಾಡುವೆನಯ್ಯ .**
**ಸುಗಂಧ ದುರ್ಗಂಧವ ಕಳೆದು ಧೂಪಾರತಿಯ ಮಾಡುವೆನಯ್ಯಾ .**
**ಪರಬ್ರಹ್ಮವ ಹಿಡಿದು ನಿವಾಳಿಯನೆತ್ತುವೆನಯ್ಯಾ .**
**ಪುಣ್ಯ ಪಾಪವ ಕಳೆದು ಓಗರವನಿಕ್ಕುವೆನಯ್ಯಾ .**

**ಹದಿನಾಲ್ಕು ಭುವನವನೊಳಗುಮಾಡಿ ಹೊರಗೆ ನಿಂದು.**
**ಸದಾಶಿವನ ಪೂಜಿಸಿದಾತನಂಬಿಗ ಚೌಡಯ್ಯ .**

ಬಯಲ ಉದಕವನು ಹಿಡಿದು ಬಯಲ ದೇವರಿಗೆ ಪೂಜೆಯನು ಮಾಡುವುದು ಸುಲಭದ ಕೆಲಸವಲ್ಲ. ಸುಗಂಧ ದುರ್ಗಂಧವನು ಕಳೆದು ಧೂಪದ ಆರತಿಯನು ಎತ್ತುವುದು ಬಯಲಲ್ಲಿ ಬಯಲಾದ ಚೌಡಯ್ಯ ಶರಣರಿಗೆ ಮಾತ್ರ ಸಾಧ್ಯ .

ಲೋಕದ ಪೂಜೆ ಗೋಚರದ ಆಚಾರದ ಪೂಜೆ. ಶರಣನ ಪೂಜೆ ಅಗೋಚರದ ಆಚಾರದ ಪೂಜೆ. ಆದು ಇತರರಿಗೆ ಕಾಣವುದಿಲ್ಲ; ತನ್ನ ಪೂಜೆ ತನಗೆ ಕಾಣದೇ ಇರುವುದಿಲ್ಲ.

ಪುಣ್ಯ ಸಂಪಾದನೆಗಾಗಿ ಲೋಕ ದೇವನನ್ನು ಪೂಜಿಸುತ್ತದೆ. ಲೋಕದ ಜನ ಪೂಜಿಸುವ ಪೂಜೆ ಲೋಕಕ್ಕೆಲ್ಲ ಕಾಣುತ್ತದೆ. ಪಾಪ ಕಳೆದುಕೊಳ್ಳುವ ಪೂಜೆ ; ಪುಣ್ಯ ಗಳಿಕೆ ಮಾಡುವ ಪೂಜೆ. ಶರಣರ ಪೂಜೆ ಮಾತ್ರ ಹಾಗಲ್ಲ. ಪುಣ್ಯ ಪಾಪವನು ಕಳೆದು ಓಗರವನಿಕ್ಕಿ ಪೂಜಿಸುವ ಪೂಜೆ.

ಹದಿನಾಲ್ಕು ಭುವನಗಳನ್ನು ಒಳಗು ಮಾಡಿ ಹೊರಗೆ ನಿಂತ, ಸದಾ ಶಿವನನ್ನು ಪೂಜಿಸುವ ಪೂಜೆ. ಇದು ಅಂಬಿಗರ ಚೌಡಯ್ಯ ಶರಣರಿಗೆ ಮಾತ್ರ ಸಾಧ್ಯ . ಅರಿತರೆ ಅರಿವಿನ ಪೂಜೆ. ಅದು ಯಾರಿಗೂ ಕಾಣದ ಪೂಜೆ. ಅಗೋಚರದ ಪೂಜೆ. ಅನುಭವಕ್ಕೆ ಬಂದರೆ ಸಕಲರೂ ಪೂಜಿಸುವ ಪೂಜೆ. ಅರಿವಿನ ಪುಷ್ಪದ ಪೂಜೆ. ಅದು ಕಾಣುವುದಿಲ್ಲ. ಅದರ ಪರಿಮಳ ಮಾತ್ರ ಲೋಕಕ್ಕೆಲ್ಲ ಹರಡುತ್ತದೆ.

**189**

**ಬರೆದು ಓದಿಸುವ ಆಕರಿಗಳೆಲ್ಲ ನೀವು ಕೇಳಿರೋ:**
**ತರ್ಕ ವ್ಯಾಕರಣ ಛಂದಸ್ಸು ನಿಘಂಟು ವೇದ ಶಾಸ್ತ್ರವನೋದಿ ಕೇಳಿ**
**ಗಂಗೆಗೆ ಹರಿವವರನೇನೆಂಬೆ ?**
**ಪರವಧುವೆಂಬುದನರಿಯಿರಲ್ಲಾ !**
**ನೆರೆದಿರ್ದ ಪಾಪವ ಹೊನಲಿನಲ್ಲಿ ಕಳೆದೆನೆಂಬ**
**ಅಣ್ಣಗಳ ಬೆಡಗು ಬೇಡವೆಂದಾತನಂಬಿಗ ಚೌಡಯ್ಯ .**

ತರ್ಕ ವ್ಯಾಕರಣ ಛಂದಸ್ಸು, ನಿಘಂಟು ವೇದ ಶಾಸ್ತ್ರವನು ಓದಿ ಬರೆದು ಕೇಳುವಾಗ ಕೇಳಿಸುವಾಗ ಆನಂದವಾಗುತ್ತದೆ.ಆದರೆ ನೋಡುವಾಗ ಕಣ್ಣು ಪರವಧುವೆಂದು ತಿಳಿಯದೆ ಭೋಗಕ್ಕೊಳಗಾಗುತ್ತದೆ. ವೇದವನ್ನು ಶಾಸ್ತ್ರ ಪುರಾಣವನ್ನು ಓದಿದ ಕಣ್ಣಿಗೆ ಅದು ಪರವಧು ವೆಂಬುದು ಹೊಳೆಯುವುದಿಲ್ಲ.

ಓದುವಾಗ ಭಗವದ್ಗೀತೆಯಲ್ಲಿ ಮುಳುಗುತ್ತದೆ. ನೋಡುವಾಗ ಪರವಧುವಿನ ರತಿಕ್ರೀಡೆಯಲ್ಲಿ ಮುಳುಗುತ್ತದೆ. ಓದುವಾಗ ಕಣ್ಣಿಗೆ ಅರಿವಿನ ಕಿರಣಗಳು ಬಳಕೆಯಾದವು. ನೋಡುವಾಗ ಪರವಧುವಿನ ಸುಖದಲ್ಲಿ ಲೀನವಾಗಿ ಅಜ್ಞಾನದ ಕಿರಣಗಳು ಬಳಕೆಯಾದವು.

ಕಣ್ಣಿನಲ್ಲಿ ಎರಡು ಪ್ರವಾಹಗಳು ಸಂಗಮವಾಗಿವೆ. ಒಂದು ಪಾಪದ ಪ್ರವಾಹ ಮತ್ತೊಂದು ಬೆಳಕಿನ ಪ್ರವಾಹ. ಪಾಪದ ಪ್ರವಾಹದಲ್ಲಿ ಮಿಂದು ಬೆಳಕಿನ ಮಾತು ಆಡುವ ಬೆಡಗುಕೂಡದು ಎಂದು ಕಣ್ಣಿಗೆ ತನಗೆ ತಾನೇ ಗೊತ್ತಾಗಬೇಕು.ಅದು ನೋಡುವ ಕಣ್ಣಲ್ಲೇ ನಿರ್ಧಾರವಾಗಬೇಕು.

ಇಲ್ಲದಿದ್ದಲ್ಲಿ ತನಗೆ ತಾನೇ ಗಂಗೆಗೆ ಹರಿದಂತೆ. ಪರವಧುವನು ಅರಿಯಲು ಸಾಧ್ಯವಾಗುವುದೇ ಇಲ್ಲ.

**190**

**ಬೀಜ ಮೊಳೆವುದಲ್ಲದೆ ಮೊಳೆ ಮೊಳೆತುದುಂಟೆ ?**
**ಕ್ರೀಗೆ ಅರಿವಲ್ಲದೆ ಅರಿವಿಗೆ ಅರಿವುಂಟೆ ?**
**ಮೊಳೆ ಮೊಳೆತು ಪುನರಪಿ ಬೀಜವಾದಂತೆ,**
**ಅರಿವು ಕ್ರೀಯಲ್ಲಿ ನಿಂದು ಉಭಯವು ತಾನಾದ ತೆರದಂತೆ**
**ಆ ಎರಡರಲ್ಲಿ ಕೂಡಿದ ಉಳುಮೆಯನರಿಯಬೇಕೆಂದನಂಬಿಗ ಚೌಡಯ್ಯ .**

ಹೆಮ್ಮರವಾಗಬೇಕೆಂಬ ಬಯಕೆಯನು ಹೊಂದಿದ ಬೀಜ ಮೊಳಕೆಯೊಡೆದು ಮೊಳೆಯಾಗಿದೆ. ಮೊಳೆ ತಾನಾಗಿಯೇ ಮೊಳೆತಿಲ್ಲ. ಬೀಜದ ಹೊಟ್ಟೆ ಸೀಳಿ ಮೊಳೆ ಮೊಳೆತಿದೆ. ಬೀಜವೇ ಮೊಳೆಯಾಗಿ ಮೊಳೆತಿದೆ. ಅದು ಹೆಮ್ಮರವಾಗಿ ಹೂವಾಗಿ ಕಾಯಾಗಿ ಹಣ್ಣಾಗಿ ಪುನಹ ಬೀಜವಾಗಿದೆ.

ಬೀಜ ಮರದ ಸುಖ ಉಣ್ಣುವುದಕ್ಕಾಗಿ ಮೊಳೆ ಮೊಳೆತಿದೆ. ಬೀಜದಲ್ಲಿಯೇ ಇದ್ದು ಮರದ ಸುಖ ಉಣ್ಣುವುದಕ್ಕೆ ಆಗುವುದಿಲ್ಲ. ಆ ಸುಖ ಉಣ್ಣುವುದಕ್ಕಾಗಿ ಬೀಜ ಮೊಳಕೆ ಯೊಡೆಯಲೇಬೇಕು. ಮರವಾಗಲೇಬೇಕು.

ಬಯಲು ಕೂಡಾ ಒಂದು ಬೀಜವೇ ಆಗಿದೆ. ಆ ಬೀಜದಲ್ಲಿ ಬಯಲ ಮರವಡಗಿದೆ. ಅದನ್ನು ಬಸವಾದಿ ಶರಣರು, ಬುದ್ಧ ಬೋಧಿ ವೃಕ್ಷವೆಂದು ಕರೆದರು. ಆ ವೃಕ್ಷದಲ್ಲಿ ಪ್ರಪಂಚವೇ ಅಡಗಿದೆ. ಪಂಚ ಗುಣಗಳನ್ನು ಹೊಂದಿದೆ. ಆದರೂ ಗುಣವೇ ಇಲ್ಲದ ನಿರ್ಗುಣಿ ಎಂದು ಕರೆಯಿಸಿಕೊಂಡಿದೆ.

ಬೋಧೀ ಮರವೆಂಬ ಮಹಾವೃಕ್ಷದಲ್ಲಿ ಅರಿವು ಸಂಗಮವಾಗಿದೆ. ಮನ ವೃಕ್ಷವನ್ನು ಬಳ್ಳಿ ಯಂತೆ ಆವರಿಸಿಕೊಂಡಿದೆ. ಅರಿವಿಗೆ ಅರಿವಲ್ಲದೆ ಅದನ್ನು ಬಳಸಿಕೊಂಡ ಮನಕ್ಕೆ ಅರಿವುಂಟೆ ? ಮನ ಅರಿವನ್ನು ಬಳಸಿಕೊಂಡು ಆ ಅರಿವೇ ತಾನಾದಂತೆ. ಮನ ಘನದಲ್ಲಿ ಬೆರೆತು ಘನಮನವಾದಂತೆ.

ಘನ ಘನದ ಆನಂದವನ್ನು ಆಸ್ವಾದಿಸಲು ಬರುವುದಿಲ್ಲ. ಘನ ಬೋಧೀ ಮರದಲ್ಲಿ ಬೆರೆತು, ಮನ ಘನದಲ್ಲಿ ಬೆರೆತು ಘನಮನವಾಗಿ ಮಹಾವೃಕ್ಷದೊಂದಿಗೆ ಬೋಧೆ ಮಾಡಲು ಬರುತ್ತದೆ. ಘನವನ್ನೇ ಗರ್ಭದಲ್ಲಿರಿಸಿಕೊಂಡು ಘನದೊಂದಿಗೆ ಮಾತಾಡಲು ಬರುತ್ತದೆ. ಕಿರಿಯನಾಗಿ ಹಿರಿಯನೊಂದಿಗೆ ಬೆರೆತು ಆ ಹಿರಿಯನೊಂದಿಗೆ ಮಾತನಾಡಿ ಆನಂದ ಪಡುವ ಕಲೆ ಕಿರಿಯನಿಗೆ ಕರಗತವಾದಂತೆ !

ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ ಎಂದಂತೆ. ಯಾರು ಶಿವಭಕ್ತರಲ್ಲ? ಪ್ರ-ಪಂಚದಲ್ಲಿರುವ ಪಂಚ ಜ್ಞಾನೇಂದ್ರಿಯಗಳನ್ನು ಹೊತ್ತ ಅಂಗಗಳೆಲ್ಲವೂ ಮಹಾಲಿಂಗಗಳೇ ಆಗಿವೆ. ಆ ಲಿಂಗಗಳೆಲ್ಲಾ ಶಿವಭಕ್ತರೆ ! ಅದೆಲ್ಲವನ್ನೂ ತಿಳಿದ ಒಂದೇ ಒಂದು ಅಂಗ ಲಿಂಗಾಂಗ ! ಅದೇ ಕಿರಿಯ ಅಂಗ ! ಉಳಿದ ಅಂಗಗಳೆಲ್ಲಾ ಹಿರಿಯ ಲಿಂಗಾಂಗಗಳೇ ಆಗಿವೆ. ಆದರೆ ತಿಳಿದಿಲ್ಲ. ತಿಳಿಯದಿದ್ದರೇನಂತೆ ? ಲಿಂಗ ಅಂಗದಲ್ಲಿ ಸಂಗಮವಾಗಿದೆ. ಲಿಂಗ ಅಂಗವನ್ನುತಿಳಿಯಲು

ಬರುವುದಿಲ್ಲ. ಅಂಗಕ್ಕೆ ಲಿಂಗವನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಅಂಗವನ್ನು ಆವರಿಸಿದ ಮನಕ್ಕೆ ಅದು ಬೇಕಾಗಿಲ್ಲ. ಹೀಗಾಗಿ ತಿಳಿದ ಅಂಗ ಮಾತ್ರ ಲಿಂಗಾಂಗವಾಗಿ ಸರ್ವಾಂಗಗಳನ್ನು ಹಿರಿದು ಮಾಡಿ, ತಾನು ಕಿರಿದಾಗಿದೆ. ಅರಿವು ಕ್ರೀಯೆಯಲ್ಲಿ ನಿಂತು ಸಕಲವೂ ತಾನಾದಂತೆ.

**191**

**ಬೆಟ್ಟದ ಲಿಂಗವ ಹಿರಿದು ಮಾಡಿಕೊಂಡು ಪರಿವ ಕೊಟ್ಟಿ ಮೂಳರಿರಾ,**
**ಬಿಟ್ಟುಕೊಡಿ ನಿಮ್ಮ ಇಷ್ಟ ಲಿಂಗವ.**
**ನಮ್ಮ ಕೈಗೆ ಕೊಡದಿದ್ದಡೆ, ನಟ್ಟ ನಡುನೀರೊಳಗೊಯ್ದು,**
**ಕಟ್ಟಿ ಮುಳುಗಿಸಿ**
**ನಿಮ್ಮನು ಲಿಂಗೈಕ್ಯರ ಮಾಡುವೆನೆಂದಾತ**
**ನಮ್ಮಂಬಿಗ ಚೌಡಯ್ಯ .**

ಅಂಗದಲ್ಲಿ ಅರಿವು ಎಂಬ ಲಿಂಗ ಸಂಗಮವಾಗಿದೆ. ಅದು ಕಾಣುವುದಿಲ್ಲ. ಅಂಗವನ್ನು ಆವರಿಸಿದ ಮನ ನೋಡಲು ಬಯಸುತ್ತಿಲ್ಲ. ಹೀಗಾಗಿ ಕಾಣಬರುವ ಕಲ್ಲಿನಲ್ಲಿ ಲಿಂಗವನ್ನು ಮಾಡಿಕೊಂಡು, ಅಂಗದ ಮೇಲೆ ಧರಿಸಿ, ಅದನ್ನೇ ಇಷ್ಟ ಲಿಂಗವೆಂದು ಹೇಳುತ್ತಾ ಪೂಜಿಸುತ್ತಾ ಅದನ್ನೇ ಹಿರಿದು ಮಾಡಿ ತಾನು ಕಿರಿದಾಗಿ ತಿರುಗುತ್ತದೆ ಮನ.

ಅಂಗದ ಮೇಲೆ ಧರಿಸಿದ ಲಿಂಗವನ್ನೇ ಲಿಂಗವೆಂದು ಪೂಜಿಸಿ ಪೂಜಿಸಿ ಒಮ್ಮೆ ಅಂಗ ಸಾಯುತ್ತದೆ. ಅಂಗಕ್ಕೆ ಲಿಂಗವೆಂದರೇನೆಂದು ತಿಳಿಯಲಿಲ್ಲ. ಕಟ್ಟಿಕೊಂಡ ಲಿಂಗವನ್ನೇ ಹಿರಿದು ಮಾಡಿಕೊಂಡು ಪೂಜಿಸುವುದನ್ನು ಬಿಡಲಿಲ್ಲ. ಅಂಗವನ್ನು ಆವರಿಸಿದ ಮನ ಅಂಗದ ಮೇಲೆ ಧರಿಸಿದ ಬೆಟ್ಟದ ಲಿಂಗವನ್ನು ಅರಿವೆಂಬ ಲಿಂಗದ ಕೈಯಲ್ಲಿ ಕೊಡಲಿಲ್ಲ.

ಕಾಲಲ್ಲಿ ಕಟ್ಟಿಹುದು ಗುಂಡು, ಬೆನ್ನಲ್ಲಿ ಕಟ್ಟಿಹುದು ಬೆಂಡು. ತೇಲಲಿಯದು ಗುಂಡು, ಮುಳುಗಲೀಯದು ಬೆಂಡು ಎನ್ನುವಂತೆ ಅಂಗದಲ್ಲಿ ಸಂಗಮವಾದ ಲಿಂಗ ಒಂದು, ಅಂಗದ ಮೇಲೆ ಕಟ್ಟಿಕೊಂಡು ಲಿಂಗ ಒಂದು. ಅಂಗದಲ್ಲಿ ಸಂಗಮವಾದ ಲಿಂಗ ಅರಿವಿನೆಡೆ ಎಳೆದರೆ ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಅಜ್ಞಾನದೆಡೆಗೆ ಎಳೆಯುತ್ತಿದೆ. ಒಂದು ಮುಳು ಗಲೀಯದು; ಮತ್ತೊಂದು ತೇಲಲೀಯದು.

ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗದ ಕೈಗೆ ಅಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಕೊಡದಿದ್ದಡೆ, ಅದು ನಟ್ಟ ನಡ ನೀರೊಳಗೊಯ್ದು ಕಟ್ಟಿ ಮುಳುಗಿಸಿಬಿಡುತ್ತದೆ. ಲಿಂಗವನು ಅರಿಯದೆ ಲಿಂಗ ಲಿಂಗೈಕ್ಯನ ಮಾಡಿಬಿಡುತ್ತದೆ.

ಅಂಗ ಅರಿವಿನ ಲಿಂಗದ ಸುಖ ಉಣ್ಣಲು ಬಂದಿದೆ. ಆದರೆ ಮನ ಬೆಟ್ಟದ ಕಲ್ಲನ್ನೇ ಕಟೆದು ಲಿಂಗವ ನ್ನಾಗಿಸಿ ಅಂಗದ ಮೇಲೆ ಧರಿಸಿಕೊಂಡಿದೆ. ಅದನ್ನೇ ಇಷ್ಟಲಿಂಗವೆಂದು ನಂಬಿ ನಿತ್ಯ ನಿತ್ಯ ಪೂಜಿಸುತ್ತಲಿದೆ. ಪೂಜೆಗೊಳ್ಳಬೇಕಾದ ಲಿಂಗ ಅಂಗದಲ್ಲಿ ಪೂಜೆಗೊಳ್ಳದೆ ಹಾಗೇ ಇದೆ.

ಮನದ ಕುತಂತ್ರಕ್ಕೆ ಅಂಗ ಬಲಿಯಾಗಿದೆ. ಮನ ಅಜ್ಞಾನದತ್ತ ಎಳೆದರೆ, ಅರಿವೆಂಬ ಲಿಂಗ (ಸುಜ್ಞಾನದತ್ತ) ತನ್ನತ್ತ ಸೆಳೆಯುತ್ತಲಿದೆ. ಲಿಂಗವನ್ನು ಪೂಜಿಸಿ ಲಿಂಗವೆಂದರೇನೆಂದು ತಿಳಿಯದೆ ಅಂಗದ ಆಯುಷ್ಯ ಮುಗಿದೇ ಹೋಗುತ್ತದೆ.

192

**ಬೆಟ್ಟದ ಲಿಂಗವ ಹಿರಿದು ಮಾಡಿ, ತನ್ನ ಇಷ್ಟಲಿಂಗವ ಕಿರಿದು**
**ಮಾಡುವ ಮೂಳ ಹೊಲೆಯರಿರಾ, ಅಣುರೇಣು ತೃಣಕಾಷ್ಠ**
**ಮೊದಲಾದ ಬ್ರಹ್ಮಾಂಡ ಪರಿಪೂರ್ಣವಾದ**
**ಮಹಾಲಿಂಗವೇ ಅಂಗಕ್ಕೆ ಗುರುವು ಎಂದು ಸಂಬಂಧಿಸಿ**
**ಸರ್ವ ಸಂಕುಲವ ತೋರಿದ ಬಳಿಕ, ಇಂತಪ್ಪ ಮೋಕ್ಷಕ್ಕೆ**
**ಕಾರಣವಾದ ಲಿಂಗವನು ಅಡಿಮಾಡಿ ನಟ್ಟ ಕಲ್ಲಿಂಗೆ ಅಡ್ಡ ಬೀಳುವ**
**ಹೊಲೆಯರಿಗೆ ಲಿಂಗ ಕಟ್ಟುವುದು ಕಿರಿದು,**
**ಗೊಡ್ಡೆಮ್ಮೆಗೆ ಲಿಂಗವದು ಕರಲೇಸು.**
**ಇಂಥ ಮೂಳ ಹೊಲೆಯರು, ಶಿವಭಕ್ತರೆಂದು ನುಡಿವ ಭ್ರಷ್ಟರನು**
**ಕತ್ತೆಯನೇರಿಸಿ ಕೆರಹಿನಟ್ಟೆಯಲಿ ಹೊಡೆಯೆಂದಾತ**
**ನಮ್ಮ ಅಂಬಿಗರ ಚೌಡಯ್ಯನೆಂಬ ನಿಜಶರಣನು.**

ಲಿಂಗ ಎಂದರೆ ಅರಿವು. ಅದು ಅಂಗದಲ್ಲಿ ಸಂಗಮವಾಗಿದೆ. ಆ ಅರಿವನ್ನೇ ದೇವರು ಲಿಂಗ ಶಿವ ಸತ್ಯ ಚೈತನ್ಯ ಎಂದು ಕರೆದರು. ಅಂತಹ ಲಿಂಗವನ್ನು ಬೆಟ್ಟದ ಕಲ್ಲಿನಲ್ಲಿ ಕೆತ್ತಿ ಅಂಗದ ಮೇಲೆ ಧರಿಸಿದರೆ ಅದು ಇಷ್ಟ ಲಿಂಗವಾಗಲು ಸಾಧ್ಯವೇ? ಕೆತ್ತಿದ ಲಿಂಗವನ್ನೇ ಹಿರಿದು ಮಾಡಿ ಪೂಜಿಸಿದರೆ ಅದು ತನಗೆ ಬೇಡಿದುದನ್ನು ಕೊಡಬಲ್ಲುದೆ? ಅಂಗದಲ್ಲಿ ಸಂಗಮವಾದ ಲಿಂಗವನ್ನು ಜಗದಲ್ಲಿರುವ ಸಕಲ  ಅಂಗಗಳು ಮರೆತು ಹೋಗಿವೆ.

ಶಿಲುಬೆ ಲಿಂಗ ಜನಿವಾರ ಧರಿಸಿ ನಾನೇ ಶ್ರೇಷ್ಠವೆಂದು ಮೆರೆಯುವ ಅಂಗಗಳಿಗೆ ಏನೆನ್ನಬೇಕು? ಇಷ್ಟಲಿಂಗ ಮರೆತ ಮೂಳ ಹೊಲೆಯರಿರಾ ಎಂದು ಕರೆದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಲಿಂಗ ಅಂಗದಲ್ಲಿ ಸಂಗಮವಾಗಿದೆ. ಅಂಗಕ್ಕೆ ಇಷ್ಟಲಿಂಗವಾಗಿ ಗುರುವಾಗಿ ಹಗಲಿರುಳೆನ್ನದೆ ಬೋಧಿಸುತ್ತಲಿದೆ. ಗುರುವಾಗಿ ಬೋಧಿಸುವ ಲಿಂಗವನ್ನೇ ಮರೆತು ಬೆಟ್ಟದ ಕಲ್ಲಿನಲ್ಲಿ ಕೆತ್ತಿದ ಲಿಂಗವನ್ನು ಇಷ್ಟಲಿಂಗವನ್ನಾಗಿ ಮಾಡಿಕೊಂಡು ಅಂಗದ ಮೇಲೆ ಧರಿಸಿಕೊಂಡು ಮಂಗ ಮನಕ್ಕೆ ಏನೆನ್ನಬೇಕು?

ಸರ್ವ ಮಾನವ ಕುಲದ ಮೋಕ್ಷಕ್ಕೆ ಕಾರಣವಾದ ಲಿಂಗವನ್ನು ಅಡಿ ಮಾಡಿ, ನೆಟ್ಟ ಕಲ್ಲಿಗೆ ಅಡ್ಡ ಬೀಳುವ  ಹೊಲೆ ಮನ ವಾಸ ಮಾಡಿದ ಅಂಗಕ್ಕೆ ಲಿಂಗ ಕಟ್ಟುವುದಕ್ಕಿಂತ ಗೊಡ್ಡೆಮ್ಮೆಗೆ ಲಿಂಗ ಕಟ್ಟುವುದು ಕರಲೇಸು !

ಲಿಂಗವೆಂದರೇನೆಂದು ತಿಳಿಯದೆ ಅಂಗಕ್ಕೆ ಲಿಂಗ ಕಟ್ಟುವ ಕಾಯಕದಲ್ಲಿ ತೊಡಗಿದ ಮೂಳ ಹೊಲೆ ಮನವನ್ನು ಶಿವಭಕ್ತರೆಂದು ನುಡಿಯುವ ಮನಗಳನ್ನು ಕೂಡಾ ಭ್ರಷ್ಟರೆಂದು ಜರಿದಿದ್ದಾರೆ ಚೌಡಯ್ಯ ಶರಣರು.

ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನನ್ನು ಅಂಬಿಗರ ಚೌಡಯ್ಯನೆಂಬ ನಿಜಶರಣನು ಎಂದು ಹೆಸರಿಟ್ಟು ಕರೆದಿದ್ದಾರೆ ಚೌಡಯ್ಯ ಶರಣರು.

ಅರಿವೆಂಬ ಗುರುದೇವ ಸಕಲ ಅಂಗಗಳಲ್ಲಿ ಸಂಗಮವಾಗಿದ್ದಾನೆ. ಅಜ್ಞಾನದ

ಆಚರಣೆಯಲ್ಲಿ ತೊಡಗಿದ ಮನಕ್ಕೆ ಗುರುವಾಗಿ ಮೂದಲಿಸಿ ನುಡಿಯುತ್ತಾನೆ. ಆ ಗುರು ನುಡಿಯನ್ನು ಕೇಳಿ ಆತ ನುಡಿದಂತೆ ನಡೆದ ಅಂಗವೇ ಲಿಂಗಾಂಗ ! ಈ ಸೂತ್ರ ಜಗದ ಸಕಲ ಅಂಗಗಳಿಗೂ ಲಭ್ಯವಾಗಲೆಂಬುದೇ ಶರಣರ ಆಶಯ.

**193**

**ಬೆಲ್ಲಕ್ಕೆ ಚದುರಸವಲ್ಲದೆ ಸಿಹಿಗೆ ಚದುರಸವುಂಟೆ ?**
**ಕುರುಹಿಂಗೆ ಪೂಜೆಯಲ್ಲದೆ ಅರಿವಿಂಗೆ ಪೂಜೆ ಉಂಟೆ ?**
**ಅರಿವು ಕರಿಗೊಂಡಲ್ಲಿ ಕೈಯ ಕುರುಹು**
**ಅಲ್ಲಿಯೇ ಲೋಪವೆಂದನಂಬಿಗ ಚೌಡಯ್ಯ .**

ಸಿಹಿಯಿಂದಾಗಿ ಬೆಲ್ಲದಲ್ಲಿ ಸಿಹಿ ಕಾಣಿಸಿಕೊಂಡಿದೆ. ಬೆಲ್ಲದಲ್ಲಿ ಸಿಹಿ ಇಲ್ಲ. ಸಿಹಿ ಹುಟ್ಟಿದ ಜಾಗದಲ್ಲಿ ಬೆಲ್ಲ ಇಲ್ಲ. ಸಿಹಿ ಇದೆ. ಬೆಲ್ಲದಲ್ಲಿಯೇ ಸಿಹಿ ಇದೆ ಎಂದು ಭಾಸವಾಗಿದೆ. ಹೀಗಾಗಿ ಮನ ಬೆಲ್ಲದಲ್ಲಿ ಸಿಹಿ ಹುಡುಕಾಡುತ್ತಿದೆ. ಅಲ್ಲಿ ಸಿಹಿ ಇಲ್ಲ. ಸಿಹಿ ಇರುವ ಜಾಗದಿಂದಾಗಿ ಬೆಲ್ಲದಲ್ಲಿ ಚದುರಸ ಉಂಟಾಗಿದೆ.

ಅರಿವಿಗಾಗಿ ಪೂಜೆ. ಅರಿವಿನ ಸಾಕ್ಷಾತ್ಕಾರಕ್ಕಾಗಿ ಲೋಕ ಕುರುಹನ್ನು ಪೂಜಿಸುತ್ತದೆ. ಅರಿವಿಗೆ ಪೂಜೆ ಬೇಡವೆಂದು ಲೋಕಕ್ಕೆ ತಿಳಿಯುವುದಿಲ್ಲ. ನನಗೆ ತಿಳಿಯುವುದು ಬೇಡವೆ ? ನನಗೂ ತಿಳಿಯುತ್ತಿಲ್ಲ. ಏಕೆಂದರೆ ನಾನು ಇರುವುದೇ ಕುರುಹನ್ನು ಪೂಜಿಸುವುದಕ್ಕಾಗಿ. ನಾನು ಹೋದರೆ ಕುರುಹಿಲ್ಲ ; ಪೂಜೆಯೂ ಇಲ್ಲ. ಪೂಜೆಗೊಳ್ಳುವ ವಸ್ತು ಪೂಜೆಗೂ ಮುನ್ನ ಕಲ್ಲಾ ಗಿತ್ತು . ಕಲ್ಲು ಕಲ್ಲೇ ಎಂದು ಅರಿತಿದ್ದರಿಂದ ಅರಿವುಂಟಾಯಿತು. ಕಲ್ಲಲ್ಲಿ ಅರಿವು ಹುಟ್ಟಿದ್ದರಿಂದ ಪೂಜೆ ನಿಂತಿತು. ಅರಿವಿಗೆ ಪೂಜೆ ಉಂಟೆ ?

''ತನ್ನ ತಾನರಿಯದ ಮುನ್ನ ತನ್ಮಯವಾದ ಅರಿವು. ತನ್ನ ತಾನರಿತ ಬಳಿಕ ಅರಿವು ತನ್ಮಯವೆಂದು ಅರಿತ ಅರಿವು. ಆ ಅರಿವೇ ತನ್ನಲ್ಲಿ ಕರಿಗೊಂಡ ಬಳಿಕ ತಾನೇ ಸೌರಾಷ್ಟ್ರ ಸೋಮೇಶ್ವರ'' ಆದಯ್ಯ ಶರಣರ ಈ ಸೂತ್ರ ಸುಂದರವಾದದ್ದು.

ಅರಿವಾಗದ ಮುನ್ನ ಕುರುಹನ್ನು ಪೂಜಿಸಿದ. ಅರಿವಾದ ಮೇಲೆ ಆ ಅರಿವು ಕುರುಹಿನಲ್ಲಿಯೇ ತನ್ಮಯವೆಂದು ತಿಳಿಯಿತು. ಪೂಜಿಸುವ ಕುರುಹು ಲೋಪವಾಯಿತು. ಏನನ್ನು ಪೂಜಿಸುವುದು ? ಅರಿವು ಅರಿವನ್ನು ಪೂಜಿಸಲು ಸಾಧ್ಯವೆ ?

**194**

**ಬೆಲ್ಲದ ಹೊಗೆಯನಿಕ್ಕಿ ,**
**ಭರಣಿಯ ಹೊರವಂತೆ ಇರಬೇಡವೆ ಗುರುವಿನುಪದೇಶ ?**
**ದಾರಿಯ ಹಸಮಾಡಿ ನೀರ ತಿದ್ದುವಂತೆ**
**ಇರಬೇಡವೆ ಗುರುವಿನುಪದೇಶ ?**
**ಹಾಲುಂಬ ಹಸುಳೆಗೆ ಕೂಳು ಮೈಯಕ್ಕುವುದೆ ?**
**ಬುದ್ಧಿಹೀನರು ಬಲ್ಲರೆ ಪರಬ್ರಹ್ಮದ ಸುಖವ ?**

**ಈ ಭೇದವನರಿಯದ ಗುರುಶಿಷ್ಯರಿಬ್ಬರೂ ಇದ್ದ**
**ಊರೊಳಗಿರೆನೆಂದನಂಬಿಗ ಚೌಡಯ್ಯ .**

ದಾರಿ ಹೋಕನಿಗೆ ದಾರಿ ತೋರಿಸುವವನಂತೆ ಇರುವವನನ್ನು ಗುರು ಎಂದು ಕರೆಯಬಹುದು. ದಾರಿ ನಡೆಯದೆ ದಾರಿಯ ಮಾಹಿತಿ ಹೇಳುತ್ತಾ ತನ್ನಲ್ಲಿಯೇ ಕೂಡಿಸಿಕೊಂಡು ಸಮಯ ಹಾಳು ಮಾಡುವವನನ್ನು ಸಮಯ ಸಾಧಕ ಎನ್ನಬಹುದು. ಹೀಗೆ ಕುಳಿತು ಕೇಳುವ ಹೇಳುವ ಗುರುಶಿಷ್ಯರಿಬ್ಬರಿದ್ದ ಊರೊಳಗೆ ಅರಿವೆಂಬ ಗುರುದೇವನು ಇರಲಾರನು. ಆ ಊರು ಸಿನೆಬಂಜೆ.

ದೇಹವನ್ನು ದೇಶ ಎಂದು ಕರೆದರು. ಊರು ಗ್ರಾಮ ಪಟ್ಟಣ ಪುರ ಎಂದು ಕರೆದರು. ಪ್ರ-ಪಂಚ ಎಂದೂ ಕರೆದರು. ದೇಹದಲ್ಲಿ ಗುರುವಿದ್ದಾನೆ. ಗುರುವನ್ನು ಕಂಡುಕೊಂಡವನೇ ಗುರು. ಗುರು ಹೀಗಿದ್ದಾನೆ ಎಂದು ಗುರುವಿನ ಮಾಹಿತಿ ಕೊಡುವವನನ್ನೇ ಹಿಡಿದುಕೊಂಡು ಗುರುವನ್ನು ಬಿಡುವುದು ದೇಹದ ಧರ್ಮವಲ್ಲ. ಗುರುವಿನ ಮಾಹಿತಿ ಕೊಡುವವನನ್ನೇ ಗುರು ಎಂದು ಹಿಡಿದುಕೊಂಡು ಅವನ ಸೇವೆ ಮಾಡುತ್ತ ಕಾಲ ಕಳೆಯುವುದು ಕೂಡಾ ದೇಹದ ಧರ್ಮವಲ್ಲ.

ಗುರುವಿನ ಮಾಹಿತಿ ಕೊಡುವವನು ತಾನು ಗುರುವಾಗಿ, ಸಕಲರನ್ನೂ ತನ್ನಂತೆ ಗುರು ಮಾಡಲು ಹೊರಟವನು. ಗುರುವಿಗೆ ಗುರುವನ್ನಾಗಿಸುವ ಉದ್ದೇಶವಿರಬೇಕೇ ಹೊರತು; ಶಿಷ್ಯನನ್ನಾಗಿಸುವ ಹಂಬಲವಿರಲೇಬಾರದು. ಏಕೆಂದರೆ ಸಕಲ ದೇಹಗಳಲ್ಲಿಯೂ ಅರಿವಿದೆ. ಆ ಅರಿವೆ ಗುರು. ಆ ಗುರುದೇವನನ್ನು ತಿಳಿಯುವ ಮನವೂ ದೇಹವನ್ನು ಆವರಿಸಿಕೊಂಡಿದೆ. ಮನದ ಮೈದಡವಿ ಆ ಮನಕ್ಕೆ ಗುರು ದರ್ಶನ ಮಾಡಿಸುವುದೇ ಗುರುವಿನ ಧರ್ಮ !

ಗುರುವಿನಿಂದ ಈ ಕೆಲಸವಾಗದಿದ್ದರೆ, ಬೆಲ್ಲದ ಹೊಗೆಯನು ಹಾಕಿ ಭರಣಿಯ ಹೊರುವಂತೆ. ದಾರಿ ಹಸ ಮಾಡಿ ನೀರು ಚೆಲ್ಲಿದಂತೆ. ಹಾಲುಂಬ ಹಸುಳೆಗೆ ಕೂಳು ಇಕ್ಕಿದಂತೆ. ಬುದ್ಧಿ ಹೇಳುವ ಮನಕ್ಕೆ ಬ್ರಹ್ಮಸುಖವನು ಹೇಳಿದರೆ ಅದು ತಿಳಿಯಲು ಸಾಧ್ಯವೆ ? ಈ ಭೇದವನು ಅರಿಯದ ಗುರು ಶಿಷ್ಯರ ಹೃದಯದೊಳಗಿರುವ ಗುರು ಅಲ್ಲಿಯೇ ಕರಗುತ್ತಾನೆ. ಗುರು ಶಿಷ್ಯರಿಬ್ಬರೂ ಗುರು ಸುಖವನರಿಯದೆ ನರಳುತ್ತಾರೆ. ಗುರು ಸುಖವೆಂದರೆ ಅದು ಅರಿವಿನ ಸುಖ. ಆ ಸುಖವನ್ನು ಉಣ್ಣಲು ಗುರುವೂ ಬಂದಿದ್ದಾನೆ ಶಿಷ್ಯನೂ ಬಂದಿದ್ದಾನೆ. ಇವೆರಡೂ ಪಾತ್ರಗಳೇ ಹೊರತು ನಿಜವಲ್ಲ. ಈ ಭೇದವನು ಅರಿಯದ ಎರಡೂ ದೇಹಗಳಲ್ಲಿ ಅರಿವು ಮರೆಯಾಗುತ್ತದೆ.

**195**

**ಬೇಗ ಬೇಗನೆ ಗತಿ-ಪಥದ ಜ್ಞಾನವ ಮಾಡಿಕೊಂಡು**
**ನೀಗಿರೊ ನಿಮ್ಮ ಭವಬಂಧನದ ಸಾಗರವನು.**
**ಪ್ರಾಣತ್ಯಾಗವು ಈಗಲೋ ಆಗಲೋ ಯಾವಾಗಲೋ**
**ಎಂದರಿಯಬಾರದು.**
**ರೋಗ ರುಜೆಗಳಿಗೆ ಆಗರವು ನಿಮ್ಮ ಒಡಲು.**
**ತನು-ಮನ-ಪ್ರಾಣವ ನೆಚ್ಚದಿರು,**

**ನಾಗಭೂಷಣನ ಪಾದಪೂಜೆಯ ಮಾಡಿ,**
**ಶಿವಯೋಗದಲಿ ಲಿಂಗವನೊಡಗೂಡಿ ಸಾಗಿ ಹೋಗುವವರನು**
**ಭವಗೇಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ.**

ಸಕಲ ದೇಹಗಳಲ್ಲಿರುವ ಅರಿವಿನ ಸಂಪತ್ತು ಆಯಾ ದೇಹಗಳಿಗೆ ಲಭ್ಯವಾಗಲಿ ಎಂಬ ಕಳಕಳಿ ಶರಣರದು. ದೇಹದ ಪ್ರಾಣ ಎಂದಾದರೂ ಹೋಗಬಹುದು. ಅದು ಶವವಾಗುವುದಕ್ಕೆ ಮುನ್ನ ದೇಹದ ಅರಿವಿನ ಸಂಪತ್ತು ದೇಹಕ್ಕೆ ಲಭ್ಯವಾಗಲಿ ; ಎಂದು ಹಗಲಿರುಳೆನ್ನದೆ ಶ್ರಮಿಸಿದ್ದಾರೆ ಶರಣರು.

ದೇಹ ರೋಗ ರುಜಿನಿಗಳ ಆಗರ. ದೇಹ ಪ್ರಾಣ ಮನವನು ನೆಚ್ಚದಿರು. ನಾಗಭೂಷಣನ ಪಾದ ಪೂಜೆಯ ಮಾಡಿ ಶಿವಯೋಗದಲಿ ಲಿಂಗವನೊಡಗೂಡಿ ಸಾಗಿಹೋಗುವವನೇ ಭವಗೇಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ.

ತನುವಿನಲ್ಲಿ ಮನವೂ ಇದೆ ; ಪ್ರಾಣವೂ ಇದೆ. ಮನ ತನ್ನ ಸುಖಕ್ಕಾಗಿ ತನುವನ್ನು ದುರ್ಬಳಕೆ ಮಾಡುತ್ತದೆ. ರಾಜಸ ತಾಮಸ ಸಾತ್ವಿಕನ ಪಟ್ಟ ತನುವಿಗೆ ಕಟ್ಟಿ ಆ ಮೂರೂ ಕ್ಷೇತ್ರದಲ್ಲಿ ಹಾವಿನಂತೆ ಹರಿದಾಡುತ್ತದೆ ಮನ. ಆ ಮೂರೂ ಮುಖಗಳಿಗೆ ಹುತ್ತವಾಗಿ ಮನವೆಂಬ ಹಾವಿಗೆ ದ್ವಾರ ನಿರ್ಮಿಸಿದೆ ತನು.

ಮೂರು ಮುಖಗಳಲ್ಲಿ ಹರಿದಾಡುವ ಹಾವಿನ ಹಲ್ಲು ಕಿತ್ತಿ ಆಭರಣ ಮಾಡಿಕೊಂಡವನೇ ನಾಗಭೂಷಣ ! ಮನವೆಂಬ ನಾಗ ತನುವನ್ನು ಆವರಿಸಿದೆ. ತನುವಿನಲ್ಲಿ ತನ್ಮಯವಾಗಿದ್ದಾನೆ ಲಿಂಗದೇವ. ಮನಕ್ಕೆ ಈ ದೇವನ ಪರಿಚಯವಿಲ್ಲ. ಪರಿ ಚಯ ಮಾಡಿಕೊಂಡು ಪಾದ ಪೂಜೆಯ ಮಾಡಿ ಆತನ ಕೊರಳಿಗೆ ಆಭರಣ ವಾದ ಮನವೇ ಧನ್ಯ. ಶಿವಯೋಗದಲಿ ಲಿಂಗವನು ಒಡಗೂಡಿ ಲಿಂಗಾಂಗವೇ ತಾನಾಗುತ್ತದೆ ಮನ, ಮನ ಘನಮನವಾಗುತ್ತದೆ. ಜನನ ಮರಣ ಕಳೆದುಕೊಂಡು ಮರುಜವಣಿಯ ಫಲ ಮೆದ್ದು ಅಂಬಿಗರ ಚೌಡಯ್ಯನೇ ತಾನಾಗುತ್ತದೆ.

ಅಂಗಕ್ಕೆ ಹೆಸರು ಯಾವುದಿದ್ದರೇನು ? ಅಂಗ ರಾಮನಾದರೇನು, ರಹೀಮ ನಾದರೇನು, ಡೇವಿಡ್ ಆದರೇನು? ಅದು ಹೆಸರಿಲ್ಲದ ವೃಕ್ಷವೆಂದು ಅಂಗಕ್ಕೆ ತಿಳಿದರೆ ಸಾಕು. ಅಂಗಕ್ಕೆ ಇಟ್ಟ ಹೆಸರನ್ನೇ ನಾಗಭೂಷಣನಿಗೆ ಇಟ್ಟು ಧನ್ಯತೆಯನ್ನು ಮೆರೆಯುತ್ತದೆ.

ಹಾಗೆಯೇ ಅಂಬಿಗರ ಚೌಡಯ್ಯ ತನ್ನ ಹೆಸರನ್ನೇ ಹೆಸರಿಲ್ಲದ ಆ ಪರಮಾತ್ಮನಿಗೆ ಇಟ್ಟು ಭವಗೇಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ. ತನ್ನ ಆ ಹೆಸರನ್ನು ಅವನಿಗೆ ಇಟ್ಟು ಜನನ ಮರಣಗಳನ್ನು ಕಳೆದುಕೊಂಡಿದ್ದಾನೆ.

**196**

**ಬ್ರಹ್ಮ ಕುಮಾರ, ವಿಷ್ಣು ಅಬಳ,**
**ಲೆಕ್ಕವಿಲ್ಲದ ರುದ್ರರು ನೋಡಾ.**
**ದೇವರ್ಕಳೆಲ್ಲಾ ಗರ್ವದಲ್ಲೈದಾರೆ,**
**ಅವರೆತ್ತಬಲ್ಲರು ಶಿವನಾದಿಯಂತುವ ?**
**ಶಾಶ್ವತ ಪದಕ್ಕೆ ಸಲ್ಲದ ಕಾರಣ,**

**ಇವರು ವೇಷಧಾರಿಗಳೆಂದಾತನಂಬಿಗ ಚೌಡಯ್ಯ .**

ಬ್ರಹ್ಮ ವಿಷ್ಣು ರುದ್ರರೆಲ್ಲ ಪರಿಪೂರ್ಣರಲ್ಲ. ಶಿವ ಮಾತ್ರ ಪರಿಪೂರ್ಣ. ಶಿವನಿಗೆ ಹುಟ್ಟು ಸಾವುಗಳಿಲ್ಲ. ರೂಹುಕೂಡಾ ಇಲ್ಲ. ಅದಕ್ಕಾಗಿಯೇ ಅಕ್ಕ ಸಾವ ಕೆಡುವ ಗಂಡರನು ಒಯ್ದು ಹೊಲೆಯೊಳಗಿಕ್ಕು ಎಂದರು. ಸಾವಿಲ್ಲದ ಕೇಡಿಲ್ಲದ ರೂಹೇ ಇಲ್ಲದ ಚೆಲುವನಿಗೆ ಒಲಿದು ; ಅವನನ್ನು ವರಿಸಿದಳು. ಅಂತಹ ಚೆಲುವ ಯಾರಾಗಿರಬಹುದು ? ಅವನು ಆದಿಯೂ ಅಲ್ಲ; ಅನಾದಿಯೂ ಅಲ್ಲ. ಆದಿ, ಅನಾದಿಯಿಂದತ್ತತ್ತಲಿರುವ ಶಿವನಿಗೆ-ಮಲ್ಲಿಕಾರ್ಜುನನಿಗೆ ಮನಸೋತಳು. ಆತ ಶಾಶ್ವತ. ಬ್ರಹ್ಮ ವಿಷ್ಣು ರುದ್ರರು ಅಶಾಶ್ವತರು.

ಇದು ಶರಣರ ಭಾಷೆ. ತತ್ತ್ವವೇತ್ತರ ಭಾಷೆ. ದಾಸರ ತತ್ವಪದಕಾರರ ಭಾಷೆ. ಕ್ರಿಷ್ಣ, ಕ್ರಿಸ್ತ, ಪೈಗಂಬರರ ಭಾಷೆ. ಬುದ್ಧ ಮಹಾವೀರ ಶಂಕರರ ಭಾಷೆ !

ಇಂತಹ ಭಾಷೆ ತಾನು ತನ್ನ ಅರಿವಿಗೆ ದಾಸು ಹೋದವನಿಗೆ ಮಾತ್ರ ಬರುತ್ತದೆ. ತನ್ನರಿವಿಗೆ ಶರಣು ಹೋದವನಿಗೆ ಮಾತ್ರ ಬರುತ್ತದೆ. ಆ ಅರಿವೇ ಗುರು. ಆ ಅರಿವೇ ಶಿವ ! ಆ ಅರಿವನ್ನು ಹೊತ್ತ ದೇಹವೇ ವಿಷ್ಣು. ಆ ಅರಿವನ್ನು ತಿಳಿಯುವ ಮನವೇ ಬ್ರಹ್ಮ. ಆ ಅರಿವಿನಿಂದ ತನುವಿನ ಅಜ್ಞಾನವನ್ನು ಕೊಲ್ಲುವವನೇ ರುದ್ರ . ಇವರು ಒಂದೊಂದೇ ಕೆಲಸವನ್ನು ಮಾಡುವವರು. ಅರಿವು ಹಾಗಲ್ಲ. ಅದು ಗುರುವೂ ಹೌದು. ಮಹಾದೇವನೂ ಹೌದು. ಸದಾಶಿವನೂ ಹೌದು. ಹೀಗಾಗಿ '' ಗುರುದೇವೋ ಮಹಾದೇವೋ ಗುರುದೇವೋ ಸದಾಶಿವಃ ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರುವೇ ನಮಃ '' ಎಂದಿದ್ದಾರೆ.

ವಿಷ್ಣು ಹೆಸರಿನ ದೇಹ, ಬ್ರಹ್ಮ ಹೆಸರಿನ ಮನ, ದೇಹ ಮತ್ತು ಮನಗಳಿಂದ ಹುಟ್ಟುವ ಅಜ್ಞಾನವನ್ನು ಕೊಲ್ಲುವ ರುದ್ರರು ಗರ್ವಿಷ್ಠರು. ಅವರು ಶಿವನ ಇರುವನ್ನು ತಿಳಿಯದವರು. ಶಾಶ್ವತ ಪದವಿಗೆ ಸಲ್ಲದವರು. ವೇಷಧಾರಿಗಳು ಎಂದು ಅಂಬಿಗರ ಚೌಡಯ್ಯ ಶರಣರು ಬ್ರಹ್ಮ ವಿಷ್ಣು ರುದ್ರರನ್ನು ಜರಿದಿದ್ದಾರೆ.

ಚೌಡಯ್ಯ ಶರಣರು ಶಿವನನ್ನು ಕಂಡವರು. ಶಿವನನ್ನು ಕಾಣುವ ತವಕದಲ್ಲಿದ್ದ ಸಾಧಕರಿಗೆ ಮೇಲ್ಕಂಡ ಕಿವಿಮಾತು ಹೇಳಿದ್ದಾರೆ. ಕೇಳಿದರೆ ಕೇಳಲಿ ಬಿಟ್ಟರೆ ಇಡಲಿ. ಹೇಳುವುದು ಮಾತ್ರ ತನ್ನ ಕರ್ತವ್ಯವೆಂಬಂತಿದೆ ಶರಣರ ಈ ಮಾತು.

**197**

**ಬ್ರಹ್ಮಕ್ಕೆ ಬಾಯಿ ತೆರೆದು ಮಾತನಾಡಿ,**
**ಪರಬೊಮ್ಮದ ವಶ್ಯವ ನುಡಿದು**
**ಒಮ್ಮನ ಅಂಬಲಿಯನಿಕ್ಕೆಂದು ಹಲುಬುವ ಹೊಲಬುಗೆಟ್ಟವರ ಕಂಡು**
**ಅವರಿಗೆ ಒಲವರವಿಲ್ಲಾ ಎಂದನಂಬಿಗ ಚೌಡಯ್ಯ .**

ಬ್ರಹ್ಮ ಜ್ಞಾನವೆಂದರೆ ವೇಷ ಹಾಕುವುದಲ್ಲ. ವೇಷಹಾಕಿ ಬೇಡುವುದೂ ಅಲ್ಲ. ಬ್ರಹ್ಮಜ್ಞಾನದ ಮಾತನಾಡಿ ಭ್ರಮೆಗೊಳಗಾದರೆ ಉಪಯೋಗವೇನು?

ಭ್ರಮೆ ಕಳೆದುಕೊಂಡು ಸಹಜವಾಗಿ ಇರುವುದು. ಭ್ರಮಾ ಜೀವನದಿಂದ ಸಹಜತೆಗೆ

ಎನ್ನುವುದು ಪರಿವರ್ತನೆಗೊಳ್ಳುವುದು. ಸಹಜತೆ ಅಂಗದಲ್ಲಿ ಸಂಗಮವಾಗಿದೆ. ಅಂಗವನ್ನು ಭ್ರಮೆ ಆವರಿಸಿಕೊಂಡಿದೆ. ಸಹಜತೆಯೆಂದರೆ ಬ್ರಹ್ಮಜ್ಞಾನ. ಅದು ಅಂಗದಲ್ಲಿಯೇ ಇದೆ. ಆದರೆ ಮನವೆಂಬ ಭ್ರಮೆ ಬ್ರಹ್ಮಜ್ಞಾನವನ್ನು ಬಳಕೆ ಮಾಡಲು ಆಸ್ಪದ ಕೊಡುತ್ತಿಲ್ಲ.

ಆ ಭ್ರಮೆಯೇ ಬ್ರಹ್ಮಜ್ಞಾನಿಯ ವೇಷ ಹಾಕಿ ಅಂಗಕ್ಕೆ ಬೇಡಲು ಹಚ್ಚಿದೆ. ಬ್ರಹ್ಮಜ್ಞಾನಿಯಂತೆ ಮಾತನಾಡಲು ಹಚ್ಚಿದೆ. ಒಮ್ಮನ ಅಂಬಲಿ ಇಕ್ಕೆಂದು ಹಲಬುತ್ತಾ ಹೊಲಬು ಗೆಟ್ಟಿದೆ. ಅದಕ್ಕೆ ಸತ್ಯವೆಂದರೇನೆಂದು ತಿಳಿಯುವುದಿಲ್ಲ. ಸತ್ಯದ ವೇಷ, ಸತ್ಯದ ಮಾತುಗಳು ಮಾತ್ರ ಹೊರಬರುತ್ತವೆ. ಇದು ಸತ್ಯವಲ್ಲವೆಂದು ತನಗೆ ತಿಳಿದಿದೆ. ಶರಣನಿಗೂ ತಿಳಿದಿದೆ. ಆದರೆ ವೇಷದಲ್ಲಿ ಮನಕ್ಕೆ ಸುಖವಿದೆ.

ಮನ ತನ್ನ ಬಾಹ್ಯ ಸುಖ ತ್ಯಜಿಸಲು ಬರುವುದಿಲ್ಲ. ತನುವಿನಲ್ಲಿದ್ದ ಸಹಜ ಸುಖಕ್ಕೆ ಮಾರು ಹೋಗಿಯೆ ಮಾರ್ಪಾಡಾಗಬಹುದಾಗಿದೆ. ಹಾಗೆ ಸ್ಥಾನ ಪಲ್ಲಟಗೊಳ್ಳಲು ಮನಕ್ಕೆ ಗೊತ್ತಾಗುವುದಿಲ್ಲ. ಹೀಗಾಗಿ ದೇಹ ದುಃಖ ಮತ್ತು ಸುಖದ ರಸಾಯನಿಕ ಕೃತಕ ಕ್ರಿಯೆಗೆ ಮತ್ತೆ ಮತ್ತೆ ತುತ್ತಾಗುತ್ತದೆ. ಸಹಜ ಕ್ರಿಯೆಯತ್ತ ಮನ ವಾಲುವುದೇ ಇಲ್ಲ. ಅದಕ್ಕೆ ಒಲವೂ ಉಂಟಾಗುವುದಿಲ್ಲ.

**198**

**ಬ್ರಹ್ಮದ ಮಾತನಾಡಿ,**
**ಕನ್ನೆಯರ ಕಾಲದೆಸೆಯಲ್ಲಿ ಕುಳಿತಡೆ**
**ಪರಬೊಮ್ಮದ ಮಾತು ಅಲ್ಲಿಯೇ ನಿಂದಿತ್ತೆಂದನಂಬಿಗ ಚೌಡಯ್ಯ .**

ಬ್ರಹ್ಮದ ಮಾತನಾಡಬಹುದು. ಆದರೆ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ಗೆಲ್ಲಲು ಆಗುವುದಿಲ್ಲ. ಅರಿಷಡ್ವರ್ಗಗಳೆಂದರೆ ಭ್ರಮೆಗೆ ಬಲು ಸುಖ. ಮನ ಬ್ರಹ್ಮದ ಮಾತುಗಳನ್ನು ಕಲಿತುಕೊಳ್ಳುತ್ತದೆ. ಆದರೆ ಬ್ರಹ್ಮನಲ್ಲಿ ಲೀನವಾಗಿರುವುದಿಲ್ಲ. ಕಲಿತುಕೊಂಡು ಆಡುವ ಮಾತುಗಳು ಸಹಜವಲ್ಲ. ಬ್ರಹ್ಮದ ಮಾತು ಆಡಬೇಕಾದರೆ ಮನಕ್ಕೆ ಸುಖವಾಗುತ್ತದೆ. ಕನ್ಯೆಯರ ಸ್ನೇಹ ಮಾಡುವುದಕ್ಕೂ ಮನಕ್ಕೆ ಸುಖವಾಗುತ್ತದೆ. ಹೀಗಾಗಿ ಮಾತನಾಡುವುದನ್ನು ಬಿಡುವುದಿಲ್ಲ. ಪರಸ್ತ್ರೀಯರೊಂದಿಗೆ ಸ್ನೇಹ ಮಾಡುವುದನ್ನೂ ಬಿಡುವುದಿಲ್ಲ.

ಬ್ರಹ್ಮದ ಮಾತು ಮನಕ್ಕೆ ವ್ಯವಹಾರವಾಗುತ್ತದೆ. ಕನ್ಯೆಯ ಸ್ನೇಹ ಸುಖವಾಗುತ್ತದೆ. ಹೀಗಾಗಿ ಮನ ಮಾತನಾಡುವುದೂ ಬಿಡುವುದಿಲ್ಲ; ಸ್ನೇಹಮಾಡುವುದೂ ಬಿಡುವುದಿಲ್ಲ. ಎರಡೂ ದಡದ ಮೇಲೆ ಪ್ರಯಾಣ ಮಾಡುವುದರಲ್ಲಿ ಮನ ನಿಸ್ಸೀಮ.

ಮನ ಬ್ರಹ್ಮದತ್ತ ಜಾರಿ, ಬ್ರಹ್ಮವೇ ತಾನಾದಾಗ ಅಂಗವನ್ನು ಆವರಿಸಿಕೊಂಡ ಮನ ಘನಮನವಾಗುತ್ತದೆ.

ಮನವೊಂದು ಕಾಯ. ಇದನ್ನು ಸೂಕ್ಷ್ಮ ಕಾಯವೆಂದು ಕರೆಯುತ್ತಾರೆ. ಕಾಯವೊಂದು ಕಾಯ, ಇದನ್ನು ಸ್ಥೂಲ ಕಾಯವೆಂದು ಕರೆಯುತ್ತಾರೆ. ಜ್ಞಾನವೊಂದು ಕಾಯ, ಇದನ್ನು ಕಾರಣ ಕಾಯವೆಂದು ಕರೆಯುತ್ತಾರೆ. ಹೀಗೆ ಕಾಣಬರುವ ಸ್ಥೂಲಕಾಯದಲ್ಲಿ ಕಾಣಬಾರದ ಸೂಕ್ಷ್ಮ, ಕಾರಣ ಕಾಯಗಳೆಂದು ಎರಡು ಕಾಯಗಳು ಸಂಗಮವಾಗಿವೆ.

ಕಾರಣ ಕಾಯವೆಂಬ ಜ್ಞಾನ ಕಾಯದಲ್ಲಿ ಮನವೆಂಬ ಸೂಕ್ಷ್ಮಕಾಯ ಪ್ರವೇಶ ಮಾಡುವುದೇ ಪರಕಾಯ ಪ್ರವೇಶ. ಹೀಗೆ ಪರಕಾಯ ಪ್ರವೇಶವಾದ ಕಾಯವೇ ಬ್ರಹ್ಮಕಾಯ, ಶರಣ ಕಾಯ, ಮಹಾಜ್ಞಾನಿ ಕಾಯ, ಬುದ್ಧ ಕಾಯ ಎಂದು ಕರೆಯುತ್ತಾರೆ. ಬುದ್ಧ ಕಾಯಕ್ಕೆ ಸಕಲ ಕಾಯಗಳೂ ಬುದ್ಧ ಕಾಯವಾಗಿಯೇ ಕಾಣುತ್ತವೆ. ಅಂತಹ ಕಾಯ ನುಡಿದಂತೆ ನಡೆಯುತ್ತದೆ. ನಡೆ ನುಡಿ ಒಂದೇ ಆಗಿ ನಡೆಯುತ್ತದೆ.

**199**

**ಬ್ರಹ್ಮನ ಘನವೆಂತೆಂಬಿರಯ್ಯ , ಬ್ರಹ್ಮನು ಘನವಲ್ಲ, ಬ್ರಹ್ಮನು**
**ಕಮಲದಲ್ಲಿ ಹುಟ್ಟಿದ. ಆ ಕಮಲವು ಘನವೆಂತೆಂಬಿರಯ್ಯ , ಕಮಲವು**
**ಘನವಲ್ಲ, ಕಮಲ ಕೆಸರಿನಲ್ಲಿ ಹುಟ್ಟಿತು. ಕೆಸರು ಘನವೆಂತೆಂಬಿರಯ್ಯಾ**
**ಕೆಸರು ಘನವಲ್ಲ, ಕೆಸರು ನೀರಿನಲ್ಲಿ ಹುಟ್ಟಿತು. ನೀರು ಘನವೆಂತೆಂಬಿರಯ್ಯ ,**
**ನೀರು ಘನವಲ್ಲ, ನೀರು ಸಮುದ್ರದಲ್ಲಿ ಹುಟ್ಟಿತು.**
**ಸಮುದ್ರವು ಘನವೆಂತೆಂಬಿರಯ್ಯ , ಸಮುದ್ರವು ಘನವಲ್ಲ,**
**ಸಮುದ್ರವು ಅಗಸ್ತ್ಯಮುನಿಯ ಕುಡಿತೆಗೆ ಸಾಲದಾಗಿ ಹೋಯಿತ್ತು .**
**ಅಗಸ್ತ್ಯನು ಘನವೆಂತೆಂಬಿರಯ್ಯ , ಅಗಸ್ತ್ಯನು ಘನವಲ್ಲ,**
**ಅಗಸ್ತ್ಯನು ಕುಂಭದಲ್ಲಿ ಹುಟ್ಟಿದ.**
**ಕುಂಭವು ಘನವೆಂತೆಂಬಿರಯ್ಯ , ಕುಂಭವು ಘನವಲ್ಲ,**
**ಕುಂಭವು ಭೂಮಿಯಲ್ಲಿ ಹುಟ್ಟಿತು.**
**ಭೂಮಿಯು ಘನವೆಂತೆಂಬಿರಯ್ಯ , ಭೂಮಿಯು ಘನವಲ್ಲ,**
**ಭೂಮಿಯು ಆದಿಶೇಷನ ತಲೆಗೆ ಸಾಲದಾಗಿ ಹೋಯಿತ್ತು .**
**ಆದಿಶೇಷನು ಘನವೆಂತೆಂಬಿರಯ್ಯ ಆದಿಶೇಷ ಘನವಲ್ಲ,**
**ಆದಿಶೇಷನು ಪಾರ್ವತಿ ದೇವಿಯ**
**ಕಿರುಬೆರಳಿನುಂಗುರಕೆ ಸಾಲದಾಗಿ ಹೋಗಿದ್ದ .**
**ಪಾರ್ವತಿ ದೇವಿಯು ಘನವಂತೆಂಬಿರಯ್ಯ , ಪಾರ್ವತಿದೇವಿ ಘನವಲ್ಲ,**
**ಪಾರ್ವತಿದೇವಿಯು ಪರಮೇಶ್ವರನ ಎಡಗಡೆಯ ತೊಡೆಯ ಬಿಟ್ಟು**
**ಬಲಗಡೆಯ ತೊಡೆಯನರಿಯಳು,**
**ಪರಮೇಶ್ವರನು ಘನವೆಂತೆಂಬಿರಯ್ಯ, ಪರಮೇಶ್ವರನು ಘನವಲ್ಲ,**
**ನಮ್ಮ ಪರಮೇಶ್ವರನು ಭಕ್ತನಾದ ಬಸವಣ್ಣನ ಎದೆಯೊಳಗೆ**
**ಅಡಗಿರ್ದನೆಂದು ವೇದಗಳು ಸಾರುವವು ಎಂದಾತ**
**ನಮ್ಮ ಅಂಬಿಗರ ಚೌಡಯ್ಯ .**

ಬ್ರಹ್ಮನೂ ಘನವಲ್ಲ; ಬ್ರಹ್ಮ ಹುಟ್ಟಿದ ಕಮಲವೂ ಘನವಲ್ಲ. ಕಮಲವೂ ಘನವಲ್ಲ. ಕಮಲ ಹುಟ್ಟಿದ ಕೆಸರೂ ಘನವಲ್ಲ. ಕೆಸರೂ ಘನವಲ್ಲ; ಕೆಸರು ಹುಟ್ಟಿದ ನೀರೂ ಘನವಲ್ಲ. ನೀರೂ ಘನವಲ್ಲ; ನೀರು ಹುಟ್ಟಿದ ಸಮುದ್ರವೂ ಘನವಲ್ಲ. ಏಕೆಂದರೆ ಅಗಸ್ತ್ಯ ಮುನಿಯ

ಕಮಂಡಲಕ್ಕೂ ಸಾಲದಾಯಿತು. ಅಗಸ್ತ್ಯನೂ ಘನವಲ್ಲ; ಅಗಸ್ತ್ಯ ಕುಂಭದಲ್ಲಿ ಹುಟ್ಟಿದ ಕಾರಣ. ಕುಂಭವೂ ಘನವಲ್ಲ; ಕುಂಭ ಭೂಮಿಯಲ್ಲಿ ಹುಟ್ಟಿದ ಕಾರಣ. ಭೂಮಿಯೂ ಘನವಲ್ಲ ಭೂಮಿ ಆದಿಶೇಷನ ತಲೆಗೆ ಸಾಲದ ಕಾರಣ. ಆದಿಶೇಷನೂ ಘನವಲ್ಲ; ಆದಿಶೇಷನು ಪಾರ್ವತಿಯ ಕಿರುಬೆರಳಿಗೆ ಉಂಗುರವಾದ ಕಾರಣ. ಪಾರ್ವತಿಯೂ ಘನವಲ್ಲ; ಪರಮೇಶ್ವರನ ಎಡತೊಡೆ ಬಿಟ್ಟು ಆತನ ಬಲತೊಡೆ ನೋಡದ ಕಾರಣ.

ಪರಮೇಶ್ವರನೂ ಘನವಲ್ಲ; ಆತ ಭಕ್ತನಾದ ಬಸವಣ್ಣನ ಎದೆಯೊಳಗೆ ಅಡಗಿದನೆಂದು ವೇದಗಳು ಸಾರುವವು. ಹೀಗೆಂದು ಅಂಬಿಗರ ಚೌಡಯ್ಯಗಳು ಸಾರಿದ್ದಾರೆ.

ಮನುಷ್ಯ ಮನುಷ್ಯನನ್ನು ಬ್ರಹ್ಮ ವಿಷ್ಣು ರುದ್ರ ಎಂದು ಸಾರಿದ. ಮನುಷ್ಯ ಮನುಷ್ಯನಿಗಾಗಿಯೇ ಸಕಲ ದೇವತೆಗಳನ್ನು, ವೇದ ಆಗಮ ಉಪನಿಷತ್ತುಗಳನ್ನು ಶಾಸ್ತ್ರ ಪುರಾಣಗಳನ್ನು ಸೃಷ್ಟಿಸಿದ. ಸೃಷ್ಟಿಸಿದ ತಾನು ತನ್ನನ್ನೇ ಮರೆತು ತನಗಾಗಿ ಸೃಷ್ಟಿಸಿದ ಅವುಗಳನ್ನೇ ಪೂಜಿಸಿದ. ಇದಕ್ಕೆ ತನ್ನ ಮರೆವೇ ಕಾರಣ.

ತನ್ನ ಅರಿವೇ ತನಗೆ ಗುರು. ಆ ಗುರುದೇವನೆ ಮಹಾದೇವ. ಆ ಮಹಾದೇವನೆ ಸದಾಶಿವ. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮ. ಅಂದರೆ ಅರಿವು ಮನುಷ್ಯನ ಎದೆಯಲ್ಲಿಯೇ ಇದೆ. ಆ ಅರಿವೇ ಆ ಮನುಷ್ಯನಿಗೆ ಗುರು. ಆ ಗುರುದೇವನೆ ಆ ಮನುಷ್ಯನಿಗೆ ಮಹಾದೇವನಾಗಿ, ಸದಾಶಿವನಾಗಿ ಸಾಕ್ಷಾತ್ ಪರಬ್ರಹ್ಮನಾಗಿ ಕಾಣುತ್ತಾನೆ.

ಮನುಷ್ಯನ ದೇಹದಲ್ಲಿರುವ ಮರೆವನ್ನು ಆ ಮರೆವಿನಿಂದಲೇ ಅರಿತು; ಅರಿತ ಆ ಅರಿವಿನ ಭಕ್ತಿಯಿಂದಲೇ ಅರಿವೆಂಬ ಶಿವನನ್ನು ಪೂಜಿಸಿದಾಗ ಆ ಶಿವ ಭಕ್ತಿಗೆ ಒಲಿಯುತ್ತಾನೆ. ಆ ಅಂಗದೊಳಗೆ ಸಂಗಮವಾಗಿ ಲಿಂಗಾಂಗವಾಗುತ್ತಾನೆ. ಅಂಗವನ್ನು ಆವರಿಸಿದ ಮರೆವು ಅಂಗದೊಳಗೆ ಸಂಗಮವಾದ ಅರಿವನ್ನು ಅರಿಯಬೇಕು ಅಷ್ಟೆ.

**200**

**ಬ್ರಹ್ಮನ ನಾವು ಬಲ್ಲೆವು, ವಿಷ್ಣುವ ನಾವು ಬಲ್ಲೆವು,**
**ತೆತ್ತೀಸಕೋಟಿ ದೇವತೆಗಳ ನಾವು ಬಲ್ಲೆವು.**
**ಅದೇನು ಕಾರಣವೆಂದಡೆ :**
**ಇವರು ಹಲವು ಕಾಲ ನಮ್ಮ ನೆರೆಮನೆಯಲ್ಲಿದ್ದರಾಗಿ.**
**ಇವರು ದೇವರೆಂಬುದ ನಾ ಬಲ್ಲೆನಾಗಿ,**
**ಒಲ್ಲೆನೆಂದಾತನಂಬಿಗ ಚೌಡಯ್ಯ.**

'ಕಾಳಿ ಕಂಕಾಳದಿಂದ ಮುನ್ನ, ತ್ರಿಪುರ ಸಂಹಾರದಿಂದ ಮುನ್ನ, ಉಮೆಯ ಕಲ್ಯಾಣದಿಂದ ಮುನ್ನ, ಮುನ್ನ ಮುನ್ನ ಮುನ್ನ, ಅಂದಿಂಗೆಳೆಯ ನೀನು, ಹಳೆಯ ನಾನು ಮಹಾದಾನಿ ಕೂಡಲ ಸಂಗಮದೇವಾ' ಇದು ಬಸವಣ್ಣನವರು ಬರೆದ ಸೂತ್ರ.

ಬ್ರಹ್ಮನನ್ನು ವಿಷ್ಣುವನ್ನು ಮೂವತ್ಮೂರು ಕೋಟಿ ದೇವತೆಗಳನ್ನು ಮನುಷ್ಯ ಬಲ್ಲ. ದೇವತೆಗಳು ಮನುಷ್ಯನೊಂದಿಗೆ ಇದ್ದವರು. ಮನುಷ್ಯನೊಂದಿಗೆ ಬದುಕಿದವರು. ಮನುಷ್ಯನಿಂದಲೇ ಕತೆ ಬರೆಯಿಸಿಕೊಂಡವರು. ಏನಿದ್ದರೂ ಮನುಷ್ಯನಿಗಿಂತ ಎಳೆಯರವರು. ದೇವರ ಕತೆ ಬರೆದ

ಮನುಷ್ಯನೇ ಹಳಬ. ಅವರನ್ನು ಇವರು ಬಲ್ಲರು. ಹೀಗಾಗಿ ಅವರನ್ನು ಒಲ್ಲರಿವರು.

ಬ್ರಹ್ಮನೆಂದರೆ ದೇವರಲ್ಲ. ಮನವೇ ಬ್ರಹ. ದೇಹವೇ ವಿಷ್ಣು. ಅರಿವೇ ರುದ್ರ. ಮೂವತ್ಮೂರು ಕೋಟಿ ದೇಹಗಳೇ ದೇವತೆಗಳು!

ಉಳ್ಳವರು ಶಿವಾಲಯವ ಮಾಡುವರು ನಾನೇನ ಮಾಡಲಿ ಬಡವನಯ್ಯ. ದೇಹವೇ ದೇಗುಲ ಎನ್ನ ಕಾಲೇ ಕಂಬ, ಶಿರವೇ ಹೊನ್ನ ಕಳವಶಯ್ಯಾ ಎಂದು ಬಸವಣ್ಣನವರು ದೇಹವನ್ನು ಕುರಿತು ಹಾಡಿದ್ದಾರೆ.

**ಇವರು ಹಲವು ಕಾಲ ನಮ್ಮ ನೆರೆಮನೆಯಲ್ಲಿದ್ದರಾಗಿ; ಇವರು ದೇವರೆಂಬುದ ನಾ ಬಲ್ಲೆನಾಗಿ;**

ಮನೆಗಳು ಮೂರು. ಒಂದು ಕಾಣುವ ಮನೆ. ಇನ್ನೆರಡು ಕಾಣಲು ಬಾರದ ಮನೆಗಳು. ಒಂದು ಮನೆ ಎಲ್ಲರಿಗೂ ಕಾಣುತ್ತದೆ. ಇನ್ನೆರಡು ಮನೆಗಳು ಅನುಭವಿಗಳಿಗೆ ಮಾತ್ರ ಕಾಣುತ್ತದೆ. ಕಾಣುವ ಮನೆಯನ್ನು ಸ್ಥೂಲ ಮನೆ ಎಂದು ಕರೆಯುತ್ತಾರೆ. ಸ್ಥೂಲಮನೆಯನ್ನು ಆವರಿಸಿಕೊಂಡು ತನ್ನ ಇಚ್ಛೆಗನುಗುಣವಾಗಿ ಸ್ಥೂಲ ಮನೆಯನ್ನು ಬಳಕೆ ಮಾಡುವ ಮತ್ತೊಂದು ಮನೆಯನ್ನು ಸೂಕ್ಷ್ಮಮನೆ ಎಂದು ಕರೆಯುತ್ತಾರೆ. ಸ್ಥೂಲ ಮತ್ತು ಸೂಕ್ಷ್ಮಮನೆಗಳೆರಡಕ್ಕೂ ಜನ್ಮ ನೀಡಿದ ಮನೆಯೊಂದಿದೆ ಅದೇ 'ಕಾರಣ' ಮನೆ. ಈ ಮನೆಗೆ ಅಂಬಿಗರ ಚೌಡಯ್ಯ ಶರಣರು ನೆರೆಮನೆ ಎಂದು ಕರೆದಿದ್ದಾರೆ. ಈ ಮನೆಯ ಮೂಲಕವೇ ಬ್ರಹ್ಮ ವಿಷ್ಣು ತೆತ್ತಿಸಕೋಟಿ ದೇವತೆಗಳು ಜನ್ಮ ತಳೆದರು.

ತೆತ್ತೀಸಕೋಟಿ ದೇವತೆಗಳಿಗೆ ಜನ್ಮ ಕೊಟ್ಟ ಕಾಯವೇ ಕೈಲಾಸ. ಕಾಯವನ್ನೇ ಕೈಲಾಸ ಮಾಡಿಕೊಂಡ ಕಾಯಗಳಿಗೆ ಮಾತ್ರ ಈ ಕಾಯ ಪರಿಚಯ. ಬುದ್ಧ, ಬಸವ, ಮಹಾವೀರ, ದಾಸ, ಪೈಗಂಬರ, ಕೃಷ್ಣ, ಕ್ರಿಸ್ತ ಮುಂತಾದ ಶರಣರು ಕಾಯವನ್ನೇ ಕೈಲಾಸದಂತೆ ನೋಡಿದರು. ಅವರು ಬ್ರಹ್ಮ ವಿಷ್ಣು ಮುಂತಾದ ತೆತ್ತೀಸಕೋಟಿ ದೇವತೆಗಳನ್ನು ಬಲ್ಲರು. ಅವರೇ ಈಗ ಏಳುನೂರು ಕೋಟಿಗೂ ಅಧಿಕರಾಗಿದ್ದಾರೆ. ಅವರೆಲ್ಲರನ್ನೂ ಶರಣರು ಬಲ್ಲರು. ಶರಣರನ್ನು ಮಾತ್ರ ಇವರು ತಿಳಿಯರು. ಹೀಗಾಗಿ ಶರಣರು ಇವರನ್ನು ಒಲ್ಲರು.

**201**

**ಬ್ರಹ್ಮ ನಿಮ್ಮ ಬಲ್ಲಡೆ ನಿರ್ಮಾಲ್ಯವಹನೆ?**
**ವಿಷ್ಣು ನಿಮ್ಮ ಬಲ್ಲಡೆ ಗೋಪಾಲನಹನೆ?**
**ರುದ್ರ ನಿಮ್ಮ ಬಲ್ಲಡೆ ಜಡೆಯ ಕಟ್ಟುವನೆ?**
**ಪಶುಪತಿ ನಿಮ್ಮ ಬಲ್ಲಡೆ ವೇಷವ ಹೊತ್ತು ತೊಳಲುವನೆ?**
**ಗಂಗೆವಾಳುಕರು ನಿಮ್ಮ ಬಲ್ಲಡೆ ಲಿಂಗವ ಪೂಜಿಸುವರೆ?**
**ತಮ್ಮ ಬಲ್ಲಡೆ, ನಿಮ್ಮ ಬಲ್ಲರು.**
**ಅನ್ನಕ ತಡವೆಂದಾತ ನಮ್ಮಂಬಿಗ ಚೌಡಯ್ಯ**

ಬ್ರಹ್ಮ ವಿಷ್ಣು ರುದ್ರ, ಪಶುಪತಿ ಗಂಗೆವಾಳುಕರು ನಿಮ್ಮ ಬಲ್ಲಡೆ ನಿರ್ಮಲವಾಗಬಲ್ಲರೆ? ತಮ್ಮ ಬಲ್ಲಡೆ ನಿಮ್ಮ ಬಲ್ಲರು. ಇಲ್ಲದಿದ್ದಡೆ ತಡವೆಂದಾತ ನಮ್ಮ ಅಂಬಿಗ ಚೌಡಯ್ಯ .

ಶರಣರ ಮೇಲ್ಕಂಡ ವಚನದಲ್ಲಿ ಸಂಪೂರ್ಣ ಸ್ವರೂಪಜ್ಞಾನದ ಸೂತ್ರವೇ ಅಡಗಿದೆ. ನಾನು

ಎಲ್ಲರನ್ನೂ ತಿಳಿಯಬಹುದು. ಹಾಗೆ ತಿಳಿಯುವುದು ಅಪ್ಪಟ ಸುಳ್ಳು. ಅಸತ್ಯ. ಎಲ್ಲಿಯವರೆಗೆ ನನ್ನನ್ನು ನಾನು ತಿಳಿಯುವುದಿಲ್ಲವೋ ಅಲ್ಲಿಯವರೆಗೆ ಮತ್ತೊಬ್ಬರನ್ನು ತಿಳಿಯಲು ಬರುವುದಿಲ್ಲ.

ತಾನು ಮತ್ತೊಬ್ಬರನ್ನು, ಮತ್ತೊಂದನ್ನು ತಿಳಿಯುವುದು ರೂಪಜ್ಞಾನ, ತಾನು ತನ್ನನ್ನು ತಿಳಿಯುವುದೇ ಸ್ವರೂಪ ಜ್ಞಾನ. ತಾನು ತನ್ನನ್ನು ತಿಳಿದ ಬಳಿಕ ತನಗೆ ಕಾಣುವುದು ಕೂಡಾ ಸ್ವರೂಪ ಜ್ಞಾನವೇ.

ಕಲ್ಲನ್ನು ಕಲ್ಲೆಂದು ತಿಳಿಯುತ್ತಾನೆ. ಇದು ಸಹಜ ಜ್ಞಾನ. ಈ ಜ್ಞಾನ ತನ್ನಲ್ಲಿ ತನ್ಮಯವಾಗಿದೆ. ಆದರೆ ತನಗೆ ಗೋಚರವಾಗುತ್ತಿಲ್ಲ. ಕಲ್ಲು ರೂಪತಳೆದಾಗ ಅಥವಾ ಅದನ್ನು ಕಲಾವಿದ ಕಟೆದು ಪಾರ್ವತಿಯ ರೂಪ ಕೆತ್ತಿದಾಗ ಅದನ್ನು ತಾನು ದೇವರೆಂದು ಆರಾಧಿಸುತ್ತಾನೆ. ಇದು ರೂಪಜ್ಞಾನ. ಈ ಜ್ಞಾನ ನನಗೆ ಮತ್ತು ಲೋಕಕ್ಕೆ ಪರಿಚಯವಿದೆ. ಈ ರೂಪದ ಸ್ವರೂಪವನ್ನು ನಾನು ಮತ್ತು ಲೋಕ ಮರೆತಿದೆ. ಆದರೆ ಬುದ್ಧ ಬಸವ ಪೈಗಂಬರ ಕ್ರಿಸ್ತ ಕೃಷ್ಣ ಕನಕ ಮುಂತಾದ ಜ್ಞಾನಿಗಳು ಮಾತ್ರ ಅರಿತಿದ್ದಾರೆ.

ರೂಪ ಪಾರ್ವತಿಯದಾದರೆ ಅದರ ಸ್ವರೂಪ ಕಲ್ಲು ಆಗಿದೆ. ಕಲ್ಲು ರೂಪದಲ್ಲಿ ಅಡಗಿದೆ. ಲೋಕಕ್ಕೆ ರೂಪಕಂಡರೆ ಜ್ಞಾನಿಗೆ ರೂಪದ ಸ್ವರೂಪವಾದ ಕಲ್ಲು ಕಾಣುತ್ತದೆ.

ಜ್ಞಾನಿ ತನ್ನನ್ನು ತಾನು ಅರಿತಿದ್ದಾನೆ. ತನ್ನ ಸ್ವರೂಪ ಜ್ಞಾನ ತನಗೆ ಲಭ್ಯವಾಗಿದೆ. ಹೀಗಾಗಿ ಲೋಕದ ಸ್ವರೂಪದ ಅರಿವು ಕೂಡ ಜ್ಞಾನಿಗೆ ಆಗಿದೆ. ಆದರೆ ಲೋಕಕ್ಕೆ ಸ್ವರೂಪ ಜ್ಞಾನಿ ಆಗಿರುವುದಿಲ್ಲ. ಆದರೂ ಕೂಡ ಜ್ಞಾನ ತನ್ನಂತೆಯೇ ಇತರರನ್ನು ತಿಳಿಯಬಲ್ಲ. ತನ್ನ ಹಾಗೂ ಇತರರ ಸ್ವರೂಪ ಜ್ಞಾನದ ಆನಂದವನ್ನು ಅನುಭವಿಸಬಲ್ಲ.

ಸ್ವರೂಪ ಜ್ಞಾನದ ಪಠ್ಯವನ್ನು ಬ್ರಹ್ಮ ತಿಳಿದರೂ ಆತನಿಗೆ ಸುಖವಾಗಲಾರದು. ವಿಷ್ಣುವನ್ನು ಬ್ರಹ್ಮ ತಿಳಿದರೂ ಆತನಿಗೆ ಸುಖವಾಗಲಾರದು. ವಿಷ್ಣು ತಿಳಿದರೂ ಆತ ಗೋಪಾಲನಾಗಲಾರ. ರುದ್ರ ತಿಳಿದರೂ ಆತನಿಗೆ ಜಡೆ ಕಟ್ಟಲಾರದು. ಪಶುಪತಿಗೂ ಸುಖವಾಗಲಾರದು. ಭಕ್ತರಿಗೆ ಸ್ವರೂಪ ಜ್ಞಾನವಾದರೆ ಲಿಂಗವನ್ನು ಪೂಜಿಸಿಯಾರೆ? ಸಾಧ್ಯವಿಲ್ಲ. ತಮ್ಮನರಿಯದೆ ನಿಮ್ಮನ್ನು ಅರಿಯಲಾರರು!.

ತಮ್ಮನ್ನು ತಾವು ಅರಿಯುವ ತನಕ ನಿಮ್ಮನ್ನು ಅರಿಯುವುದು ತಡವಾಗುತ್ತದೆ.

ತನ್ನ ಸ್ವರೂಪದ ಅರಿವು ತನಗೆ ಆದರೆ ಮಾತ್ರ ಚರ್ಚ್, ಮಸೀದಿ, ದೇವಾಲಯದ ಅರಿವು ತನಗೆ ಆಗುತ್ತದೆ. ವೆಂಕಟರಮಣ, ಕಾಶಿ ವಿಶ್ವನಾಥ, ಕೇದಾರ ನಾಥ, ಪಾರ್ವತಿ, ಪರಮೇಶ್ವರ, ಗಣಪತಿ ದೇವರುಗಳ ರೂಪದ ಸ್ವರೂಪದ ಅರಿವು ತನಗಾಗುತ್ತದೆ. ಇಲ್ಲದಿದ್ದರೆ ಆಯಾ ದೇವರುಗಳನ್ನು ಪೂಜಿಸುವ ರೂಪದ ಸುಳ್ಳು ಅರಿವು ತನಗಾಗುತ್ತದೆ.

ಹಲವಾರು ದೇವರುಗಳ ರೂಪ, ಚರ್ಚ್ ಮಸೀದೆ ದೇವಾಲಯಗಳ ರೂಪ ಬೇರೆ ಬೇರೆ ಆದರೂ ಅದರ ಸ್ವರೂಪ ಮಾತ್ರ ಒಂದೇ. ಅದು ಕಲ್ಲು! ಕಲ್ಲನ್ನು ಕಲ್ಲೆಂದು ನೋಡಿ, ಕಲ್ಲೊಳಗಣ ಬೆಲ್ಲ ಮೆದ್ದು ಆನಂದ ಪಡುತ್ತಾನೆ. ಸ್ವರೂಪ ಜ್ಞಾನಿ !

**202**

**ಬ್ರಹ್ಮ ಮೊದಲನರಿಯ,**
**ವಿಷ್ಣು ತುದಿಯನರಿಯ,**

**ಎಡೆಯಣ ಮಾನವರೆತ್ತ ಬಲ್ಲರೊ ಮೃಡನಂತುವ ?**
**ಇತ್ತಣ ಮನದವರಿತ್ತಿತ್ತ ಕೇಳಿ**
**ಅತ್ತಳ ಸುದ್ದಿ ನಿಮಗೇತಕ್ಕೆ ?**
**ನಿಸ್ಸಂಗಿ ನಿರೂಪದ ಮಹಾತ್ಮರೆ ಬಲ್ಲರೆಂದನಂಬಿಗ ಚೌಡಯ್ಯ .**

ದೇಹದಲ್ಲಿ ಸಕಲ ಸಂಪತ್ತು ಇದೆ. ಅದನ್ನು ಪಡೆಯಲು ಬ್ರಹ್ಮ ವಿಷ್ಣು ಮುಂತಾದವರ ಕತೆ ಓದಬೇಕೆ ? ಶಾಸ್ತ್ರ ಪುರಾಣ ವೇದ ಆಗಮ ಉಪನಿಷತ್ತುಗಳನ್ನು ಓದಬೇಕೆ ? ಓದಿದರೆ ಓದಿದ್ದನ್ನೇ ಹೇಳುವ ತವಕ. ಕೇಳಿದರೆ ಕೇಳಿದ್ದನ್ನೇ ಹೇಳುವ ತವಕ. ಹೇಳುವ ತವಕ ಕೇಳುವ ತವಕಗಳೆರಡೂ ತನುವಿನ ಅಜ್ಞಾನವನ್ನು ಕಳೆಯವು. ತನುವಿನ ಜ್ಞಾನವನ್ನು ಬಳಕೆ ಮಾಡವು.

ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ಅಂಬಿಗರ ಚೌಡಯ್ಯ ಶರಣರು ಮೃಡನೆಂದು ಕರೆದಿದ್ದಾರೆ. ಆ ಮೃಡನ ಮುಕುಟವನ್ನು ಹುಡುಕಲು ಬ್ರಹ್ಮ ಆಕಾಶಕ್ಕೆ ಹಾರಿದ. ಮೃಡನ ಶ್ರೀ ಚರಣವನ್ನು ಹುಡುಕಲು ವಿಷ್ಣು ಪಾತಾಳಕ್ಕೆ ಜಿಗಿದ. ಬ್ರಹ್ಮನಿಗೆ ಮೃಡನ ಮುಕುಟ ಕಾಣಲಿಲ್ಲ. ಸೃಷ್ಟಿಕರ್ತನಿಗೆ ಇದು ಅಪಮಾನವಲ್ಲವೆ ? ಹಾಗಾಗ ಕೂಡದೆಂದು ಆಕಾಶ ಕಾಯಗಳಲ್ಲಿ ಬೆಳೆದ ಕೇದಗೆಯನ್ನು ಹಿರಿದು ತಂದು ಇದು ಮೃಡನ ಜಡೆಯೆಂದು ತೋರಿದ. ಸುಳ್ಳು ಹೇಳಿದ್ದಕ್ಕಾಗಿ ಬ್ರಹ್ಮನ ತಲೆಯೊಂದು ಉರುಳಿತು. ಐದು ಮುಖಗಳುಳ್ಳ ಬ್ರಹ್ಮ ಚತುರ್ಮುಖನೆನ್ನಿಸಿ ಕೊಂಡ.

ಪಾತಾಳಕ್ಕೆ ಜಿಗಿದ ವಿಷ್ಣುವಿಗೂ ಮೃಡನ ತುದಿ ದೊರೆಯಲಿಲ್ಲ. ಬರಿಗೈಯಿಂದ ಬಂದು ದೊರೆಯಲಿಲ್ಲವೆಂದು ವರದಿ ಒಪ್ಪಿಸಿದ. ಇವರಿಬ್ಬರೂ ಮೃಡ ನನ್ನು ಹುಡುಕಲು ಹೋಗಿ ಬರಿಗೈ ದಾಸರಾಗಿ ಮರಳಿ ಬಂದರು. ಅವರು ಅತ್ತಣದವರು. ನಮಗೇಕೆ ಬೇಕು ಅತ್ತಣದ ಸುದ್ದಿ. ನಾವೇನಿದ್ದರೂ ಇತ್ತಣದವರು.

ನಿಸ್ಸಂಗಿಗಳನ್ನು, ನಿರೂಪದ ಮಹಾತ್ಮರನ್ನು ಹುಡುಕಿ ಅವರು ಮಾತ್ರ ಮೃಡನನ್ನು ಬಲ್ಲವರು. ಅವರೇನಿದ್ದರೂ ಕೇಳಲು ಬಂದವರತ್ತಲೇ ಬೆಟ್ಟು ಮಾಡಿ ತೋರಿಸುವರು.

ಮೃಡನನ್ನು ಕೇಳಲು ಬಂದ ನೀನು ಆತನನ್ನೇ ಹೊತ್ತು ತಂದಿರುವೆ. ಆತ ನಿನ್ನ ಮೇಲೆ ಕುಳಿತಿದ್ದಾನೆ. ಆತನನ್ನು ನೋಡದ ಕುರುಡ ನೀನು. ನೀನು ಹೆಳವನ ಮೇಲೆ ಕುಳಿತಿರುವೆ. ಅವನಿಗೆ ದಾರಿ ಸಾಗದು. ನಿನಗೆ ದಾರಿ ಕಾಣದು. ಮೃಡ ನಿನ್ನಲ್ಲಿಯೇ ಇದ್ದಾನೆ. ನೀನೇ ಅವನನ್ನು ಹುಡುಕು. ಕೇಳಿದರೆ ಓದಿದರೆ ಸಿಗುವು ದಿಲ್ಲ. ನೋಡು, ನೋಡುವ ವಸ್ತುವನ್ನೇ ನೋಡು. ಆ ವಸ್ತುವಿನ ರೂಪ ಗೌಣವಾಗಲಿ ನಿನಗೆ. ಆ ವಸ್ತುವಿನ ಸ್ವರೂಪ ಕಾಣಲಿ ನಿನಗೆ. ಆ ಸ್ವರೂಪ ಬೇರಲ್ಲ. ಅವನೇ ಮೃಡ.

ನೀನು ನಿಸ್ಸಂಗಿಯಾಗು. ನಿನ್ನ ನಿರೂಪದಿಂದ ರೂಪವನ್ನು ನೋಡು.ಆ ರೂಪದ ನಿರೂಪವೇ ನಿನಗೆ ಕಾಣುತ್ತದೆ.

**203**

**ಭಕ್ತ ಜಂಗಮದ ಪರಿಯ ಹೇಳಿಹೆನು ಕೇಳಿರಣ್ಣಾ :**
**ಭಕ್ತರು ಜಂಗಮವಿದ್ದೆಡೆಗೆ ಹೋಗಿ, ದೀರ್ಘದಂಡ ನಮಸ್ಕಾರವಂ ಮಾಡಿ,**
**ವಿಭೂತಿಯಂ ಕೊಟ್ಟು , ಎಲೆ ದೇವ ನಿಮ್ಮ ತೊತ್ತು ಭೃತ್ಯನೆಂದು**

ಕಿಂಕುರ್ವಾಣತೆಯಂ ನುಡಿದು, ತೀರ್ಥ ಪ್ರಸಾದವನಿತ್ತು ,
ರಕ್ಷಿಸಬೇಕೆಂದು ಬಿನ್ನಪವನಿತ್ತು , ಕೊಂಡು ತನ್ನ ಗೃಹಕ್ಕೆ ಹೋಗಿ,
ಸಕಲ ಪದಾರ್ಥಂಗಳು ಆಯಿತ್ತಾದ ಬಳಿಕ ಬಂದು ನಮಸ್ಕಾರಮಂ
ಮಾಡಿ, ದೇವರಾಯವಾಯಿತ್ತು ಚಿತ್ತೈಸಿಯೆನೆ, ಒಳಿತೆಂದು
ಆ ಜಂಗಮವು ಆ ಭಕ್ತನೊಡಗೂಡಿ ಗೃಹಕ್ಕೆ ಬಂದು ಉಲ್ಲಾಸದಿಂ
ಆ ಭಕ್ತನು ಪಾದಾರ್ಚನೆಯಂ ಮಾಡಿ ಅಗ್ರ ಗದ್ದಿಗೆಯನಿಕ್ಕಿ
ಮೂರ್ತ ಮಾಡಿಸಿ ಮರಳಿ ದೀರ್ಘದಂಡ ನಮಸ್ಕಾರಮಂ ಮಾಡಿ
ತೀರ್ಥಪ್ರಸಾದಕ್ಕೆ ನಿರೂಪವೆ ಅಯ್ಯಾ? ಎಂದು ಎದ್ದು ಬಂದು
ಆ ಜಂಗಮಕ್ಕೆ ನಮಸ್ಕರಿಸಿ ದಿವ್ಯಪಾದಮಂ ಪಿಡಿದು, ಸಾಕ್ಷಿ:
ದೇಶಿಕಂ ಚರಣಾಂಗುಷ್ಠಂ ಭಸಿತಂ ಪ್ರಣಾಮಸ್ತಥಾ ।
ಪಾದಪೂಜಾಮಿಮಾಂ ಕುರ್ಯಾತ್ ಗೋಪ್ಯಂ ಗೋಪ್ಯಂ ವರಾನನೇ ॥
ಎಂದು ವಿಭೂತಿಯಂ ಧರಿಸಿ, ಪತ್ರಿ ಪುಷ್ಪಗಳಿಂದ ಪೂಜೆಯಂ ಮಾಡಿ
ತಾಂಬೂಲ ನೆನೆಗಡಲಿ ಮುಖ್ಯವಾದ ಫಲಹಾರಂಗಳನರ್ಪಿಸಿ
ಪ್ರದಕ್ಷಿಣವಂ ಮಾಡಿ, ಸ್ತುತಿಸಿ, ನಮಸ್ಕರಿಸಿ
ಹಸ್ತಪರುಶಮಂ ಮಾಡಿಕೊಂಡು, ಸಕಲ ಪದಾರ್ಥಂಗಳ ನೀಡಿ,
ವಿಭೂತಿಯಂ ಮುಂದಿಟ್ಟು ನಮಸ್ಕರಿಸಿ
ಕರವಂ ಮುಗಿದು ನಿಲ್ಲುವುದು ಭಕ್ತನಿಗೆ ಕರ್ತವ್ಯ .
ಇನ್ನು ಜಂಗಮದ ಪರಿಯ ಹೇಳಿಹೆನು ಕೇಳಿರಣ್ಣಾ :
ಜಂಗಮವೆ ಪರಾತ್ಪರ, ಜಂಗಮವೆ ಪರವಸ್ತು , ಇಂತಪ್ಪ
ಜಂಗಮ ಭಕ್ತನ ಮೇಲಣ ಕರುಣದಿಂ ತೀರ್ಥವನಿತ್ತ ಬಳಿಕ
ತಮ್ಮಿಷ್ಟ ಲಿಂಗಕ್ಕೆ ಕೊಟ್ಟು ಕೊಂಬುದೆ ಜಂಗಮಕ್ಕೆ ಕರ್ತವ್ಯ .
ಸಾಕ್ಷಿ : ಜಂಗಮಂ ಪರಾತ್ಪರಂ ಪಾದಾಂಗುಷ್ಠ ತೀರ್ಥಂ ತಥಾ ।
ಸ್ವಯಂ ಲಿಂಗಾರ್ಪಿತಂ ಪೀತ್ವಾ ಜಂಗಮಃ ಪರಮೇಶ್ವರ ॥
ಮತ್ತಂ ಸ್ವಪಾದೋದಕ ತೀರ್ಥಂ ಚ ಸ್ವ ಲಿಂಗಸ್ಯ ಸಮರ್ಪಣಂ ।
ಕೃತ್ವಾ ವಿಭೇದ್ಭುಕ್ತ್ವಾ ಅರ್ಪಣೀಯಮನಂತರಂ ॥
ಇಂತೆಂಬ ಶ್ರುತ್ಯರ್ಥವನರಿಯದೆ ಬೇರೆ ತನಗೊಂದೆಡೆಯೆಂದು
ಗೊಣಸ ತೆಗೆದುಕೊಂಡು ಎಡೆಮಾಡು ಭಕ್ತಾ ಎಂಬುದು ಜಂಗಮಕ್ಕೆ
ಕ್ರಮವೆ ? ಅಲ್ಲ. ಅದು ಗಣಸಮೇಳಕ್ಕೆ ಅಲ್ಲದ ಮಾತು. ಆತನ
ಮಾತ ಕೇಳಿ ಎಡೆ ಮಾಡುವಾತ ಭಕ್ತನೆ ಅಲ್ಲ?
ಇವರಿಬ್ಬರ ಮುಖವ ನೋಡಲಾಗದೆಂದನಂಬಿಗ ಚೌಡಯ್ಯ .

ಭಕ್ತ ಅಂದರೆ ಜ್ಞಾನಾಸಕ್ತ . ಜ್ಞಾನಿ ಇದ್ದೆಡೆಗೆ ಹೋಗಿ, ಆ ಜ್ಞಾನಿಗೆ ವಿಭೂತಿಯೊಂದಿಗೆ ಆಮಂತ್ರಣ ನೀಡಿ, ತನ್ನ ಮನೆಗೆ ಆಗಮಿಸಿ ತನ್ನನ್ನು ಉದ್ಧರಿಸಿ ಆಶೀರ್ವದಿಸಬೇಕೆಂದು ಕೇಳಿಕೊಳ್ಳಬೇಕು. ಹಾಗೆಯೇ ಅವರನ್ನು ಆದರದಿಂದ ಕರೆದುಕೊಂಡು ಹೋಗಿ, ಎತ್ತರದ ಸ್ಥಾನದ ಮೇಲೆ ಕೂಡಿಸಿ, ಸಕಲ ಖಾದ್ಯಗಳನ್ನು ತಯಾರಿಸಿದ ನಂತರ ಪಾದಪೂಜೆಯನ್ನು ಮಾಡಿ,ದೀರ್ಘದಂಡ

ನಮಸ್ಕಾರ ಮಾಡಿ, ಪತ್ರಿ ಪುಷ್ಪಗಳನ್ನಿಟ್ಟು,ತಾಂಬೂಲ ಫಲಹಾರಗಳನ್ನು ಅರ್ಪಿಸಿ, ಪ್ರದಕ್ಷಿಣೆಯನ್ನ ಮಾಡಿ, ಸ್ತುತಿಸಿ ನಮಸ್ಕರಿಸಿ, ಹಸ್ತ ಪರುಷವನ್ನು ಮಾಡಿಕೊಂಡು ಸಕಲ ಪದಾರ್ಥಗಳನ್ನು ನೀಡಿ, ವಿಭೂತಿಯನ್ನು ಮುಂದಿಟ್ಟು ನಮಸ್ಕರಿಸಿ ಅವರು ಸ್ವೀಕರಿಸುವವರೆಗೆ ಕೈ ಮುಗಿದು ನಿಲ್ಲುವುದು ಭಕ್ತನ ಕರ್ತವ್ಯ .

ಜಂಗಮವೇ ಪರಾತ್ಪರ, ಜಂಗವೇ ಪರವಸ್ತು , ಇಂತಪ್ಪ ಜಂಗಮ ಭಕ್ತನ ಮೇಲಣ ಕರುಣೆಯಿಂದ ಆತನಿಗೆ ತೀರ್ಥವನು ಕೊಟ್ಟ ಬಳಿಕ ತನ್ನ ಇಷ್ಟಲಿಂಗಕ್ಕೆ ಕೊಟ್ಟು ಕೊಳ್ಳುವುದು ಜಂಗಮದ ಕರ್ತವ್ಯ .

ಭವಿ ಭಕ್ತನಾಗಿದ್ದಾನೆ. ಆ ಭಕ್ತ ಜಂಗಮನಾಗಲು ಹೊರಟಿದ್ದಾನೆ ; ಜಂಗಮನನ್ನು ಹುಡುಕುತ್ತಾ. ಜಂಗಮನಿಗೆ ಭಕ್ತನನ್ನು ಜಂಗಮನನ್ನಾಗಿಸುವ ಕಾಯಕ. ಅಂಥ ಜಂಗಮನಿಗೆ ಭಕ್ತ ದೊರೆತ ಕೂಡಲೇ ಆತನ ಆಸೆ ಆಕಾಂಕ್ಷೆಗಳನ್ನು ನಯ ವಿನಯಗಳನ್ನು , ಆತನ ಕರುಣೆ ಮತ್ತು ಜಂಗಮನಾಗುವ ತವಕವನ್ನು ಪರೀಕ್ಷಿಸಿದ ಜಂಗಮ ಭಕ್ತನಿಗೆ ಜಂಗಮನ ವೃತ್ತಾಂತವನ್ನು ವಿವರಿಸಿ ತೀರ್ಥ ಪ್ರಸಾದವನ್ನು ಕರುಣಿಸುತ್ತಾನೆ.

ಭಕ್ತ ನೀಡಿದ ಪ್ರಸಾದವನ್ನು ಅಂಗದಲ್ಲಿಯೇ ಸಂಗಮವಾದ ಇಷ್ಟಲಿಂಗಯ್ಯನಿಗೆ ಉಣ್ಣಿಸುವ ವಿಧಾನವನ್ನು ಭಕ್ತನಿಗೆ ಹೇಳುತ್ತಾ ಉಣ್ಣುತ್ತಾನೆ.

ಜಂಗಮ ಲಿಂಗಯ್ಯನಿಗೆ ಉಣ್ಣಿಸದೆ ಪಕ್ಕದಲ್ಲಿ ಎಡೆ ಮಾಡೆಂದು ಹೇಳುವವ ಜಂಗಮನಲ್ಲ. ಜಂಗಮ ಹೇಳಿದ ಮಾತನ್ನು ಕೇಳಿ ಎಡೆ ಮಾಡುವವ ಭಕ್ತನೂ ಅಲ್ಲ. ಅವರು ವೇಷದ ಜಾತಿ ಜಂಗಮರು. ಜಾತಿ ವೇಷದ ಭಕ್ತರು. ಇವರಿಬ್ಬರ ಮುಖವನ್ನು ನೋಡಲಾಗದು ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**204**

**ಭಕ್ತ ನಂಬಿದರೆ ಕೊಪ್ಪದ ರಾಮಯ್ಯನಂತೆ ನಂಬಬೇಕಯ್ಯಾ**
**ಭಕ್ತ ನಂಬಿದರೆ ಕೆಂಭಾವಿ ಭೋಗಣ್ಣನಂತೆ ನಂಬಬೇಕಯ್ಯಾ**
**ಭಕ್ತ ನಂಬಿದರೆ ಚೇದಿರಾಜಯ್ಯನಂತೆ ನಂಬಬೇಕಯ್ಯಾ**
**ಭಕ್ತ ನಂಬಿದರೆ ಏಣಾದಿನಾಥನಂತೆ ನಂಬಬೇಕಯ್ಯಾ**
**ಇಂತಪ್ಪ ನಂಬಿಗೆಗೆ ತಾನು ಸರಿಯೆಂದು,**
**ಬೀದಿಯ ಪೋರನಂತೆ**
**ತನ್ನಯ ಮನದೊಳಗೊಂದು ಮಾತು, ಹೊರಗೊಂದು ಮಾತು,**
**ತುದಿನಾಲಗೆಯಲ್ಲಿ ಭಕ್ತರ ನಂಬಿದೆನೆಂದು ಗಳಹುವ**
**ಗೊಡ್ಡ ಹೊಲೆಯನ ಕಂಡೊಡೆ ಎದೆ ಎದೆಯನು ಒದ್ದೊದ್ದು**
**ತುಳಿಯೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಕೊಪ್ಪದ ರಾಮಯ್ಯ , ಕೆಂಭಾವಿ ಭೋಗಣ್ಣ, ಚೇದಿರಾಜಯ್ಯ , ಏಣಾದಿನಾಥರು ಬಲವಾಗಿ ನಂಬಿದರು. ಅವರು ಅನ್ಯವನ್ನು ನಂಬಲಿಲ್ಲ. ತಮ್ಮ ಸತ್ಯವನ್ನು ತಾವೇ ನಂಬಿದರು. ತಮ್ಮ ತನುವಿನಲ್ಲಿ ತನ್ಮಯವಾದ ಸತ್ಯದ ದೇವರನ್ನು ತಾವೇ ನಂಬಿದರು. ಆ ದೇವರಿಗೆ ತಾವು

ಭಕ್ತರಾದರು.

ಲೋಕ ದೇವರನ್ನು ಆರಾಧಿಸುತ್ತದೆ. ಲೋಕ ಆರಾಧಿಸುವ ದೇವರೇ ಬೇರೆ. ಶರಣರು ಆರಾಧಿಸುವ ದೇವರೇ ಬೇರೆ. ಲೋಕ ಹೊರಗಿನ ದೇವರನ್ನು ಆರಾಧಿಸುತ್ತದೆ. ಲೋಕ ಆರಾಧಿಸುವ ದೇವರು ಅನೇಕ. ಶರಣರು ಆರಾಧಿಸುವ ದೇವರು ಏಕ. ಆತ ಒಬ್ಬನೇ.

ಲೋಕ ವೆಂಕಟರಮಣ, ಲಕ್ಷ್ಮಿ, ವಿಷ್ಣು ಪರಮೇಶ್ವರ, ಮಲ್ಲಿಕಾರ್ಜುನ, ಕಾಶಿ ವಿಶ್ವನಾಥ ಮುಂತಾದ ದೇವರನ್ನು ಆರಾಧಿಸಿದರೆ ಶರಣ ಆ ಎಲ್ಲ ದೇವರ ರೂಪದೊಳಗಣ ಸತ್ಯವನ್ನು ಮಾತ್ರ ಆರಾಧಿಸುತ್ತಾನೆ. ವೆಂಕಟರಮಣ – ಪದ್ಮಾವತಿ ಭಕ್ತರಿಗೆ ಬೇರೆ ಬೇರೆಯಾಗಿ ಕಂಡರೂ ಶರಣನಿಗೆ ಮಾತ್ರ ಅವರಿಬ್ಬರ ಸ್ವರೂಪ ಒಂದೇ ಆಗಿ ಕಾಣುತ್ತದೆ.

ಲೋಕ ದೇವರ ರೂಪ ಕಂಡು ಆ ರೂಪಕ್ಕೆ ಪಟ್ಟು ಪೀತಾಂಬರ ಉಡಿಸಿ, ನಾನಾ ಆಭರಣಗಳನ್ನು ತೊಡಿಸಿ,ಕಿರೀಟ ಧರಿಸಿ, ಕಳಸಾರೋಹಣ ಮಾಡಿ, ನಾನಾ ರೀತಿಯ ಅಭಿಷೇಕದಿಂದ ಸ್ನಾನ ಮಾಡಿಸಿ, ಪುಷ್ಪ ಗಂಧ ಸುಗಂಧಾದಿಗಳನ್ನು ಎರಚಿ, ಮಂಗಳಾರತಿ ಧೂಪ ದೀಪಾರಾಧನೆ ಮಾಡಿ, ಆಲಯಗಳನ್ನು ನಿರ್ಮಿಸಿ, ಉತ್ಸವಗಳನ್ನು ಮಾಡುತ್ತಾ ಲೋಕ ಸಂಭ್ರಮಿಸುತ್ತದೆ. ಇಂತಹ ಬಾಹ್ಯ ಆರಾಧನೆಯನ್ನು, ಬಾಹ್ಯ ದೇವರುಗಳನ್ನು ಲೋಕ ಬಲವಾಗಿ ನಂಬುತ್ತದೆ. ಹೀಗಾಗಿ ಲೋಕದ ತುಂಬಾ ದೇವಾಲಯಗಳು, ಚರ್ಚ್, ಮಸೀದೆಗಳು, ಮಠ, ಆಶ್ರಮಗಳು ಕಾಣುತ್ತವೆ. ಲೋಕ ಅದಕ್ಕೆ ಭಕ್ತಿ ಮಾಡುತ್ತದೆ.

ಶರಣ ಹಾಗಲ್ಲ. ಲೋಕದ ಭಕ್ತರು ಕಂಡ ಆ ರೂಪದಲ್ಲಿಯೇ ಅದರ ಸ್ವರೂಪವನ್ನು ಕಂಡು ಆ ಸ್ವರೂಪದ ಸತ್ಯವನ್ನು ಆರಾಧಿಸುತ್ತಾನೆ. ರೂಪದ ಸ್ವರೂಪ ಕಲ್ಲು ! ಆ ಕಲ್ಲಿನ ರೂಪವನ್ನು ಲೋಕದ ಭಕ್ತರು ಬಲವಾಗಿ ನಂಬಿದರೆ ಆ ರೂಪದ ಸ್ವರೂಪವಾದ ಕಲ್ಲನ್ನು ಶರಣರು ಬಲವಾಗಿ ನಂಬುತ್ತಾರೆ. ಅದನ್ನು ಅಗೋಚರದ ಆಚಾರದಿಂದ ಆರಾಧಿಸುತ್ತಾರೆ.

ಲೋಕದ ಆಚಾರ ಕಾಣುತ್ತದೆ. ಶರಣರ ಆಚಾರ ಕಾಣುವುದಿಲ್ಲ. ಶರಣರು ಸತ್ಯಕ್ಕೆ ಬಲವಾಗಿ ಭಕ್ತಿ ಮಾಡುತ್ತಾರೆ. ಲೋಕ ಅಸತ್ಯಕ್ಕೆ ಬಲವಾಗಿ ಭಕ್ತಿ ಮಾಡುತ್ತದೆ.

**205**

**ಭಟಂಗೆ ಭೀತಿ ಉಳ್ಳನ್ನಕ್ಕ ರಣವ ಹೊಗಬಲ್ಲನೆ ?**
**ಬಲ್ಲವ ಅರಿಯದವರಲ್ಲಿ ಗೆಲ್ಲ ಸೋಲಕ್ಕೆ ಹೋರುವನ್ನಬರ ಬಲ್ಲವನಹನೆ ?**
**ಅರಿದು ನುಡಿಯಲಿಲ್ಲ, ಮರೆದು ಸುಮ್ಮನಿರಲಿಲ್ಲ.**
**ಆರು ಎಂದಂತೆ ಎನಲಿಲ್ಲ ಎಂದನಂಬಿಗ ಚೌಡಯ್ಯ .**

ಭಯವುಳ್ಳವನು ಅಭಯನಾಗಲಾರ. ನಿರ್ಭಯನಾಗಲಾರ. ಭಯನಿಗೆ ಅಭಯನ ಕತೆ ಹೇಳಿದರು ಕೂಡಾ ಆತ ಅಭಯನಾಗಲಾರ. ಭಯದ ಭೀತಿವುಳ್ಳವೀರ ರಣರಂಗಕ್ಕೆ ಹೋಗಲಾರ. ಹೋದರೂ ಅವನು ಗೆಲುವು ಸೋಲಿಗಾಗಿ ಯುದ್ಧ ಮಾಡುತ್ತಾನೆಯೇ ಹೊರತು ನಿರ್ಭಯದಿಂದ ಹೋರಾಡಲಾರ.

ಭಯ ಎನ್ನುವುದು ಒಂದು ಪಾತ್ರ. ರಣರಂಗದಲ್ಲಿ ಅದು ನಿರ್ಭಯನ ಪಾತ್ರ ಹಾಕುತ್ತದೆ. ಹಾಗಾದ ಮಟ್ಟಿಗೆ ಅದು ನಿರ್ಭಯವಲ್ಲ. ನಿರ್ಭಯನು ನಿರ್ಭಯನೇ ಆಗಿದ್ದಾನೆ. ಆತ ಯಾವ

ಪಾತ್ರವನ್ನೂ ಹಾಕಲಾರ.

ಸಿದ್ಧಾರ್ಥನಿಗೆ ವರ್ಧಮಾನನಿಗೆ ತಮ್ಮ ಪಾತ್ರದ ಮೇಲೆ ಭಯವಿತ್ತು. ಭಯವುಳ್ಳ ಹೋರಾಟದ ಆ ಪಾತ್ರವನ್ನು ಒಮ್ಮೆ ಕಿತ್ತೆಸೆದರು. ಅವರಿಬ್ಬರೂ ನಿರ್ಭಯರಾದರು. ಮಹಾವೀರರಾದರು. ಚಕ್ರವರ್ತಿಯಾದರೇನು? ಸಾಮ್ರಾಟನಾದರೇನು ? ಇವರಿಬ್ಬರೂ ಕಿರೀಟದ ಭಯವುಳ್ಳವರೇ ಆಗಿದ್ದಾರೆ. ಗೆಲ್ಲ ಸೋಲುವ ಭಯ, ಕಿರೀಟದ ಭಯ ಇರುವವರೆಗೆ ಯಾರೂ ನಿರ್ಭಯರಾಗಲಾರರು.

ಕಿರೀಟವಿದ್ದೂ ಕಿರೀಟಕ್ಕಾಗಿ ಹೋರಾಡಬಹುದೆ ? ಕಿರೀಟವಿದ್ದವನು ಕಿರೀಟವಿ ದೆಯೆಂದು ಬಲ್ಲವನು. ತನ್ನಲ್ಲಿಯೂ ಕಿರೀಟವಿದೆ ; ಹೋರಾಡುವ ಆತನಲ್ಲಿಯೂ ಕಿರೀಟವಿದೆ. ಕಿರೀಟವಿದ್ದೂ ಕಿರೀಟಕ್ಕಾಗಿ ಗೆಲವು ಸೋಲಿಗಾಗಿ ಹೋರಾಡಬಹುದೆ ? ಹೋರಾಡಿದರೆ, ಕಿರೀಟಕ್ಕಾಗಿ ಕಾದಾಡಿ ಸತ್ತರೆ ಅವರು ಬಲ್ಲವರು ಹೇಗಾಗುತ್ತಾರೆ ? ಹೋರಾಡಿ ಸಾಯುವ ಹೋರಾಟವನ್ನು ಅರಿಯಲಿಲ್ಲ. ಇದು ಭಯದ ಹೋರಾಟವೆಂದು ತಿಳಿಯಲಿಲ್ಲ. ನಿರ್ಭಯದ ಹೋರಾಟಕ್ಕೆ ಧುಮುಕಲಿಲ್ಲ.

ಹೋರಾಡುವವನು ಭಯವುಳ್ಳವನು. ಅವನ ವಿರುದ್ಧ ಹೋರಾಡುವವನೂ ಭಯ ಉಳ್ಳವನೇ ಆಗಿದ್ದಾನೆ. ಇವರಿಬ್ಬರ ಹೋರಾಟ ನಿಲ್ಲಬೇಕಾದರೆ ನಿರ್ಭಯನ ಹೋರಾಟ ಪ್ರಾರಂಭವಾಗಬೇಕು.

ಯುದ್ಧ ಮಾಡಲೇಬೇಕೆಂದು ಕತ್ತಿ ಹಿಡಿದು ಕಿರೀಟದ ಆಸೆಗಾಗಿ ಹೋರಾಡುವ ಭಯವುಳ್ಳ ಚಕ್ರವರ್ತಿಯೊಬ್ಬ , ಯುದ್ಧವೇ ಬೇಡವೆಂದು ಯುದ್ಧ ಮಾಡುವವನ ವಿರುದ್ಧವೇ ಕತ್ತಿಯಿಲ್ಲದೆ ಹೋರಾಡುವ ಮಹಾವೀರನೊಬ್ಬ.

ಚಕ್ರವರ್ತಿ ಭಯ ಉಳ್ಳವನು. ಮಹಾವೀರ ನಿರ್ಭಯನು, ಅಭಯನು. ಇವರಿಬ್ಬರೂ ಅಂಗವನ್ನು ರಣರಂಗ ಮಾಡಿಕೊಂಡು ಹೋರಾಡಿದಾಗ ಪಾತ್ರಧಾರಿ ಭಯವುಳ್ಳ ಚಕ್ರವರ್ತಿ ಸಾಯುತ್ತಾನೆ. ನಿರ್ಭಯಿ ಮಹಾವೀರ ಗೆಲ್ಲುತ್ತಾನೆ.

ಮಹಾವೀರನಿಗೆ ಯಾರ ಭಯವೂ ಇಲ್ಲ. ಅವನು ನಡೆದದ್ದೇ ಹಾದಿ. ಅರಿತು ನುಡಿಯಲಿಲ್ಲ. ಮರೆತು ಸುಮ್ಮನಿರಲಿಲ್ಲ. ಆರು ಎಂದಂತೆ ಎನಲಿಲ್ಲ. ಏಕೆಂದರೆ ಅವನು ತನ್ನಲ್ಲಿಯೇ ಕಲಿತವನು. ತನ್ನನ್ನು ತಾನು ಕಲಿತವನು. ತನ್ನಲ್ಲಿದ್ದ ಅಜ್ಞಾನವನ್ನು ತಾನೇ ಸೋಲಿಸಿದವನು. ತನ್ನಲ್ಲಿ ಇದ್ದ ಜ್ಞಾನ ಸಂಪತ್ತನ್ನು ತಾನೇ ಬಳಸಿಕೊಂಡು ಕುಬೇರನಾದವನು. ಮಹಾವೀರನಾದವನು. ಬುದ್ಧನಾದವನು. ಅಂಬಿಗರ ಚೌಡಯ್ಯ ತಾನಾದವನು.

**206**

**ಭವವಿರಹಿತಂಗೆ ಕರ್ಮಂಗಳ ಕೇಳಲೇತಕ್ಕೆ ?**
**ಕ್ರೀ ನಷ್ಟವಾದವಂಗೆ ಕೊಡುವ ಕೊಂಬುದನರಸಲೇತಕ್ಕೆ ?**
**ನೋಡಿದಲ್ಲಿಯೆ ಸಂದಗುಣ,**
**ಮುಟ್ಟಿದಲ್ಲಿಯೆ ಅರ್ಪಿತವೆಂದನಂಬಿಗ ಚೌಡಯ್ಯ .**

ಜನನ ಮರಣಗಳನ್ನು ಗೆದ್ದವನು ಪುನಹ ಅಜ್ಞಾನದೆಡೆಗೆ ವಾಲುವುದಿಲ್ಲ. ಅಜ್ಞಾನ

ನಷ್ಟವಾಗಿ ಜ್ಞಾನದ ಆಚರಣೆಯಲ್ಲಿ ಇದ್ದವನು ವ್ಯವಹಾರದ ಗೋಜಿಗೆ ಹೋಗುವುದಿಲ್ಲ. ಸುಖ ದುಃಖಗಳ ಭಾದೆಯೂ ಅವನಿಗೆ ಇರುವುದಿಲ್ಲ. ಏಕೆಂದರೆ ನೋಡುವ ಕಣ್ಣಿನಲ್ಲಿ ಕಣ್ಣಿನ ಆ ನೋಟದಲ್ಲಿ ಅಜ್ಞಾನದ ಕಿರಣಗಳು ನಷ್ಟವಾಗಿರುತ್ತವೆ. ಗುಣ ಅವಗುಣಗಳು ಸತ್ತು ನಿರ್ಗುಣಿಯಾಗಿರುತ್ತಾನೆ.

ಗುಣಕ್ಕೆ ಬಾಧೆಯುಂಟು. ಗುಣದಿಂದ ಕೂಡಿದ ನೋಟಕ್ಕೆ ಭಾದೆಯುಂಟು, ಗುಣದಿಂದ ಕೂಡಿದ ಸ್ಪರ್ಶಕ್ಕೆ ಬಾಧೆಯುಂಟು. ಗುಣದಿಂದ ಕೇಳುವ ಶಬ್ದಕ್ಕೆ ಗುಣದಿಂದ ಮೂಸಿಸುವ ವಾಸನೆಗೆ, ಗುಣದಿಂದ ರುಚಿಸುವ ರುಚಿಗೆ ಬಾಧೆ ಯುಂಟು.

ನಿರ್ಗುಣದ ನೋಟ, ಸ್ಪರ್ಶ, ರುಚಿಗೆ,ಶಬ್ದ ಮತ್ತು ವಾಸನೆಗೆ ಭಯವಿಲ್ಲ. ಬಾಧೆಯಿಲ್ಲ. ಎಲ್ಲಿ ಮುಟ್ಟಿದರೆ ಅಲ್ಲಿಯೇ ಪ್ರಸಾದವಾಗುತ್ತದೆ. ಏಕೆಂದರೆ ಮುಟ್ಟುವಲ್ಲಿ ಬಾಧೆಯಿದೆ. ಮುಟ್ಟಿಸಿಕೊಳ್ಳುವ ಅಂಗಕ್ಕೆ ಬಾಧೆಯಿಲ್ಲ. ಏಕೆಂದರೆ ಮುಟ್ಟಿಸಿ ಕೊಳ್ಳುವ ಅಂಗ ಲಿಂಗಾಂಗವಾಗಿದೆ. ಸಕಲ ದುರ್ಗುಣ ಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾಗಿದೆ. ನಿರ್ಗುಣಿ ಅಂಗ ನಿರಾಳ ಅಂಗ !

ಲಿಂಗವೆಂದರೇನನೆಂದು ಹೊಳೆದ ಅಂಗವೇ ಲಿಂಗಾಂಗ. ಸ್ವರೂಪಜ್ಞಾನ ಹೊಂದಿದ ಅಂಗ. ಅದು ನಿರ್ಗುಣಿ ಅಂಗ. ಅಂಗದಲ್ಲಿರುವ ಗುಣಗಳೆಲ್ಲವನ್ನೂ ಉದುರಿಸಿಕೊಂಡ ಅಂಗ. ಹೀಗಾಗಿ ಆ ಅಂಗಕ್ಕೆ ಎಲ್ಲಿ ಮುಟ್ಟಿದರೂ ಅಲ್ಲಿಯೇ ಅರ್ಪಿತವಾಗುತ್ತದೆ. ಅಂಗಕ್ಕೆ ಈ ಸುಖ ಅರ್ಥವಾಗುವುದಿಲ್ಲ.

ಗುಣಗಳನ್ನು ಹೊಂದಿದ ಅಂಗ, ಶಬ್ದದ ಗುಣವಿಡಿದು ಕೇಳುತ್ತದೆ. ಸ್ಪರ್ಶದ ರುಚಿಯೊಂದಿಗೆ ಸುಖಿಸುತ್ತದೆ. ವಾಸನೆಯಲ್ಲಿ ಸುಗಂಧ, ದುರ್ಗಂಧಗಳನ್ನು ಕಂಡುಕೊಳ್ಳುತ್ತದೆ. ದೃಶ್ಯದಲ್ಲಿ ಏರಿಳಿತಗಳುಂಟಾಗುತ್ತವೆ. ನಿರ್ಗುಣಿ ಅಂಗ ಹಾಗಲ್ಲ. ಶಬ್ದವನ್ನು ನಪುಂಸಕ ಮಾಡಿ ಅರಿವಿನಿಂದ ಕೇಳುತ್ತದೆ. ಹೀಗಾಗಿ ಕಿವಿಗೆ ಬಡಿದ ಶಬ್ದ ಕಿವಿಗೆ ಅರ್ಪಿತವಾಗಿ ಕಿವಿಯಲ್ಲಿಯೇ ಪ್ರಸಾದವಾಗುತ್ತದೆ.

ದೇವಸ್ಥಾನ, ದೇವರು, ಕೆಳಗೆ ಹಾಸಿದ ಹಾಸು,ಶಿಖರ, ಪೌಳಿ ಒಂದೇ ಆಗಿ ಕಾಣುತ್ತದೆ. ರೂಪ ಹಲವಾದಡೇನು ಕಲ್ಲು ಒಂದೇ ! ತನ್ನ ಸ್ವರೂಪ ಕಂಡುಕೊಂಡ ಅಂಗ ದೇವರ ಸ್ವರೂಪವನ್ನೂ ಕಂಡುಕೊಳ್ಳುತ್ತದೆ. ಲೋಕದ ಕಣ್ಣಿಗೆ ದೇವರ ರೂಪ ಕಂಡರೆ, ಜ್ಞಾನಿಯ ಕಣ್ಣಿಗೆ ದೇವರ ಸ್ವರೂಪ ಕಾಣುತ್ತದೆ. ಹೀಗಾಗಿ ಜ್ಞಾನಿ ನೋಡಿದ್ದು, ಕೇಳಿದ್ದು, ಮುಟ್ಟಿದ್ದು, ಮೂಸಿಸಿದ್ದು, ರುಚಿಸಿದ್ದೆಲ್ಲ ಪ್ರಸಾದವಾಗುತ್ತದೆ. ಅಂದರೆ ಅರಿವಿಗೆ ಬರುತ್ತದೆ. ಅಂಗದಲ್ಲಿ ಯಾವುದೇ ರೀತಿಯ ಸುಖ ದುಃಖಗಳ ರಸಾಯನಿಕ ಕ್ರಿಯೆ ಉಂಟಾಗುವುದಿಲ್ಲ. ಇದು ಅಂಬಿಗರ ಚೌಡಯ್ಯಗಳ ಅರಿವಿನ ಪ್ರಸಾದ.

**207**

**ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ**
**ಕೊರಳಿಗೆ ಕವಡೆಯ ಕಟ್ಟಿ ನಾಯಾಗಿ ಬೊಗಳುವರು !**
**ಅದಾವ ವಿಚಾರವಯ್ಯ ? ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ**
**ಬೇವಿ ನುಡಿಗೆಯನುಟ್ಟು ಹಡಲಿಗೆಯ ಹೊತ್ತು 'ಥೋ ಥೋ'ಎಂಬರು !**
**ಅದಾವ ವಿಚಾರವಯ್ಯಾ? ಭವಿತನಕ್ಕೆ ಹೇಸಿ ಭಕ್ತರಾದ ಬಳಿಕ**

**ಹಗ್ಗ ಹುರಿ-ಬೆನ್ನಸಿಡಿ ಬಾಯ ಬೀಗದಲ್ಲಿ ಹೋಗುವರು !**
**ಅದಾವ ವಿಚಾರವಯ್ಯ? ಇಂಥ ಭವಿತನಕ್ಕೆ ಮಾರ್ಗದಲ್ಲಿ ಚರಿಸುವ**
**ಶಿವದ್ರೋಹಿಗಳಿಗೆ ಲಿಂಗಧಾರಣವ ಮಾಡುವನೊಬ್ಬ ಗುರುದ್ರೋಹಿ,**
**ಅವರಿಗೆ ಚರಣೋದಕವ, ತಾ ಧರಿಸುವ ವಿಭೂತಿ-ರುದ್ರಾಕ್ಷಿಯ**
**ಕೊಡುವನೊಬ್ಬ ಲಿಂಗದ್ರೋಹಿ ! ಅವನು ಭಕ್ತನೆಂದು**
**ಅವನ ಮನೆಯ ಹೊಕ್ಕು ! ಮಂತ್ರವ ಹೇಳಿ,**
**ಅನ್ನವ ತಿಂದವನೊಬ್ಬ ಜಂಗಮದ್ರೋಹಿ !**
**ಇಂತೀ ನಾಲ್ವರಿಗೆ ಸೂರ್ಯ ಚಂದ್ರರುಳ್ಳನ್ನಕ್ಕ**
**ಎಕ್ಕಲಕೊಂಡದಲ್ಲಿಕ್ಕದೆ ಮಾಣ್ಬನೆ ಅಂಬಿಗರ ಚೌಡಯ್ಯನು ?**

ಭವಿತನದಿಂದ ಭಕ್ತನಾಗುವುದು ಎಂದರೆ ವೇಷ ಬದಲಿಸುವುದು ಅಲ್ಲ. ಸತ್ಯತಿಳಿದು ಅಸತ್ಯಕ್ಕೆ ಭಕ್ತಿ ಮಾಡುವುದು. ಆ ಸತ್ಯಕ್ಕೆ ಶರಣು ಹೋಗುವುದು. ಆ ಸತ್ಯಕ್ಕೆ ದಾಸನಾಗುವುದು. ಅಸತ್ಯದಿಂದ ಸತ್ಯಕ್ಕೆ ಪರಿವರ್ತನೆಗೊಳ್ಳುವುದು.

ಕಣ್ಣು ಕಿವಿ ಮೂಗು ಚರ್ಮ ನಾಲಿಗೆಯಲ್ಲಿ ಬದಲಾವಣೆ ಕಂಡುಕೊಳ್ಳುವುದು. ಆಯಾ ಜಾಗದಲ್ಲಿಯ ಸತ್ಯಕ್ಕೆ ಆಯಾ ಜಾಗದಲ್ಲಿ ಉಂಟಾದ ಅಸತ್ಯವನ್ನು ಹಿಡಿದು ಸತ್ಯದತ್ತ ತಳ್ಳುವುದು. ಅಸತ್ಯಕ್ಕೆ ಸತ್ಯದ ದರ್ಶನ ಮಾಡಿಸುವುದು.

ಭವಿತನಕ್ಕೆ ಹೇಸಿ ಭಕ್ತನಾಗುವುದು ಎಂದರೆ ಕೊರಳಿಗೆ ಕವಡೆಯ ಕಟ್ಟಿ ಜೋಗಿಯಂತೆ ಕುಣಿಯುವುದಲ್ಲ. ಜನಿವಾರ ಹಾಕಿ ದೇವರನ್ನು ಒಲಿಸಿಕೊಳ್ಳುವುದೂ ಅಲ್ಲ. ಬೇವಿನ ಉಡುಗೆ ಉಟ್ಟು ಬೆತ್ತಲೆ ಕುಣಿಯುವುದೂ ಅಲ್ಲ. ಹಗ್ಗ ಹುರಿಗಳಿಂದ ಬಿಗಿಸಿಕೊಂಡು ಬೆನ್ನ ಸಿಡಿಗೆ ಜೋತು ಬೀಳುವುದಲ್ಲ. ಬಾಯಿಗೆ ಶಸ್ತ್ರ ಹಾಕಿಕೊಳ್ಳುವುದೂ ಅಲ್ಲ. ಇಂತಹ ಅರಿವಿನ ದ್ರೋಹಿಗಳಿಗೆ ದೀಕ್ಷೆ ಕೊಡುವವನನ್ನು ಚೌಡಯ್ಯ ಶರಣರು ಗುರುದ್ರೋಹಿಗಳೆಂದು ಕರೆದಿದ್ದಾರೆ.

ಅಜ್ಞಾನಿಗಳಿಗೆ ಅರಿವಿನ ತಂತ್ರಗಾರಿಕೆಯನ್ನು ಹೇಳಿಕೊಟ್ಟರೆ ಆ ತಂತ್ರಗಾರಿಕೆಯನ್ನೇ ಕಸುಬನ್ನಾಗಿಸಿಕೊಂಡು ಗುರುವೇಷ ಧರಿಸಿ ಶಿಷ್ಯರನ್ನಾಗಿಸಿಕೊಳ್ಳುತ್ತಾರೆ. ಇಂಥವನು ಗುರುವೂ ಅಲ್ಲ; ಜಂಗಮನೂ ಅಲ್ಲ. ಗುರುವಿನ ಮೋಸಕ್ಕೆ ಬಲಿಯಾದವನು ಶಿಷ್ಯನೂ ಅಲ್ಲ.

ಶಿಷ್ಯನ ಮನೆ ಹೊಕ್ಕು, ಅವನಿಗೆ ಮಂತ್ರ ಹೇಳಿ, ಅವನ ಮನೆಯಲ್ಲಿ ಅನ್ನ ತಿಂದವನು ಜಂಗಮದ್ರೋಹಿ. ಇಂತಹ ಗುರುಗಳಿಗೆ ಸಮಾಜದಿಂದ ಶಿಕ್ಷೆ ದೊರೆಯದಿರಬಹುದು ; ಅಂಗ ದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಎಕ್ಕಲ ಕೊಂಡದಲ್ಲಿ ಇಕ್ಕದೆ ಮಾಣ್ಬನೆ ಎಂದು ಪ್ರಶ್ನಿಸಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಅಂಗದಲ್ಲಿ ಅರಿವು ಸಂಗಮವಾಗಿದೆ. ಅಂಗವನ್ನು ಮನ ಆವರಿಸಿದೆ. ಅರಿವೆಂಬ ಗುರುದೇವನನ್ನು ಅರಿಯದ ಮನವೇ ಭವಿ. ಅರಿವೆಂಬ ಗುರುದೇವನನ್ನು ಅರಿತು ಆ ಗುರು ದೇವನಿಗೆ ಭಕ್ತಿ ಮಾಡುವವನೇ ಭಕ್ತ . ಅಂತಹ ಗುರುದೇವನನ್ನು ಶಿಷ್ಯನ ಅಂಗದಲ್ಲಿಯೇ ತೋರಿಸುವವನು ನಿಜವಾದ ಗುರುದೇವನು.

ಪ್ರ-ಪಂಚದ ಸಕಲ ಅಂಗಗಳು ಲಿಂಗಾಂಗವಾಗಲು ಜನ್ಮ ತಳೆದಿವೆ. ಅರಿವೆಂಬ ಗುರುದೇ ವನನ್ನು ಆರಾಧಿಸಿ ಆ ಗುರುದೇವನಿಗೆ ಭಕ್ತಿ ಮಾಡಲು ಬಂದಿವೆ.

ವೇಷ ಹಾಕಿಕೊಂಡರೆ ಭಕ್ತನಾಗುವುದಿಲ್ಲ. ನಿಜ ಗುರುವೂ ದೊರೆಯುವುದಿಲ್ಲ. ಬದಲಾಗಿ

ತನ್ನ ವೇಷ ತನಗೇ ಮುಳುವಾಗುತ್ತದೆ. ತನ್ನ ಅರಿವೇ ತನ್ನ ಮರೆವನ್ನು ಅಣಕಿಸಿ ಅಣಕಿಸಿ ಕೊಲ್ಲುತ್ತದೆ. '' ಬೈದರೆ ಬೈಗಳು ಕೈಯ ಮೇಲೆ '' ಎನ್ನುವ ಬಸವಣ್ಣನವರ ಸೂತ್ರದಂತೆ !

**208**

**ಭೂತ ಭೂತ ಹೊಡಯಿತೆಂದು ಬಾಯಿಗೆ ಬಂದ ಹಾಗೆ ಕೆಲದಾಡಿ**
**ಹಲಬರು ಮಂತ್ರಿಸಿ ಥೂ ಥೂ ಎಂದು ಉಗುಳಿ,**
**ಛೀ ಛೀ ಎಂದು ಉಗುಳಿ.**
**ಜರಿದು ಝುಂಕಿಸಿ ಲಜ್ಜೆಗೆಡಿಸಿಕೊಂಬ**
**ಪಾತಕ ಕರ್ಮಿಗಳಿಗ್ಯಾಕೊ ಶಿವಸ್ತೋತ್ರ, ಶಿವಭಕ್ತಿ?**
**.........................ಬೆಂದು ನಾರು**
**ಬೇರು.........................**

ತಾನೇ ಬಡಿಸಿಕೊಂಡ ಬೂತ ಪಿಶಾಚಿಯನ್ನು ತಾನೇ ಕಳೆದುಕೊಳ್ಳಬೇಕು. ಮತ್ತೊಬ್ಬರಿಗೆ ಕಳೆಯಲು ಬರುವುದಿಲ್ಲ. ಬೂತಗಳು ಇವೆ. ಅವು ಐದು. ಆ ಐದು ಬೂತಗಳು ತಾನೆ. ತನ್ನಲ್ಲಿ ಅರಿವು ಸಂಗಮವಾಗಿದೆ. ತನ್ನಲ್ಲಿದ್ದ ಬೂತಗಳು ತಾನೇ ಹೊಡೆಯಿತೆಂದು ಮಂತ್ರವಾದಿ ಯಲ್ಲಿಗೆ ಹೋಗಿ ಮಂತ್ರಿಸಿಕೊಳ್ಳಬಹುದೆ ?

ತನ್ನಲ್ಲಿರುವ ಬೂತಗಳು ಬೂತಗಳಲ್ಲ ; ತನಗೆ ಮತ್ತೊಂದು ಬೂತ-ಪಿಶಾಚಿ ಹೊಡೆಯಿ ತೆಂದುಕೊಂಡರೆ ಅದು ಇಲ್ಲವೇ ಇಲ್ಲ.ಅದೊಂದು ಭ್ರಮೆ. ಸುಳ್ಳು ಭ್ರಮೆ.ಆ ಸುಳ್ಳು ಭ್ರಮೆ ಯನ್ನು ಕಳೆಯಲು ಸುಳ್ಳು ಮಂತ್ರವಾದಿ ತನ್ನ ಹೊಟ್ಟೆ ಪಾಡಿಗಾಗಿ ಹುಟ್ಟಿದ್ದಾನೆ. ಅವನ ಹೊಟ್ಟೆ ತುಂಬಿಸಲು ತಾನು ಹೋಗಿ ; ಅವನಿಂದ ತಾನೇ ಥೂ ಥೂ, ಛೀ ಛೀ ಎಂದು ಉಗುಳಿಸಿಕೊಂಡು ಬೂತ ಹೊಡೆದದ್ದು ಹೋಯಿತೆಂದು ಭ್ರಮೆಯಿಂದು ತಿಳಿದುಕೊಳ್ಳುತ್ತಾನೆ.

ಇವರಿಬ್ಬರೂ ಪಾತಕ ಕರ್ಮಿಗಳು. ಇವರಿಬ್ಬರಿಗೂ ಅರಿವಿನ ಮಂತ್ರ-ಸ್ತೋತ್ರ-ಶಿವಭಕ್ತಿ ಭೋದಿಸಿದರೆ ಅರ್ಥವಾಗದು. ಅವರ ಅಜ್ಞಾನ ಅವರೇ ಕಳೆದುಕೊಳ್ಳಬೇಕು. ಅವರ ಜ್ಞಾನ ಅವರಿಗೇ ನೆನಪಿಗೆ ಬರಬಬೇಕು. ಅಂದರೆ ಮಾತ್ರ ಅವರಿಗೆ ಅಂಟಿದ ಬೂತ ಅವರನ್ನು ಬಿಟ್ಟು ತೊಲಗುತ್ತದೆ.

**209**

**ಭೇದವ ಭೇದಿಸುವ ಚಿತ್ತವ,**
**ನಾದಬಿಂದು ಕಳೆಗೆ ಅತೀತವಪ್ಪ ಆತ್ಮನ,**
**ಅಡಗಿ ರಂಜಿಸುವ ಠಾವ ಕುರುಹುಗೊಂಡವನ**
**ಯೋಗಿಯೆಂದನಂಬಿಗ ಚೌಡಯ್ಯ .**

ತನುವನ್ನು ಒಂದು ಉಪಕರಣವನ್ನಾಗಿ ಮಾಡಿಕೊಂಡು ಚಿತ್ತ ತನ್ನ ಪ್ರಭಾವವನ್ನು ಬೀರುತ್ತದೆ. ಅದು ಬೀರುವ ಪ್ರಭಾವಕ್ಕೆ ತನು ಬಲಿಯಾಗುತ್ತದೆ. ಚಿತ್ತದ ರಂಜನೆಗೆ ತನು ಒಳಗಾಗುತ್ತದೆ.

ಕಣ್ಣಿನಲ್ಲಿ ದಿವ್ಯ ದೃಷ್ಟಿಯಿದೆ. ಹಾಗೆಯೇ ಅಜ್ಞಾನದ ದೃಷ್ಟಿಯೂ ಇದೆ. ಚಿತ್ತ ಕಣ್ಣಿನ

ದೃಶ್ಯದಲ್ಲಿ ಬೆರೆತಿದೆ. ದೃಶ್ಯಕ್ಕೆ ಚಿತ್ತವನ್ನು ಪಕ್ಕದಲ್ಲಿಟ್ಟು ನೋಡಲು ಬರುವುದಿಲ್ಲ. ತಾನು ನೋಡುವ ನೋಟ ದಲ್ಲೆಲ್ಲ ಚಿತ್ತ ಬೆರೆತಿರುವುದರಿಂದ ಕಣ್ಣಿನಲ್ಲಿ ಉಂಟಾದ ನೋಟದ ರಸಾಯನಿಕ ಕ್ರಿಯೆ ದೇಹಕ್ಕೆ ಹರಿದು ದೇಹದಲ್ಲಿ ಸುಳ್ಳು ಸುಖದ ದುಃಖದ ಕಂಪನಗಳು ಉಂಟಾಗುತ್ತವೆ.

ಉದಾಹರಣೆಗೆ ಕೆಲವು ವಸ್ತುಗಳನ್ನು ನೋಡುವಾಗ ಕಣ್ಣು ದಿವ್ಯ ದೃಷ್ಟಿಗೆ ಒಳಗಾಗಿರುತ್ತದೆ. ಆಗ ಚಿತ್ತ ಕಣ್ಣಿನಿಂದ ದೂರ ಸರಿಯುತ್ತದೆ. ದೇಹ ಸಹಜ ಸುಖವನ್ನು ಸಹಜವಾಗಿಯೇ ಅನುಭವಿಸುತ್ತದೆ.

ಕಣ್ಣಿಗೆ ಭಾಷೆಯಿಲ್ಲ. ಭಾಷೆಯ ಅವಶ್ಯಕತೆಯೂ ಇಲ್ಲ.ಅದರ ದೃಶ್ಯವೇ ಅದಕ್ಕೆ ಭಾಷೆ. ಕಣ್ಣು ಪಾಕಿಸ್ತಾನದಾದ್ದರೇನು, ಅಮೆರಿಕಾ, ರಷಿಯಾದಾದದರೇನು ? ದೇಶದ ಯಾವ ಜಾತಿ ಮತ ಪಂಗಡದಾದದರೇನು ? ಕಣ್ಣು ಹೆಣ್ಣಾದರೇನು ಗಂಡಾದರೇನು ? ಕಣ್ಣು ಕಣ್ಣೇ ಆಗಿದೆ. ಹೀಗೆ ಕಣ್ಣಿನ ಬಗ್ಗೆ ಮಾತನಾಡುವಾಗ ಅದು ದಿವ್ಯ ದೃಷ್ಟಿಗೆ ಸರಿಯುತ್ತದೆ. ನೋಡುವಾಗ ದೃಷ್ಟಿಗೆ ಸರಿದು ಆ ದೃಷ್ಟಿಯಲ್ಲಿ ಚಿತ್ತ ಬೆರೆತು ಹೆಣ್ಣಾಗಿ ಗಂಡನ್ನು ನೋಡುತ್ತದೆ ; ಗಂಡಾಗಿ ಹೆಣ್ಣನ್ನು ನೋಡಿ ದೇಹದಲ್ಲಿ ಕಾಮ ಸೃಷ್ಟಿ ಮಾಡಿಕೊಳ್ಳುತ್ತದೆ.

ಕಣ್ಣು ಕಲ್ಲನ್ನು ಕಲ್ಲು ಎಂದೇ ನೋಡುತ್ತದೆ. ಅದು ಪಾಕಿಸ್ತಾನದಾದದರೇನು, ಅಮೇರಿಕ ದಾದದರೇನು, ಭಾರತದಾದದರೇನು ? ಕಣ್ಣಿಗೆ ಕಲ್ಲೆಂದೇ ಗೋಚರಿಸುತ್ತದೆ. ಆಗ ಕಣ್ಣಿನಲ್ಲಿ ಬೆರೆತ ಚಿತ್ತ ಕಣ್ಣಿನಿಂದ ದೂರ ಸರಿದಿರುತ್ತದೆ. ಕಣ್ಣು ತನ್ನ ದಿವ್ಯ ಜ್ಞಾನವನ್ನು ಸಹಜವಾಗಿ ಬಳಸಿ ಕೊಂಡು ಕಲ್ಲನ್ನು ಕಲ್ಲೆಂದು ನೋಡುತ್ತದೆ.

ಒಬ್ಬ ಕಲಾವಿದ ಕಲ್ಲಿನಲ್ಲಿ ಮೂರು ತುಂಡುಗಳನ್ನು ಮಾಡಿ, ಒಂದು ತುಂಡಿನಲ್ಲಿ ಮಸೀದಿ ಕೆತ್ತಿದರೆ ಸಾಕು ಕಣ್ಣಿನಲ್ಲಿಯ ದಿವ್ಯ ಜ್ಞಾನ ಹಿಂದೆ ಸರಿದು ಚಿತ್ತ ಆವರಿಸುತ್ತದೆ. ಆ ಚಿತ್ತ ತಾನು ಮುಸಲ್ಮಾನನೆಂಬ ಭಾವ ಹರಿಸುತ್ತದೆ. ತಾನು ಮುಸಲ್ಮಾನನೆಂಬ ಭಾವದ ರಸಾಯನವನ್ನು ಕಣ್ಣಿನ ದೃಶ್ಯದ ಮೂಲಕ ತನುವಿಗೆ ಹರಿಸುತ್ತದೆ. ತಾನು ಮುಸಲ್ಮಾನನಲ್ಲ ಎಂಬ ದುರ್ಭಾವದ ರಸಾಯನವನ್ನು ದೇಹಕ್ಕೆ ಹರಿಸಿ ಹಿಂದು ಕ್ರೈಸ್ತನೆಂದು ಪ್ರಸಿದ್ಧ ಪಡಿಸಿಕೊಳ್ಳುತ್ತದೆ.

ದೇಹದಲ್ಲಿ ಹರಿಯುವ ಭಾವ ಮತ್ತು ದುರ್ಭಾವಗಳೆರೆಡೂ ಚಿತ್ತದಿಂದ ಉಂಟಾದ ರಸಾಯನಗಳೇ ಆಗಿವೆ. ಮಸೀದೆ, ದೇವಾಲಯ, ಚರ್ಚಗಳಿಂದ ದೇಹದಲ್ಲಿ ಹುಟ್ಟುವ ಕೃತಕ ರ ಸಾಯನಗಳನ್ನು ದೂರಸರಿಸಿ ಆ ಮೂರು ವಸ್ತುಗಳ ಮೂಲ ಸ್ವರೂಪವಾದ ಕಲ್ಲನ್ನು ನೋಡಲು ಕಣ್ಣಿನ ದೃಷ್ಯಕ್ಕೆ ಸಾಧ್ಯವಾಗುವುದೇ ಇಲ್ಲ. ಏಕೆಂದರೆ ದೃಶ್ಯದಲ್ಲಿ ಚಿತ್ತ ಬೆರೆತಿದೆ. ಆ ಚಿತ್ರ ಮಸೀದೆ, ದೇವಾಲಯ, ಚರ್ಚ್‌ನಲ್ಲಿ ಬಲವಾಗಿ ನೆಟ್ಟು ಅದರ ಕೀಲಿ ಕಳೆದು ಹೋಗಿವೆ. ಪ್ರಪಂಚ ಚಿತ್ತ ಭರಿತವಾದ ಕಣ್ಣುಗಳಿಂದ ತುಂಬಿದೆ. ಆ ಎಲ್ಲಾ ಕಣ್ಣುಗಳಲ್ಲಿ ದಿವ್ಯ ದೃಷ್ಠಿಯೂ ಭರಿತವಾ ಗಿದೆ. ಈ ದಿವ್ಯ ದೃಷ್ಠಿ ಕೆತ್ತಿದ ಕಲೆಗೆ ಮರುಳಾಗುವುದಿಲ್ಲ. ಅದು ಮಸೀದೆಯಾದರೇನು? ಅದರ ಸ್ವರೂಪ ಕಲ್ಲು. ಅದು ಚರ್ಚ್ ಆದರೇನು? ಅದು ದೇವಾಲಯವಾದರೇನು? ಅದರ ಸ್ವ ರೂಪವೂ ಕಲ್ಲೇ ಆಗಿರುವುದರಿಂದ ಕಣ್ಣಿನ ದಿವ್ಯ ದೃಷ್ಠಿಗೆ ಕಲ್ಲು ಮಾತ್ರ ಕಾಣುತ್ತದೆ. ಹೀಗಾಗಿ ದೇಹ ರಂಜನೆಗೆ ಒಳಗಾಗುವುದಿಲ್ಲ. ನಿರಂಜನನಾಗಿ ಮಸೀದೆ, ದೇವಾಲಯ, ಚರ್ಚನ್ನು ನೋಡುತ್ತದೆ.

ಕಣ್ಣಿನಲ್ಲಿ ರಂಜನೆಗೆ ಒಳಗಾದ ರಾಕ್ಷಸ ದೃಷ್ಠಿಯೂ ಇದೆ. ನಿರಂಜನೆಗೆ ಒಳಗಾದ ದಿವ್ಯ ದೃಷ್ಠಿಯೂ ಇದೆ. ತಾನು ನಿರಂಜನನಾಗಬೇಕಾದರೆ ಕಣ್ಣು ರಾಕ್ಷಸ ದೃಷ್ಠಿಯನ್ನು ಕಳೆದುಕೊಳ್ಳಬೇಕು.

ಸಹಜ ನಿರಂಜನ ದಿವ್ಯ ದೃಷ್ಠಿ ಪ್ರಪಂಚದ ಸಕಲ ಕಣ್ಣುಗಳಲ್ಲಿಯೂ ಇದೆ. ಅದನ್ನು ಜಪತಪ ಮಾಡಿ ಸಂಪಾದನೆಮಾಡಿಕೊಳ್ಳಬೇಕಿಲ್ಲ. ಕಣ್ಣನ್ನು ಆವರಿಸಿದ ರಂಜನೆಯ ಪೊರೆ ಕಿತ್ತಿಕೊಂಡರೇ ಸಾಕು ಅದು ನಿರಂಜನದ ಕಣ್ಣೇ ಆಗಿರುತ್ತದೆ.

ಬೇಡದ ರಂಜನೆಯ ಕಣ್ಣನ್ನು ಬೇಡರ ಕಣ್ಣಪ್ಪ ಕಿತ್ತಿಕೊಂಡು ಅದನ್ನು ನಿರಂಜನನಿಗೆ ಅರ್ಪಿಸಿದ. ರಂಜನೆ ಕಳೆದುಕೊಂಡು ನಿರಂಜನನಾದ. ಮುಸಲ್ಮಾನ, ಕ್ರೈಸ್ತ, ಹಿಂದು ಆಗಲಿಲ್ಲ. ಜ್ಞಾನಿಯಾದ ನೋಡೂದನ್ನು ನೋಡಿದ. ಈಶ್ವರ, ವಿಷ್ಣು, ಲಕ್ಷ್ಮೀ, ಪಾರ್ವತಿ, ಕಾಣಲಿಲ್ಲ, ಅವೆಲ್ಲ ಕೆತ್ತಿದ ಕಲ್ಲುಗಳಾಗಿ ಕಂಡವು. ರೂಪ ಹಲವಾದರೇನು? ಅವುಗಳ ಸ್ವರೂಪ ಒಂದೇ ಕಲ್ಲನ್ನು ಕಲ್ಲೆಂದು ನೋಡುವ ಕಣ್ಣು ಕಣ್ಣಿಗೆ ಒಲಿದರೆ ಸಾಕು. ಕಣ್ಣು ಆವರಿಸಿದ ಚಿತ್ತ ತಾನಾಗಿಯೇ ನಿರಂಜನವೆಂಬ ಜ್ಞಾನದತ್ತ ಸರಿದು ಜ್ಞಾನಿಯೇ ತಾನಾಗುತ್ತದೆ.

ನೋಡೂದ ನೋಡಲರಿಯದೇ ಕೆಟ್ಟೆತ್ತೀ ಜಗವೆಲ್ಲ , ನೋಡೂದ ನೋಡುವಡೆ ಕೂಡಲಿಲ್ಲ ಅಗಲಲಿಲ್ಲ. ಕೂಡದ ಅಗಲದ ಕೂಟದ ಸುಖವನ್ನು ಗುಹೇಶ್ವರ ನಿಮ್ಮ ಶರಣ ಮಾತ್ರ ಬಲ್ಲ. ಅಲ್ಲಮ ಪ್ರಭುವಿನ ಈ ಸೂತ್ರ ಹಿಡಿದು ರಂಜನೆಗೆ ಒಳಗಾದ ಕಣ್ಣು ನಿರಂಜನನತ್ತ ಪಯಣಿಸ ಬಹುದಾಗಿದೆ.

**210**

**ಭೋಗಕ್ಕೆ ಸಾಧನದ್ರವ್ಯ ಬಂದರೆ ಬೇಗ ಬೇಗ ಸಂಭ್ರಮಿಸುವರು,**
**ಬಾರದಿರ್ದರೆ ಕಂದುವರು ಕುಂದುವರು.**
**ಈ ಉಭಯದ ಸಂದಿನಲ್ಲಿ ಸಿಕ್ಕಿ ದಂದುಗಕ್ಕೊಳಗಾಗಿ**
**ಸಂದಣಿಗೊಂಬಾತಗೆಂದೆಂದಿಗೂ ಸಂಸಾರ ಬಿಡದು.**
**ಬೆಂದೊಡಲಿಗೇಕೆ ಈಸು ಸಡಗರವೆಂದಾತ ನಮ್ಮಂಬಿಗರ ಚೌಡಯ್ಯ.**

ಸಾಧನ ದ್ರವ್ಯವೆಂದರೆ ಸಾಕು ಒಡಲು ಸಂಭ್ರಮಿಸುವುದು. ಸಾಧನ ದ್ರವ್ಯ ಒಂದೇ ಎರಡೇ ಅನೇಕ. ಸಾಧನ ದ್ರವ್ಯವನ್ನು ಒಡಲು ನೋಡಿ ಸಂಭ್ರಮಿಸುವುದು. ಕೇಳಿ ಶಬ್ದದ ಮೂಲಕ ಸಂಭ್ರಮಿಸುವುದು. ಮುಟ್ಟಿ ಸ್ಪರ್ಶದ ಸುಖ ಅನುಭವಿಸುವುದು.ರುಚಿಸಿ ನಾಲಿಗೆಯ ಮೂಲಕ ಸಂಭ್ರಮಿಸುವುದು. ನೆನೆದು ಮನದ ಮೂಲಕ ದ್ರವ್ಯವಿಲ್ಲದೆ ಸಂಭ್ರಮಿಸುವುದು. ಒಡಲಿನ ಸಂಭ್ರಮ ಹೀಗೇ ಎಂದು ಹೇಳಲು ಬರುವುದಿಲ್ಲ.

ಒಡಲು ದ್ರವ್ಯದ ಸುಳ್ಳು ಸುಖಕ್ಕಾಗಿ ಬದುಕಿ ಒಮ್ಮೆ ಸಾಯುತ್ತದೆ. ಒಡಲು ಹಗಲಿರುಳೆನ್ನದೆ ಮಾಡುವ ಕೆಲಸ ಈ ಸುಳ್ಳು ಸುಖ ದುಃಖಗಳಿಗೆ ಹೊರತು ನಿಜ ಸುಖಕ್ಕಾಗಿ ಅಲ್ಲ. ಸುಳ್ಳು ಸುಖ ಸುಳ್ಳು ದುಃಖದ ದಂದುಗಕ್ಕೆ ಒಡಲು ತನಗರಿಯದಂತೆ ಒಳಗಾಗಿದೆ. ಈ ಅಜ್ಞಾನದ ಕೆಲಸಕ್ಕೆ, ಸಂಭ್ರಮಕ್ಕೆ ಒಳಗಾದ ಒಡಲಿಗೆ ಸಂಸಾರ ಬಿಡದು.

**ಬೆಂದೊಡಲಿಗೆ ಈಸು ಸಡಗರವೆಂದಾತ ನಮ್ಮಂಬಿಗರ ಚೌಡಯ್ಯ:**

ಒಡಲು ಸಂಭ್ರಮಿಸುವ ದುಃಖಿಸುವ ಸಾಧನ ದ್ರವ್ಯದ ನಿಜ ತನಗೆ ಗೊತ್ತಿಲ್ಲದ್ದಕ್ಕಾಗಿ ಅದು ಹಗಲಿರುಳೆನ್ನದೆ ಬೇಯುತ್ತಲಿದೆ. ಆ ದ್ರವ್ಯವಿಲ್ಲದಿದ್ದರೆ ತನಗೆ ಸುಖವಿಲ್ಲ; ಬರೀ ದುಃಖವೆಂದು ಅಲಬುತ್ತದೆ. ಬೆಂದ ಒಡಲಿಗೆ ದ್ರವ್ಯಪಡೆದು ಸುಖಿಸುವ ಸಡಗರ. ಈ ಸಡಗರ ದ್ರವ್ಯ ಸಿಗದಿದ್ದರೆ

ಹುಡುಕುವ ದುಃಖ ತನಗೇಕೆ ಬೇಕು ಎಂದು ಒಮ್ಮೆಯೂ ಚಿಂತನ ಗೈಯ್ಯುತ್ತಿಲ್ಲ.

ಚಿಂತೆ, ಸುಃಖಕ್ಕೆ ಕಾರಣವಾದ ಅಜ್ಞಾನವನ್ನು ಬೆಳಗುವ ಬೆಳಕು ಕೂಡಾ ಒಡಲಿನಲ್ಲಿಯೇ ಇದೆ. ಆ ಬೆಳಕು ಒಡಲನ್ನು ಸೋಂಕಿಲ್ಲ. ಒಡಲಿಗೆ ಆಧಾರವಾಗಿಯೂ ಇದೆ. ದ್ರವ್ಯಕ್ಕಾಗಿ ಸುಡುವ ಒಡಲನ್ನು ಸದಾ ಬೆಳಗುತ್ತಲಿದೆ. ಬೆಳಗಿಂಗೆ ಬೆಳಕಾಗಿ ಬೆಳಗುತ್ತಲಿದೆ. ಒಮ್ಮೆ ಅದರೆಡೆಗಡ ನೋಡು ಎಂದು ದ್ರವ್ಯಕ್ಕಾಗಿ ಸುಖಿಸಿ ಸಂಭ್ರಮಿಸಿ ದುಃಖಿಸುವ ಮನಕ್ಕೆ ಪಾಠ ಮಾಡಿದ್ದಾರೆ ಅಲ್ಲಮಪ್ರಭುಗಳು.

ಒಡಲಿಗೆ ಒಡಲು ಮುಟ್ಟಿದರೆ ಸುಖ. ಒಡಲನ್ನು ಒಡಲು ನೋಡಿದರೆ ಸುಖ. ಒಡಲನ್ನು ಒಡಲು ನೆನದರೂ ಸುಖ ! ಒಡಲಿಗೆ ಒಡಲು ಒಂದು ದ್ರವ್ಯವೆ ? ಎಂದು ಒಡಲು ಯೋಚಿಸುವುದು ಬೇಡವೆ ?

ಒಡಲನ್ನು ಒಡಲು ಮುಟ್ಟಿದರೆ ದುಃಖ. ಒಡಲನ್ನು ಒಡಲು ನೋಡಿದರೆ ದುಃಖ. ಒಡಲನ್ನು ಒಡಲು ನೆನೆದರೂ ದುಃಖ! ಒಡಲಿಗೆ ಒಡಲು ಒಂದು ದ್ರವ್ಯವೆ ? ಎಂದು ಒಡಲೇ ಯೋಚಿಸಿ ಒಡಲು ಮೇಲೆ ಅರಿವಿನ ಬೆಳಕು ಚೆಲ್ಲಿ ಒಮ್ಮೆ ಯೋಚಿಸುವುದು ಬೇಡವೆ ? ಒಡಲು ಒಡಲಿಗೆ ಸಾಧನ ದ್ರವ್ಯವಾಗಿದೆ. ಸಿಕ್ಕರೆ ಸಂಭ್ರಮ. ಸಿಗದಿದ್ದರೆ ದುಃಖ.

ಒಡಲು ಹೆಣ್ಣಾದರೇನು ? ಗಂಡಾದರೇನು ? ಒಡಲನ್ನು ಸುತ್ತಿಕೊಂಡ ಚರ್ಮ ಒಂದೇ. ಚರ್ಮದ ಮೇಲೆ ಬೆಳೆದ ರೋಮ ಒಂದೇ. ಚರ್ಮದೊಳಗಿದ್ದ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಒಂದೇ. ಒಡಲನ್ನು ಆವರಿಸಿದ ಮನಸ್ಸು ಒಂದೇ. ಒಡಲೊಳಗೆ ಸಂಗಮವಾದ ಅರಿವು ಒಂದೆ.

ಕಣ್ಣಿನಿಂದ ನೋಡುವ ದೃಶ್ಯ ಒಂದೇ . ಕಿವಿಯಿಂದ ಕೇಳುವ ಶಬ್ದ ಒಂದೇ. ಚರ್ಮದಿಂದ ಸ್ಪರ್ಶಿಸುವ ಸ್ಪರ್ಷ ಒಂದೇ. ನಾಲಿಗೆಯಿಂದ ರುಚಿಸುವ ರುಚಿ ಒಂದೇ. ಮೂಗಿನಿಂದ ಮೂಸಿ ಸುವ ವಾಸನೆ ಒಂದೇ. ಒಡಲು ಯಾವ ದೇಶದಾದರೇನು ? ಭಾಷೆ ಜಾತಿಯದಾದರೇನು ಅದರ ಇರುವಿಕೆ ಒಂದೇ. ಒಡಲನ್ನು ಒಡಲು ತಿಳಿಯಬೇಡವೆ ? ಒಡಲಲ್ಲಿರುವ ಅರಿವಿನ ಸಂಪತ್ತನ್ನು ಒಡಲು ತಿಳಿಯುವುದು ಬೇಡವೆ ?

ಒಡಲು ಕ್ರಿಷ್ಣನದಾದರೇನು ? ಕ್ರಿಸ್ತನದಾದರೇನು ? ಪೈಗಂಬರನದಾದರೇನು ? ಬುದ್ಧ, ಬಸವ, ಮಹಾವೀರ, ದಾಸರದಾದರೇನು ? ಒಡಲು ಒಡಲೇ ಆಗಿದೆ. ಒಡಲೊಳಗಿರುವ ಒಡಲೊಡೆಯನ ಒಡಲ ದನಿ ಕೇಳಿ ಅರಿವಿನ ಒಡಲಾಯಿತು. ಆ ಒಡಲು ಒಡಲನ್ನು ಬೋಸಲಿಲ್ಲ. ಒಡಲೊಳಗೆ ಒಡಲ ಬೆಳಗುವ ಒಡಲೊಂದಿದೆ ಎಂದು ಕಂಡುಕೊಂಡರು. ಅದನ್ನು ನುಡಿದರು. ಅದನ್ನೇ ಬರೆದರು. ಸುಖ ದುಃಖವಲ್ಲದ ಅರಿವಿನ ಸುಖದ ದ್ರವ್ಯವನ್ನು ಉಂಡು ಸಂಭ್ರಮಿಸಿದರು. ಸಂತರ ಜ್ಞಾನಿಗಳ ಆ ಒಡಲನ್ನು ನೋಡಿ ತಾನು ಕೂಡ ಹಾಗೆಯೇ ಎಂದು ಸಂಭ್ರಮಿಸಲಿಲ್ಲ. ಒಡಲ ದನಿಯನ್ನು, ಒಡಲಿನಿಂದ ಬಂದ ಅಕ್ಷರವನ್ನು , ಒಡಲನ್ನು ಒಡಲಿಂದ ಬಂದ ದ್ರವ್ಯವನ್ನು ಒಡಲೇ ಪೂಜಿಸಿ ಸುಳ್ಳು ಧನ್ಯತಾ ಭಾವವನ್ನು ಮೆರೆದು ಸಂಭ್ರಮಿಸಿತು.

ಕ್ರಿಷ್ಣ , ಕ್ರಿಸ್ತ, ಬುದ್ಧ, ಪೈಗಂಬರ, ಮಹಾವೀರ, ಬಸವಣ್ಣ, ಧಾಸ, ಶಂಕರರ ದ್ರವ್ಯವೇ ಒಡಲಿಗೆ ಧರ್ಮವಾಯಿತು. ಕುಲ ಮತ ಜಾತಿ ನಿರ್ಮಾಣವಾಯಿತು. ಅದನ್ನೇ ದ್ರವ್ಯವನ್ನಾಗಿ ಮಾಡಿ ಕೊಂಡು ಒಡಲು ಸಂಭ್ರಮಿಸಿತು. ಒಡಲು ಅರಿವಿನ ಧರ್ಮ ಒಡಲಲ್ಲೇ ಉಳಿಯಿತು. ಬೆಂದೊಡಲಿಗೇಕೆ ಈಸು ಸಡಗರ ? ಬೇಯುವುದೇ ಅದರ ಧರ್ಮವಿರಬೇಕು ! ಒಡಲೊಳಗಿದ್ದ ಬೆಳಕು ಒಡಲಿಗೆ ಹರಿಯುವುದೋ ಹೇಗೆ ಎಂದು ಕಾಯಬೇಕು !

211

**ಮಕ್ಕಳು ಮರಿಗಳು ಸತ್ತು ನಷ್ಟವಾಗಿ,**
**ಕಷ್ಟ ದುಃಖ ನೆಲೆಗೊಂಡಿತ್ತೆಂದು**
**ತನ್ನಿಷ್ಟಲಿಂಗ ಪೂಜೆಯನಗಲಿಸಿ,**
**ಬಿಟ್ಟಿಯ ಮಾಡಬಹುದೇನಯ್ಯಾ ?**
**ಜಂಗಮವು ಬಂದು ತನ್ನ ವ್ರತನೇಮಕ್ಕೆ ಬೇಡಿದಡೆ**
**ನಿಮ್ಮ ಉಪದ್ರವೇನೆಂದು ಭಕ್ತಿಯ ಮಾಡಬಹುದೇನಯ್ಯಾ ?**
**ಸಕಲ ದುಃಖಂಗಳು ತಮ್ಮಿಂದ ತಾವೇ ಬರಲರಿಯವು.**
**ಭಕ್ತಿಯನ್ನು ಮರೆದು, ಮರವೆಯಲ್ಲಿ ಬೆರೆದು,**
**ಭವಭವದಲ್ಲಿ ಬರುವುದು ಅದೇ ದುಃಖವು,**
**ನಿಶ್ಚಯವೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಜಂಗಮ ದರ್ಶನಕ್ಕೆ ಹೋಗುವುದು ಸಹಜತೆಯ ದರ್ಶನಕ್ಕಾಗಿ. ಒಂದು ರಸಾಯನಿಕ ಕ್ರಿಯೆಯಿಂದಾಗಿ ಒಡಲಿಗೆ ಸುಖ, ದುಃಖ ಉಂಟಾಗುವುದು. ಅದನ್ನು ಕಳೆದುಕೊಂಡು ಶಾಶ್ವತ ಸುಖ ಸಹಜ ಸುಖ ಅನುಭವಿಸುವುದಕ್ಕಾಗಿ ಜಂಗಮ ದರ್ಶನಕ್ಕಾಗಿ ಹೋಗುವರು. ಅಂತಹ ಜಂಗಮ ಮನೆಗೆ ಬಂದಾಗ ಮಕ್ಕಳು ಸತ್ತ ಚಿಂತೆಯಲ್ಲಿ ತಾನಿರುವಾಗ ನಿನ್ನ ಉಪ ದ್ರವದ ಕೇಡು ಬೇರೆ ಎಂದು ಮೂದಲಿಸಿ ಮಾತನಾಡಬಹುದೆ ?

ಜಂಗಮನಿಗೆ ಭಕ್ತನ ಮಾತಿನಿಂದ ಬಾಧೆಯಾಗುವುದಿಲ್ಲ. ಏಕೆಂದರೆ ಭಕ್ತನ ಮಾತನ್ನು ಪ್ರಸಾದ ಮಾಡಿಕೊಳ್ಳುವ ಶಕ್ತಿಯಿದೆ ಜಂಗಮನಿಗೆ. ಇದು ಜಾತಿ ಜಂಗಮನಿಗೆ ನೀಗುವ ಕೆಲಸವಲ್ಲ. ಪ್ರಸಾದ ತಂತ್ರಜ್ಞಾನವನ್ನು ಅರಿತುಕೊಂಡ ಜಂಗಮನಿಗೆ ಮಾತ್ರ ಮಾತು, ನೋಟ, ಸ್ಪರ್ಶ, ವಾಸನೆ, ರುಚಿ ಪ್ರಸಾದವಾಗುತ್ತದೆ.

**ಸಕಲ ದುಃಖಗಳು ತಮ್ಮಿಂದ ತಾವೇ ಬರಲರಿಯವು; ಭಕ್ತಿಯನ್ನು ಮರೆದು, ಮರೆವೆ ಯಲ್ಲಿ ಬೆರೆದು ಭವ ಭವದಲ್ಲಿ ಬರುವುದು ಅದೇ ದುಃಖವು :**

ಮಕ್ಕಳು ಹುಟ್ಟಿದರೆ ಸಂಭ್ರಮ. ರಸಾಯನಿಕ ಕ್ರಿಯೆಯಿಂದ ಸಂಭ್ರಮ ಒಡಲು ಪಡುತ್ತದೆ. ಈ ಸಂಭ್ರಮವನ್ನು ಒಡಲು ತಾನೇ ಅಮಂತ್ರಣ ಮಾಡಿಕೊಳ್ಳುತ್ತದೆ. ಇದರಿಂದ ಒಡಲಿಗೆ ಸಂತೋಷವಾಗುತ್ತದೆ. ಮಗು ಇಲ್ಲದ ಜಾಗದಿಂದ ಬಂದು ಸಂಭ್ರಮ ಪಟ್ಟ. ಅದು ಪುನಃ ಇಲ್ಲದ ಜಾಗಕ್ಕೆ ಹೋಯಿತು. ದುಃಖಪಟ್ಟ. ಸಂಭ್ರಮ ದುಃಖಗಳೆರಡನ್ನೂ ಒಡಲು ಆಮಂತ್ರಣ ಮಾಡಿಕೊಳ್ಳುತ್ತದೆ.

ಒಡಲಿನಲ್ಲಿ ಅರಿವಿದೆ. ಆ ಅರಿವಿನ ಗಮನಕ್ಕೆ ಈ ಎರಡೂ ಕ್ರಿಯೆಗಳು ಬರುವವರೆಗೆ ಜನನ ಸಂಭ್ರಮದ ಸುಖ ಹಾಗೂ ಸಾವಿನ ದುಃಖ ಇವೆರಡೂ ನಿಲ್ಲುವುದಿಲ್ಲ.

ಒಡಲು ಅರಿವನ್ನು ಮರೆತು ಮರೆವಿನಲ್ಲಿ ಬೆರೆತಿದೆ. ಮರೆವು ಅರಿವಿನೊಂದಿಗೆ ಬೆರೆತು ಬೀಜವಾಗಿ ಗರ್ಭಕ್ಕೆ ಪ್ರಸಾರವಾಗುತ್ತದೆ. ಮಗುವಾಗಿ ಒಡಲು ಹೊರಗೆ ಬಂದು ಬೆಳೆದು ಪ್ರೌಢತ್ವಕ್ಕೆ ಬಂದಾಗ ಮರೆವನ್ನು ಬೇರ್ಪಡಿಸಿಕೊಳ್ಳಬಹುದಾಗಿದೆ. ಅರಿವನ್ನು ಮಾತ್ರ ಬಳಸಿಕೊಳ್ಳ ಬಹುದಾಗಿದೆ. ಆಗ ಒಡಲು ತನ್ನ ಸಹಜ ಜ್ಞಾನವನ್ನು ಬಳಸಲು ಸಮರ್ಥವಾಗುತ್ತದೆ. ಅಂತಹ

ಅರಿವಿನ ಒಡಲನ್ನು ಶರಣರು ಜಂಗಮ ಎಂದು ಕರೆದರು.

ಜಂಗಮನಾಗಬೇಕೆಂಬ ಆಸಕ್ತ ಭಕ್ತನಿಗೆ ಜಂಗಮ ಸಹಜ ಜ್ಞಾನವನ್ನು ವಿವರಿಸುತ್ತಾನೆ. ಜಂಗಮನಾಗುವ ಬಗೆಯನ್ನು ಸೂತ್ರಗಳ ಮೂಲಕ ಭಕ್ತನಿಗೆ ಹೇಳಿಕೊಡುತ್ತಾನೆ. ಭಕ್ತನೆಂದರೆ ಜ್ಞಾನಾಸಕ್ತನು. ಭಕ್ತನಂತೆ ಸೋಗು ಮಾಡುವವನು ಭಕ್ತನಲ್ಲ. ಜಂಗಮನಂತೆ ಸೋಗು ಮಾಡುವವನೂ ಜಂಗಮನಲ್ಲ.

ಒಡಲಿಗೆ ಅರಿವಾಗದಿದ್ದರೆ; ಅರಿವಿನ ಆಸಕ್ತಿ ಹುಟ್ಟದಿದ್ದರೆ ಅದು ಹುಟ್ಟಿದಂದಿನಿಂದ ಸಾಯುವವರೆಗೆ ಮರೆವಿನ ದುಃಖದಲ್ಲಿ ಬೇಯುತ್ತದೆ. ಅರಿವಿನ ಸುಖದಿಂದ ದೂರವಾಗುತ್ತದೆ.

ಅರಿವು ಮರೆವು ಒಡಲೊಳಗೆ ಸಂಗಮವಾಗಿವೆ. ಮರೆವಿನಿಂದಲೇ ಅರಿವನ್ನು ಹುಡುಕಬೇಕು. ಹೀಗಾಗಿ ಅರಿವು ಅಷ್ಟುಬೇಗ ಅರಿವಿಗೆ ಬರುವುದಿಲ್ಲ.

ಮರೆವಿಗೆ ಅರಿವಿನ ಪಠ್ಯ ದೊರೆಯುತ್ತದೆ. ಅದು ಗ್ರಂಥಗಳಿಂದ ಒಡಲಿಗೆ ಲಭ್ಯವಾಗುತ್ತದೆ. ಅದು ಅರಿವಲ್ಲ ; ಅರಿವಿಗೆ ಹೋಗುವ ದಾರಿ ಮಾತ್ರ. ಒಡಲು ಅದನ್ನೇ ಅರಿವೆಂದು ತಿಳಿದು ಗ್ರಂಥಗಳನ್ನು ಆರಾಧಿಸುತ್ತದೆ. ಗ್ರಂಥಗಳೇ ಒಡಲಿಗೆ ಧರ್ಮಗ್ರಂಥಗಳಾಗುತ್ತವೆ. ಇದೆಲ್ಲ ಮರೆವಿನ ಕೆಲಸವೆಂದು ಮರೆವಿಗೆ ಭಾಸವಾಗುವುದಿಲ್ಲ.

ಅರಿವಿನಿಂದ ಹುಟ್ಟಿದ ಗ್ರಂಥಗಳು ಅರಿವಿಗೆ ಸಮಾನವಾಗಬಲ್ಲವೆ? ಎಂಬ ಆಲೋಚನೆಗೆ ಒಳಗಾದರೆ ಸಾಕು ಗ್ರಂಥಗಳನ್ನು ಬಿಟ್ಟು ಮರೆವು ಅರಿವಿಗೆ ನುಸುಳುತ್ತದೆ. ಆ ಅರಿವೇ ತಾನಾಗುತ್ತದೆ.

**212**

**ಮಡುವಿನಲ್ಲಿ ಮೊಗೆತಹೆನೆ ? ಅಗ್ಗವಣಿ ಶುದ್ಧವಲ್ಲ .**
**ಗಿಡುವಿನ ಪುಷ್ಪವ ತಹೆನೆ ? ಹೂ ನಿರ್ಮಾಲ್ಯ .**
**ಅಟ್ಟ ಅಡಿಗೆಯನಾದಡೆ ಮನ ಮುನ್ನವೆ ಉಂಡಿತ್ತು .**
**ನುಡಿವ ಶಬ್ದ, ಎಂಜಲಾಯಿತ್ತು .**
**ಹಿಡಿಯೊಳಯಿಂಕೆ ಒಂದ ಕೊಂಡುಬಂದು**
**ಲಿಂಗವೆಂದು ಸಂಕಲ್ಪವ ಮಾಡಿದಡೆ**
**ಅದಕ್ಕೆ ಬೋನವ ಕೊಡಲೊಲ್ಲೆನೆಂದನಂಬಿಗ ಚೌಡಯ್ಯ.**

ಜಲ ಪುಷ್ಪ ಅನ್ನ ಶಬ್ದದಿಂದ ಲಿಂಗ ಪೂಜಿಸಲು ಹೋದರೆ ಅದು ಕೂಡಾ ಶುದ್ಧವಲ್ಲ. ಪೂಜಿಸುವುದರಿಂದ ಲಿಂಗ ಸಾಕ್ಷಾತ್ಕಾರವಾಗುವುದಿಲ್ಲ. ಇದೆಲ್ಲ ಹೊರಗಿನದು. ಲಿಂಗವೆಂಬುದು ಲಿಂಗವಲ್ಲ, ಅದು ಅಂಗದಲ್ಲಿ ಸಂಗಮವಾಗಿದೆ. ಎಂಜಲ ಜಲದಿಂದ, ಎಂಜಲ ಹೂವಿನಿಂದ, ಎಂಜಲ ಪ್ರಸಾದದಿಂದ, ಎಂಜಲ ಶಬ್ದದಿಂದ ಲಿಂಗವನ್ನು ಪೂಜಿಸಿದರೆ ಲಿಂಗ ದರ್ಶನವಾಗುವುದಿಲ್ಲ. ಅಷ್ಟೆ ಏಕೆ ಲಿಂಗ ಲಿಂಗವೇ ಅಲ್ಲ. ಪೂಜಿಸುವ ಲಿಂಗ ಪಾಷಾಣ. ಅದನ್ನು ಲಿಂಗವೆಂದು ಪೂಜಿಸಲು ಸಂಕಲ್ಪ ಮಾಡಿದರೆ ಅದಕ್ಕೆ ಬೋನವ ಕೊಡಲೊಲ್ಲೆನೆಂದನಂಬಿಗ ಚೌಡಯ್ಯ.

ಲಿಂಗ ಅಂಗದಲ್ಲಿಯೇ ಇದೆ, ಅಂಗದ ಕಣ ಕಣದಲ್ಲಿ ಬೆರೆತಿದೆ. ಹಾಗೆ ಬೆರೆತ ಲಿಂಗವನ್ನೇ ಅರಿವು ಎಂದು ಕರೆಯಬಹುದು. ಅಂಗದಲ್ಲಿ ಇರುವ ಅರಿವನ್ನು ಅಂಗವನ್ನು ಆವರಿಸಿದ ಮರೆವು

ಮರೆತು ಹೋಗಿದೆ. ಆ ಮರೆವಿನಿಂದಲೇ ಅರಿವನ್ನು ಆರಾಧಿಸಬೇಕಾಗಿದೆ.

ಮರೆವು ಇಲ್ಲದ್ದು, ಆದರೂ ಇರುವ ರೂಪಕ್ಕೆ ಮೆತ್ತಿಕೊಂಡಿದೆ. ಆ ರೂಪದ ತುಂಬಾ ಅರಿವು ಭರಿತವಾಗಿದೆ. ಎಲ್ಲೆಲ್ಲೂ ಭರಿತವಾದ ನಿರೂಪವೆಂಬ ಅರಿವನ್ನು ರೂಪದಿಂದಲೇ ಪೂಜಿಸಹೋಗಿ ಮರೆವು ರೂಪಕ್ಕೆ ಮರುಳಾಗಿದೆ. ನಿರೂಪವನ್ನು ಸಂಪೂರ್ಣ ಮರೆತು ಹೋಗಿದೆ.

ಮರೆವಿಗೆ ಮರೆವೆಂದರೆ ಬಲು ಇಷ್ಟ. ಹೀಗಾಗಿ ಸಂಬಂಧವಿಲ್ಲದ್ದನ್ನು ತೆಗೆದುಕೊಂಡು ಸಂಬಂಧವಿಲ್ಲದ ರೂಪಕ್ಕೆ ಪೂಜಿಸಿದರೆ ಲಿಂಗ ದರ್ಶನ ಸಾಧ್ಯವಾದೀತೆ? ಸಾಧ್ಯವಾಗದು.

ಭೂಮಿಯಿಂದ ಹೊರಬಂದ ಜಲದಿಂದ ಗಿಡದಿಂದ ಹೊರ ಬಂದ ಪುಷ್ಪದಿಂದ, ಮಾಡಿದ ಅಡಿಗೆಯಿಂದ, ಶಬ್ಧದಿಂದ ಪೂಜಿಸಿದರೆ ಲಿಂಗಯ್ಯ ಅಂಗಕ್ಕೆ ಒಲಿತಾನೆ? ಒಲಿಯನು.

ಅಂಗದಲ್ಲಿ ಸಂಗಮವಾದ ಲಿಂಗಯ್ಯನನ್ನು ಅಂಗವನ್ನು ಆವರಿಸಿದ ಮನದಿಂದಲೇ ಪೂಜಿಸಬೇಕು. ಆಗ ಪೂಜಿಸುವ ಮನವೇ ಘನಮನವಾಗಿ ಆ ಲಿಂಗಯ್ಯನಲ್ಲಿ ಸಂಗಮವಾಗುವುದು. ಆಗ ಅಂಗ ಲಿಂಗಾಂಗವಾಗುವುದು.

**213**

**ಮದ್ದ ತಿನ್ನ ಬೇಕಾದರೆ ವೈದ್ಯನಿದ್ದೆಡೆಗೆ ಹೋಗಿ,**
**ಹಣ ಹೊನ್ನು ಕೊಟ್ಟು, ದೈನ್ಯಂಬಟ್ಟು,**
**ಮದ್ದ ತಿಂಬರು ನೋಡಯ್ಯ .**
**ಇದು ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಕ್ಕೆ ಎಂದು**
**ಬಿನ್ನಹವ ಮಾಡದೆ,**
**ಅಹಂಕಾರದಲ್ಲಿ ತರಿಸಿಕೊಂಡುಂಬ ಗೊಡ್ಡ ಮೂಳನ ಕಂಡಡೆ**
**ಒದ್ದೊದ್ದು ಕೊಲ್ಲೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಕಾಯದ ಕಾಯಿಲೆಗೆ ವೈದ್ಯನಿದ್ದಲ್ಲಿಗೆ ಹೋಗಿ ಗುಣಪಡಿಸಿಕೊಳ್ಳಬೇಕು. ವೈದ್ಯ ಕಾಯ ವಿದ್ದೆಡೆಗೆ ಬರಲಾರ. ಕಾಯ ಗುಣಪಡಿಸದ ರೋಗದಿಂದ ಬಳಲುತ್ತಿದ್ದರೆ ಅದನ್ನು ವೈದ್ಯ ಗುಣಪಡಿಸಲಾರ. ಭವ ರೋಗದ ವೈದ್ಯನನ್ನೇ ಹುಡುಕಬೇಕು.

ವೈದ್ಯ ಸಿಗಬಹುದು. ಭವ ರೋಗದ ವೈದ್ಯ ಸಿಗುವುದು ಬಲು ಕಷ್ಟ. ಸಿಕ್ಕರೂ ಆತನಿದ್ದಲ್ಲಿಗೆ ಕಾಯ ಹೋಗಿ ಕಾಯದ ಕಾಯಿಲೆಯನ್ನು ಗುಣಪಡಿಸಿಕೊಳ್ಳಬೇಕು.ಕಾಯವಿದ್ದಲ್ಲಿಗೇ ವೈದ್ಯನನ್ನು ಕರೆತಂದು ಗುಣಪಡಿಸಿಕೊಳ್ಳುವುದು ಸಾಧ್ಯವಾಗದ ಮಾತು.

ವೈದ್ಯ ಬರಬಹುದು ಆದರೆ ಕಾಯದ ಕಾಯಿಲೆ ಹರಿಯುವುದಿಲ್ಲ. ವೈದ್ಯ ಅರೆದ ಮದ್ದು ಕಾಯಕ್ಕೆ ನಾಟುವುದಿಲ್ಲ. ಏಕೆಂದರೆ ಕಾಯ ಇದ್ದಲ್ಲಿಗೇ ವೈದ್ಯ ಬಂದಿದ್ದಾನೆ. ವೈದ್ಯನಿದ್ದಲ್ಲಿಗೆ ಕಾಯ ಹೋಗಲಿಲ್ಲ.

ರಾಮ-ಕ್ರಿಷ್ಣರಿಬ್ಬರೂ ರಾಜಕುಮಾರರಾದರೂ ವೈದ್ಯರಿದ್ದ ಆಶ್ರಮಕ್ಕೆ ಹೋದರು. ಕಾಯದ ಕಾಯಿಲೆ ಗುಣಪಡಿಸಿಕೊಂಡು ಕಾಡಿನಿಂದ ನಾಡಿಗೆ ನಡೆದರು.

ಕಾಯ ಸ್ವಸ್ಥವಾಗಿ ಕಂಡರೂ, ಕಾಯದ ಕಣ್ಣಿನ ರೋಗ ಉಲ್ಬಣಗೊಂಡಿದೆ. ಕಿವಿಯ ರೋಗ ಉಲ್ಬಣಗೊಂಡಿದೆ. ಚರ್ಮ, ಮೂಗು, ನಾಲಿಗೆ ಕಾಯದ ಹಿಡಿತದಲ್ಲಿಲ್ಲ. ಕಣ್ಣು ಕೆತ್ತಿದ ಕಲ್ಲನ್ನು

ದೇವರೆಂದು ಆರಾಧಿಸುತ್ತಿದೆ. ತನ್ನಂತೆಯೇ ಇರುವ ಚರ್ಮ ಹೊತ್ತ ಕಾಯವನ್ನು ನೋಡಿ ಕಾಯ ಕಾಮ ಕೇಳಿ ಆಡುತ್ತದೆ. ಕಾಮಾಸಕ್ತನಾಗಿ ಕಾಯವನ್ನೆ ಹರಿದು ತಿನ್ನುತ್ತದೆ. ಶಬ್ಧಕೇಳಿ ಆ ಶಬ್ಧದಿಂದಲೇ ಕಾಯವನ್ನು ಹಿರಿದುಕೊಲ್ಲುತ್ತದೆ. ಶಬ್ದದಿಂದಲೇ ಅನ್ಯ ಕಾಯವನ್ನು ಕೊಂದು ಕ್ರೂರಿ ಎನ್ನಿಸಿಕೊಳ್ಳುತ್ತದೆ. ಚರ್ಮ ಚರ್ಮವನ್ನು ತಾಗಿದರೆ ಕ್ರೋಧ, ಕಾಮ, ಕ್ರೌರ್ಯ. ಹೆಣ್ಣು ಗಂಡು ಜಾತಿ-ಮತ ಪಂಥಗಳ ರೋಗ. ಮೂಗು ಸುಗಂಧ-ದುರ್ಗಂಧವೆಂಬ ವಾಸನೆಯಿಂದ ಬಳಲುತ್ತದೆ. ನಾಲಿಗೆ ರುಚಿ-ಅರುಚಿಗಳಿಂದ ಬಳಲುತ್ತದೆ. ಇವು ಯಾವುವು ಕಾಯಕ್ಕೆ ರೋಗವಾಗಿ ಕಾಣುವುದೇ ಇಲ್ಲ.

ಕಾಯಕ್ಕೆ ಕಾವು ಏರಿದಾಗ ವೈದ್ಯ ಬೇಕು. ಮದ್ದು ನೀಡಿದರೆ ಕಾಯದ ಕಾವು ಇಳಿಯುತ್ತದೆ. ಶಬ್ದ, ದೃಶ್ಯ, ಸ್ಪರ್ಶ, ರುಚಿ, ವಾಸನೆಯಿಂದ ಬಳಲುವ ಕಾಯಕ್ಕೆ ವೈದ್ಯನ ಮದ್ದು ಬಗೆ ಹರಿಯುವುದಿಲ್ಲ. ಕಾಯದ ಕಾಯಿಲೆಗೆ ಭವ ರೋಗದ ವೈದ್ಯನೇ ಬೇಕು.

ಕಾಯದಲ್ಲಿಯೇ ವೈದ್ಯನಿದ್ದಾನೆ. ಕಾಯದಲ್ಲಿಯೇ ಕಾಯಿಲೆಯಿದೆ. ಕಾಣುವ ಕಾಯ ವೈದ್ಯ ಮತ್ತು ಕಾಯಿಲೆಗೆ ಉಪಕರಣವಷ್ಟೆ. ಕಾಯ ವೈದ್ಯನ ಕಾಯವಾದಾಗ ಕಾಯಿಲೆಯ ಕಾಯ ಹಿಂದೆ ಸರಿಯುತ್ತದೆ. ಅರಿವಿನ ವೈದ್ಯ ಕಾಯವನ್ನು ರೋಗ ರಹಿತವಾಗಿ ಮುನ್ನಡೆಸುತ್ತಾನೆ.

ಕಾಯಿಲೆಯಿದ್ದ ಕಾಯದೆಡೆಗೆ ಬಂದು ವೈದ್ಯ ಮದ್ದು ಕೊಡುವುದಿಲ್ಲ, ಕಾಯಿಲೆಯ ಕಾಯವೇ ವೈದ್ಯನೆಡೆಗೆ ಹೋಗಿ ಅರಿವಿನ ಮದ್ದು ತಿನ್ನುತ್ತದೆ.

**214**

**ಮನ ಮಗ್ನವಾಗಿ, ಅರಿವನು ಘನ ಪ್ರಾಣಲಿಂಗದಲ್ಲಿ ಸವೆದು,**
**ತನುವನು ಕ್ರಿಯಾಚಾರವಿಡಿದು, ಇಷ್ಟಲಿಂಗದಲ್ಲಿ ಸವೆದು,**
**ಮಹಾನುಭಾವವನರಿತಂತಹ ವೀರಶೈವ ಸಂಪನ್ನರಾದ**
**ಶಿವಶರಣರಿಗೆ ಸಂಸಾರಿಗಳೆನ್ನಬಹುದೆ ಅಯ್ಯ ?**
**ಹೊನ್ನು-ಹೆಣ್ಣು-ಮಣ್ಣೆಂಬ ತ್ರಿವಿಧ ಪದಾರ್ಥಂಗಳ ವಿವರಿಸಿ,**
**ಇಷ್ಟ-ಪ್ರಾಣ-ಭಾವವೆಂಬ ಮೂರು ಲಿಂಗದ**
**ಮುಖವನರಿದರ್ಪಿಸಿ,**
**ಆರು ಲಿಂಗದನುವಿನಲ್ಲಿ ಕೈಕೊಂಡು,**
**ಬಂದ ಬಂದ ಸಕಲಪದಾರ್ಥವನು ಅದರ ಪೂರ್ವಾಶ್ರಯವಳಿದು,**
**ಶಿವಪ್ರಸಾದವೆಂದು ಅನುಭವಿಸುತಿರ್ಪರು,**
**ಅಂತಪ್ಪ ನಿರುಪಮ, ನಿರ್ಭೇದ್ಯ,**
**ನಿರಾಳ, ನಿಃಶೂನ್ಯ ಪರಮಪ್ರಸಾದಿಗಳಿಗೆ ಸಂಸಾರಿಗಳೆಂದು ನುಡಿವ**
**ಅಜ್ಞಾನಿ ಸಂದೇಹಿಗಳು**
**ಅಘೋರ ನರಕದಲ್ಲಿ ಮುಳುಗುವರೆಂದಾತ ನಂಬಿಗರ ಚೌಡಯ್ಯ.**

ಶರಣರು ಅರಿವೆಂಬ ಶಿವನಿಗೆ ಶರಣು ಹೋದವರು. ಶಿವನನ್ನು ವಿರಾಗಿ ಎಂದು ಕರೆಯುವರು. ಶಿವನಿಗೆ ಪಾರ್ವತಿ ಎಂಬ ಹೆಂಡತಿ ಇದ್ದರೂ ಆತ ಸಂಸಾರಿ ಅಲ್ಲ. ಶಿವನೆಂದರೆ

ವ್ಯಕ್ತಿ ಅಲ್ಲ. ಆತ ಅವ್ಯಕ್ತ ಶಕ್ತಿ. ಪಾರ್ವತಿ ಕೂಡಾ ಹಾಗೆಯೇ.

ಶಿವ-ಶಿವೆ ಇಬ್ಬರೂ ಅಂಗದಲ್ಲಿ ಸಂಗಮಗೊಂಡಿದ್ದಾರೆ. ಅಂಗವನ್ನೆ ಮನೆ ಮಾಡಿಕೊಂಡು ಆ ಮನೆಯಲ್ಲಿಯೇ ಸಂಸಾರ ಹೂಡಿದ್ದಾರೆ. ಅದು ಅರಿವಿನ ಸಂಸಾರ. ಅದನ್ನು ಸಂಸಾರ ಎನ್ನುವಂತಿಲ್ಲ.

ಶಿವ ಎಂದರೆ ಅರಿವು. ಶಿವೆ ಎಂದರೆ ಅರಿವನ್ನು ತಿಳಿದು ಆ ಅರಿವಿನಲ್ಲಿ ಒಂದಾದ ಮನಕ್ಕೆ ಶಿವೆ ಎಂದು ಕರೆದಿದ್ದಾರೆ ಪುರಾತನರು. ಶಿವ ಎನ್ನುವವರು ಯಾರೂ ಇಲ್ಲ. ಶಿವೆ ಎನ್ನುವವರೂ ಯಾರೂ ಇಲ್ಲ. ಅಂಗ ಎನ್ನುವುದು ಇದೆ. ಅರಿವು ಎನ್ನುವುದು ಅಂಗದಲ್ಲಿ ಸಂಗಮವಾಗಿದೆ. ಮನ ಎನ್ನುವುದು ಅಂಗವನ್ನು ಆವರಿಸಿದೆ.

ಮನ ಅಂಗವನ್ನು ಹಿಡಿದು ಆ ಅಂಗಕ್ಕೆ ಮತ್ತೊಂದು ಅಂಗವನ್ನು ಹೆಂಡತಿ ಅಥವಾ ಗಂಡನೆಂದು ತಿಳಿದು ಒಂದಾಗಿರುವುದಕ್ಕೆ ಸಂಸಾರವೆನ್ನುತ್ತಾರೆ. ಈ ಸಂಸಾರದಲ್ಲಿ ಸುಖವಿದೆ. ದುಃಖವೂ ಇದೆ. ಸಾವು ಇದೆ. ನೋವೂ ಇದೆ. ಜಾತಿ-ಮತ ಪಂಥಗಳಿವೆ. ಹೆಣ್ಣು ಗಂಡೆಂಬ ಭೇದ ಭಾವಗಳಿವೆ. ಶಬ್ದ ಸ್ಪರ್ಶ ರೂಪ ರಸ ಗಂಧಾದಿಗಳಿಂದ ಸಂಸಾರದಲ್ಲಿ ನಿರತವಾದ ಅಂಗ ಸುಖಕ್ಕೆ ಒಳಪಡುತ್ತದೆ. ಹಾಗೆಯೇ ದುಃಖಕ್ಕೆ ಒಳಪಡುತ್ತದೆ. ಅಂಗದಲ್ಲಿಯೇ ಸಂಗಮವಾದ ಸಹಜ ಸುಖವನ್ನು ಅಂಗ ಪಡೆಯದೇ ಹೋಗುತ್ತದೆ. ಮನಕ್ಕೆ ಆ ಸಹಜ ಸುಖ ದಕ್ಕದೇ ಹೋಗುತ್ತದೆ. ಹೀಗಾಗಿ ಮನ ಸಂಸಾರದಲ್ಲಿ ನಿರತವಾಗಿದೆ. ಅಲ್ಲಿ ಬರೀ ದುಃಖ. ಸುಖದ ದುಃಖ ; ದುಃಖದ ದುಃಖ. ಇವೆರಡೂ ದುಃಖಗಳೇ ಎಂದು ಮನಕ್ಕೆ ತಿಳಿಯದೇ ಹೋಗುತ್ತದೆ.

ಅಂಗದಲ್ಲಿ ಅರಿವು ಸಂಗಮವಾಗಿದೆ. ಅದು ಲಿಂಗ. ಅಂಗವನ್ನು ಆವರಿಸಿದ ಮನ ಅರಿವೆಂಬ ಲಿಂಗಕ್ಕೆ ಶರಣು ಹೋಗಿ, ಆ ಅರಿವನ್ನೇ ಲಿಂಗವನ್ನಾಗಿ ಧರಿಸಿಕೊಂಡು ಇಷ್ಟಲಿಂಗವನ್ನಾಗಿಸಿಕೊಳ್ಳುತ್ತಾನೆ. ಅದನ್ನು ನಿತ್ಯ ನಿತ್ಯ ಪೂಜಿಸುತ್ತಾನೆ. ಆರಾಧಿಸುತ್ತಾನೆ. ಸಕಲ ದೇವರುಗಳನ್ನೆಲ್ಲ ಮರೆಯುತ್ತಾನೆ. ಸ್ವದೈವವನ್ನು ಮಾತ್ರ ಆರಾಧಿಸುತ್ತಾನೆ. ಅಂತಹ ಶರಣನನ್ನು ಅನುಭಾವಿ ಎಂದು ಕರೆಯುತ್ತಾರೆ.

ಶಿವನಿಗೆ ಹೇಗೆ ಪಾರ್ವತಿ ಸತಿಯಾದಳೋ ಹಾಗೆಯೇ ಮನದಿಂದ ಅರಿವೆಂಬ ಶಿವನಿಗೆ ಭಕ್ತಿ ಮಾಡಿ, ಆ ಅರಿವಿಗೆ ಶರಣು ಹೋಗಿ ಅರಿವೆಂಬ ಲಿಂಗಕ್ಕೆ ಶರಣ ಸತಿಯಾಗುತ್ತಾನೆ. ಶರಣ ಸತಿಯಾದರೆ ಲಿಂಗ ಪತಿಯಾಗುತ್ತಾನೆ. ಈ ಸತಿ ಪತಿಗಳು ಅಂಗದಲ್ಲಿಯೇ ಸಂಸಾರ ಹೂಡುತ್ತಾರೆ. ಆಗ ಅಂಗ ಅರಿವಿನ ಲಿಂಗಾಂಗವಾಗುತ್ತದೆ.

ಅರಿವಿನ ಲಿಂಗಕ್ಕೆ ಹೊನ್ನು ಹೆಣ್ಣು ಮಣ್ಣಿನ ಅವಶ್ಯಕತೆಯಿಲ್ಲ. ಭಾವ ದುರ್ಭಾವ ಅರಿವಿಗೆ ಅರ್ಪಣೆಯಾಗುತ್ತದೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ಅರಿವಿಗೆ ಅರ್ಪಣೆಯಾಗುತ್ತದೆ. ಸಕಲ ಪದಾರ್ಥಗಳ ಪೂರ್ವಾಶ್ರಯವನ್ನು ಕಳೆದು ಪ್ರಸಾದವೆಂದು ಸ್ವೀಕರಿಸುತ್ತಾನೆ. ಅಂತಹ ನಿರುಪಮ, ನಿರ್ಭೇದ್ಯ, ನಿರಾಳ ನಿಃಶೂನ್ಯ ಪರಮ ಪ್ರಸಾದಿಯೆಂಬ ಶರಣನನ್ನು ಸಂಸಾರಿಯೆಂದು ನುಡಿದವರು ಅಘೋರ ನರಕದಲ್ಲಿ ಮುಳುಗುವರು ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**215**

**ಮರ ಬೇರು ಸಾರದಿಂದ ನಾನಾ ಶಾಖೆಗಳು ಪಲ್ಲವಿಸುವ ತೆರನಂತೆ,**

**ಜೀವಭಾವ ಮೂಲದಿಂದ ಸಕಲೇಂದ್ರಿಯ ಹೆಚ್ಚುಗೆ ಅಹಂತೆ,**
**ಮರಕ್ಕೆ ಬೇರು ನಷ್ಟದಿಂದ ಶಾಖೆ ನಷ್ಟ,**
**ಜೀವಕ್ಕೆ ಪ್ರಕೃತಿ ನಷ್ಟದಿಂದ ಇಂದ್ರಿಯ ನಷ್ಟ**
**ಎಂದನಂಬಿಗ ಚೌಡಯ್ಯ.**

ಮರ ಮತ್ತು ಬೇರಿನ ಸಾರದಿಂದ ಮರದಲ್ಲಿ ನಾನಾ ಶಾಖೆಗಳು, ರೆಂಬೆಕೊಂಬೆಗಳು, ಹೂ, ಕಾಯಿ, ಹಣ್ಣು ಪಲ್ಲವಿಸುವಂತೆ ಹಾಗೆಯೇ ದೇಹ ಕೂಡಾ.

ದೇಹ ಬೇರಿಲ್ಲದ ಮರ. ಮರಕ್ಕೆ ಬೇರಿಲ್ಲದಿದ್ದರೇನು? ಜೀವವಿದೆ, ಭಾವವಿದೆ. ಇದರ ಮೂಲದಿಂದ ಸಕಲೇಂದ್ರಿಯಗಳು ಜಾಗ್ರತಗೊಳ್ಳುತ್ತವೆ.

ಮರಕ್ಕೆ ಬೇರು ತಾಯಿ ಬೇರು ನಷ್ಟವಾದರೆ ಸಾಕು ಸಕಲ ಶಾಖೆಗಳು ನಷ್ಟವಾಗುತ್ತವೆ.

**ಜೀವಕ್ಕೆ ಪ್ರಕೃತಿ ನಷ್ಟದಿಂದ ಇಂದ್ರಿಯ ನಷ್ಟ:**

ಪ್ರಕೃತಿ ಮರಕ್ಕೆ ಜೀವಾಳ. ಹಾಗೆಯೇ ಅಂಗಕ್ಕೆ ಕೂಡಾ, ಆದರೆ ಅಂಗದಲ್ಲಿ ಸಂಗಮವಾದ ಲಿಂಗಕ್ಕೆ ಅಲ್ಲ, ಲಿಂಗದ ಗರ್ಭದಿಂದ ಪ್ರಕೃತಿ ಜೀವ ತಳೆದಿದೆ. ಪ್ರಕೃತಿ ಲಿಂಗವನ್ನು ನಷ್ಟ ಮಾಡಲು ಸಾಧ್ಯವಿಲ್ಲ, ಅದು ಅಂಗವನ್ನು ಅಂಗದಿಂದ ಹೊರಬಂದ ಇಂದ್ರಿಯಗಳನ್ನು ನಷ್ಟ ಮಾಡಬಹುದಾಗಿದೆ.

ಬುದ್ಧ ಅಂಗವನ್ನು ಬೋಧೀವೃಕ್ಷವೆಂದು ಕರೆದ. ಶರಣರು ಅಂಗವನ್ನು ಬೇರಿಲ್ಲದ ಮರವೆಂದು ಕರೆದರು. ಲಿಂಗಾಂಗವೆಂದು ಕರೆದರು.

ಬೋಧಿ ವೃಕ್ಷವೆಂದರೆ ಬೋಧಿಸುತ್ತ ನಡೆದಾಡುವ ವೃಕ್ಷ. ಹೀಗೆ ನಡೆದಾಡುವ ವೃಕ್ಷಗಳು ಜಗದ ತುಂಬಾ ಇವೆ. ಆದರೆ ವೃಕ್ಷದ ಬೋಧೆ ವೃಕ್ಷಕ್ಕೆ ನಾಟದೆ ವೃಕ್ಷದ ತುಂಬಾ ರೆಂಬೆಕೊಂಬೆಗಳು ಚಿಗುರಿಕೊಂಡಿವೆ. ಒಂದಕ್ಕೊಂದು ರಾಚಿ– ಅಗ್ನಿ ಹುಟ್ಟಿ ತಮ್ಮನ್ನು ತಾವೇ ಸುಟ್ಟುಕೊಳ್ಳುವುದರಲ್ಲಿ ನಿರತವಾಗಿದೆ ವೃಕ್ಷ ಇಂದ್ರಿಯಗಳ ಬಾಧೆಯಿಂದ ಬಳಲುತ್ತಿವೆ. ವೃಕ್ಷದ ಬೋಧೆ ವೃಕ್ಷಕ್ಕೆ ನಾಟದ ಕಾರಣ.

ಬಯಲಿನಲ್ಲಿ ಪ್ರಕೃತಿಯಿದೆ. ಪ್ರಕೃತಿಗೆ ಬಯಲು ಜನ್ಮ ನೀಡಿದೆ. ಗಾಳಿ, ಬೆಂಕಿ, ನೀರು, ಭೂಮಿ, ಆಕಾಶ ಇವುಗಳಲ್ಲಿ ಒಂದು ಕುಪಿತಗೊಂಡರೆ ಸಾಕು ಪ್ರಕೃತಿ ಉಳಿಯುವುದಿಲ್ಲ. ಆದರೆ ಇವೆಲ್ಲ ಕುಪಿತಗೊಂಡರೂ ಬಯಲಿಗೆ ಏನೂ ಆಗುವುದಿಲ್ಲ. ಗರ್ಭಧರಿಸಿದ ಸ್ತ್ರೀ ಗರ್ಭದೊಳಗಿದ್ದ ಮಕ್ಕಳು ತಾಯಿಯನ್ನು ಒದ್ದರೆ ಸಂತುಷ್ಟಳಾಗುವಂತೆ ಬಯಲು ಆನಂದ ಪಡುತ್ತದೆ.

ನೀರು ಸುನಾಮಿಯಾಗಿ ಚಿಮ್ಮಿದರೇನು? ಭೂಮಿ ಬಿರಿದು ಲಾವಾರಸ ಉಗುಳಿದರೇನು? ಗಾಳಿ ಬಿರುಗಾಳಿಯಾಗಿ ಬೀಸಿದರೇನು? ಬೆಂಕಿ ತನ್ನ ಕೆನ್ನಾಲಿಗೆಗಳನ್ನು ಚಾಚಿದರೇನು? ಬಯಲಿಗೆ ಆನಂದವೇ ಆನಂದ. ಹಾಗೆಯೇ ಬೋಧಿ ವೃಕ್ಷ ಕೂಡ ಆನಂದದಿಂದ ಬುದ್ಧನಾಗಿ ಹರಿದಾಡುತ್ತದೆ. ತನ್ನ ಸಕಲ ಇಂದ್ರಿಯಗಳನ್ನು ತಾನೇ ನಷ್ಟ ಮಾಡಿಕೊಂಡು.

**216**

**ಮರುಳ ಕಂಡ ಕನಸಿನಂತೆ, ಆಕಾಶದಲ್ಲಿ ತೋರುವ ಲಿಪಿಯಂತೆ,**
**ಕಂಡುದಕ್ಕೆ ರೂಪಾಗಿ, ಹಿಡಿವುದಕ್ಕೆ ಒಡಲಿಲ್ಲದೆ ನಿಂದ ಭಾವ**

**ನಿರಂತರ ಸುಖಿಯೆಂದ ನಂಬಿಗ ಚೌಡಯ್ಯ .**

ಜ್ಞಾನಿ, ಮರುಳ ಕಂಡ ಕನಸಿನಂತೆ ಸುಖ ಅನುಭವಿಸುತ್ತಾನೆ. ಬಯಲ ಲಿಪಿಯಂತೆ ಸುಖಿಸುತ್ತಾನೆ. ನೋಡಲು ಹೋದರೆ ರೂಪಾಗಿ ಕಾಣುತ್ತದೆ. ಹಿಡಿಯಲು ಹೋದರೆ ಒಡಲೇ ಇರುವುದಿಲ್ಲ. ಜ್ಞಾನಿ ನಿರಂತರ ಸುಖಿ.

ಅಂಬಿಗರ ಚೌಡಯ್ಯ ಒಡಲುಳ್ಳವನು ಒಬ್ಬ. ಒಡಲಿಲ್ಲದವನು ಒಬ್ಬ. ಒಡಲಿಲ್ಲದವನು ಸಹಜವು. ಈತ ಒಡಲಲ್ಲಿಯೇ ಇದ್ದಾನೆ. ಒಡಲಿಂಗೆ ಆಧಾರವಾಗಿ ಇದ್ದಾನೆ. ಒಡಲು ಸೋಂಕದೆ ಇದ್ದಾನೆ. ಕಾಣುವ ಒಡಲನ್ನು ಕಾಣಬಾರದ ಒಡಲ ಒಡೆಯ ಬೆಳಗುತ್ತಿದ್ದಾನೆ.

ಒಡಲೊಳಗೊಂದು ಒಡಲಿದೆ. ಒಡಲನ್ನು ಆವರಿಸಿದ ಒಡಲೊಂದು ಇದೆ. ಹಾಗೆಯೇ ಒಡಲೂ ಇದೆ. ಒಡಲನ್ನು ಆವರಿಸಿದ ಮನವೆಂಬ ಒಡಲಿಗೆ ಒಡಲೆಂದರೆ ಬಲು ಪ್ರೀತಿ. ಈ ಒಡಲ ಮೂಲಕ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳ ಸುಖ ಮತ್ತು ದುಃಖವನ್ನು ಅನುಭವಿಸುತ್ತದೆ. ಆದರೆ ಒಡಲೊಳಗಿದ್ದ ಒಡಲೊಡೆಯನನ್ನು ಕಾಣದಂತೆ ಸಾಯುತ್ತದೆ.

ಒಡಲೊಡೆಯನಿಗೆ ಹೆಸರಿಲ್ಲ. ಒಡಲಿಗೆ ಹೆಸರಿದೆ. ಹೆಸರಿಲ್ಲದ ಒಡೆಯನನ್ನು ಒಡಲಿಗಿಟ್ಟ ಹೆಸರಿನಿಂದಲೇ ಕರೆದು ಸುಖಿಸಿದರು ಅಂಬಿಗರ ಚೌಡಯ್ಯ ಶರಣರು.

ಒಡಲನ್ನು ಆವರಿಸಿದ ಮನವೆಂಬ ಒಡಲಿಗೆ ಒಡಲೊಡೆಯನ ದರ್ಶನವಾದರೆ ಸಾಕು, ಒಡಲು ಧನ್ಯವಾಗುತ್ತದೆ. ಮೂಕ ಬೆಲ್ಲ ಮೆದ್ದಂತಾಗುತ್ತದೆ. ಮರುಳ ಕಂಡ ಕನಸಿನಂತೆ ಹೇಳಲು ಬಾರದ ಸುಖ ಅನುಭವಿಸುತ್ತದೆ.

ಮನವೆಂಬ ಮರುಳನಿಗೂ ಒಡಲಿಲ್ಲ. ಒಡಲೊಡೆಯನಿಗೂ ಒಡಲಿಲ್ಲ. ಒಡಲಿಗೆ ಮಾತ್ರ ರೂಪವಿದೆ. ರೂಪ ಅರಿವೆಂಬ ನಿರೂಪದಿಂದ ಸಂಗಮವಾಗಿರುವುದರಿಂದ ಹಿಡಿಯಲು ಹೋದರೆ ಒಡಲಿಲ್ಲದಂತೆ ಕಾಣುತ್ತದೆ. ಒಡಲ ಭಾವವೆಲ್ಲ ನಿರ್ಭಾವವಾಗಿ ನಿರಂತರ ಸುಖವನು ಅನುಭವಿಸುತ್ತದೆ.

**217**

**ಮಸ್ತಕದಲ್ಲಿ ರುದ್ರಾಕ್ಷಿಯಂ ಧರಿಸಿ**
**ಅನ್ಯ ದೈವದ ಗುಡಿಯ ಹೊಗಲಾಗದು ಶರಣ.**
**ಕರಣಂಗಗಳಲ್ಲಿ ರುದ್ರಾಕ್ಷಿಯಂ ಧರಿಸಿ**
**ಹರನಿಂದೆ ಗುರುನಿಂದೆಯ ಕೇಳಲಾಗದು ಶರಣ.**
**ತೋಳುಗಳಲ್ಲಿ ರುದ್ರಾಕ್ಷಿಯಂ ಧರಿಸಿ**
**ಪರಸತಿಯನಪ್ಪಲಾಗದು ಶರಣ.**
**ಮುಂಗೈಯಲ್ಲಿ ರುದ್ರಾಕ್ಷಿಯಂ ಧರಿಸಿ**
**ಅನ್ಯರಿಗೆ ಕೈಮುಗಿಯಲಾಗದು ಶರಣ.**
**ಇದನರಿದು ಧರಿಸಿದಡೆ ಶ್ರೀರುದ್ರಾಕ್ಷಿಯಹುದು.**
**ಅರಿತಲ್ಲದಿರ್ದಡೆ, ಡಂಬ ಹಗರಣವ ಹೊತ್ತು ಬಂದಂತೆ**
**ಎಂದಾತನಂಬಿಗರ ಚೌಡಯ್ಯ.**

ಅರಿತರೆ ಸರ್ವಾಂಗವೂ ಲಿಂಗವೇ ಆಗಿದೆ. ಅರಿಯದಿದ್ದರೆ ಅಂಗ. ಲಿಂಗದ ದಾರಿಯಲ್ಲಿದ್ದ ಅಂಗ. ಮೆಲ್ಲ ಮೆಲ್ಲನೆ ಲಿಂಗದ ಹಾದಿಯಲ್ಲಿ ನಡೆದು ಲಿಂಗವೇ ತಾನಾಗುವ ಅಂಗ.

ಅಂಗದ ಹಣೆಯಲ್ಲೊಂದು ಹಣೆಗಣ್ಣಿದೆ. ಅದು ರುದ್ರನ ಕಣ್ಣು. ಆ ಕಣ್ಣಿಗೆ ಕಾಣಬಾರದ ವಸ್ತುಗಳೇ ಇಲ್ಲ. ಸಕಲ ವಸ್ತುಗಳ ಸತ್ಯವನ್ನು ಮಾತ್ರ ನೋಡುತ್ತದೆ. ವಸ್ತುಗಳು ಪ್ರಿಯವಾಗದೆ ತೃಣವಾಗುತ್ತವೆ ಹಣೆಗಣ್ಣಿಗೆ.

ಲಿಂಗವನ್ನು ಹೊತ್ತ ಸರ್ವಾಂಗವೇ ಲಿಂಗಕ್ಕೆ ಆಲಯವಾಗಿರುವಾಗ ಅಂಗ ಆಲಯಕ್ಕೆ ಹೋಗುವುದಿಲ್ಲ. ಏಕೆಂದರೆ ಹಣೆಗಣ್ಣು ಆಲಯದ ಸತ್ಯವನ್ನು ಮಾತ್ರ ನೋಡುತ್ತದೆ. ಆ ಸತ್ಯಕ್ಕೆ ಶರಣು ಹೋಗಿ ಶರಣನೇ ತಾನಾಗುತ್ತದೆ.

ರೂಪ ಆಲಯದ್ದಾದರೇನು? ಅದು ಶಿಲೆ. ಅದರ ಶಿಖರವೂ ಶಿಲೆ. ಕಂಬ ತೊಲೆ ರಂಗವೂ ಶಿಲೆ. ಗರ್ಭಗುಡಿ ಶಿಲೆ ಗುಡಿಯೊಳಗಿದ್ದ ದೇವರೂ ಶಿಲೆ. ಶಿಲೆಯನ್ನು ಶಿಲೆಯೆನ್ನಬೇಕಲ್ಲದೆ ದೇವರು ದೈವವೆಂದು ಹೇಳಲು ಬರುತ್ತದೆಯೆ? ಗುಡಿ; ಗುಡಿಯೊಳಗಿದ್ದ ದೈವದ ಸ್ವರೂಪ ಶಿಲೆಯಾದುದರಿಂದ ಅದು ದೈವವಲ್ಲ. ಶರಣ ಅನ್ಯ ದೈವಕ್ಕೆ ಶರಣು ಹೋಗಲಾರ.ಅದರ ಸ್ವರೂಪಕ್ಕೆ ಶರಣು ಹೋಗದೆ ಇರಲಾರ! ಕಲ್ಲೊಳಗಣ ಬೆಲ್ಲ ಮೆದ್ದು ಮೂಕನಂತಿರುತ್ತಾನೆ. ಏಕೆಂದರೆ ಕಣ್ಣೊಳಗಿನ ರುದ್ರ ಅನ್ಯ ದೈವದ ರೂಪ ಕತ್ತರಿಸಿ ಸ್ವ ದೈವ ದರುಶನ ಮಾಡಿಸಿದ್ದಾನೆ.

**ಕರಣಂಗಳಲ್ಲಿ ರುದ್ರಾಕ್ಷಿಯಂ ಧರಿಸಿ ಹರನಿಂದೆ ಗುರುನಿಂದೆಯ ಕೇಳಲಾಗದು ಶರಣ:**

ಗುರು ಬ್ರಹ್ಮ, ಗುರು ವಿಷ್ಣು, ಗುರು ದೇವೊ ಸದಾಶಿವಃ, ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ ಇದು ಅರಿವಿನ ಮಂತ್ರ . ಅರಿವೇ ಗುರು, ಅರಿವೇ ಬ್ರಹ್ಮ , ಅರಿವೇ ವಿಷ್ಣು, ಅರಿವೇ ಸದಾಶಿವನಾಗಿರುವಾಗ ಹರನಿಂದೆ ಗುರುನಿಂದೆಯನು ಮಾಡಬಹುದೆ?

ಶಬ್ದದಲ್ಲಿ ಅರಿವಿದೆ. ಶಬ್ದ ಕೇಳುವ ಕಿವಿಗಳಲ್ಲಿ ಗುರುವಿದ್ದಾನೆ. ಹರನಿದ್ದಾನೆ. ಶಬ್ದಕ್ಕಂಟಿದ ಅಜ್ಞಾನವನ್ನು ನಷ್ಟಮಾಡಿ ಅರಿವಿನಿಂದ ಕೇಳುವ ರುದ್ರ ಕಿವಿಯಲ್ಲಿದ್ದಾನೆ, ಆತ ಕಿವಿಯ ಕಿವಿಯಾಗಿ ಶಬ್ದ ಕೇಳುತ್ತಾನೆ. ಆ ರುದ್ರನಿಗೆ ಶರಣು ಹೋದ ಶರಣನಿಗೆ ಮಾತ್ರ ಸಾಧ್ಯವಾಗುತ್ತದೆ. ಈ ತಂತ್ರಗಾರಿಕೆಯನ್ನು ತಿಳಿದರೆ ಸಕಲರಿಗೂ ಸಾಧ್ಯವಾಗುತ್ತದೆ.

ಕೈಕೇಯಿ ನುಡಿದ ಶಬ್ದದಿಂದ ದಶರಥ ಘಾಸಿಗೊಂಡ, ರಾಮನಿಗೆ ಹಿತವಾಯಿತು; ಹದಿನಾಲ್ಕು ವರ್ಷ ವನವಾಸಕ್ಕೆ ಹೋದ. ನುಡಿದ ಶಬ್ದ ನುಡಿದ ದೇಹಕ್ಕೆ ಹಿತವಾಗಲಿಲ್ಲ. ಹದಿನಾಲ್ಕು ವರ್ಷ ಕೈಕೇಯಿಯನ್ನು ನರಳುವಂತೆ ಮಾಡಿತು. ವನವಾಸ ರಾಮನದೋ? ಕೈಕೇಯಿಯದೊ? ರಾಮ ಮರಳಿ ಬಂದರೂ ಕೈಕೇಯಿಯ ವನವಾಸ ತಪ್ಪಲಿಲ್ಲ. ನುಡಿದ ಶಬ್ದ ನುಡಿದ ದೇಹವನ್ನೆ ಚುಚ್ಚೀ ಚುಚ್ಚೀ ಕೊಂದಿತು. ಶಬ್ದ ರಾಮಾಯಣವನ್ನು ಸೃಷ್ಠಿ ಮಾಡಿತು.

ಪಾಂಡವರ ಆಮಂತ್ರಣದ ಮೇರೆಗೆ ಆಗಮಿಸಿದ ದುರ್ಯೋಧನ; ದ್ರೌಪದಿ ರಚಿಸಿದ ಚಿತ್ರ ಕುಂಡದ ಹೊಂಡದಲ್ಲಿ ಬಿದ್ದ. ದ್ರೌಪದಿ ಗಹಗಹಿಸಿ ನಕ್ಕಳು. 'ಕುರುಡನ ಮಗ ಕುರುಡ' ಎಂದು ನುಡಿದಳು. ದ್ರೌಪದಿಯ ಈ ಶಬ್ದ ದುರ್ಯೋಧನನ ವಜ್ರ ಶರೀರದಲ್ಲಿ ಅಗ್ನಿ ಜ್ವಾಲೆಯನ್ನೇ ಸೃಷ್ಟಸಿತು. ಕಣ್ಣು ಅಗ್ನಿ ಜ್ವಾಲೆಗಳನ್ನು ಉಗುಳಿದವು. ದ್ರೌಪದಿಗೆ ಆನಂದ. ನಂತರ ಹದಿಮೂರು ವರ್ಷ ವನವಾಸ. ದುರ್ಯೋಧನ ಸಿಡಿದೆದ್ದ. ಶಬ್ದದ ಈ ಜ್ವಾಲೆಗೆ ನೂರು ಜನ ಸಹೋದರರು ಬಲಿಯಾದರು. ಯೋಧರು, ವೀರಾಧಿವೀರರು, ಆಚಾರ್ಯರು, ಗುರುಕುಲ ಸರ್ವನಾಶವಾಯಿತು. ಹದಿನೆಂಟು ಅಕ್ಷೋಹಿಣಿ ಸೈನ್ಯ ಸತ್ತು ಹೋಯಿತು. ರಕ್ತದ ಕಾಲುವೆ

ಹರಿದು ಸರೋವರವೇ ನಿರ್ಮಾಣವಾಯಿತು. ದುರ್ಯೋಧನ ಸತ್ತು ಹೋದ. ಕುರುವಂಶ ನಾಶವಾಯಿತು. ಶಬ್ದದ ತೃಷೆ ಆರಲಿಲ್ಲ. ಭ್ರಮೆಯಿಂದ ನುಡಿದ ಶಬ್ದ, ಅದು ಇಬ್ಬರನ್ನು ಕೊಲ್ಲುತ್ತದೆ. ಕೇಳಿದ ಶಬ್ದ ಅಣುಬಾಂಬಿಗಿಂತಲೂ ಘೋರ.

ಶಬ್ದದಲ್ಲಿ ಭ್ರಮೆ ಇಲ್ಲ; ಬ್ರಹ್ಮನಿದ್ದಾನೆ. ಶಬ್ದಕ್ಕಂಟಿದ ಭ್ರಮೆಯನ್ನು ತಾನೇ ನಷ್ಟಮಾಡಿಕೊಳ್ಳಬೇಕು. ಆ ಶಕ್ತಿ ಅರಿವಿನ ರುದ್ರಾಕ್ಷಿ ಧರಿಸಿದ ಕಿವಿಯಲ್ಲಿದೆ.

ದೇಹ ದುರ್ಯೋಧನದಾದರೇನು, ದ್ರೌಪದಿಯದಾದರೇನು? ಇವೆರಡೂ ದೇಹಗಳಲ್ಲವೆ? ನೋಡುವ ಕಣ್ಣು, ಕೇಳುವ ಕಿವಿ, ರುಚಿಸುವ ನಾಲಿಗೆ, ಮೂಸಿಸುವ ಮೂಗು, ಮುಟ್ಟುವ ಚರ್ಮ ಒಂದೇ ಆಗಿದೆ. ದೇಹ ಒಂದೇ, ದೇಹದ ಜ್ಞಾನೇಂದ್ರಿಯಗಳೂ ಒಂದೇ! ದೇಹದಲ್ಲಿರುವ ಅರಿವೂ ಒಂದೇ. ಆ ಅರಿವೇ ಗುರು! ಆ ಅರಿವೇ ಹರ!

ಒಂದು ದೇಹ ಮತ್ತೊಂದು ದೇಹವನ್ನು ನಿಂದಿಸಿದರೆ ಗುರುನಿಂದೆ ಮಾಡಿದಂತಾಗಲಿಲ್ಲವೆ? ಹಾಗೆ ಮಾಡಿದರೇನಾಯಿತು; ಅದು ಗುರು ಮತ್ತು ಹರನಿಂದ ಬಂದ ಶಬ್ದವೆಂದು ಕೇಳಲು ಬರುವುದಿಲ್ಲವೆ? ಶಬ್ದವನ್ನು ನಪುಂಸಕಗೊಳಿಸಿ ಅರಿವಿನಿಂದ ಕೇಳುವ ಶಕ್ತಿ ಗುರುವಿನಲ್ಲಿ ಮಾತ್ರ ಇದೆ. ಆ ಗುರುದೇವ ಸಕಲ ಕಿವಿಗಳಲ್ಲಿಯೂ ವಾಸವಾಗಿದ್ದಾನೆ. ಅರಿವಿನಿಂದ ಕಂಡು ಹಿಡಿದು ಆತನನ್ನು ಮುಂದೆ ಬಿಡಬೇಕು. ಗುರು ರಥಕ್ಕೆ ಸಾರಥಿಯಾಗಬೇಕು.

ಕು-ಶಬ್ದ, ಸು-ಶಬ್ದ ಶಬ್ದದಲ್ಲಿಯೇ ನೋಡಾ ಎಂದು ಚೆನ್ನಬಸವಣ್ಣನವರು ಸೂತ್ರ ರಚಿಸಿದ್ದಾರೆ. ಶಬ್ದ ಸೂತಕಿಗಳು ರೌರವ ನರಕಿಗಳು ಎಂದು ಪ್ರಭು ಹೇಳುತ್ತಾರೆ.

ದ್ರೌಪದಿಯ ಶಬ್ದ ದುರ್ಯೋಧನನಿಗೆ ಸೂತಕವಾಗಿ ಬಡಿಯಿತು. ಜನನ ಸೂತಕ, ಮರಣ ಸೂತಕ, ರಜೋ ಸೂತಕಗಳು ತೊಲಗುತ್ತವೆ. ಶಬ್ದ ಸೂತಕ ಮಾತ್ರ ದೇಹವನ್ನು ನರಕಕ್ಕೆ ಕೊಂಡೊಯ್ಯುತ್ತದೆ. ದುರ್ಯೋಧನನನ್ನು ಸಾವು ಘಾಸಿಗೊಳಿಸಲಿಲ್ಲ. ಆತ ಸಾವಿಗೆ ಎಂದೂ ಅಂಜಲಿಲ್ಲ. ದ್ರೌಪದಿಯ ಶಬ್ದ ಆತನನ್ನು ಘಾಸಿಗೊಳಿಸಿತು. ವಜ್ರ ಶರೀರವನ್ನು ಸೀಳಿ ಹಾಕಿತು.

**ತೋಳುಗಳಲ್ಲಿ ರುದ್ರಾಕ್ಷಿಯಂ ಧರಿಸಿ ಪರಸತಿಯ ನಪ್ಪಲಾಗದು ಶರಣ:**

ಲಿಂಗ ಪತಿ - ಶರಣ ಸತಿ. ಅಂದರೆ ಅರಿವೆಂಬುದೇ ಲಿಂಗ. ಮನವೆಂಬುದೇ ಶರಣ. ಅರಿವೆಂಬ ಲಿಂಗವನ್ನು ಪತಿ ಮಾಡಿಕೊಂಡು, ಮನವೆಂಬ ಶರಣನನ್ನು ಸತಿ ಮಾಡಿಕೊಂಡು ಅಂಗದಲ್ಲಿ ಅರಿವಿನ ಸಂಸಾರ ಹೂಡಬೇಕಾಗಿದೆ. ಆಗ ಅಂಗ ಲಿಂಗಾಂಗವಾಗುತ್ತದೆ. ಅರಿವಿನ ಅಂಗವಾಗುತ್ತದೆ. ಆ ಅರಿವನ್ನು ರುದ್ರಾಕ್ಷಿಯನ್ನಾಗಿಸಿಕೊಂಡು ತೋಳುಗಳಲ್ಲಿ ಧರಿಸಿಕೊಂಡ ಅಂಗದಿಂದ ಪರಸತಿಯನ್ನು ಅಪ್ಪಲಾಗದು; ಕಣ್ಣೆತ್ತಿಯೂ ನೋಡಲಾಗದು. ನೋಡಿದರು ಕೂಡ ಪ್ರತಿ ಅಂಗಗಳು ಅರಿವಿನ ಲಿಂಗಗಳಾಗಿಯೇ ಕಾಣುತ್ತವೆ.

ಮನವೆಂಬುದು ಸತಿಯೆಂದು ಮನಕ್ಕೆ ಮನವರಿಕೆಯಾದಾಗ ಅಂಗದಲ್ಲಿ ಸಂಗಮವಾದ ಅರಿವು ಪತಿಯಾಗುತ್ತದೆ. ಅಂದ ಮೇಲೆ ಪ್ರತಿ ಅಂಗದಲ್ಲಿಯೂ ಸತಿಯಿದ್ದಾಳೆ. ಸತಿ ಅಂಗವನ್ನು ಆವರಿಸಿಕೊಂಡಿದ್ದಾಳೆ. ಈ ಸತಿಯಿಂದಾಗಿ ಅಂಗ ಹೆಣ್ಣು ಗಂಡೆಂದು ಗುರುತಿಸಿಕೊಂಡಿದೆ. ಸತಿಗೆ ಅರಿವಾಗಿ ಅರಿವೆಂಬ ಪತಿಗೆ ಶರಣು ಹೋಗಿ ಶರಣನಾಗಿದೆ ಮನ.

ಶರಣ ಹೆಣ್ಣು. ಹೆಣ್ಣು ತಾನಾಗಿ ಮತ್ತೊಂದು ಹೆಣ್ಣನ್ನು ಕೂಡಲು ಸಾಧ್ಯವೆ? ತಾನು ಸತಿಯೆಂದು ನಿರ್ಧಾರವಾದ ಮೇಲೆ ಸತಿ ಪರಸತಿಯನ್ನು ಅಪ್ಪಿಕೊಳ್ಳಲು ಸಾಧ್ಯವೆ? ಹೀಗಾಗಿ ಒಬ್ಬ ಶರಣ ಹೇಳುತ್ತಾನೆ: ಲೋಕದ ಕೂಟ ಹೆಣ್ಣು ಹೆಣ್ಣು ಕೂಡುವ ಕೂಟ. ಶರಣರ ಕೂಟ ಶರಣ

ಸತಿಯಾಗಿ ಲಿಂಗಪತಿಯಾಗಿ ಕೂಡುವ ಕೂಟ. ಕೂಡದ ಅಗಲದ ಅರಿವಿನ ಕೂಟ. ಈ ಕೂಟದ ಸುಖವನು ಗುಹೇಶ್ವರಾ ನಿಮ್ಮ ಶರಣ ಮಾತ್ರ ಬಲ್ಲ.

ರುದ್ರ ಎಂದರೆ ಅಜ್ಞಾನವನ್ನು ಕೊಲ್ಲುವ ಅರಿವು. ಅಕ್ಷಿ ಎಂದರೆ ಕಣ್ಣು. ಅರಿವಿನ ಕಣ್ಣು ಹಣೆಯಲ್ಲಿಯೂ ಇದೆ, ಕಿವಿಯಲ್ಲೂ ಇದೆ. ತೋಳುಗಳಲ್ಲಿಯೂ ಇದೆ. ಮುಂಗೈಯಲ್ಲಿಯೂ ಇದೆ. ಆಯಾ ಜಾಗದಲ್ಲಿ ಅರಿವನ್ನು ಧರಿಸಿಕೊಳ್ಳಬೇಕಾಗಿದೆ. ಅಂದರೆ ಆಯಾ ಜಾಗದಲ್ಲಿಯೇ ಅರಿವು ಜಾಗೃತಗೊಳ್ಳಬೇಕು. ಆಯಾ ಜಾಗದಲ್ಲಿಯೇ ಇದ್ದ ಅಜ್ಞಾನ ಆಯಾ ಜಾಗದಲ್ಲಿಯೇ ಇರುವ ಅರಿವಿನೊಂದಿಗೆ ಸಂಗಮವಾಗಬೇಕು. ಆಗ ಅರಿವು ಸಹಜವಾಗಿಯೇ ಬಳಕೆಗೆ ಬರುತ್ತದೆ ಎಂದು ಅಂಬಿಗರ ಚೌಡಯ್ಯ ಶರಣರು ತಮ್ಮ ವಚನ ಸೂತ್ರದ ಮೂಲಕ ಓದುಗರನ್ನು ಜಾಗೃತಗೊಳಿಸಿದ್ದಾರೆ.

**218**

**ಮಹಾಘನಲಿಂಗದ ನಿಜಘನವೆಂಬ ಚಿದ್ಘನಾತ್ಮಕ ಶರಣನ ಲೀಲೆಯಿಂದ**
**ಮಹಾಜ್ಯೋತಿ ಹುಟ್ಟಿತ್ತು ,**
**ಆ ಜ್ಯೋತಿಯ ಬೆಳಗಿನಲ್ಲಿ**
**ಅರಿವು ಮರವೆಂಬ ಭೂತಾತ್ಮ ಮಹಾತ್ಮಂಗಳು ಹುಟ್ಟಿದವು.**
**ಆತ್ಮಂಗಳಿಂದ ಜ್ಞಾನಾತ್ಮಕ, ಶುದ್ಧಾತ್ಮಕ, ನಿರ್ಮಲಾತ್ಮಕ,**
**ಪರಮಾತ್ಮ, ಅಂತರಾತ್ಮ, ಜೀವಾತ್ಮಂಗಳು ಹುಟ್ಟಿದವು.**
**ಆ ಜ್ಞಾನಾತ್ಮಕನಲ್ಲಿ ಮಹಾನುಭಾವ ಜ್ಞಾನಂಗಳು ಹುಟ್ಟಿ ತ್ರಿಯಕ್ಷರಾದವು.**
**ಆ ತ್ರಿಯಕ್ಷರಂಗಗಳಲ್ಲಿ ಓಂಕಾರ ಹುಟ್ಟಿತ್ತು .**
**ಆ ಓಂಕಾರದಲ್ಲಿ ಪಂಚಾಕ್ಷರಂಗಗಳು ಹುಟ್ಟಿದವು.**
**ಆ ಪಂಚಾಕ್ಷರಂಗಳಲ್ಲಿ ಅಯಿವತ್ತೆರಡು ಅಕ್ಷರಂಗಗಳು ಹುಟ್ಟಿದವು.**
**ಇಂತೀ ಅಕ್ಷರಂಗಳೆಲ್ಲವನು**
**ಷಡಾತ್ಮಕರ ಪ್ರಾಣವೆಂದಾತ ನಮ್ಮ ಅಂಬಿಗರ ಚೌಡಯ್ಯ**

ಅಂಗದಲ್ಲಿ ಅರಿವೆಂಬ ಲಿಂಗ ಸಂಗಮವಾಗಿದೆ. ಅದು ಸಹಜವೂ, ನಿಜವೂ, ಚಿದ್ಘನವೂ ಹೌದು. ಅದನ್ನು ತಿಳಿಯುವ ಮನವೇ ಶರಣ. ಅಂಗದಲ್ಲಿ ಸಂಗಮವಾದ ಆ ಸತ್ಯವಸ್ತುವಿಗೆ ಶರಣ ಶರಣು ಹೋಗಿ ಶರಣನೆನ್ನಿಸಿಕೊಂಡಿದ್ದಾನೆ. ಆತನ ಲೀಲೆಯಿಂದ ಮಹಾಜ್ಯೋತಿಯೆಂಬ ಅರಿವಿನ ಬೆಳಗು ಹುಟ್ಟಿದೆ. ಆ ಜ್ಯೋತಿಯ ಬೆಳಗಿನಲ್ಲಿ ಅರಿವು ಮರೆವು ಎಂಬ ಪಂಚಮಹಾಭೂತಗಳು, ಮಹಾ ಆತ್ಮಗಳು ಹುಟ್ಟಿವೆ.

ಆತ್ಮಗಳಿಂದ ಜ್ಞಾನಾತ್ಮ ಶುದ್ಧಾತ್ಮ ನಿರ್ಮಲಾತ್ಮ, ಪರಮಾತ್ಮ, ಅಂತರಾತ್ಮ ಜೀವಾತ್ಮಗಳೆಂಬ ಆರು ತತ್ವಗಳು ಹುಟ್ಟಿದವು. ಆ ಜ್ಞಾನಾತ್ಮದಲ್ಲಿ ಮಹಾಅನುಭಾವ ಜ್ಞಾನ ಹುಟ್ಟಿ ಮೂರು ಅಕ್ಷರಗಳಾದವು. ಅವೇ 'ಅ' ಕಾರ, 'ಉ' ಕಾರ, 'ಮ' ಕಾರಗಳು ಎಂದು ಅನ್ನಿಸಿಕೊಂಡವು. ಆ ಮೂರು ಅಕ್ಷರಗಳಿಂದಲೇ ಓಂಕಾರ ಹುಟ್ಟಿತ್ತು. ಆ 'ಓಂ' ಕಾರದಲ್ಲಿ 'ನ' 'ಮ' 'ಶಿ' 'ವಾ' 'ಯ' ಎಂಬ ಪಂಚಾಕ್ಷರಗಳು ಹುಟ್ಟಿದವು. ಆ ಪಂಚಾಕ್ಷರಗಳಲ್ಲಿಯೇ ಐವತ್ತೆರಡು ಅಕ್ಷರಗಳು

ಹುಟ್ಟಿದವು. ಈ ಅಕ್ಷರಗಳುಳ್ಳ ಷಡಾತ್ಮ ದೇಹವೇ ಪ್ರಾಣವಾಯಿತು. ಅಂತಹ ಪ್ರಾಣವುಳ್ಳ ಅಂಗವೇ ಲಿಂಗಾಂಗ. 'ಓಂ ನಮಶಿವಾಯ' ವೆಂಬ ಷಡಕ್ಷರ ಭರಿತವಾದ ಅಂಗವೆಂದು ಕರೆಯಿಸಿಕೊಂಡಿತು ಎಂದು ಲಿಂಗಾಂಗದ ಮಹತ್ವವನ್ನು ಸಾರಿದ್ದಾರೆ ಅಂಬಿಗರ ಚೌಡಯ್ಯ .

**219**

**ಮಳಲ ಮರೆಯ ನೀರ ಒಲವರವಿಲ್ಲದೆ ತೋಡಿ,**
**ಚಿಲುಮೆಯ ಶೀಲವಂತರೆಂದು ಹಲುಬುತ್ತಿರಲೇತಕ್ಕೆ ?**
**ಸಲೆ ವಸ್ತುವನರಿತು ತ್ರಿವಿಧದ ಹೊಲಬಿನಾಸೆಯ ಬಿಟ್ಟು ಸಲೆ ಗೆದ್ದಡೆ,**
**ಬೇರೊಂದು ಹೊಲಬ ತೋರಿಹೆನೆಂದನಂಬಿಗ ಚೌಡಯ್ಯ.**

ಮಣ್ಣಿನ ಮರೆಯ ನೀರ ತೋಡಿ ಚಿಲುಮೆಯ ಶೀಲವಂತನೆಂದು ಹಲಬುತ್ತಿರುವೆ ಏಕೆ ಅದು ಒಮ್ಮೆ ಬತ್ತಿ ಹೋಗುವುದು ಹಾಗೆಯೇ ಅರ್ಥವಿಲ್ಲದ ತನ್ನ ಶೀಲ ಕೂಡಾ.

ಹೊನ್ನು, ಹೆಣ್ಣು ,ಮಣ್ಣು ನಿನ್ನದಲ್ಲ. ನಿನ್ನ ದಾರಿ ತಪ್ಪಿಸುವ ವಿಧಿ ಅದು. ಈ ಮೂರರ ಆಸೆ ಬಿಡಬೇಕೆಂದರೆ ನಿನ್ನದೇ ಆದ ಜ್ಞಾನದ ಆಸೆ ನಿನಗಾಗಬೇಕು. ಆ ಜ್ಞಾನವೇ ನಿನಗೆ ಸಿಂಹಾಸನವಾಗಬೇಕು. ಅದು ನಿರಂತರ ಹರಿಯುವ ಜ್ಞಾನಾಮೃತದ ಸೆಲೆ.

ಮಳಲ ಮರೆಯಲ್ಲಿ ನೀರು ಕಂಡಂತೆ ನಿನ್ನ ಮರೆಯಲ್ಲಿ ನಿನ್ನದೇ ಆದ ಜ್ಞಾನ ನಿನಗೆ ಕಾಣುವುದು. ಅದು ನಿನ್ನಲ್ಲಿಯೇ ಹುಟ್ಟಿದ ಹೆಣ್ಣು, ಮಣ್ಣು, ಹೊನ್ನಿನ ಆಸೆಯನ್ನು ಬಿಡಿಸುವುದು. ತನ್ನದೇ ಆದ ಕಾಯದಲ್ಲಿ ಅರಿವಿನ ಕೈಲಾಸವನ್ನೇ ತೋರುವುದು.

**220**

**ಮಾಡುವ ಭಕ್ತಂಗೆ ಮನವೆ ಸಾಕ್ಷಿ , ಹೊರಹೊಮ್ಮಿ ಬಯಲ ಹರಹಲೇನು ?**
**ಹಮ್ಮಿಲ್ಲದೆ ಮಾಡಿ, ಮನದಲ್ಲಿ ಮರುಗದಿದ್ದಡೆ,**
**ಅಲ್ಲಿ ತಾ ತೆರಹಿಲ್ಲದಿಪ್ಪನಂಬಿಗ ಚೌಡಯ್ಯ .**

ಪ್ರಪಂಚದ ಸಕಲ ದೇಹಗಳಲ್ಲಿ ದಿವ್ಯ ಶಕ್ತಿಯಿದೆ. ಆ ಶಕ್ತಿಯನ್ನು ಗಮನಿಸಬೇಕಾದದ್ದು ಆಯಾ ದೇಹದ ಮನಕ್ಕೆ ಬಿಟ್ಟ ವಿಚಾರ. ಗಮನಿಸಿದರೆ ಸಾಕು ಮನ ಶಕ್ತಿಯಲ್ಲಿ ಬೆರೆತು ಆ ಶಕ್ತಿಯೇ ತಾನಾಗುತ್ತದೆ. ಹೊರಹೊಮ್ಮಿ ಬಯಲಿಗೆ ಬಯಲಾಗಿ ತಾನು ನಿಲ್ಲುತ್ತದೆ.

ಮನ ದೇಹದಲ್ಲಿ ಭರಿತವಾದ ಶಕ್ತಿಗೆ ಶರಣು ಹೋಗಬೇಕು, ಹಮ್ಮಿಲ್ಲದಂತೆ, ಮನದಲ್ಲಿ ಮರುಗದಂತೆ ಭಕ್ತಿ ಮಾಡಬೇಕು. ಮನವೇ ಮನಕ್ಕೆ ಸಾಕ್ಷಿ ಯಾಗಿ ಆ ಶಕ್ತಿಗೆ ದಾಸನಾಗಬೇಕು. ಆಗ ತನಗೆ ತಾನೇ ಕಾಣುತ್ತದೆ. ದೇಹದಲ್ಲಿ ಸಂದಿಲ್ಲದಂತೆ ಬೆರೆತ ಶಕ್ತಿ .

ಅಂಗದಲ್ಲಿ ಅಹಂಕಾರವನ್ನು ಸೃಷ್ಟಿಸುವಾತನು ಅವನೇ ಸೃಷ್ಟಿಯಾದ ಆ ಅಹಂಕಾರವನ್ನು ಅರಿವಿಗೆ ತಂದು ಮರುಗುವಂತೆ ಮಾಡುವಾತನೂ ಅವನೇ.

ನಾನು ಅಹಂಕಾರಪಟ್ಟೆ. ಅಹಂಕಾರ ಪಡುವ ಮುನ್ನ ಎಚ್ಚರಿಸಿದ. ಅಹಂಕಾರ ಪಟ್ಟ ಮೇಲೆ ಇದು ನಿನಗೆ ಬೇಕೆ ಎಂದು ಮೂದಲಿಸಿ ನುಡಿದ. ಈ ಸಂವಾದವನ್ನು ಸಾಕ್ಷಿಯಾಗಿ ನೋಡುವಂತೆ ನನಗೆ ಕರುಣಿಸಿದ. ಅವನ ಹಿರಿಮೆ ಅನಂತ. ಆ ಅನಂತನು ನನ್ನಲ್ಲಿಯೇ ಸಂಗಮವಾಗಿದ್ದಾನೆ.

ಸಕಲ ತಪ್ಪು-ಒಪ್ಪುಗಳನ್ನು ಸಾಕ್ಷಿಯಾಗಿ ನೋಡಿ ನುಡಿದಂತೆ ನಡೆಯುವ ಪಾಠ ಮಾಡುವ ಪ್ರಾಧ್ಯಾಪಕನವನು. ಈ ಸಂವಾದ ಸಕಲ ತನುಗಳ ಅನುಭವಕ್ಕೆ ಬರುತ್ತದೆ. ಆದರೂ ಈ ಸತ್ಯ ತನುವಿಗೆ ಬೇಡ. ತನುವನ್ನು ಆವರಿಸಿದ ಮನಕ್ಕೂ ಬೇಡ.

ಮನದ ಕಷ್ಟ ಕೋಟಲೆಗಳು ಅಳಿಯುವ ಸನ್ನಿವೇಶ ಕೂಡಿ ಬರುವುದು ಬಲು ಜಟಿಲ. ಪ್ರಯತ್ನ ಪಟ್ಟರೆ ತನುವಿನ ಭಾಗ್ಯ ತನುವಿಗೆ ಸಿಗುವುದು ವಿರಳ. ತನುವಿನಲ್ಲಿಯೇ ತನ್ಮಯವಾದ ಆ ಅರಿವನ್ನು ತನುವನ್ನು ಆವರಿಸಿದ ಮನದಿಂದಲೇ ಕಂಡುಕೊಳ್ಳಬೇಕು. ಆ ಅರಿವು ಕರಿ ಗೊಳ್ಳಬೇಕು. ಆ ಪ್ರಯತ್ನವನ್ನು ತನಗೆ ತಾನೇ ಮಾಡಬೇಕು ಅಂದರೆ ಮಾತ್ರ ಸಾಧ್ಯ .

221

**ಮಾತಿನ ವೇದ, ನೀತಿಯ ಶಾಸ್ತ್ರ, ಘಾತದ ಕಥೆ**
**ಕಲಿವುದಕ್ಕೆ ಎಷ್ಟಾದರೂ ಉಂಟು.**
**ಅಜಾತನ ಒಲುಮೆ, ನಿಶ್ಚಯವಾದ  ವಾಸನೆಯ ಬುದ್ಧಿ,**
**ತ್ರಿವಿಧದ ಆಸೆಯಿಲ್ಲದ ಚಿತ್ತ , ಸರ್ವರಿಗೆ ಹೇಸಿಕೆಯಿಲ್ಲದ ನಡೆನುಡಿ-**
**ಇಷ್ಟಿರಬೇಕೆಂದನಂಬಿಗ ಚೌಡಯ್ಯ.**

ವೇದ,ಶಾಸ್ತ್ರ, ಉಪ ನಿಷತ್ತು ,ಭಗವದ್ಗೀತೆ ಕಲಿಯುವುದಕ್ಕೆ ಸಾಯುವವರೆಗೂ ಅಂಗಕ್ಕೆ ಸಮಯ ಉಂಟು. ಅಂಗದಲ್ಲಿಯೇ ಸಂಗಮವಾದ ಅರಿವಿನ ಶಕ್ತಿಯನ್ನು ಅಂಗವೇ ಪಡೆ ಯುವುದಕ್ಕೆ ಅಂಗಕ್ಕೆ ಸಮಯವೇ ಇಲ್ಲ.

ಹುಟ್ಟು ಸಾವುಗಳನ್ನು ಮೀರಿದ ಅಜಾತ ಅಂಗದಲ್ಲಿಯೇ ಸಂಗಮಗೊಂಡಿದ್ದಾನೆ. ಮನಕ್ಕೆ ಆತನ ದರ್ಶನವಾದರೆ ಸಾಕು ವಾಸನಾ ಬುದ್ಧಿ ತೊಲಗುತ್ತದೆ. ನಿಶ್ಚಯವಾದ ಜ್ಞಾನ ಲಭ್ಯವಾಗುತ್ತದೆ. ಹೊನ್ನು ಹೆಣ್ಣು ಮಣ್ಣಿನ ವಾಸನೆಯಿಲ್ಲದ ಚಿತ್ತದ ದರ್ಶನವಾಗುತ್ತದೆ. ಹೇಸಿಕೆಯಿಲ್ಲದ ನಡೆ, ಹೇಸಿಕೆಯಿಲ್ಲದ ನುಡಿ ಅಂಗದಿಂದ ಹೊರ ಬರುತ್ತದೆ.

ಅಂಗದಿಂದ ಹೊರಬಂದ ವೇದ ಶಾಸ್ತ್ರ ಉಪ ನಿಷತ್ ಭಗವದ್ಗೀತೆಗೆ ಕೊಡುವ ಸಮಯ ವನ್ನು ಅಂಗದಲ್ಲಿಯೇ ಸಂಗಮವಾದ ಅಜಾತನ ಒಲುಮೆಗೆ ಕೊಟ್ಟರೆ ಸಾಕು ಅಂಗವೇ ಲಿಂಗಾಂಗವಾಗುತ್ತದೆ ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

222

**ಮಾತುಗಂಟಿತನದಿಂದ ಎಷ್ಟು ಮಾತನಾಡಿದಡೇನು ?**
**ಕಾಮಿನಿಯರ ಕಾಲದೆಸೆ ಸಿಕ್ಕಿ, ಕ್ರೋಧದ ದಳ್ಳುರಿಯಲ್ಲಿ ಬೆಂದು,**
**ಆಸೆಯೆಂಬ ಪಾಶ ಕೊರಳಲ್ಲಿ ಸುತ್ತಿ**
**ಅದೇಕೊ, ಅದೇತರ ಮಾತೆಂದನಂಬಿಗ ಚೌಡಯ್ಯ .**

ವೇದ ಆಗಮ ಉಪ ನಿಷತ್ತುಗಳನ್ನು ಓದಿ ಎಷ್ಟು ಉಪನ್ಯಾಸಗಳನ್ನು ನೀಡಿದರೇನು ? ಜಗದ್ಗುರುವಾಗಿ ಪಲ್ಲಕ್ಕಿ ಮೇಲೆ ಕುಳಿತು ಆಶೀರ್ವಚನ ನೀಡಿದರೇನು ? ನೋಡಿದ ಕಣ್ಣಿನಲ್ಲಿ ಕಾಮ

ಸಂಚಯನವಾಗದೇ ಇರದು. ಕ್ರೋಧದ ದಳ್ಳುರಿಯಲ್ಲಿ ಬೆಂದು ಅಂಗ ಆಸೆಯೆಂಬ ಪಾಶ ಕೊರಳಲ್ಲಿ ಸುತ್ತಿಕೊಂಡು ಬೇಯದೇ ಇರದು.

ಓದಿದ ಓದಿನಿಂದ ಆಡಿದ ಮಾತಿನಿಂದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಬತ್ತುವುದಿಲ್ಲ. ಶರಣರ ದಾಸವರೇಣ್ಯರ ವಚನಗಳಿಂದಲೂ ಅಂಗಗಳು ಸಮಾಧಾನಿಯಾಗುವುದಿಲ್ಲ. ಬದಲಾಗಿ ಓದಿದೆನೆಂಬ ಉರಿಯಿಂದ ಅಂಗ ಬಳಲುತ್ತದೆ. ಪಂಡಿತ ಶಾಸ್ತ್ರಿ ಎಂದು ಬೀಗುತ್ತಾ ತನ್ನ ಅಹಂಕಾರವನ್ನು ಇಮ್ಮಡಿಯಾಗಿಸಿಕೊಳ್ಳುತ್ತದೆ.

ಆದ್ಯರ ವಚನ ಆದ್ಯರಿಗಾಯಿತ್ತು, ವೇದ್ಯರಿಗಲ್ಲದೆ ಸಾಧ್ಯವಾಗದು. ಕೂಡಲಸಂಗಮದೇವಾ ನಿಮ್ಮ ಅನುಭಾವದಿಂದ ಎನ್ನ ಭವಂ ನಾಸ್ತಿಯಾಯಿತ್ತು.

ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನಿಂದ ಅಂಗವನ್ನು ಆವರಿಸಿದ ಅಜ್ಞಾನ ಸುಟ್ಟು ಹೋಗುತ್ತದೆ. ಮನ ಆ ಅರಿವಿನಲ್ಲಿ ಸಂಗಮವಾಗಿ ಘನಮನವಾಗುತ್ತದೆ. ಸಂಗಮನಾಥನೇ ತಾನಾಗುತ್ತದೆ.

ಅಂಗಕ್ಕೆ ಅಂಟಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ತನ್ನಿಂದ ತಾನೇ ಉದುರಿ ಬೀಳುತ್ತವೆ.ಅಂಗ ಅರಿವಿನ ಲಿಂಗಾಂಗವಾಗಿ,ಅಂಗಕ್ಕೆ ಅರಿವು ಬೋಧಿಸುತ್ತದೆ. ಅರಿವು ಭರಿತ ಅಂಗ ಅರಿವಿನ ಬೋಧೀ ವೃಕ್ಷವಾಗಿ ಬೋಧಿಸುತ್ತಾ ನಡೆದಾಡುತ್ತದೆ.

ಅಂಗ ಅರಿವಿನ ಲಿಂಗಾಂಗವೇ ಆಗಿರುವುದರಿಂದ ಅರಿವಿನಿಂದ ಹೊರಬಂದ ಮಾತುಗಳು ಪುನಃ ಅಂಗಕ್ಕೆ ಅಂಗದಲ್ಲಿ ಸಂಗಮವಾದ ಅರಿವಿಗೆ ಬೋಧಿಸಲು ಅರಿಯವು. ಹೀಗಾಗಿ ಎಷ್ಟು ಮಾತನಾಡಿದಡೂ ಕಾಮಿನಿಯರ ಕಾಲದೆಸೆ ಸಿಕ್ಕಿ, ಕ್ರೋಧದ ದಳ್ಳುರಿಯಲ್ಲಿ ಬೆಂದು, ಆಸೆಯೆಂಬ ಪಾಶ ಕೊರಳಿಗೆ ಬಿಗಿದು ಬಾಧಿಸುವುದು ತಪ್ಪುವುದಿಲ್ಲ.

ಮಾತನಳಿಯುವ ಮಾತಿನ ಮೂಲಕ್ಕೆ ಹೋಗಿ ಆ ಮಾತು ಹೊರಬಂದಾಗಲೇ ಅಜ್ಞಾನದ ಮಾತಿಗೆ ಕಡಿವಾಣ ಬೀಳುತ್ತದೆ. ಅದೇತರ ಮಾತೆಂದು ಆಡಿದ ಮಾತನ್ನೇ ಪ್ರಶ್ನಿಸಿಕೊಳ್ಳುತ್ತಾನೆ. ಮಾತನಳಿಯುವ ಮಾತನಾಡಿ ಮಾತಿನ ರೋಗ ಕಳೆದುಕೊಳ್ಳುತ್ತಾನೆ.

**223**

**ಮಾತೆ ಸೂತಕವಾಗಿ ಸಂದೇಹವ ಮಾಡುವಲ್ಲಿ**
**ಅದೇತರಿಂದ ಒದಗಿದ ಕುರುಹು?**
**ಶಿಲೆಯ ಪ್ರತಿಷ್ಠೆಯ ಮಾಡಿ**
**ತನ್ನ ಒಲವರ ವಿಶ್ವಾಸದಿಂದ ಬಲಿಕೆಯನರಿವುದು**
**ಶಿಲೆಯೊ? ಮನವೊ? ಎಂದನಂಬಿಗ ಚೌಡಯ್ಯ.**

ಮಾತು ಸೂತಕದ ಸಂದೇಹದಿಂದ ದೇವರಾಯಿತು. ದೃಶ್ಯ ಸೂತಕದ ಸಂದೇಹದಿಂದ ಶಿಲೆಯೆ ದೇವರಾಯಿತು. ಪುನಃ ದೇವರು ಶಿಲೆಯಾಗದು. ಸೂತಕದ ಸಂದೇಹ ಅರಿವಿನ ಕಣ್ಣಿನಲ್ಲಿ ಹಿಂಗಿದಾಗ ಪುನಃ ಆ ದೇವರೆ ಶಿಲೆಯಾಯಿತು.

ಕಣ್ಣು ಮತ್ತು ಮಾತು ಸೂತಕವನ್ನು ಆಮಂತ್ರಣ ಮಾಡಿಕೊಳ್ಳುತ್ತದೆ. ಆಮಂತ್ರಣ

ಮಾಡಿಕೊಂಡ ಸೂತಕ ಕಣ್ಣು ಕುರುಡಾಗುವವರೆಗೆ ಆಡುವ ಮಾತು ಬೀಳುವವರೆಗೆ ದೇಹದಿಂದ ಉದುರಿ ಬೀಳುವುದೇ ಇಲ್ಲ.

ನೋಡಿದಾಗ ಕಲ್ಲು ಕಂಡಿತು. ಕೆತ್ತಿದಾಗ ದೇವರು ಕಂಡಿತು. ಕಲ್ಲು ಕಂಡ ಕಣ್ಣಿನಲ್ಲಿ ಸೂತಕವಿಲ್ಲ. ನುಡಿಯುವ ಮಾತಿನಲ್ಲೂ ಸೂತಕವಿಲ್ಲ. ದೇವರೆಂದು ನುಡಿಯಲಿಲ್ಲ. ನೋಡುವ ಕಲ್ಲಿನಲ್ಲಿ ಮಂದಿರ, ಮಸೀದೆ, ಚರ್ಚ್ ಕಾಣಲಿಲ್ಲ. ಕ್ರಿಷ್ಣ, ಕ್ರಿಸ್ತರು ಕಾಣಲಿಲ್ಲ. ವೆಂಕಟರಮಣ, ಮಲ್ಲಿಕಾರ್ಜುನ, ಕಾಶೀ ವಿಶ್ವನಾಥ ಕಾಣಲಿಲ್ಲ. ಭಾವದಿಂದ ಕೈ ಮುಗಿಯಲಿಲ್ಲ. ಕಲ್ಲು ನೋಡಿದಾಗ ಕಣ್ಣು ಕ್ರೈಸ್ತ, ಮುಸಲ್ಮಾನ, ಹಿಂದೂ ಆಗಲಿಲ್ಲ. ಗಂಡು ದೇವರು ಹೆಣ್ಣು ದೇವರುಗಳ ಸೂತಕದ ಛಾಯೆ ಕಣ್ಣಲ್ಲಿ ಮೂಡಲಿಲ್ಲ. ಅಂಬೇಡ್ಕರ, ವಾಲ್ಮೀಕಿ, ಗಾಂಧೀ ಕಾಣಲಿಲ್ಲ. ಕೆತ್ತುವ ಮುನ್ನ ಕಲ್ಲು ಕಲ್ಲಾಗಿಯೇ ಕಣ್ಣಿಗೆ ಕಂಡಿತು. ಬಾಯಿ ತಂತಾನೆ ಸೂತಕವಿಲ್ಲದೆ ಕಲ್ಲು ಎಂದು ನುಡಿಯಿತು. ಕಲ್ಲನ್ನು ಭಾವದಿಂದ ಗೌರವಿಸಲಿಲ್ಲ. ಪೂಜಿಸಲಿಲ್ಲ. ಆರಾಧಿಸಲಿಲ್ಲ.

ಕಲ್ಲನ್ನೇ ದೇವರೆಂದು ತಿಳಿದು ಆಲಯ ನಿರ್ಮಿಸಲಿಲ್ಲ. ಪ್ರಾಣ ಪ್ರತಿಷ್ಠಾನದ ಗೊಡವೆಗೆ ಹೋಗಲಿಲ್ಲ. ಕಲ್ಲು ನೋಡಿದಾಗ ಕಣ್ಣಲ್ಲಿ, ಬಾಯಲ್ಲಿ, ದೇಹದಲ್ಲಿ ಯಾವುದೇ ರಸಾಯನಿಕ ಕ್ರಿಯೆ ಸೃಷ್ಠಿಯಾಗಲಿಲ್ಲ. ಸಕಲ ದೇಹಗಳು ಸಹಜ ಕ್ರಿಯೆಯಿಂದ ಸಂತರಾಗಿದ್ದವು.

ಕಲ್ಲಿನಲ್ಲಿ ಕ್ರಿಷ್ಣನ ರೂಪ ಕೆತ್ತಿದರೆ ಸಾಕು ಕಲ್ಲೇ ಕ್ರಿಷ್ಣನಾಯಿತು. ಕಲ್ಲೇ ಕ್ರಿಸ್ತನಾಯಿತು. ಕಲ್ಲೇ ಮಕ್ಕಾ ಮಸೀದೆಯಾಯಿತು. ಕಲ್ಲೇ ವೆಂಕಟರಮಣ ಪದ್ಮಾವತಿಯಾಯಿತು. ಕಲ್ಲೇ ಪಾರ್ವತಿ ಪರಮೇಶ್ವರನಾಯಿತು. ಮಂದಿರ ಮಸೀದೆ, ಚರ್ಚ್ ಆಯಿತು. ಗಾಂಧಿ, ಅಂಬೇಡ್ಕರ್, ವಾಲ್ಮೀಕಿಯಾಯಿತು. ಬಸವಣ್ಣ, ಕನಕ ಪುರಂದರನಾಯಿತು. ಬೃಂದಾವನವಾಯಿತು. ಶರಣ ಸಂತರ ಸಮಾಧಿಯಾಯಿತು. ಕಲ್ಲು ಹೆಣ್ಣು ದೇವರು ಗಂಡು ದೇವರಾಯಿತು. ಕಲ್ಲು ಒಂದೇ. ಆ ಒಂದು ಕಲ್ಲು ಸಕಲ ದೇಹಗಳಲ್ಲಿ ಸೂತಕದ ಛಾಯೆಯನ್ನು ಮೂಡಿಸಿತು. ಕಲ್ಲು ನೋಡಿದರೆ ಸೂತಕವಿಲ್ಲ. ಕೆತ್ತಿದ ಕಲ್ಲು ಕಂಡರೆ ಸಾಕು ಸೂತಕ ಆವರಿಸಿ, ಭಾವ ದುರ್ಭಾವಗಳು ದೇಹದಲ್ಲಿ ಸೃಷ್ಟಿಯಾಗಿ, ದೇಹ ಸುಳ್ಳು ನರಕ ಯಾತನೆಯನ್ನು ಅನುಭವಿಸುತ್ತದೆ.

ವೆಂಕಟರಮಣನನ್ನು ನೋಡಲು ದೇಹಗಳ ಹಿಂಡೇ ಕಾದಿರುತ್ತವೆ. ಸಾಲು ಸಾಲಾಗಿ ನಿಂತು ಹಣ ಕೊಟ್ಟು ದರ್ಶನ ಪಡೆಯುತ್ತವೆ. ದೇವರೆಂದರೆ ಸತ್ಯ . ಸತ್ಯ ದರುಶನಕ್ಕೆ ಹೋದ ದೇಹಗಳಿಗೆ ಸತ್ಯ ಕಾಣುವುದಿಲ್ಲ. ವೆಂಕಟರಮಣ ಮೂರ್ತಿಯಲ್ಲಿ ಸತ್ಯ ಅಡಗಿದೆ. ಆ ಸತ್ಯ ಕಣ್ಣಲ್ಲಿಯೂ ಅಡಗಿದೆ. ಕಣ್ಣಲ್ಲಿ ಅಡಗಿದ ಸತ್ಯ ಕಣ್ಣಲ್ಲೇ ಉಳಿದು ಮೂರ್ತಿ ಸೂತಕವಾಗಿ ಕಣ್ಣನ್ನು ಆವರಿಸಿದೆ. ಹೀಗಾಗಿ ಕಣ್ಣು ಕೆತ್ತಿದ ಮೂರ್ತಿಯನ್ನು ದೇವರೆಂದು ಭಾವಿಸಿದೆ. ದೇವರೆಂದು ನುಡಿಯುತ್ತಾ ನಾಲಿಗೆ ತನ್ನ ಸೂತಕವನ್ನೆ ಹೊರ ಚೆಲ್ಲಿದೆ.

ದೇಹ ಸತ್ಯವನ್ನು ಸಹಜತೆಯನ್ನು ತನ್ನ ಗರ್ಭದಲ್ಲಿ ಮಡಗಿಕೊಂಡು ಸೂತಕವನ್ನು ಆಮಂತ್ರಣ ಮಾಡಿಕೊಂಡಿದೆ. ದೇಹ ಇರುವವರೆಗೂ ಸೂತಕ ಬಿಡದು. ದೇಹ ದೇಹವನ್ನೇ ನೋಡಿಕೊಂಡರೆ ಸೂತಕವಿಲ್ಲ. ಸಹಜ ಸತ್ಯ ಭರಿತವಾಗಿದೆ. ಅದನ್ನು ಬಳಸಿಕೊಳ್ಳಬೇಕು ಅಷ್ಟೆ.

**224**

**ಮಾಯೆಯ ಬಸುರಲ್ಲಿ ಬಂದಾತ ಮಹೇಶ,**
**ದೇವಕಿಯ ಬಸುರಲ್ಲಿ ಬಂದಾತ ವಿಷ್ಣು,**

**ಹೂವಿನ ಬಸುರಲ್ಲಿ ಬಂದಾತ ಬ್ರಹ್ಮ,**
**ಮರುತದೇವಿಯ ಬಸುರಲ್ಲಿ ಬಂದಾತ ಅರುಹ.**
**ಇವರು ದೇವರೆಂದು ನಂಬಿ ಪೂಜಿಸಿದಡೆ ಭವ ಅಳಿಯದು,**
**ಮುಕ್ತಿಯಾಗದೆಂದಾತನಂಬಿಗ ಚೌಡಯ್ಯ .**

ಮಹೇಶ, ವಿಷ್ಣು, ಬ್ರಹ್ಮ ಮುಂತಾದ ದೇವರೆಲ್ಲ ಆಯಾ ಬಸುರಲ್ಲಿ ಬಂದವರೇ ಆಗಿದ್ದಾರೆ. ಅವರನ್ನು ದೇವರೆಂದು ಪೂಜಿಸಿದರೆ ಜನನ ಮರಣಗಳ ಬಾಧೆ ಅಳಿಯದು. ಮುಕ್ತಿ ಕೂಡಾ ಆಗದು.

ಅಂಗದಲ್ಲಿ ಅರಿವು ಇದೆ. ಮರೆವು ಕೂಡಾ ಅಂಗದಲ್ಲಿಯೇ ಮನೆ ಮಾಡಿಕೊಂಡಿದೆ. ಅಂಗಕ್ಕೆ ಅಂಟಿದ ರೋಗವನ್ನು ಅಂಗದಿಂದಲೇ ಅಂಗದ ಅರಿವಿನಿಂದಲೇ ತಿಳಿದುಕೊಳ್ಳಬೇಕು. ಬದಲಾಗಿ ಮಹೇಶ ವಿಷ್ಣು ಬ್ರಹ್ಮನನ್ನು ಪೂಜಿಸಿದರೆ ಅಂಗಕ್ಕೆ ಅಂಟಿಕೊಂಡ ಅಜ್ಞಾನದ ರೋಗ ತೊಲಗದು.

ಅಂಗ ಅಂಗದ ಅಜ್ಞಾನದಿಂದಲೇ ತನ್ನನ್ನು ತಾನು ಬಂಧಿಸಿಕೊಂಡಿದೆ. ಅಂಗದಲ್ಲಿ ಸಂಗಮವಾದ ಅರಿವನ್ನು ನೋಡಿ ಆ ಅರಿವಿನಿಂದಲೇ ಅಂಗಕ್ಕಂಟಿದ ಅಜ್ಞಾನದ ರೋಗ ಕಳೆದುಕೊಂಡು ಮುಕ್ತನಾಗಬೇಕು.

ಕಲ್ಲಿನಲ್ಲಿ ಮಹೇಶ ವಿಷ್ಣು ಬ್ರಹ್ಮನನ್ನು ಕೆತ್ತಿ ಹಗಲಿರುಳೆನ್ನದೆ ಪೂಜಿಸಿದಡೂ ಕಲ್ಲಿನ ರೂಪ ದಲ್ಲಿದ್ದ ಮಹೇಶ ವಿಷ್ಣು ಬ್ರಹ್ಮನಾಗಿ ಪ್ರಕಟಗೊಂಡು ಅಂಗವನ್ನು ಮುಕ್ತರನ್ನಾಗಿ ಮಾಡರು. ಬದಲಾಗಿ ಅಂಗಕ್ಕೆ ಪೂಜಿಸುವುದೊಂದು ರೋಗವಾಗಿ ಹಿಡಿಯುವುದು. ಮಹೇಶ ಬ್ರಹ್ಮ ವಿಷ್ಣು ಎಂಬ ಹೆಸರನ್ನು ಆ ರೂಪಗಳು ಪಡೆದರೇನಾಯಿತು. ಆ ಮೂರು ರೂಪಗಳ ಸ್ವರೂಪ ಕಲ್ಲಲ್ಲವೆ? ಕಲ್ಲನ್ನು ಕಲ್ಲೆಂದು ತಿಳಿಯದಿರುವುದು ಬಂಧನ. ಕಲ್ಲನ್ನು ಕಲ್ಲೆಂದು ತಿಳಿಯುವುದೇ ಮುಕ್ತಿ . ಮುಕ್ತಿ ಬಂಧನವೆಂಬ ರೋಗವನ್ನು ತಾನೇ ಹೇರಿಕೊಂಡು ತಾನೇ ಬಳಲುತ್ತಿದ್ದಾನೆ. ತಾನೇ ಅರಿವಿನಿಂದ ತಿಳಿದರೆ ಮುಕ್ತನಾಗುತ್ತಾನೆ.

**225**

**ಮೂರುವ ಮುಟ್ಟಿದೆ, ನಾಲ್ಕುವನಂಟಿದೆ,**
**ಅಯ್ದುವನೆಯ್ದಲುಬೇಡ ಕಂಡಾ.**
**ಆರುವ ಜಾಳಿಸಿ, ಏಳುವ ಹಿಡಿಯದೆ,**
**ಎಂಟುವ ಗಂಟಿಕ್ಕಬೇಡ ಕಂಡಾ.**
**ಒಂಬತ್ತು ಬಾಗಿಲ ಹಿಂದಿಕ್ಕಿ ಹೋದಡೆ,**
**ಅಂಬಿಗ ಚೌಡಯ್ಯನ ಉಪದೇಶವಯ್ಯಾ.**

ಸಾತ್ವಿಕ ರಾಜಸ ತಾಮಸ ಗುಣಗಳಿಂದ ಅಂಗ ಪ್ರಕಟಗೊಳ್ಳುತ್ತದೆ. ಈ ಮೂರು ಗುಣಗಳಿಲ್ಲದ ಅಂಗ ಜಗದಲ್ಲಿ ಇಲ್ಲವೇ ಇಲ್ಲ ಎನ್ನಬಹುದು. ಈ ಮೂರೂ ಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾದ ಅಂಗ ಅಲ್ಲೊಂದು ಇಲ್ಲೊಂದು ಬೆರಳೆಣಿಕೆಯಲ್ಲಿ ದೊರೆಯುತ್ತವೆ.

ನಿರ್ಗುಣಿ ಅಂಗವನ್ನು ಮೂರೂ ಗುಣಭರಿತ ಅಂಗಗಳು ನೋಡಲು ಸಾಧ್ಯವಿಲ್ಲ. ನಿರ್ಗುಣಿ ಅಂಗ ರಾಜಸ ಅಂಗಕ್ಕೆ ಕಾಣುವುದಿಲ್ಲ. ತಾಮಸ ಅಂಗಕ್ಕೂ ಕಾಣುವುದಿಲ್ಲ. ಸಾತ್ವಿಕ

ಅಂಗಕ್ಕೂ ಕಾಣುವುದಿಲ್ಲ. ಮೂರೂ ಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾಗುವ ಬಯಕೆ ಹೊಂದಿದ ಅಂಗಕ್ಕೆ ಮಾತ್ರ ನಿರ್ಗುಣಿ ಅಂಗ ಕಾಣುತ್ತದೆ.

ಮೂರು ಗುಣಗಳನ್ನು ಮುಟ್ಟುವುದು ಸುಲಭ. ಅದು ಹುಟ್ಟಿನೊಂದಿಗೆ ಬಂದಿದೆ. ಈ ಮೂರೂ ಗುಣಗಳ ಹಿಂದೆಯೇ ನಿರ್ಗುಣ ಭರಿತವಾಗಿದೆ. ಈ ಮೂರೂ ಗುಣಗಳು ನಿರ್ಗುಣಕ್ಕೆ ಭಕ್ತಿ ಮಾಡಿದಾಗ ಗುಣಗಳು ಅಳಿದು ನಿರ್ಗುಣಿಯಾಗುತ್ತದೆ.

ಅಂಗದಲ್ಲಿ ಐದು ಜ್ಞಾನೇಂದ್ರಿಯಗಳಿವೆ. ಕರ್ಮೇಂದ್ರಿಯಗಳಿಂದಾಗಿ ಜ್ಞಾನೇಂದ್ರಿಯಗಳೆನ್ನಿಸಿಕೊಂಡ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಹಾದಿ ತಪ್ಪಿವೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳಿಗೆ ಬಲಿಯಾಗಿವೆ. ಹೀಗಾಗಿ ಅಂಗ ಸಪ್ತ ವ್ಯಸನಗಳಿಗೆ ಬಲಿಯಾಗಿದೆ. ಅಷ್ಟ ಮದಗಳಿಂದ ಕೊಬ್ಬಿ ಮದ್ದಾನೆಯಂತೆ ಆಗಿದೆ.

ಅಂಗವೆಂಬ ಮನೆಗೆ ನೋಡುವ ಎರಡು ಬಾಗಿಲುಗಳು ಇವೆ. ಕೇಳುವ ಎರಡು ಬಾಗಿಲುಗಳು ಇವೆ. ಗಾಳಿ ನುಗ್ಗಿ ಹೊರ ಬರುವ ಎರಡು ಬಾಗಿಲುಗಳಿವೆ. ಹೊಕ್ಕಳ ಬಳ್ಳಿ ಎನ್ನಿಸಿಕೊಂಡ ಬ್ರಹ್ಮನು ಹುಟ್ಟಿದ ಬಾಗಿಲು ಒಂದಿದೆ. ಅಂಗಕ್ಕೆ ಜನ್ಮಕೊಡುವ ದಿವ್ಯಾಂಗದ ಒಂದು ಬಾಗಿಲು ಇದೆ. ಮೃಷ್ಟಾನ್ನ ವನ್ನು ಉಂಡು ಮೃಷ್ಟಾನ್ನವನ್ನೇ ಹೊರಹಾಕುವ ಬಾಗಿಲು ಒಂದಿದೆ. ಹೀಗೆ ಒಂಬತ್ತು ಬಾಗಿಲನ್ನು ಹಿಂದೆ ಹಾಕಿ ಒಳಗೆ ನುಗ್ಗಿದಾಗ ಲಿಂಗಾಂಗದ ದರ್ಶನವಾಗುತ್ತದೆ. ಆ ಅಂಗದಲ್ಲಿ ಅಂಬಿಗರ ಚೌಡಯ್ಯ ವಾಸವಾಗಿದ್ದಾನೆ. ಆತನ ಉಪದೇಶ ಆಲಿಸಿದಾಗ ಅಂಗ ಲಿಂಗಾಂಗವೇ ಆಗುತ್ತದೆ.

**226**

**ಮೂರು ಸ್ಥಲದ ಮೂಲವನರಿಯರು,**
**ಪುಣ್ಯ ಪಾಪವೆಂಬ ವಿವರನರಿಯರು.**
**ಇಹಪರವನರಿಯದೆ ಚರ್ಮದ ಬೊಂಬೆಯ ಮೆಚ್ಚಿ**
**ಉಚ್ಚೆಯ ಬಚ್ಚಲಲ್ಲಿ ಬಿದ್ದಿರ್ಪ**
**ಕರ್ಮದ ಸುನಿಗಳನೆಂತು ದೇವರೆಂಬೆನಯ್ಯಾ ?**
**ಹೊನ್ನು ವಸ್ತ್ರವ ಕೊಡುವವನ ಬಾಗಿಲ ಕಾಯ್ವ**
**ಪಶು ಪ್ರಾಣಿಗಳಿಗೆ ದೇವರೆನ್ನಬಹುದೇನಯ್ಯಾ ?**
**ಜಗದ ಕರ್ತನಂತೆ ವೇಷವ ಧರಿಸಿಕೊಂಡು ಸರ್ವವನು ಬೇಡಲಿಕೆ**
**ಕೊಟ್ಟರೆ ಒಳ್ಳಿದನು, ಕೊಡದೆ ಇದ್ದರೆ**
**ಪಾಪಿ, ಚಾಂಡಾಲ, ಅನಾಚಾರಿ ಎಂದು ದೂಷಿಸಿ**
**ಒಳ ಹೊರಗೆಂದು ಬೊಗಳುವ ಮೂಳ ಮಾನವರಿಗೆ**
**ಮಹಾಂತಿನ ಆಚರಣೆ ಎಲ್ಲಿಯದೊ?**
**ಇಲ್ಲವೆಂದಾತ ನಮ್ಮಂಬಿಗರ ಚೌಡಯ್ಯ .**

ದೇಹದಲ್ಲಿ ವಿಚಿತ್ರವಾದ ಸತ್ಯ ಅಡಗಿದೆ. ಅದನ್ನು ಶ್ರೀ ಕ್ರಿಷ್ಣ ವಿರಾಟ ಸ್ವರೂಪವೆಂದ. ಸಂತ ಪೈಗಂಬರರು 'ಅಲ್ಲಾ' ಎಂದರು. ಏಸು ಕ್ರಿಸ್ತ 'ದೇವರು' ಎಂದ. ಇವರೆಲ್ಲರಿಗಿಂತ ಮುನ್ನಿನವರು 'ಶಿವ' 'ಈಶ್ವರ' 'ಪರಮಪಿತ ಪರಮೇಶ್ವರ' ಎಂದು ನಾನಾ ಹೆಸರಿನಿಂದ ಕರೆದರು.

ದೇಹದಲ್ಲಿ ಅಡಗಿದ್ದು, ದೇಹದ ತುಂಬಾ ವ್ಯಾಪಿಸಿದ್ದು, ದೇಹಕ್ಕೆ ತಾಗದಂತೆ ದೇಹವನ್ನು ಬೆಳಗುವ ಆ ಸತ್ಯ ವಸ್ತುವನ್ನು ದೇಹವೇ ಕಂಡುಕೊಳ್ಳಬೇಕು. ಆ ಪರಮಪಿತ ಪರಮಾತ್ಮನಾದ ಅಲ್ಲಾನನ್ನು ಹೇಗೆ ಕಂಡುಕೊಳ್ಳಬೇಕೆಂದು ಕುರಾನ್‌ನಲ್ಲಿ ಬರೆದುರು ; ಬರೆಯಿಸಿದರು ಸಂತ ಪೈಗಂಬರರು.

ಹಾಗಯೇ ಏಸು ಕ್ರಿಸ್ತ ಕೂಡಾ ಆ ಸತ್ಯವನ್ನು, ಪರಮಪಿತ ಪರಮಾತ್ಮನನ್ನು , ಆ ದೇವರನ್ನು ಕಂಡುಕೊಂಡರು. ಸಕಲರೂ ಕಂಡುಕೊಳ್ಳುವ ಬಗೆಯನ್ನು ಬೈಬಲ್‌ನಲ್ಲಿ ಸೂತ್ರರೂಪದ ಮೂಲಕ ಬರೆದರು.

ದೇಹ ಎನ್ನುವುದು ಚಕ್ರವ್ಯೂಹದ ಕೋಟೆ. ಅದನ್ನು ಭೇದಿಸಿಯೇ ಒಳಹೋಗಿ ಪರಮಪಿತ ಪರಮಾತ್ಮನಾದ ಶಿವನನ್ನು ಕಂಡುಕೊಂಡು ವಿರಾಟ ಸ್ವರೂಪಿಯೇ ತಾನಾಗಬೇಕೆಂದು ಶ್ರೀಕೃಷ್ಣ ಹೇಳಿದರು. ಆ ಭಗವಂತನ ಮೂಲಕವೇ ತಾವು ನುಡಿದರು. ಆ ನುಡಿಯ ಜಾಡನ್ನು ಹಿಡಿದು ಒಳ ಹೋಗುವ ಸೂತ್ರವನ್ನು ರಚಿಸಿದರು. ಅದೇ ಒಡಲ ಗೀತೆಯಾಯಿತು. ಒಡಲನ್ನು ಬೆಳಗುವ ಒಡಲೊಳಗೆ ಇರುವ ಭಗವಂತನ ಗೀತೆಯಾಯಿತು; ಭಗವದ್ಗೀತೆಯಾಯಿತು.

ಒಡಲು ಒಂದಲ್ಲ; ಎರಡೂ ಅಲ್ಲ; ಮೂರು ಒಡಲುಗಳಿವೆ. ಆ ಮೂರು ಒಡಲುಗಳು ಕೂಡಿ ಒಂದೇ ಆಗಿದೆ. ಆ ಒಡಲಿಗೆ ಒಡಲು ಹೆಣ್ಣಾಗಿ ಗಂಡಾಗಿ ಕಾಣುತ್ತದೆ. ಒಡಲೊಳಗೇ ಇರುವ ಇನ್ನೆರಡು ಒಡಲುಗಳನ್ನು ಒಡಲು ಅರಿಯುವುದೇ ಇಲ್ಲ.

ಒಂದು ದೇವನ ಒಡಲು. ಆ ದೇವನ ಒಡಲಿಗೆ ವಾಸ ಸ್ಥಾನವಾದ ಮತ್ತೊಂದು ಒಡಲು. ದೇವನ ಒಡಲು ಕಾಣದಂತೆ, ಒಡಲನ್ನೇ ಆವರಿಸಿಕೊಂಡ ಮತ್ತೊಂದು ಒಡಲು. ಇದನ್ನು ಸೂಕ್ಷ್ಮ ಒಡಲು ಎಂದು ಕರೆಯುತ್ತಾರೆ.

ಸ್ಥೂಲಕಾಯ, ಸೂಕ್ಷ್ಮಕಾಯ, ಕಾರಣ ಕಾಯವೆಂದು ಕಾಯದಲ್ಲಿ ಮೂರು ಕಾಯಗಳಿವೆ.

ಸ್ಥೂಲ ಕಾಯವನ್ನು ಉಪಕರಣ ಮಾಡಿಕೊಂಡು ಸೂಕ್ಷ್ಮ ಕಾಯ ಸ್ಥೂಲಕಾಯವನ್ನು ಆವರಿಸಿಕೊಂಡಿದೆ. ಸ್ಥೂಲಕಾಯದಲ್ಲಿ ಪರಮಪಿತ ಪರಮಾತ್ಮನು ಕಾರಣಕಾಯವೆಂಬ ಹೆಸರಿನ ಮೂಲಕ ಸಂಗಮಗೊಂಡಿದ್ದಾನೆ. ಅಂದಮೇಲೆ ಕಾಯ ಆತನದೇ ಆಯಿತು, ಆ ಪರಮಪಿತ ಪರಮಾತ್ಮ ತನಗೆ ಕಾಣದಂತೆ ಆತನನ್ನು; ಆತನನ್ನು ಕಾಣುವ ತನ್ನನ್ನು ಮನೋಕಾಯವೆಂಬ ಮಾಯೆ ಆವರಿಸಿಕೊಂಡಿದೆ.

ಮನವೆಂಬ ಮಾಯೆ ಸ್ಥೂಲಕಾಯವನ್ನು ಹಿಡಿದು ಪುಣ್ಯವನ್ನು ಆಚರಿಸುತ್ತದೆ. ಆದರೆ ಪುಣ್ಯವೆಂದರೇನೆಂದು ಅದಕ್ಕೆ ಗೊತ್ತಿಲ್ಲ. ಪಾಪವನ್ನು ಆಚರಿಸುತ್ತದೆ ಆದರೆ ಪಾಪವೆಂದರೇನೆಂದು ಅದಕ್ಕೆ ಗೊತ್ತಿಲ್ಲ. ಮಾಯೆ ತನ್ನ ಸುಖಕ್ಕಾಗಿ ಕಾಯವನ್ನು ಹಿಡಿದು ಪುಣ್ಯವನ್ನು ಮಾಡುತ್ತದೆ. ಪಾಪವನ್ನು ಮಾಡುತ್ತದೆ.

ತಾನೊಂದು ಕಾಯವಾದರೂ ಕಾಯ ಕಾಯವನ್ನು ಅರಿಯುತ್ತಿಲ್ಲ. ಕಾಯವನ್ನು ಅರಿಯದೆ ಕಾಯಕ್ಕೆ ಪುಣ್ಯ ಮಾಡುತ್ತದೆ. ಕಾಯಕ್ಕೆ ಪಾಪವನ್ನು ಎಸಗುತ್ತದೆ. ಕಾಯ ತನ್ನದಾದರೇನು ಅನ್ಯದ್ದಾದರೇನು? ಕಾಯ ಕಾಯವಲ್ಲವೆ? ಕಾಯ ಚರ್ಮದ ಬೊಂಬೆ. ತಾನು ಕೂಡಾ ಚರ್ಮದ ಬೊಂಬೆಯಾಗಿದ್ದು; ಚರ್ಮಕ್ಕೆ ಮೆಚ್ಚಿಕೊಂಡು, ಅದೊಂದು ಉಚ್ಚೆಯ ಬಚ್ಚಲೆಂದು ತಿಳಿಯದೆ ನಾಯಿಯಂತೆ ಎರಗುತ್ತದೆ. ತನ್ನ ರಕ್ತ ತಾನೇ ಸವಿಯುತ್ತ ಸುಖಿಸುತ್ತದೆ.

ಕಾಯಕ್ಕೆ ಕಾವಿ ಧರಿಸಿ ಗುರುವಾಗುತ್ತದೆ. ಕಾಯ ಕಾಯವನ್ನೇ ಬೇಡಿ ಹೊನ್ನು ವಸ್ತ್ರ

ಪಡೆಯುತ್ತದೆ. ಕಾಯ ಕಾಯದ ಬಾಗಿಲ ಕಾಯ್ದು ಕಾಯವನ್ನೇ ಆಶೀರ್ವದಿಸುತ್ತದೆ. ಹೀಗೆ ಬಾಗಿಲ ಕಾಯ್ವ ಪಶು ಪ್ರಾಣಿಗಳಿಗೆ ದೇವರೆನ್ನಬಹುದೆ?

ಕೊಟ್ಟರೆ ಒಳ್ಳೆಯವನು, ಕೊಡದಿದ್ದರೆ ಕೆಟ್ಟವನು. ಪಾಪಿ, ಚಾಂಡಾಲ, ಅನಾಚಾರಿ ಎಂದು ದೂಷಣೆ ಮಾಡಿ ಕಾಯವೇ ಕಾಯವನ್ನು ಶಪಿಸುತ್ತದೆ. ಕಾಯವನ್ನು ಅರಿಯದ ಕಾಯವನ್ನು ಕಾಯವೆನ್ನಬಹುದೆ? ಕಾಯದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನನ್ನು ಅರಿಯದ ಕಾಯವನ್ನು ಕಾಯವೆನ್ನಬಹುದೆ? ಕಾಯವೇ ಕಾಯವನ್ನು ಭೇದಿಸಿ, ಕೈಲಾಸದ ಅರಿವಿನ ಕಾಯದಲ್ಲಿ ಸಂಗಮವಾದ ಕಾಯವೇ ಕಾಯ. ಅದು ಬರೀ ಕಾಯವಲ್ಲ ಅಕಾಯದ ಕಾಯ!

227

**ಮೃಡನನೊಲಿಸಿಹೆನೆಂದು ನುಡಿವ ನಾಲಗೆಯೆಡಹಿತೆಯಲ್ಲಿ ಕಲ್ಲು ಕೊರಡೆ?**
**ಒಡಲಿಂಗೆ ಹೊನ್ನು ಹೆಣ್ಣು ಮಣ್ಣು ಅಡ್ಡ ಬಿದ್ದು ಕೊಲುವಾಗ,**
**ನಡೆವ ಗಂಡುರುಂಟೆ? ಶಿವಪಥಕ್ಕೆ?**
**ತನ್ನೊಡಲೊಳಗಣ್ಣವು ಮರಳಿದೆಡೆಗೆ ಹೇಸುವಂತೆ ಹೇಸಿ ಬಿಟ್ಟಡೆ**
**ನಡೆದು ಶಿವನ ಕೂಡುವನೆಂದಾತ ನಂಬಿಗ ಚೌಡಯ್ಯ.**

ತನುವಿನ ದೈನಂದಿನ ಚಟುವಟಿಕೆ ಹೇಸುವಂತಹದ್ದು. ಮನುಷ್ಯನನ್ನೊಂದು ಬಿಟ್ಟು ಗಿಡ ಮರ ಬಳ್ಳಿ ಪ್ರಾಣಿ ಪಶು ಪಕ್ಷಿ, ಸಹಜ. ತನುವೊಂದೆ ಅಸಹಜ! ಏಕೆಂದರೆ ತನುವಿನಲ್ಲಿ ಮನ ಬೆರೆತಿದೆ. ಮನವೆಂದರೆ ಕತ್ತಲು. ಕತ್ತಲಲ್ಲಿ ಏನೂ ಕಾಣುವುದಿಲ್ಲ. ಕತ್ತಲು ಬೆಳಕಿನ ಕತೆ ಹೇಳಿದರೆ ಬೆಳಗಾಗುವುದಿಲ್ಲ.

ಮನ ತನುವಿನ ಶತೃ. ತನು ಹಿಡಿದ ಮನ, ತನುವಿಗೆ ಕಾವಿ ತೊಡಿಸಿ, ತನ್ನಂತೆ ಇರುವ ತನುವಿಗೆ, ತಾನು ದೈವ ಸ್ವರೂಪನೆಂದು, ಗುರುವೆಂದು ಸರ್ವ ಸಂಗ ಪರಿತ್ಯಾಗಿ ಎಂದು ಶಿವನ ಸ್ವಸ್ವರೂಪವೆಂದು ಶಿಷ್ಯನನ್ನು ಅಂಗಲಾಚಿ ಬೇಡುವಂತೆ ಮಾಡುತ್ತದೆ ಗುರು ವೇಷದ ತನುವಿನ ಮನ. ಗುರು ಬೇಡಿದ ಭೂಮಿ, ವಾಹನ, ಆಭರಣ, ಹಣ, ದ್ರವ್ಯಗಳನ್ನು ಕೊಡುವಂತೆ ಮಾಡುತ್ತದೆ ಶಿಷ್ಯ ತನುವನ್ನು ಹೊದ್ದಮನ. ಗುರುಶಿಷ್ಯನ ವೇಷ ಬೇರೆ ಬೇರೆಯಾದರೂ ತನುವೊಂದೇ. ಸರ್ವಸಂಗ ಪರಿತ್ಯಾಗಿಯೆಂದು ನುಡಿದ ಗುರುವಿನ ನಾಲಿಗೆ ಶಿಷ್ಯನನ್ನು ಬೇಡಿ ಎಡುವುವಂತೆ ಮಾಡುತ್ತದೆ. ಸರ್ವ ಸಂಗ ಪರಿತ್ಯಾಗಿ ಎನ್ನುವ ಪದ ಕೇಳಿಯೂ ಕೊಡುವಂತೆ ಪ್ರೇರೇಪಿಸುತ್ತದೆ ಶಿಷ್ಯ ತನುವಿನ ಮನ.

ಇಲ್ಲಿ ಗುರು-ಶಿಷ್ಯ ವೇಷದ ತನುವಿನ ನಾಲಿಗೆಗಳೆರಡೂ ಎಡವಿದವು. ನುಡಿವ ನಾಲಿಗೆ ಎಡಹಿದಲ್ಲಿ ಅದು ಕಲ್ಲು ಕೊರಡೆ ? ಎಂದು ಪ್ರಶ್ನಿಸುತ್ತಾರೆ ಶರಣ ಚೌಡಯ್ಯನವರು.

ಮನವೆಂಬ ಹೇಸಿಗೆ, ತನುವಿನ ನಾಲಿಗೆಯಲ್ಲಿ ಕಿವಿಯಲ್ಲಿ ತುಂಬಿರುವುದರಿಂದ ನುಡಿದ ನುಡಿ ಅರಿವಿಗೆ ಬಂದರೂ, ನುಡಿದಂತೆ ನಡೆಯದಿರುವುದು ಮನಕ್ಕೆ ಸುಖವೆನಿಸುತ್ತದೆ. ಕೇಳಿದ ಕಿವಿಗೆ ಅರಿವಿಗೆ ಬಂದರೂ ಕೇಳಿದಂತೆ ನಡೆಯದಿರುವುದೇ ಮನಕ್ಕೆ ಹಿತವೆನಿಸುತ್ತದೆ. ಮನವೆಂಬ ಹೇಸಿಗೆ ತನುವಿನಲ್ಲಿ ಆವರಿಸಿ, ಹೇಸುವಂತೆ ಮಾಡುತ್ತದೆ. ಹೊನ್ನು ಹೆಣ್ಣು ಮಣ್ಣಿಗೆ ಒಡಲು ಸೆರೆಯಾಳಾಗುವಂತೆ ಅವುಗಳನ್ನು ಸಂಗ್ರಹಿಸಿ ಸುಖಿಸುವಂತೆ ಮಾಡುತ್ತದೆ. ಮನ ಒಂದು ತನುವನ್ನು

ಸಂಗ್ರಹಿಸಿ ಸುಖಿಸುವಂತೆ, ಮತ್ತೊಂದು ತನುವನ್ನು ದೋಚಿ ಸುಖಿಸುವಂತೆ ಮಾಡುತ್ತದೆ. ಹೊನ್ನು, ಮಣ್ಣು, ಹೆಣ್ಣ(ವಿಷಯ)ನ್ನು, ಮನ ತನುವಿನೊಂದಿಗೆ ಸುಖಿಸುವಾಗ, ಅಡ್ಡಿ ಪಡಿಸುವ ತನುವನ್ನು ಕೊಲ್ಲುವಂತೆ ಮಾಡುತ್ತದೆ. ತನುವನ್ನು ತನುವು ಕೊಲ್ಲುವುದೆ? ಹೊನ್ನು, ಹೆಣ್ಣು (ವಿಷಯ) ಮಣ್ಣು ನೋಡುವ ಕಣ್ಣಿನಲ್ಲಿ ಅದೆಂತಹ ಸುಖದ ನಂಜು ತುಂಬಿದೆ? ನೋಡುವ ಶಕ್ತಿಯುಳ್ಳ ಕಣ್ಣಿಗೆ ತನ್ನ ಅರಿವೇ ತನಗೆ ಮರುವಾಯಿತೆ? ಇದನ್ನು ಮೆಟ್ಟಿ ನಿಲ್ಲುವ ಗಂಡೆದೆ ಭೂಪರುಂಟೆ? ತನುವನ್ನು ಆವರಿಸಿದ ಹೇಸಿ ಮನ ಕಳೆಯುವುದು ಜಟಿಲವೇ? ಇದ್ದ ಅರಿವಿನೊಂದಿಗೆ ಕೂಡುವುದು ಜಟಿಲವೇ? ಹೀಗೆ ನಿರ್ಣಯವಿಲ್ಲದೆ ತನುವಿನ ಅವಧಿ ವ್ಯರ್ಥ ಮುಗಿಯುತ್ತಲಿರುವುದರ ಚಿಂತನ ಚೌಡಯ್ಯ ಶರಣರದು.

ತನುವಿಗೆ ಹಸಿವೆಯಾದಾಗ ತಟ್ಟೆಯಲ್ಲಿದ್ದ ಬಿಸಿ ಬಿಸಿ ಆಹಾರವನ್ನು ಕಣ್ಣು ಅರಳಿಸಿ ನೋಡುತ್ತದೆ. ಮೂಗು ಅದರ ಪರಿಮಳವನ್ನು ಆನಂದದಿಂದ ಅನುಭವಿಸುತ್ತದೆ. ಕಿವಿ ಒಂದೊಂದು ಪದಾರ್ಥದ ಶಬ್ದ ಕೇಳಿ ಸುಖಿಸುತ್ತದೆ. ಚರ್ಮ ತನ್ನ ಬೆರಳುಗಳಿಂದ ಸ್ಪರ್ಶಿಸಿ ಸುಖಪಡುತ್ತದೆ. ನಾಲಿಗೆ ರುಚಿಸಿ ಆನಂದದಿಂದ ಮೆದ್ದು ಒಡಲೊಳಗೆ ಕಳಿಸುತ್ತದೆ. ಇದು ಮನದ ಕ್ರಿಯೆ. ಮನದ ಸುಖದ ಕ್ರಿಯೆ.

ಒಡಲೊಳಗಿಳಿದ ಗರಿಗರಿ ಪದಾರ್ಥ, ಮಲವಾಗಿ ಮರಳಿದಾಗ, ಕಣ್ಣು ಹೇಸುತ್ತದೆ. ರುಚಿಸಿದ ನಾಲಿಗೆಗೆ ವಾಕರಿಕೆಯಾಗುತ್ತದೆ. ಚರ್ಮ ಮುಟ್ಟುವುದೂ ಇಲ್ಲ. ಕಿವಿಗೆ ತನುವಿನ ಹೂಸಿನ ಶಬ್ದವೇ ಅಸಹ್ಯವಾಗುತ್ತದೆ. ವಾಸಿಸಿದ ಮೂಗಿಗೂ ಹೇಸಿಗೆಯಾಗುತ್ತದೆ. ಇದು ಕೂಡ ಮನದ ಮತ್ತೊಂದು ಕ್ರಿಯೆ, ಅಸಹ್ಯ ಭರಿತ ಕ್ರಿಯೆ! ಅನ್ನ ನೋಡಿ ಸುಖದಿಂದ ಒಡಲೊಳಗಿಳಿಸಿದ ಮನ, ಒಡಲಿಂದ ಮರಳಿದರೆ ಹೇಸುತ್ತದೆ. ಹೀಗೆ ತನುವಿನಲ್ಲಿ ಮನ ನಂಜಾಗಿ ಸೇರಿ ನಂಜುಂಡನನ್ನೇ ಮರೆತಿದೆ.

ನಂಜಿನಂತಿರುವ ಮನ ಅನ್ನವನ್ನು ಉಣ್ಣುವಂತೆ ಮಾಡಿ, ಮಲವನ್ನು ಹೇಸುವಂತೆ ಮಾಡುತ್ತದೆ. ಅರಿವು, ಅನ್ನವನ್ನು ಅನ್ನದಂತೆ ನೋಡಿತು. ಮಲವನ್ನೂ ಅನ್ನದಂತೆ ನೋಡಿತು. ತಾನು ಉಣ್ಣುವಾಗ ಅನ್ನವಾಯಿತು. ಉಂಡ ಅನ್ನ ಮಲವಾಗಿ ಹೊರಗೆ ಬಂದಾಗ, ತನ್ನಂತೆ ಕಣ್ಣರಳಿಸಿ ಆನಂದದಿಂದ ಉಣ್ಣುವ ಹಂದಿ, ನಾಯಿ, ಹಸು, ನೊಣ ಕೀಟಗಳಿಗೆ ಅನ್ನವಾದು ದನ್ನು ಕಂಡ ಅರಿವು ಮಲವನ್ನು ಬ್ರಹ್ಮವೆಂದು ತಿಳಿಯಿತು. ವಸ್ತುವನ್ನು ಅರಿವಿನಿಂದ ನೋಡಿದರೆ ಮನ ಅರಿವಿನಲ್ಲಿ ಲೀನವಾಗಿ ಅರಿವೇ ತಾನಾಗುವುದು. ಅರಿವೇ ಗುರು, ಮನವೇ ಶಿಷ್ಯ. ಶಿಷ್ಯ ಗುರುವಿನಲ್ಲಿ ಲೀನವಾಗಿ ಗುರುವೇ ತಾನಾದ. ಹೇಸಿ ಬಿಟ್ಟ ತನುವಿನ ಮನ ಅರಿವಿನ ತನುವಾಯಿತು. ಶಿವನ ತನುವಾಯಿತು.

**228**

**ಮೊಟ್ಟೆ ಮೊಟ್ಟೆ ಪತ್ರೆಯ ತಂದು ಒಟ್ಟಿ,**
**ಪೂಜಿಸಿದಡೇನು ಮನ ಶುದ್ಧವಿಲ್ಲದನ್ನಕ್ಕರ ?**
**ಮನ ಮಗ್ನವಾಗಿ ಶಿವಧ್ಯಾನದಲ್ಲಿ ಕೂಡಿ,**
**ಒಂದೇ ದಳವ ಧರಿಸಿದರೆ ಶಿವನು ಒಲಿಯನೆ ?**
**ಇಂತು ಪೂಜೆಯ ಮಾಡುವುದಕ್ಕಿಂತಲು**
**ಅದೇ ತೊಪ್ಪಲನು ಕುದಿಸಿ ಪಾಕವ ಮಾಡಿದಲ್ಲಿ**

**ಆ ಲಿಂಗವು ತೃಪ್ತಿಯಾಯಿತ್ತು .**
**ಬರಿದೆ ಲಿಂಗವ ಪೂಜಿಸಿ ಜಂಗಮಕ್ಕೆ ಅನ್ನವ ಕೊಡದೆ,**
**ಲಿಂಗದ ಮುಖವು ಜಂಗಮವು ಎಂದು ತಿಳಿಯದೆ,**
**ತನು-ಮನ-ಧನವನು ಗುರು-ಲಿಂಗ-ಜಂಗಮಕ್ಕೆ ಸವೆಸದೆ,**
**ಬಾಗಿಲಿಗೆ ಕಾವಲಿಕ್ಕಿ, ಹೆಂಡಿರು ಮಕ್ಕಳು ಕೂತುಕೊಂಡು,**
**ತನ್ನ ತಾನೇ ತಿಂಬುವಂಥ ನೀಚ ಹೊಲೆಯರ ಮೂಗಸವರಿ**
**ಮೆಣಸಿನ ಹಿಟ್ಟು ತುಪ್ಪವ ತುಂಬಿ,**
**ಪಡಿಹಾರಿ ಉತ್ತಣ್ಣಗಳ ಪಾದುಕೆಯಿಂದ ಹೊಡಿ ಎಂದಾತ**
**ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.**

ಅಂಗದಲ್ಲಿಯೇ ಲಿಂಗ ಸಂಗಮವಾಗಿರುವಾಗ ಮೊಟ್ಟೆ ಮೊಟ್ಟೆ ಪತ್ರೆಯ ತರುವುದೇಕೆ ? ಅಂಗೈಯಲ್ಲಿ ಲಿಂಗವಿಟ್ಟುಕೊಂಡು ಪೂಜಿಸುವುದೇಕೆ ? ಹಾಗೆ ಪೂಜಿಸಿದರೆ ಮನ ಶುದ್ಧಿಯಾಗುವುದೆ ? ನೋಡುವ ಕಣ್ಣಿನಲ್ಲಿಯ ರೋಗ ಕಳೆದು ಹೋಗುವುದೆ ? ಚರ್ಮ, ಕಿವಿಯಲ್ಲಿಯ ರೋಗ ಕಳೆದು ಹೋಗುವುದೆ ? ಅದೇ ಪತ್ರೆಯನ್ನು ಕುದಿಸಿ ಪಾಕಮಾಡಿ, ಅರಿವಿನ (ಲಿಂಗ) ಮುಖ ಅಂಗವೆಂದು ತಿಳಿದು ಸ್ವೀಕರಿಸಿದಾಗ ಲಿಂಗಯ್ಯ ತೃಪ್ತನಾಗುವನು.

ಲಿಂಗವೆಂದರೆ ದೇವರಲ್ಲ ; ದೇವರೆನ್ನುವವರು ಯಾರೂ ಇಲ್ಲ. ಅಂಗದಲ್ಲಿ ಸಂಗಮವಾದ ಅರಿವನ್ನೇ ದೇವರೆಂದು, ಲಿಂಗವೆಂದು, ಶಿವನೆಂದು ಹೆಸರಿಟ್ಟು ಕರೆದಿದ್ದಾರೆ. ಆ ಅರಿವನ್ನೇ ತನಗೆ ಪಾಠ ಮಾಡುವ ಗುರುವೆಂದು, ಜಂಗಮವೆಂದು ಕರೆದಿದ್ದಾರೆ. ಆ ಹೆಸರಿನಿಂದ ಕೂಗುವ ದೇವರೆಲ್ಲರನ್ನು ಅಂಗದ ಮುಖಾಂತರವೇ ಕಂಡುಕೊಳ್ಳಬೇಕಾಗಿದೆ. ಹಾಗೆ ಕಂಡುಕೊಂಡವರನ್ನು ಹುಡುಕಿ ಅವರಿಂದ ಮಾರ್ಗದರ್ಶನ ಪಡೆದುಕೊಳ್ಳಬೇಕಿದೆ.

ಹಾಗೆ ಮಾಡದೆ ಲಿಂಗವನ್ನು ಪೂಜಿಸಿ ಲಿಂಗಕ್ಕೆ ಸಮಾನವಾದ ಒಂದಂಗವನ್ನು ಬಾಗಿಲು ಕಾಯಲು ಇಟ್ಟುಕೊಂಡು ಗಂಡ ಹೆಂಡತಿ ಮಕ್ಕಳು ಕೂಡಿಕೊಂಡು ತಮಗೆ ತಾವೇ ಉಂಬುವಂಥವರನ್ನು ಅಂಬಿಗರ ಚೌಡಯ್ಯ ಖಂಡಿಸಿದ್ದಾರೆ.

ಅಂಗದಲ್ಲಿಯೇ ಸಂಗಮವಾದ ಅರಿವಿನ ಶಿಕ್ಷಣ ಅದ್ಭುತವಾದದ್ದು. ಮನ ಶಿಷ್ಯನಾಗಿ, ಅರಿವನ್ನೇ ಗುರುವಾಗಿಸಿಕೊಂಡು, ಅಂಗವನ್ನು ಗುರುಶಿಷ್ಯರಿಬ್ಬರಿಗೆ ಉಪಕರಣವನ್ನಾಗಿಸಿಕೊಂಡು ಆಲಿಸಿದರೆ ಕೂಡಲೇ ದೊರೆಯುವಂಥದ್ದು.

ಇದಕ್ಕೊಂದು ಪದ್ಧತಿಯಿದೆ ; ತಂತ್ರಗಾರಿಕೆಯೂ ಇದೆ. ಆ ಪದ್ಧತಿ ತಂತ್ರಗಾರಿಕೆ ಹಿಡಿದು ಆಲಿಸಿದರೆ ಹಂತ ಹಂತವಾಗಿ ಅಂಗ ಹದಗೊಂಡು ಅರಿವಿನ ಅಂಗವಾಗುತ್ತದೆ ; ಲಿಂಗಾಂಗವಾಗುತ್ತದೆ. ಈ ಸಾಮರಸ್ಯವನ್ನು ಶರಣರು ಬೆಡಗಿನ ಆನಂದದಿಂದ ಸಕಲ ಅಂಗಗಳಿಗೂ ವಚನಗಳ ಮೂಲಕ ಹಂಚಿಕೊಂಡಿದ್ದಾರೆ.

ಶರಣರು ಬರೆದ ಸಕಲ ವಚನಗಳು ಅರಿವಿನ ಮಾರ್ಗ ಸೂಚಿಸುವ ಸೂತ್ರಗಳು. ತನ್ನಲ್ಲಿರುವ ಸತ್ಯವನ್ನು ತಾನೇ ಕಂಡುಕೊಳ್ಳುವ ತಂತ್ರಗಾರಿಕೆಗಳು. ಓದುವಾಗ ಹಾಗೆ ಓದಿದರೆ ಅರಿವಿನ ಆಳಕ್ಕೆ ಹೋಗಿ ಆ ಅರಿವೇ ತಾನಾಗುವ ಸುಳುಹು ತನಗೆ ಸಿಗುತ್ತದೆ.

**229**

**ರತಿಯಿಂದ ರತ್ನ , ಗತಿಯಿಂದ ವಾದ್ಯ ,**
**ಸದ್ಗತಿಯಿಂದ ಮುಕ್ತಿ , ನಿರ್ಗತಿಯಿಂದ ವಿರಕ್ತಿ ,**
**ಈ ನಾಲ್ಕರ ಮತಿಯ ತಿಳಿಯಬೇಕೆಂದನಂಬಿಗ ಚೌಡಯ್ಯ .**

'ಎನ್ನಾಶ್ರಯದ ರತಿ ಸುಖವ ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಿಂದ ಮಾಡಿಸಬಹುದೆ ಅಯ್ಯಾ?' ಬಸವಣ್ಣನವರು ಹಾಕಿದ ಈ ಪ್ರಶ್ನೆಯನ್ನು ಓದುಗ ಹೇಗೇಗೋ ಅರ್ಥೈಸಿಕೊಳ್ಳುತ್ತಾನೆ.

ಅಂಬಿಗರ ಚೌಡಯ್ಯ ಶರಣರು ರತಿಯಿಂದ ಉಂಟಾಗುವ ಸುಖದಿಂದಾಗಿ ರತ್ನ ಲಭ್ಯ ವಾಗುತ್ತದೆ ಎನ್ನುತ್ತಾರೆ.

ಇವರಿಬ್ಬರ ಬೆಡಗಿನ ಈ ಮಾತಿಗೆ ಅಲ್ಲಮಪ್ರಭುಗಳ ಈ ವಚನ ಉತ್ತರವೆನ್ನುವಂತಿದೆ :

'ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ. ಇವು ಜಗಕ್ಕಿಕ್ಕಿದ ವಿಧಿ. ನಿನ್ನದೆಂಬುದು 'ಜ್ಞಾನರತ್ನ 'ಕಾಣಾ. ಅದನ್ನು ಕೆಡಗೊಡದೆ ಅಲಂಕರಿಸಿದೆಯಾದಡೆ 'ನಿನ್ನಂತಹ ಸಿರಿವಂತರು ಯಾರೂ ಇಲ್ಲ ಎಲೆ ಮನವೆ .'

ಎನ್ನಾಶ್ರಯದ ರತಿ ಸುಖದಿಂದ ಜ್ಞಾನ 'ರತ್ನ 'ಲಭ್ಯವಾಗುತ್ತದೆ. ನನ್ನದೇ ಆದ ದೇಹದ ಆಶ್ರಯದಲ್ಲಿ 'ಜ್ಞಾನ 'ವೆಂಬ ಗಂಡನಿದ್ದಾನೆ. ನನ್ನದೇ ಆದ ದೇಹವನ್ನು 'ಮನ' ವೆಂಬ ಹೆಂಡತಿ ಆವರಿಸಿದ್ದಾಳೆ. 'ಮನ'ವೆಂಬ ಹೆಂಡತಿ 'ಜ್ಞಾನ 'ವೆಂಬ ಗಂಡನೊಂದಿಗೆ ಬೆರೆತು ಸುಖಿಸಿದಾಗ ಆ ರತಿ ಸುಖದಿಂದ ಜ್ಞಾನ ಸುಧೆ ಹೊರ ಹೊಮ್ಮುತ್ತದೆ.

'ಎಮ್ಮ ನಲ್ಲನು ಏಕಾಂತಂಬೊಕ್ಕನು ; ಬೇಗ ಬೇಗ ಹೊರ ನಡಿಯಿರಣ್ಣಗಳಿರಾ. ಒಬ್ಬನಿದ್ದಡೂ ಸೈರಿಸನು ಕಪಿಲಸಿದ್ಧ ಮಲ್ಲಿಕಾರ್ಜುನ ದೇವ 'ಎಂದು ಸಿದ್ಧರಾಮ ಶಿವಯೋಗಿಗಳು ಹಾಡಿದ್ದಾರೆ.

ಸಕಲ ದೇಹಗಳಿಗೂ ಜ್ಞಾನವೆಂಬ ಗಂಡನೊಬ್ಬನೆ. ಆ ಗಂಡನೊಂದಿಗೆ ರತಿ ಸುಖ ಏರ್ಪಡಬೇಕಾದರೆ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಅಣ್ಣಂದಿರು ದೇಹವನ್ನು ಆವರಿಸಿದ್ದಾರೆ. ಅವರಲ್ಲಿ ಒಬ್ಬರಿದ್ದಡೂ ರತಿ ಸುಖಕ್ಕೆ ಜ್ಞಾನದ ಗಂಡ ಇಚ್ಛೆಪಡು ವುದಿಲ್ಲ. ಹೀಗಾಗಿ ನನ್ನ ದೇಹವನ್ನು ಆವರಿಸಿದ ಅರಿಷಡ್ವರ್ಗಗಳೆಂಬ ಅಣ್ಣಂದಿರಾದ ನೀವು ನನ್ನ ದೇಹವೆಂಬ ಮನೆಯನ್ನು ಬಿಟ್ಟು ಹೊರಗೆ ಹೋಗಿ ಎಂದು ಹಾಡುತ್ತಾ ಅವರನ್ನು ಹೊರಗೆ ಕಳುಹಿಸಿ ತನ್ನಾಶ್ರಯದ ಗಂಡನೊಂದಿಗೆ ಜ್ಞಾನದ ರತಿ ಸುಖ ಅನುಭವಿಸಿದ್ದಾರೆ ಸಿದ್ಧರಾಮ ಶಿವಯೋಗಿ.

ಮನ ಸತಿಯಾಗಿ, ಅರಿವು ಪತಿಯಾಗಿ, ಸತಿಪತಿಗಳೊಂದಾಗಿ ಭಕ್ತಿಯಿಂದ ಜ್ಞಾನದ ಶಿವ ನನ್ನು ಒಲಿಸಿಕೊಂಡಿದ್ದಾರೆ.

ತಂತಿವಾದ್ಯ, ಚರ್ಮವಾದ್ಯ ,ಕೊರಳ ನಾದವನ್ನು ಗತಿಯಿಂದಾಗಿ ಒಲಿಸಿಕೊಳ್ಳಬಹುದು. ಸದ್ಗತಿಯಿಂದ ಮುಕ್ತಿ ದೊರೆಯಬಹುದು. ನಿರ್ಗತಿಯಿಂದ ವಿರಕ್ತನೂ ಆಗಬಹುದು. ಆದರೆ ತನ್ನಾಶ್ರಯದ ರತಿ ಸುಖದಿಂದ ತನ್ನ ಜ್ಞಾನರತ್ನ ತನಗೇ ಲಭಿಸುವುದು ಬಲು ಜಟಿಲ.

ಸಂಗೀತಗಾರರು ದೊರಕುತ್ತಾರೆ, ಮುಕ್ತರು, ವಿರಕ್ತರು ದೊರಕುತ್ತಾರೆ. 'ಅಹಂ ಬ್ರಹ್ಮಾಸ್ಮಿ' 'ನಾನು ಬ್ರಹ್ಮಜ್ಞಾನಿ' 'ನನ್ನ ಜ್ಞಾನವನ್ನು ನಾನೇ ಅಲಂಕರಿಸಿದವನು 'ಎಂದು ಖಚಿತವಾಗಿ

ಹೇಳುವವರು ದುರ್ಲಭ.

ಸಕಲ ದೇಹಗಳಲ್ಲಿ ಜ್ಞಾನವಿದೆ. ಆ ಜ್ಞಾನ ಆ ದೇಹಕ್ಕೆ ಲಭ್ಯವಾಗಬೇಕಲ್ಲ ? ತನ್ನ ಜ್ಞಾನವನ್ನು ತಾನೇ ಪಡೆಯಬೇಕೆಂಬ ರತಿಸುಖ ದೇಹದಲ್ಲಿ ಹುಟ್ಟಬೇಕಲ್ಲ ?

ದೇಹವನ್ನು ಆವರಿಸಿದ ಮನಕ್ಕೆ ರತಿಸುಖ ಪಡೆಯಬೇಕೆಂಬ ಆಸೆ ಹುಟ್ಟುತ್ತದೆ. ಅದು ಮತ್ತೊಂದು ದೇಹವನ್ನು ಹುಡುಕಿ,ಆ ದೇಹದೊಂದಿಗೆ ಕೂಡಿ ಕೂಟದ ರತಿಸುಖವನ್ನು ಅನುಭವಿಸುತ್ತದೆ. ಇದು ಕೂಡಿ ಅಗಲುವ ಕೂಟದ ಸುಖ. ಮನಕ್ಕೆ ಆಸೆಯಾಯಿತು. ಅನ್ಯ ದೇಹದೊಂದಿಗೆ ಕೂಡಿತು. ಸುಖಿಸಿತು. ಅಗಲಿತು. ಈ ಕೂಡಿ ಅಗಲುವ ಕೂಟದ ಸುಖಕ್ಕಾಗಿ ಮನ ಮತ್ತೆ ಮತ್ತೆ ಆಸೆ ಮಾಡುತ್ತದೆ. ಆದರೆ ಕೂಡದ ಅಗಲದ ಕೂಟದ ಸುಖವೊಂದಿದೆ ; ಅದು ಜ್ಞಾನದ ಕೂಟ ; ಆ ಜ್ಞಾನದ ರತಿಸುಖದ ಕೂಟ ತನ್ನಾಶ್ರಯದಲ್ಲಿಯೇ ಇದೆ.ಅದು ಬೇರೆ ಮತ್ತೊಬ್ಬರಿಂದ ಸಿಗುವ ಸುಖವಲ್ಲ. ತನಗೇ ತಾನೆ ಆ ರತಿ ಸುಖದಲ್ಲಿ ಪಾಲ್ಗೊಳ್ಳಬೇಕು. ಆ ಸುಖವನ್ನು ಪಡೆಯಲೇಬೇಕೆಂಬ ಬಯಕೆ ಮನಕ್ಕೆ ಹುಟ್ಟಬೇಕು. ಆಗ ಮನ ಜ್ಞಾನದ ರತಿಸುಖಕ್ಕಾಗಿ ಸಿದ್ಧವಾಗುತ್ತದೆ. ತನುವಿನ ಮನಕ್ಕೆ ಒಲಿದು ಘನಮನವಾಗುತ್ತದೆ. ಜ್ಞಾನರತ್ನವಾಗುತ್ತದೆ.

**230**

**ರತಿಯೆಂಬುದು ಪ್ರಾಣ, ಘಟವೆಂಬುದೆ ಕಲ್ಲು.**
**ಪ್ರಾಣವಿಲ್ಲದ ಘಟ, ಜ್ಞಾನವಿಲ್ಲದ ಕ್ರೀ**
**ಈ ಉಭಯಕ್ಕೂ**
**ನಾನಾರೆಂಬುದ ತಾನರಿಯಬೇಕೆಂದನಂಬಿಗ ಚೌಡಯ್ಯ.**

ದೇಹವೆಂಬುದು ಜಡ. ಆ ದೇಹವನ್ನು ಮನ ಆವರಿಸಿದೆ. ಅದಕ್ಕೆ ಪ್ರಾಣವಿದೆ ಪ್ರಾಣವಿಲ್ಲದ ದೇಹ, ಜ್ಞಾನವೇ ಇಲ್ಲದ ಮನ. ಇವೆರಡಕ್ಕೂ ನಾನು ಯಾರು ಎಂಬುದು ತಿಳಿಯದು. ಆದರೂ ದೇಹ ಪ್ರಾಣದೊಂದಿಗೆ ಓಡಾಡುತ್ತದೆ. ಜ್ಞಾನ ಶೂನ್ಯವಾಗಿ.

ಮನವೂ ಇದೆ, ದೇಹವೂ ಇದೆ. ಪ್ರಾಣವೂ ಇದೆ. ಹೀಗಿದ್ದರೂ ದೇಹದಲ್ಲಿ ಸಂಗಮವಾದ ಅರಿವಿನ ಸಂಗಮನಾಥನ ಪರಿಚಯ ದೇಹಕ್ಕೂ ಇಲ್ಲ. ಮನಕ್ಕೂ ಇಲ್ಲ. ಪ್ರಾಣಕ್ಕೂ ಇಲ್ಲ. ಇದ್ದರೂ ಇಲ್ಲದಂತೆ ಎಂದು ಇದ್ದ ದೇಹಕ್ಕೆ ಮನಕ್ಕೆ ಪ್ರಾಣಕ್ಕೆ ತಿಳಿಯುತ್ತಿಲ್ಲ.

ಸಕಲವನ್ನೂ ತಿಳಿದ ಬುದ್ಧ ಹೇಳಿದರೂ ಯಾವ ದೇಹಗಳೂ ತಿಳಿಯಲಿಲ್ಲ. ಬದಲಾಗಿ ದೇಹ ಜಡವೆಂದು ಹೇಳಿದ ಬುದ್ಧನನ್ನೇ ಪೂಜಿಸಿದವು. ಮಹಾವೀರನನ್ನು ಆರಾಧಿಸಿ ಜೈನರಾದವು. ಚೌಡಯ್ಯನನ್ನು ಆರಾಧಿಸಿ ಅಂಬಿಗನಾದವು. ಕ್ರಿಸ್ತನನ್ನು ಆರಾಧಿಸಿ ಕ್ರೈಸ್ತನಾದವು. ಪೈಗಂಬರರನ್ನು ಆರಾಧಿಸಿ ಮುಸಲ್ಮಾನನಾದವು. ತಾನಾರೆಂದು ಅರಿಯದೆ ಆರಾಧಿಸುವ ಮನಕ್ಕೆ ಏನನ್ನಬೇಕು?

ಮನವೆಂಬ ರತಿಗೆ ರತಿ ಹುಟ್ಟಿ ಜ್ಞಾನವೆಂಬ ಗಂಡನೊಂದಿಗೆ ರತಿಕ್ರಿಯೆ ನಡೆದಾಗಲೇ ಅಂಗ ಲಿಂಗಾಂಗವಾಗುವುದು.

ಕತ್ತಲು ಬೆಳಕನು ಅರಿಯದು. ಆದರೂ ಕತ್ತಲು ಬೆಳಕಿನಿಂದಲೇ ಹುಟ್ಟಿದೆ. ಬೆಳಕಿನಿಂದ ಹುಟ್ಟಿ ಬೆಳಕನ್ನು ಅರಿಯದೆ ಕತ್ತಲಾಗಿಯೇ ಕತ್ತಲು ಕಾಲ ಕಳೆಯುತ್ತದೆ. ಕತ್ತಲಿನಲ್ಲಿ ಬಿದ್ದ ಯಾವ ವಸ್ತುಗಳೂ ಕಣ್ಣಿಗೆ ಕಾಣುವುದಿಲ್ಲ. ವಸ್ತುಗಳೆಂದರೆ ಕತ್ತಲಿಗೆ ಬಲು ಇಷ್ಟ. ಹಾಗೆಯೇ ಮನಕ್ಕೆ

ಕೂಡ.

ಜ್ಞಾನದ ಬೆಳಕಿನ ಕಿರಣಗಳಿಂದಲೇ ಮನವೆಂಬ ಕತ್ತಲು ಹುಟ್ಟಿದೆ. ಮನಕ್ಕೆ ಕೂಡಾ ಸಕಲ ವಸ್ತುಗಳೆಂದರೆ ಬಲು ಇಷ್ಟ. ಏಕೆಂದರೆ ವಸ್ತುವಿನ ಸತ್ಯ ಮನಕ್ಕೆ ತಿಳಿಯುವುದಿಲ್ಲ. ಹೀಗಾಗಿ ಮನ ತಾನಾರೆಂದು ಅರಿಯಲು ಹೋಗುವುದಿಲ್ಲ. ಕತ್ತಲಿನಲ್ಲಿ ಬಿದ್ದ ವಸ್ತುಗಳು ಹೇಗೆ ಕಾಣುವುದಿಲ್ಲವೋ ಹಾಗೆಯೇ ಮನಕ್ಕೆ ಕೂಡಾ ವಸ್ತುಗಳ ಸತ್ಯ ತಿಳಿಯುವುದಿಲ್ಲ. ವಸ್ತುಗಳೆಂದರೆ ಮನಕ್ಕೆ ಬಲು ಪ್ರೀತಿ, ವಸ್ತುಗಳನ್ನು ಪ್ರೀತಿಸುತ್ತದೆ. ಕಾಮಿಸುತ್ತದೆ. ದ್ವೇಶಿಸುತ್ತದೆ. ವಸ್ತುಗಳ ಮೇಲೆ ವೈರಾಗ್ಯ ತಾಳುತ್ತದೆ. ಇವು ಮನದ ಗುಣಗಳು. ಜ್ಞಾನ ಹಾಗಲ್ಲ ಅದು ನಿರ್ಗುಣಿ ಸಕಲ ವಸ್ತುಗಳನ್ನು ಸೂರ್ಯನ ಬೆಳಕಿನಂತೆ ಸಹಜವಾಗಿ ನೋಡುತ್ತದೆ.

ಮನ ಬೆಳಕಿನಿಂದಲೇ ಹುಟ್ಟಿದೆ. ತಾನಾರೆಂದು ತಿಳಿದರೆ ಅದು ಪುನಃ ಜ್ಞಾನದ ಬೆಳಕಿನತ್ತಲೇ ಹೋಗುತ್ತದೆ. ಜ್ಞಾನವೇ ತಾನಾಗಿ ತನ್ನ ಕತ್ತಲನ್ನೆಲ್ಲ ಕಳೆದುಕೊಳ್ಳುತ್ತದೆ. ಕತ್ತಲು ಪುನಃ ಕತ್ತಲಾಗುವುದಿಲ್ಲ ಅಂಬಿಗರ ಚೌಡಯ್ಯನೇ ತಾನಾಗುತ್ತದೆ.

**231**

**ಲಿಂಗತನುವಿಗೆ ಆತ್ಮತೇಜದ ಅಹಂಕಾರವುಂಟೆ?**
**ಸದ್ಭಕ್ತಗೆ ಹುಸಿ, ಕುಹಕ, ಕ್ಷಣಿಕತ್ವ ಅಸಿಘಾತಕದ ದೆಸೆವುಂಟೆ?**
**ಇಂತಿವರ ದೆಸೆಯ ಹೊದ್ದನೆಂದನಂಬಿಗ ಚೌಡಯ್ಯ .**

ಲಿಂಗತನು, ತನು, ಮನೋತನು ಎಂಬ ಮೂರು ತನುಗಳು ಒಂದೇ ತನುವಿನಲ್ಲಿ ಇವೆ. ಲಿಂಗತನು ಎಂದರೆ ಜ್ಞಾನತನು; ಶಿವತನು; ಸತ್ಯತನು! ತನುವೆಂದರೆ ಜ್ಞಾನತನುವಿಗೆ ಬಳಕೆಯಾಗುವ ಉಪಕರಣತನು. ಮನೋತನುವೆಂದರೆ ಶಿವತನುವಿನ ಬೆಳಕನಿಂದ ಹುಟ್ಟಿದ ನೆರಳೇ ಮನೋತನು, ಇದೇ ಸೂಕ್ಷ್ಮತನು. ಈ ತನುವು ಸ್ಥೂಲತನುವನ್ನು ಆವರಿಸಿದೆ.

ಸೂಕ್ಷ್ಮ ತನುವೆಂಬ ಮನೋತನುವಿಗೆ ಆತ್ಮ ಜ್ಞಾನದ ಅಹಂಕಾರ ಉಂಟು. ಭಗವದ್ಗೀತೆ, ಬೈಬಲ್, ಕುರಾನ್‌ಗಳನ್ನು ಪಠಣ ಮಾಡಿದ್ದೇನೆಂಬ ಅಹಂಕಾರ ಉಂಟು. ಪಂಡಿತ, ಶಾಸ್ತ್ರಿ, ಪುರಾಣಿಕ, ಪ್ರವಚನ ಪಟು, ಜಗದ್ಗುರು, ಗುರುವೆಂಬ ಅಹಂಕಾರ ಉಂಟು. ಶಾಸಕ, ಸಚಿವ, ಪ್ರಧಾನಿ, ಮಂತ್ರಿ , ಶ್ರೀಮಂತ, ಬಡವ ಎಂಬ ಅಹಂಕಾರ ಉಂಟು. ಜಾತಿ ಮತ ಪಂಥ ಹೆಣ್ಣು ಗಂಡೆಂಬ ಅಜ್ಞಾನ ಉಂಟು.

ಸೂಕ್ಷ್ಮ ತನು ತನುವಿಗೆ ಆಯಾ ಪಾತ್ರದ ವೇಷಹಾಕಿ ಅಹಂಕಾರದಿಂದ ಮೆರೆಯುತ್ತದೆ. ಏಕೆಂದರೆ ಇದು ಶಿವತನುವಿನ ಬೆಳಕಿನಿಂದ ಹುಟ್ಟಿದ ನೆರಳು. ನೆರಳಿಗೆ ಅಥವಾ ಕತ್ತಲಿಗೆ ಯಾವ ಅಸ್ತಿತ್ವವೂ ಇಲ್ಲ. ಕತ್ತಲು ಸತ್ಯವಲ್ಲ. ಅದು ಇಲ್ಲದುದು. ಶಿವನ ಕತೆ ಹೇಳಬಹುದು. ಆದರೆ ಅದು ಶಿವನಲ್ಲ. ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಲೀಲಾಜಾಲವಾಗಿ ಹೇಳಬಹುದು. ಆದರೂ ಕತ್ತಲು ಕತ್ತಲೇ ಆಗಿದೆ. ಕತ್ತಲು ಬೆಳಕಿನ ಕತೆ ಹೇಳಿದರೆ ಅದು ಬೆಳಕಾಗಲು ಸಾಧ್ಯವೆ? ಹೀಗಾಗಿ ಮನವೆಂಬುದು ಹುಸಿ. ಅದು ಕುಹಕಿ. ಅದು ಕ್ಷಣಿಕ. ಅದಕ್ಕೆ ಅಸಿಘಾತಕದ ದೆಸೆ ಉಂಟು.

ಅಂಗದಲ್ಲಿ ಸಂಗಮವಾದ ಶಿವತನುವೇ ಬೇರೆ. ಅಂಗವನ್ನು ಆವರಿಸಿದ ಸೂಕ್ಷ್ಮತನುವೆಂಬ ಕತ್ತಲೇ ಬೇರೆ. ಕತ್ತಲನ್ನು ಬೆಳಕು ಹೊದೆಯುವುದಿಲ್ಲ. ಶಿವ ತನುವೆಂದರೆ ಬೆಳಕಿನ ತನು. ಜ್ಞಾನಿತನು.

ಈ ತನುವಿನ ಬೆಳಕಿನಿಂದಲೇ ಸೂಕ್ಷ್ಮ ತನುವಿನ ಹುಟ್ಟು!

ಸೂಕ್ಷ್ಮ ತನುವಿಗೆ ಗುರುವಿನ ಪಾತ್ರ ಹಾಕಿದೆ. ಆದರೆ ಗುರುವಲ್ಲ. ಶಾಸಕ ಸಚಿವನ ಪಾತ್ರ ಹಾಕಿದೆ. ಆದರೆ ಅದೂ ಅಲ್ಲ. ಸಾಕ್ಷಾತ್ ಶಿವನ ಪಾತ್ರವ ಹಾಕಿದೆ. ಆದರೆ ಅದೂ ಅಲ್ಲ. ಪಾತ್ರ ಪಾತ್ರವೇ ಹೊರತು ನಿಜವಲ್ಲ. ಬೆಳಕಿನ ಶಿವನಿಗೆ ಯಾವ ಪಾತ್ರದ ಅವಶ್ಯಕತೆಯೂ ಇಲ್ಲ. ಏಕೆಂದರೆ ಕತ್ತಲು ಅಲ್ಲಿ ನಿಲ್ಲುವುದಿಲ್ಲ. ಹೀಗಾಗಿ ಬೆಳಕು ಬೆಳಕೇ ಆಗಿದೆ. ಅದಕ್ಕೆ ಬೆಳಕ್ಕೆನ್ನುವ ಅಹಂಕಾರವಿಲ್ಲ. ಬೆಳಕೆನ್ನುವುದು ಹುಸಿಯೂ ಅಲ್ಲ. ಅದು ಕ್ಷಣಿಕತ್ವವೂ ಅಲ್ಲ. ಅದು ನಿರಂತರ ಬೆಳಗುವ ಬೆಳಕು!

ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕಿನ ದೇಹವೂ ದೇಹದಲ್ಲಿದೆ. ಆ ಬೆಳಕಿನ ದೇಹಕ್ಕೆ ದೇಹವೇ ವಾಹನವಾಗಿದೆ. ದೇಹವನ್ನು ಕತ್ತಲ ದೇಹ ಆವರಿಸಿದೆ. ಇದು ಬೆಳಕಲ್ಲದಿದ್ದರೂ ಬೆಳಕಿನ ಕತೆ ಹೇಳಿ ಬೆಳಕಿನ ವೇಷ ಧರಿಸಿದೆ. ಇದು ಬೆಳಕಿನಿಂದ ಹುಟ್ಟಿದ ಕತ್ತಲು ಬೆಳಕಿನತ್ತ ಪಯಣಿಸಿ ಬೆಳಕಿನಲ್ಲಿ ಲೀನವಾದಾಗಲೇ ಬೆಳಕಾಗುತ್ತದೆ.

**232**

**ಲಿಂಗತನುವಿಂಗೆ ಶೃಂಗಾರವಪ್ಪ ತೆರನಾವುದೆಂದಡೆ :**
**ಕಾಮ ಕ್ರೋಧ ಲೋಭ ಮೋಹಾದಿಗಳಲ್ಲಿ**
**ತೆರಪುಗೊಡದಿಪ್ಪುದು. ಲಿಂಗವೆ ಅಂಗವಾಗಿ,**
**ಧ್ಯಾನ ಧಾರಣ ನಿಜವಾಸನಿವಾಸವಾಗಿ,**
**ನಿಶ್ಚಯ ನಿಜತತ್ವವಾಗಿ**
**ನಿಂದುದೆ ಆಭರಣವೆಂದನಂಬಿಗ ಚೌಡಯ್ಯ.**

ಲಿಂಗ ತನುವೆಂದರೆ ಅಕಾಯ. ಈ ಅಕಾಯದಲ್ಲಿ ಕಾಮುವಿಲ್ಲ. ಕ್ರೋಧವಿಲ್ಲ. ಲೋಭವಿಲ್ಲ. ಮೋಹವಿಲ್ಲ. ಮದ ಮತ್ಸರಗಳೂ ಇಲ್ಲ. ಸಂಪೂರ್ಣ ಜ್ಞಾನವೇ ಅಕಾಯವಾಗಿದೆ.

ಅಕಾಯಕ್ಕೆ ಧ್ಯಾನದ ಅವಶ್ಯಕತೆಯಿಲ್ಲ. ಏಕೆಂದರೆ ಅದು ಸದಾ ಧ್ಯಾನಾಸಕ್ತನಾಗಿಯೇ ಇದೆ. ಅದಕ್ಕೆ ಯಾವ ಧಾರಣದ ಅವಶ್ಯಕತೆಯೂ ಇಲ್ಲ. ಏಕೆಂದರೆ ಅದು ಸದಾ ಜ್ಞಾನವನ್ನೇ ಧರಿಸಿದೆ. ಹೀಗಾಗಿ ಮಹಾವೀರಾದಿ ತೀರ್ಥಂಕರರು, ಅಕ್ಕ ಮಹಾದೇವಿಯಾದಿ ಶಿವ ಶರಣರು ಏನನ್ನೂ ಧರಿಸಲಿಲ್ಲ.

ಬಯಲು ಏನಾದರೂ ಧರಿಸಿದೆಯೆ? ಆ ಬಯಲಿಗೆ ಯಾರಾದರೂ ವಸ್ತ್ರಾಭರಣವನ್ನು ಧರಿಸಲು ಸಾಧ್ಯವೆ ? ಸಾಧ್ಯವಾಗುವುದೇ ಇಲ್ಲ. ಹೀಗಾಗಿ ಅಕಾಯವೆಂದರೆ ಲಿಂಗ. ಅಂಗದೊಂದಿಗೆ ಭರಿತವಾದ ಲಿಂಗಾಂಗ.

ಕಾಯಕ್ಕೆ ಚರಿತ್ರೆಯಿದೆ. ಅದಕ್ಕೆ ಹುಟ್ಟು ಸಾವು ಇದೆ. ಕಾಯದ ಇತಿಹಾಸವನ್ನು ಹೇಳುವವರೂ ಉಂಟು. ಆದರೆ ಅಕಾಯಕ್ಕೆ ಚರಿತ್ರೆಯಿಲ್ಲ. ಅದಕ್ಕೆ ಇತಿಹಾಸವೂ ಇಲ್ಲ. ಹುಟ್ಟು ಸಾವುಗಳೂ ಇಲ್ಲ. ಅದು ಸದಾ ಶೃಂಗಾರ. ನಿಶ್ಚಯ ನಿಜತತ್ವ. ಅದಕ್ಕೆ ತಂದೆ ತಾಯಿಗಳೂ ಇಲ್ಲ. ಅದು ಚಲಿಸುವುದಿಲ್ಲ. ಅದು ಸದಾ ನಿರಾಣಭರಣ ಸುಂದರ ; ಶಿವ. ಸದಾಶಿವನೂ ಮಹಾದೇವನೂ ಹೌದು.

ಚಕ್ರ ಚಲಿಸುತ್ತದೆ. ವಾಹನ ಚಲಿಸಿದಂತಾಗುತ್ತದೆ. ಚಕ್ರವನ್ನು ಹೊತ್ತ ಎಕ್ಸೆಲ್ ಚಲಿಸುವು

ದಿಲ್ಲ. ಎಕ್ಸೆಲ್ ಇರುವುದರಿಂದಲೇ ಚಕ್ರಕ್ಕೆ ಬೆಲೆಯಿದೆ. ಅದರ ಸಹಾಯದಿಂದಲೇ ಚಕ್ರಕ್ಕೆ ಚಲನೆಯಿದೆ.ಚಕ್ರ ಎಲ್ಲಿಗೆ ಹೋಗುತ್ತದೊ ಎಕ್ಸೆಲ್ ಅಲ್ಲಿರುತ್ತದೆ. ಹಾಗೆಯೇ ಅಕಾಯ ಕೂಡಾ. ಕಾಯ ಓಡಾಡಿದರೇನು? ಅಕಾಯಕ್ಕೆ ಚಲನೆಯಿಲ್ಲ. ಅಕಾಯ ಕಾಯವನ್ನು ಹೊತ್ತುಕೊಂಡಿದೆ. ಕಾಯಕ್ಕೆ ಜೀವ ತುಂಬಿದೆ. ಆದರೆ ಕಾಯ ಅಕಾಯವನ್ನೇ ಮರೆತಿದೆ. ಏಕೆಂದರೆ ಕಾಯ ಜಡ. ಕಾಯಕ್ಕೆ ಅಂಟಿದ ಮಾಯದ ಕಾಯವೊಂದಿದೆ. ಈ ಮಾಯಾ ಕಾಯವೇ ಕಾಯದ ಸಾರಥಿಯಾಗಿದೆ. ಮಾಯಾ ಸಾರಥಿ ಹೇಳಿದಂತೆ ಕಾಯ ಕೇಳುತ್ತದೆ.

ಮಾಯಾ ಕಾಯಕ್ಕೆ ಕಾಮ ಉಂಟು. ಕ್ರೋಧವುಂಟು. ಲೋಭವುಂಟು.ಮೋಹವುಂಟು. ಮದ ಮತ್ಸರಗಳೂ ಉಂಟು. ಅಕಾಯದತ್ತ ಸುಳಿಯದಂತೆ ಕಾಯಕ್ಕೆ ಮಾಯೆ ಮುಸುಕಿದೆ. ಅಕಾಯದ ಅರಿವಿಲ್ಲದಂತೆ ಕಾಯ ಮಾಯೆಯನ್ನೇ ನೆಚ್ಚಿ ತನ್ನ ಅಂತಿಮ ಯಾತ್ರೆಯನ್ನು ಕೊನೆಗೊಳಿಸುತ್ತದೆ. ಅಜ್ಞಾನದ ಹಣೆಪಟ್ಟಿ ಕಟ್ಟಿಕೊಂಡು ಕಣ್ಮುಚ್ಚುತ್ತದೆ.

ಮಾಯದ ಕಾಯ ಅಕಾಯದಲ್ಲಿ ಸಂಗಮವಾಗುವುದೇ ಇಲ್ಲ. ಹಾಗೆ ಸಂಗಮವಾದ ಕಾಯವೇ ಶರಣ ಕಾಯ. ಜ್ಞಾನಿಕಾಯ. ಶಿವಕಾಯ ಎಂದು ಕರೆಯಿಸಿಕೊಳ್ಳುತ್ತದೆ.

**233**

**ಲಿಂಗದೊಳಗೆ ಜಂಗಮ ಸಲೆ ಸಂದಿರಬೇಕು,**
**ಜಂಗಮದೊಳಗೆ ಲಿಂಗವು ಸಲೆ ಸಂದಿರಬೇಕು.**
**ಅಂಗ ಪ್ರಾಣಂಗಳಲ್ಲಿ ಲಿಂಗವ ಹಿಂಗಿರ್ದ ಜಂಗಮವು ಮುಂದೆ ಚರ ಪರವಲ್ಲ.**
**ಹಿಂದೆ ಗುರುಕರುಣಕನಲ್ಲ ವೆಂದನಂಬಿಗ ಚೌಡಯ್ಯ .**

ಬೋಧೆ ಕೊಟ್ಟೆನೆಂಬುದೊಂದು ರೋಗ. ಬೋಧೆ ಪಡೆದು ಶಿಷ್ಯತ್ವ ಸ್ವೀಕರಿಸಿದೆನೆಂಬುದು ರೋಗ. ಇವೆರಡು ರೋಗಗಳು ದೇಹದಲ್ಲಿ ಉಳಿದರೆ ಬೋಧೆ ನೀಡಿದ ದೇಹಕ್ಕೂ,ಬೋಧೆ ಪಡೆದ ದೇಹಕ್ಕೂ ಸ್ವರೂಪ ಜ್ಞಾನ ದೂರ.

ಸ್ವರೂಪ ಜ್ಞಾನವೆಂದರೆ ಸಂಗ್ರಹ ಮಾಡಿಕೊಂಡ ಜ್ಞಾನವಲ್ಲ. ದೇಹದಲ್ಲಿಯೇ ಸಂಗಮವಾದ ಸಹಜ ಜ್ಞಾನ ದೇಹಕ್ಕೆ ಲಭ್ಯವಾಗುವುದು. ಹಾಗೆ ಲಭ್ಯವಾದ ದೇಹವನ್ನು ಬುದ್ಧ ದೇಹವೆಂದು. ಶರಣದೇಹವೆಂದು, ದಾಸ ದೇಹವೆಂದು ಕರೆಯುತ್ತಾರೆ. ಚೌಡಯ್ಯ ಶರಣರು ಲಿಂಗದೊಳಗೆ ಜಂಗಮ ಸಲೆಸಂದ ದೇಹವೆಂದು ಕರೆದಿದ್ದಾರೆ. ಜಂಗಮದೊಳಗೆ ಲಿಂಗ ಸಲೆಸಂದ ದೇಹವೆಂದು ಕರೆದಿದ್ದಾರೆ. ಅಂಗ ಮತ್ತು ಪ್ರಾಣದಲ್ಲಿ ಲಿಂಗ ಹಿಂಗಿದನ ಜಂಗಮ ದೇಹವೆಂದು ಕರೆದಿದ್ದಾರೆ.

ಅಂತಹ ದೇಹಕ್ಕೆ ಹಿಂದೆ ಶಿಷ್ಯತ್ವ ಸ್ವೀಕರಿಸಿದೆನೆಂಬ ನೆನಪು ಅಳಿಯುತ್ತದೆ. ಏಕೆಂದರೆ ಸಾರಾಯದ ಮಾರ್ಗವನ್ನು ಗುರುದೇವನಿಂದ ತಿಳಿದ. ಆತ ಹೇಳಿದ ದಾರಿಯಲ್ಲಿ ನಡೆದ. ಗುರಿ ತಲುಪಿದ. ಆ ನಿಜ ಸುಖದಲ್ಲಿ ಸಂಗಮವಾಗಿ ತನ್ನನ್ನು ತಾನು ಮರೆದ. ದಾರಿ ತೋರಿದ ಗುರುದೇವನನ್ನೂ ಮರೆದ.

ಸಾರಾಯದ ಮಾರ್ಗವನ್ನು ಯಾರು ತೋರಿದಡೇನು? ತಾನು ತಲುಪಬೇಕಾದ ಗ್ರಾಮದ ದಾರಿ ಯಾರು ತೋರಿದಡೇನು? ತೋರಿದವನು ಗುರುವಾಗಲಿಲ್ಲ. ನಡೆಯುವವನು

ಶಿಷ್ಯನಾಗಲಿಲ್ಲ. ಗ್ರಾಮ ದೊರೆತೊಡನೆ ತಾನು ಸೇರಬೇಕಾದ ಜಾಗಕ್ಕೆ ಸೇರಿ ತೋರಿದವನನ್ನು ಮರೆಯುತ್ತಾನೆ. ಅಲ್ಲಿಯ ಸುಖವನ್ನು ಆನಂದಿಸುತ್ತಾನೆ. ನಡೆದ ಬಳಲಿಕೆಯನ್ನು ದಾರಿ ತೋರಿದ ದೇಹವನ್ನು ಮರೆಯುತ್ತಾನೆ. ಅದೇ ನಿಜ ಸುಖ.

**234**

**ಲಿಂಗ ಬಿತ್ತು ಎತ್ತು ಎಂಬಿರಿ, ಆ ಲಿಂಗ ಬಿದ್ದರೆ ಈ ಭೂಮಿ ತಾಳಬಲ್ಲುದೆ ?**
**ಲಿಂಗವಿರುವುದು ಹರಗುರು ಪಾರಾಯಣ, ಲಿಂಗವಿರುವುದು ತೆಂಗಿನ ಮರದಲ್ಲಿ,**
**ಲಿಂಗವಿರುವುದು ಜಂಗಮನ ಅಂಗುಷ್ಠದಲ್ಲಿ, ಲಿಂಗವಿರುವುದು ಊರ ಹಿರೇ ಬಾಗಿಲಲ್ಲಿ.**
**ಇಂತಿಪ್ಪ ಲಿಂಗ ಬಿಟ್ಟು, ಸಂತೆಗೆ ಹೋಗಿ ಮೂರು ಪಾಕಿ ಲಿಂಗವ, ಆರು ಪಾಕಿ**
**ವಸ್ತ್ರವ ತಂದು ಪಾದೋದಕವಿಲ್ಲ, ಪ್ರಸಾದವಿಲ್ಲ, ಮಂತ್ರವಿಲ್ಲ,**
**ವಿಭೂತಿಯಿಲ್ಲ, ರುದ್ರಾಕ್ಷಿಯಿಲ್ಲ.**
**ಇಂತಪ್ಪ ಲಿಂಗ ಕಟ್ಟಿದವನೊಬ್ಬ ಕಳ್ಳನಾಯಿ,**
**ಕಟ್ಟಿಸಿಕೊಂಡವನೊಬ್ಬ ಕಳ್ಳನಾಯಿ.**
**ಇಂತಪ್ಪ ನಾಯಿಗಳನು ಹಿಡಿತಂದು ಮೂಗನೆ ಕೊಯ್ದು,**
**ನಮ್ಮ ಕುಂಬಾರ ಗುಂಡಯ್ಯನ ಮನೆಯ**
**ಕರಿಕತ್ತೆಯನು ತಂದು ಊರೆಲ್ಲ ಮೆರಯಿಸಿ,**
**ನಮ್ಮ ಮಾದಾರ ಹರಳಯ್ಯನ ಮನೆಯ**
**ಹನ್ನೆರಡು ಜೋಡು ಹಳೆಯ ಪಾದರಕ್ಷೆಗಳನು ತಂದು**
**ಮುದ್ದು ಮುಖದ ಮೇಲೆ ಶುದ್ಧವಾಗಿ ಹೊಡೆಯೆಂದಾತ**
**ನಮ್ಮ ಅಂಬಿಗರ ಚೌಡಯ್ಯ.**

ಲಿಂಗ ಬಿತ್ತು ಎತ್ತು ಎನ್ನುವಿರಿ. ಎತ್ತಲು ಲಿಂಗ ಒಂದು ವಸ್ತುವೆ? ಲಿಂಗವನ್ನು ಎತ್ತಲು ಬರುವುದೆ? ಅದು ಜಗದಗಲ ಮುಗಿಲಗಲ. ಅಂತಹ ಲಿಂಗ ಬಿದ್ದರೆ ಭೂಮಿ ಅದರ ಭಾರವನ್ನು ತಡೆಯುವುದೆ?

ಲಿಂಗ ಸಕಲ ಅಂಗಗಳಲ್ಲಿ ಸಂಗಮವಾಗಿದೆ. ಒಳ ಹೊರಗೆನ್ನದೆ ಭರಿತವಾಗಿದೆ. ಲಿಂಗವದು ಗಮನಕ್ಕೆ ನಿಲುಕದ ಅಗಮ್ಯ. ಯಾರೂ ಪ್ರಮಾಣಿಸಲು ಬಾರದಂತಹ ಅಪ್ರಮಾಣ ಅಪ್ರತಿಮ.

ಬ್ರಹ್ಮಾಂಡದಿಂದಲೂ ಅತ್ತತ್ತಲಿರುವ ಲಿಂಗವನ್ನು ಎತ್ತಲು ಸಾಧ್ಯವೆ? ಪಾತಾಳದಿಂದಲೂ ಅತ್ತತ್ತಲಿರುವ ಲಿಂಗ ಬಿದ್ದರೆ ಭೂಮಿ ಅದರ ಭಾರವನ್ನು ತಡೆಯಲು ಸಾಧ್ಯವೆ? ಅಂತಹ ಅಗಮ್ಯ ಲಿಂಗವು ಸಕಲ ಅಂಗಗಳಲ್ಲಿ, ಅಂಗಕ್ಕೆ ಗೋಚರವಾಗದಂತೆ ಅಂಗದಲ್ಲಿಯೇ ಸಂಗಮವಾಗಿದೆ.

ಅಂಗದಲ್ಲಿ ಸಂಗಮವಾದ ಲಿಂಗವನ್ನು ಬಿಟ್ಟು, ಸಂತೆಗೆ ಹೋಗಿ ಕಾಸುಕೊಟ್ಟು ಖರೀದಿಸಿದ ಲಿಂಗವನ್ನು ವಸ್ತ್ರದಲ್ಲಿ ಕಟ್ಟಿ ಕೊರಳಲ್ಲಿ ಕಟ್ಟಿದರೆ ಅದನ್ನು ಲಿಂಗವೆನ್ನಲು ಬರುತ್ತದೆಯೆ?

ಪಾದೋದಕ ಪ್ರಸಾದ ಮಂತ್ರ ವಿಭೂತಿ ರುದ್ರಾಕ್ಷಿಯಿಲ್ಲದೇ ಲಿಂಗ ಕಟ್ಟಿದವನೊಬ್ಬ ಕಳ್ಳನಾಯಿ, ಕಟ್ಟಿಸಿಕೊಂಡವನೊಬ್ಬ ಕಳ್ಳನಾಯಿ ಎಂದು ಮನಕ್ಕೆ ಛಾಟಿ ಬೀಸಿದ್ದಾರೆ.

ಪಾದೋದಕ ಪ್ರಸಾದ ಮಂತ್ರ ವಿಭೂತಿ ರುದ್ರಾಕ್ಷಿ ಇವು ಕೂಡ ವಸ್ತುಗಳಲ್ಲ. ಸೆಗಣಿ

ಕುರುಳಾಗಿ ಒಣಗಿ ಅದಕ್ಕೆ ಅಗ್ನಿ ಸ್ಪರ್ಷವಾದಾಗ ವಿಭೂತಿಯಾಗುವುದು. ಹಾಗೆಯೇ ಅಂಗವನ್ನು ಆವರಿಸಿದ ಅಜ್ಞಾನ ಸೆಗಣೆಯಂಥದ್ದು. ಅದು ಜ್ಞಾನಾಗ್ನಿಯಲ್ಲಿ ಮಾತ್ರ ಸುಡುವುದು. ಹಾಗೆ ಸುಟ್ಟುಕೊಂಡ ಕಾಯವೇ ವಿಭೂತಿ ಕಾಯ !

ವಿಭೂತಿ ಧರಿಸುವುದರಿಂದ ಕಾಯ ವಿಭೂತಿ ಕಾಯವಾಗುವುದಿಲ್ಲ. ಕಾಯದ ಮಾಯೆಯೂ ಸುಡುವುದಿಲ್ಲ.

ರುದ್ರಾಕ್ಷಿ ಎಂದರೆ ಒಂದು ವೃಕ್ಷದ ಫಲವಲ್ಲ. ಅದು ಬೇರಿಲ್ಲದ ವೃಕ್ಷದ ಫಲ. ಕಾಯ ಒಂದು ಬೇರಿಲ್ಲದ ವೃಕ್ಷ. ಅದು ನೋಡುತ್ತಾ ಮಾತನಾಡುತ್ತಾ ನಡೆದಾಡುವ ವೃಕ್ಷ. ನೋಡುವಾಗ ರುದ್ರನ ಕಣ್ಣು ಬಳಕೆಯಾಗಬೇಕು. ಅದು ಅಜ್ಞಾನವನ್ನು ಕೊಂದು ಜ್ಞಾನದಿಂದ ನೋಡುತ್ತದೆ. ಆ ಕಣ್ಣು ಚರ್ಮದಲ್ಲಿ, ನಾಲಿಗೆಯಲ್ಲಿ, ಕಿವಿಯಲ್ಲಿ ಮೂಗಿನಲ್ಲಿ ಇದೆ. ಅದು ಕಣ್ಣಿನಲ್ಲಿಯೂ ಇದ್ದು ಮುಕ್ಕಣ್ಣನ ಕಣ್ಣು, ರುದ್ರನ ಕಣ್ಣು ಎಂದು ಕರೆಯಿಸಿಕೊಂಡಿದೆ. ಆ ಕಣ್ಣಿಗೆ ಸಕಲ ಅಜ್ಞಾನಗಳನ್ನು ಪ್ರಸಾದ ಮಾಡಿಕೊಂಡು ಉಣ್ಣುವ ಶಕ್ತಿಯಿದೆ. ಈ ಶಕ್ತಿ ಸಕಲ ಅಂಗಗಳಲ್ಲಿ ಸಂಗಮವಾಗಿದೆ. ಆ ಶಕ್ತಿಯನ್ನು ಬಳಕೆ ಮಾಡಿಕೊಂಡ ಅಂಗವೇ ಲಿಂಗಾಂಗ.

ಈ ಲಿಂಗಾಂಗ ರಹಸ್ಯವನ್ನು ಸಕಲ ಅಂಗಗಳೂ ಬಳಕೆ ಮಾಡಿಕೊಳ್ಳಲಿ ಎಂದು ಅಂಬಿಗರ ಚೌಡಯ್ಯ ಶರಣರು ಕಠಿಣವಾಗಿಯೇ ನುಡಿದಿದ್ದಾರೆ. ಈ ನುಡಿಯನ್ನು ಮುತ್ತಿನ ಹಾರದಂತೆ ಸ್ವೀಕರಿಸಿ ಕಾರ್ಯರೂಪಕ್ಕಿಳಿದ ಅಂಗವೇ ಧನ್ಯ .

**235**

**ಲಿಂಗವನರಿದೆಹೆನೆಂದಡೆ ಗುರುವಿಗೆ ಹಂಗು,**
**ಗುರುವನರಿದೆಹೆನೆಂದಡೆ ಲಿಂಗದ ಹಂಗು,**
**ಉಭಯವ ಮೀರಿ ಕಂಡೆಹೆನೆಂದಡೆ ಬೇರೊಂದೊಡಲುಂಟು.**
**ಒಡಲು ಒಡೆದಲ್ಲದೆ ಬೇರೊಂದೆಡೆಯಿಲ್ಲ**
**ಎಂದನಂಬಿಗ ಚೌಡಯ್ಯ .**

ಅಂಗದ ಮೇಲೆ ಕಟ್ಟಿಕೊಂಡ ಲಿಂಗವದು ಗುರುವಿನ ಹಂಗು. ಅದನ್ನು ತಿಳಿಯಲು ಹೋದರೆ ಕೊರಳಿಗೆ ಕಟ್ಟಿ ದೀಕ್ಷೆ ಕೊಟ್ಟ ಗುರುದೇವ ಅಡ್ಡ ಬರುತ್ತಾನೆ. ಲಿಂಗಕಟ್ಟಿದ ಗುರುದೇವನನ್ನು ತಿಳಿಯಲು ಹೋದರೆ ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಅಡ್ಡ ಬರುತ್ತದೆ.

ಕಟ್ಟಿಕೊಂಡ ಲಿಂಗವನ್ನು ಕಟ್ಟಿದ ಗುರುದೇವನನ್ನು ತಿಳಿಯಬೇಕೆಂದರೆ ತಿಳಿಯಲು ಸಾಧ್ಯವಾಗುವುದೇ ಇಲ್ಲ. ಬೇರೊಂದೊಡಲು ಅಡ್ಡ ಬರುತ್ತದೆ.

ಒಡಲೊಳಗೊಂದು ಒಡಲಿದೆ. ಒಡಲನ್ನು ಮಾಯದ ಒಡಲೊಂದು ಆವರಿಸಿದೆ. ಮಾಯದ ಒಡಲು ಒಡೆದಲ್ಲದೆ ಲಿಂಗವನು ಅರಿಯಲು ಸಾಧ್ಯವಿಲ್ಲ. ಮಾಯದ ಒಡಲು ಒಡೆದಲ್ಲದೆ ಗುರುವನು ಅರಿಯಲು ಸಾಧ್ಯವಿಲ್ಲ.

ಒಡಲೊಳಗಿರುವ ಒಡಲೇ ಲಿಂಗದೊಡಲು. ಒಡಲೊಳಗಿರುವ ಒಡಲೇ ಗುರುವಿನೊಡಲು. ಒಡಲೊಳಗಿನ ಒಡಲ ದರ್ಶನ ಮಾಡಿಕೊಂಡವನೇ ಗುರು. ಒಡಲೊಳಗಿನ ಒಡಲ ದರ್ಶನ ಮಾಡಿಕೊಂಡ ಒಡಲೇ ಲಿಂಗದೊಡಲು. ಇದನ್ನು ತಿಳಿದ ಗುರು ಇದನ್ನೇ ತೋರಿಸುತ್ತಾನೆ.

ಗುರುವಿನೊಡಲಿಗೆ ಗುರುವಾಗಲು ಬರುತ್ತದೆಯೆ? ಲಿಂಗದೊಡಲಿಗೆ ಗುರುವಾಗಲು ಬರುತ್ತದೆಯೆ? ಬರುವುದಿಲ್ಲ. ಒಡಲಿಗೆ ಗುರುವಿನೊಡಲನ್ನು ತೋರಿಸುತ್ತಾನೆ. ಅದು ಒಡಲೊಳಗಿದ್ದ ಒಡಲು. ಒಡಲಿಗೆ ಆಧಾರವಾದ ಒಡಲು. ಒಡಲು ಸೋಂಕದೆ ಒಡಲನ್ನು ಬೆಳಗುವ ಒಡಲು. ಒಡಲ ದರ್ಶನ ಒಡಲಿಂಗೆ ಆಗಬೇಕಾದರೆ ಒಡಲನ್ನು ಆವರಿಸಿದ ಮಾಯದ ಒಡಲು ಒಡೆಯಬೇಕು.

ಒಡಲಿಂಗೆ ಲಿಂಗ ಕಟ್ಟಬಹುದು. ಲಿಂಗದೊಡಲಿಗೆ ಲಿಂಗ ಕಟ್ಟಲು ಸಾಧ್ಯವೆ? ಒಡಲಿಂಗೆ ಲಿಂಗ ಕಟ್ಟಬಹುದು. ಇದು ಮಾಯದ ಒಡಲಿನ ಬಯಕೆ. ಆದರೆ ಗುರುವಿನೊಡಲಿಗೆ ಲಿಂಗ ಕಟ್ಟಲು ಸಾಧ್ಯವೆ? ಇದು ಮಾಯದ ಒಡಲಿನ ಭ್ರಾಂತಿ. ಈ ಭ್ರಾಂತಿಯ ಒಡಲು ಒಡೆದಲ್ಲದೆ ಲಿಂಗದೊಡಲ ದರ್ಶನವಾಗದು. ಗುರುವಿನೊಡಲ ದರ್ಶನವಾಗದು.

ಊರ ದಾರಿ ಗೊತ್ತಿಲ್ಲದವನಿಗೆ ದಾರಿ ತೋರುವುದು ದಾರಿಯಲ್ಲಿ ನಿಂತವನ ಕರ್ತವ್ಯ. ಹಾಗೆ ದಾರಿ ತೋರಿದವನನ್ನು ಗುರುವೆನ್ನಲು ಸಾಧ್ಯವೆ. ಗುರಿಯ ಗಮ್ಯವನು ಸೇರುವ ದಾರಿ ತೋರಿದ. ಗಮ್ಯವನು ಸೇರಬೇಕಾದರೆ ದಾರಿ ನಡೆಯಬೇಕು. ಮಾಯದ ಒಡಲಿಗೆ ದಾರಿ ನಡೆಯುವ ಬಯಕೆಯಾಗಬೇಕು. ಗುರಿ ತಲುಪಿದಾಗಲೇ ಮಾಯದ ಒಡಲು ಒಡೆದು ಒಡಲಿಗೆ ಗುರುದರ್ಶನವಾಗುವುದು. ಲಿಂಗ ದರ್ಶನವಾಗುವುದು.

**236**

**ಲಿಂಗವೆಂಬುದು ಕಾಯದ ತೊಡಕು,**
**ಗುರುವೆಂಬುದು ಭಾವದ ತೊಡಕು,**
**ಜಂಗಮವೆಂಬುದು ಮೂರರ ತೊಡಕು,**
**ಜ್ಞಾನಮಯವೆಂಬುದು ಸರ್ವಮಯವೆಲ್ಲರ ತೊಡಕು.**
**ಒಂದ ಮೆಟ್ಟಿ, ಒಂದ ಕಂಡು, ಒಂದಕ್ಕೆ ಸಂದೇಹವಿಲ್ಲದೆ ನಿಂದುದು.**
**ಹಿಂದಳ ಮುಂದಳ ದಂದುಗವಿಲ್ಲ ಎಂದನಂಬಿಗ ಚೌಡಯ್ಯ.**

ಲಿಂಗವೆಂಬುದು ಮಾಯಾಕಾಯದ ತೊಡಕು. ಗುರುದೇವನನ್ನು ಹುಡುಕಿ, ಕಾಸು ನೀಡಿ, ಲಿಂಗ ತಂದು, ಆ ಲಿಂಗವನ್ನು ಗುರುದೇವನಿಗೆ ಕೊಟ್ಟು ಕಾಯಕ್ಕೆ ಕಟ್ಟಿಸಿಕೊಳ್ಳುತ್ತದೆ ಮಾಯಾಮಯವಾದ ಕಾಯ. ಈ ಕಾಯ, ಕಾಯವನ್ನು ಆವರಿಸಿದೆ. ಈ ಕಾಯಕ್ಕೆ ಲಿಂಗಬೇಕು. ಗುರುದೇವನೂ ಬೇಕು. ಕಾಯವುಳ್ಳ ಗುರುದೇವನನ್ನು ಭಾವದಿಂದ ಪೂಜಿಸುತ್ತದೆ ; ಗುರುದೇವ ನೀಡಿದ ಲಿಂಗವನ್ನು ಭಾವದಿಂದ ಪೂಜಿಸುತ್ತದೆ. ಹಾಗೆಯೇ ಮಾಯಾಮಯವಾದ ಕಾಯ ಕಾಯವುಳ್ಳ ಜಂಗಮನನ್ನು ಪೂಜಿಸುತ್ತದೆ.

ಕಾಯಕ್ಕೆ ಮಾಯಾಮಯವಾದ ಕಾಯವೊಂದು ತೊಡಕು. ಕಾಯವುಳ್ಳ ಗುರುಕಾಯವೊಂದು ತೊಡಕು. ಕಾಯಕ್ಕೆ ಗುರುದೇವ ಕಟ್ಟಿದ ಲಿಂಗದ್ದೊಂದು ತೊಡಕು. ಕಾಯಕ್ಕೆ ಜಂಗಮನಕಾಯ, ಅಕಾಯಗುರುದೇವನನ್ನು ನೆನೆಯದೆ, ಆತನನ್ನು ಪೂಜಿಸದೆ, ಆತನೊಂದಿಗೆ ಸಂಗಮಾಡದೆ ತಾನೇ ಹಾಕಿಕೊಂಡ ಗುರುಲಿಂಗ ಜಂಗಮದ ತೊಡಕಿನಲ್ಲಿ ಬಿದ್ದು ತನ್ನ ಅಂತಿಮ ಯಾತ್ರೆಯನ್ನು ಪೂರೈಸುತ್ತದೆ.

ಈ ಮೂರು ತೊಡಕುಗಳನ್ನು ದಾಟಬೇಕೆನ್ನುವುದರಲ್ಲಿಯೇ ಜ್ಞಾನದ ತೊಡಕೊಂದು ಬಂದು ಕಾಯವನ್ನು ಅಮರುತ್ತದೆ. ಸಂಗ್ರಹ ಮಾಡಿಕೊಂಡ ವೇದ ಉಪನಿಷತ್ ಆಗಮ ಶಾಸ್ತ್ರ ಪುರಾಣಗಳು ಜ್ಞಾನವಾನ್ ಕಾಯವನ್ನು ಕಾಡತೊಡಗುತ್ತವೆ. ಇದೊಂದು ಆಶ್ಚರ್ಯ ಪರ ಮಾಶ್ಚರ್ಯವೇ ಸರಿ. ಏಕೆಂದರೆ ಕಾಯದಿಂದ ಹುಟ್ಟಿದ ಶಾಸ್ತ್ರಗಳು ಕಾಯಕ್ಕೆ ನ್ಯಾಯ ಒದಗಿಸಲು ಸಿದ್ಧವಾದಂತೆ ! ಕಾಯದಿಂದಲೇ ಹುಟ್ಟಿ ಕಾಯವನ್ನು ಬೆಳಗಲು ಹೊರಟಂತೆ ! ಒಡಕು ಕನ್ನಡಿಯಲ್ಲಿದ್ದ ಸೂರ್ಯ, ಸೂರ್ಯನನ್ನು ಬೆಳಗಲು ಸಾಧ್ಯವೆ ?

**ಒಂದ ಮೆಟ್ಟಿ,ಒಂದ ಕಂಡು,ಒಂದಕ್ಕೆ ಸಂದೇಹವಿಲ್ಲದೆ ನಿಂದುದು. ಹಿಂದಳ ಮುಂದಳ ದಂದುಗವಿಲ್ಲ ಎಂದನಂಬಿಗ ಚೌಡಯ್ಯ :**

ಕಾಯಕ್ಕೆರಗಿದ ಮಾಯಾಮಯವಾದ ಕಾಯವನ್ನು ಕಾಯದಿಂದಲೇ ಮೆಟ್ಟಿ, ಅಕಾಯವನ್ನು ಕಂಡು, ಸಂದೇಹವಿಲ್ಲದೆ ಅಕಾಯದಲ್ಲಿ ನಿಂದ ಕಾಯಕ್ಕೆ ಹಿಂದಣ ಮುಂದಣ ದಂದುಗವಿಲ್ಲವೆಂದು ಸಾರಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**237**

**ಲೋಹ ಗುಂಡಾದಲ್ಲಿ ಇರಿಯಬಲ್ಲುದೆ ?**
**ಮುದ್ರೆಯ ಪಶು ದಿಟ ಪ್ರಾಣಲಿಂಗಿಯಾಗಬಲ್ಲನೆ ?**
**ಡಾಗಿನ ಪಶುಗಳೆಲ್ಲರೂ ಭೇದವನರಿಯಬಲ್ಲರೆ ?**
**ಎಂದನಂಬಿಗ ಚೌಡಯ್ಯ .**

ಕಾಯಕ್ಕೆ ಲಿಂಗ ಕಟ್ಟಿ ಲಿಂಗದ ಮುದ್ರೆಯನು ಒತ್ತಿದರೇನು ? ಅದು ಪ್ರಾಣ ಲಿಂಗವಾಗಲು ಸಾಧ್ಯವೆ ? ಪಶು ಪಶುವೆ ಆಗಿದೆ. ಪಶುಪತಿಯನ್ನು ಅರಿಯದ ಬಡಪಶುವಾಗಿದೆ.

'ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ ತಂದೆ ನಿನ್ನ ಬಯ್ಯದಂತೆ ಮಾಡು 'ಎನ್ನುವ ಬಸವಣ್ಣನವರ ಸೂತ್ರ ಪಶುವಿಗೆ ಹೊಳೆದಾಗ ಅದು ಹಾಗೆಂದು ಪಶುಪತಿ ಯನ್ನು ಪ್ರಾರ್ಥಿಸುತ್ತದೆ.

ಕಾಯ ಪಶುವಿನಂತೆ. ಏಕೆಂದರೆ ಕಾಯವನ್ನು ಮಾಯಾಮಯವಾದ ಕಾಯವೊಂದು ಆವರಿಸಿದೆ. ಕಾಯಕ್ಕೆ ಲಿಂಗ ಕಟ್ಟಿ ಮುದ್ರೆಯನ್ನು ಒತ್ತಿದರೇನು ? ಕಾಯಕ್ಕೆ ಕಟ್ಟಿದ ಲಿಂಗ ಪಶುವಿಗೆ ಕಟ್ಟಿದ ಗುದುಗೆಯಂತೆ. ಅದನ್ನು ಕಟ್ಟಿಕೊಂಡೇ ಬೇಲಿ ಹಾರಿ ಬೆಳೆ ಮೇಯುತ್ತದೆ. ಹೊಲದ ಮಾಲೀಕ ಪಶುವಿನ ಮಾಲೀಕನನ್ನು ಬಯ್ಯುತ್ತಾನೆ. ಪಶುವಿನ ಮಾಲೀಕ ಪಶುಪತಿ ! ಪರಮಪಿತ ಪರಮಾತ್ಮನೇ ಆಗಿದ್ದಾನೆ ! ಆ ಪಶುವಿನ ತಂದೆಯೂ ಆತನೇ. ಆ ಅರಿವಿನ ತಂದೆಗೆ ಹುಟ್ಟಿದ ಪಶುವನ್ನು ಹಿಡಿದಾಗ ಆ ಪಶು ತಂದೆ ನಿಮ್ಮ ಬಯ್ಯದಂತೆ ಮಾಡು. ಪಶು ನಾನು ; ಪಶುಪತಿ ನೀನು. ಪಶುವೆಂದು ಅಲಕ್ಷಿಸಿದ ನಿಮಿತ್ತ ನಾನು ಪಶುವಾದೆ, ಆದರೆ ನನ್ನನ್ನು ಹಡೆದ ತಂದೆ ನೀನಲ್ಲವೆ ? ನಾನು ತಪ್ಪು ಮಾಡಿದರೆ ನನ್ನನ್ನು ಹಡೆದ ನಿನ್ನನ್ನು ಬಯ್ಯುತ್ತಾರೆ ಜನ. ಜನಕ್ಕೇನು ಗೊತ್ತು ? ನನ್ನ ತಂದೆ ನೀನೇ ಎಂದು.

ಹೀಗೆ ಹಾಡಲು ಬಂದಾಗ ಕಾಯಕ್ಕಂಟಿದಮಾಯವೆಂಬ ಪಶುವೃತ್ತಿ ತನ್ನಿಂದ ತಾನೇ ತೊಲಗುತ್ತದೆ. ಪಶುಮುದ್ರೆ ಕಳಚಿ ಬಿದ್ದು ಪ್ರಾಣಲಿಂಗಿಯಾಗುತ್ತದೆ. ಪಶುಗಳೆಲ್ಲ ಲಿಂಗಾಂಗಿಗಳಾಗಿ ಕಾಣುತ್ತವೆ. ಭೇದ ಬುದ್ಧಿಯನ್ನು ಕಳೆದುಕೊಂಡು ಕಾಯ ಅಭೇದ್ಯವಾಗುತ್ತದೆ.

238

**ವಚನಾರ್ಥವ ಕಂಡಹರೆಂದು**
**ರಚನೆಯ ಮರೆಮಾಡಿ ನುಡಿಯಲೇತಕ್ಕೆ ?**
**ದಾರಿಯಲ್ಲಿ ಸರಕು ಮರೆಯಲ್ಲದೆ**
**ಮಾರುವಲ್ಲಿ ಮರೆ ಉಂಟೆ ?**
**ತಾನರಿವಲ್ಲಿ ಮರೆಯಲ್ಲದೆ**
**ಬೋಧೆಗೆ ಮರೆಯಿಲ್ಲ, ಎಂದನಂಬಿಗ ಚೌಡಯ್ಯ .**

ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನು ಮನಕ್ಕೆ ನಿರಂತರ ಬೋಧೆ ಮಾಡುತ್ತಾನೆ. ಆದರೆ ಮನ ಅರಿವೆಂಬ ಗುರುದೇವನ ಬೋಧೆ ಆಲಿಸುವಲ್ಲಿ ಮರೆವು ಉಂಟಾಗಿದೆ.

ಮಹಾತ್ಮರ ವಚನಗಳನ್ನು ಅರ್ಥೈಸಬಹುದು. ಆನಂದವನ್ನು ಅನುಭವಿಸಿ ಮನ ರಂಜನೆಗೆ ಒಳಗಾಗಬಹುದು. ಆದರೆ ತನುವಿನಲ್ಲಿಯೇ ತನ್ಮಯವಾದ ಗುರುದೇವನ ಬೋಧೆಯೇ ಅದು ಎಂದು ತಿಳಿಯುವಲ್ಲಿ ಎಡುವುತ್ತದೆ. ಹೀಗಾಗಿ ಮನ ಮತ್ತೆ ಮತ್ತೆ ಕೇಳುತ್ತದೆ. ಮಹಾತ್ಮರ ಬೋಧೆಯಿಂದ ಅದು ರಂಜನೆಗೆ ಒಳಗಾಗುತ್ತದೆ. ತನುವಿನಲ್ಲಿಯೇ ತನ್ಮಯವಾದ ಅರಿವಿನ ಬೋಧೆಗೆ ಮರೆಯಾಗುತ್ತದೆ.

ಸಕಲ ಕಾಯಗಳು ಜ್ಞಾನಿ ಕಾಯಗಳೇ ಆಗಿವೆ. ಆದರೆ ಜ್ಞಾನಿ ಕಾಯ ಕಾಯದಲ್ಲಿ ಮರೆವಾಗಿದೆ. ಮರೆವಿನ ಕಾಯ ಕಾಯವನ್ನು ಆವರಿಸಿ ಮರೆವಿನ ನುಡಿಗಳನ್ನು ನುಡಿಯುತ್ತದೆ. ಆದರೆ ಅದು ಅರಿವಿನ ನುಡಿಯಲ್ಲವೆಂದು ಅರಿವಿನ ಕಾಯ ಮರೆವಿನ ಕಾಯಕ್ಕೆ ಬೋಧಿಸಿದರೂ ಅರಿವಾಗುತ್ತಿಲ್ಲ ಮರೆವಿನ ಕಾಯಕ್ಕೆ.

ಮರೆವಿನ ಕಾಯ ಕಾಯದ ಮೂಲಕ ಅರಿವಿನ ಕಾಯಕ್ಕೆ ಸೇರಿದಾಗಲೇ ಮರೆವು ಮರೆತು ಅರಿವೇ ತಾನಾಗುವುದು.

239

**ವಸ್ತುವ ಕಾಬರೆಲ್ಲರು**
**ಆತ್ಮ ಹಲವು ಬಗೆ ಎಂದಡೆ, ಹಲವಾದುದುಂಟೆ?**
**ಒಂದು ಕುಂಭದ ನೀರು ಹಲವು ರಂಧ್ರಗಳಲ್ಲಿಳಿವುದು.**
**ಅದು ಕುಂಭದ ಭೇದವೋ? ಜಲದ ಭೇದವೋ?**
**ಈ ಉಭಯ ಭೇದವ ತಿಳಿದಲ್ಲಿ**
**ಆತ್ಮನೊಂದೆಯೆಂದನಂಬಿಗ ಚೌಡಯ್ಯ .**

ಹಲವು ಕೊಂಬೆಗಳಿಗೆ ಹರಿದಾಡುವ ಮರ್ಕಟನಂತೆ. ಮನ ಕಣ್ಣು ಕಿವಿ ಮೂಗು ಚರ್ಮ ನಾಲಿಗೆಗಳಲ್ಲಿ ಹರಿದಾಡಿ ತನ್ನ ಚಪಲವನ್ನು ತೀರಿಸಿಕೊಳ್ಳುತ್ತದೆ.

ಪದಾರ್ಥದ ಸತ್ಯ ಒಂದೇ ಆದರೂ ಹಲವಾರು ಹೆಸರಿನಿಂದ ಗುರುತಿಸಿ, ಆ ಪದಾರ್ಥದ ವ್ಯಾಮೋಹಕ್ಕೆ ಮನ ತನುವಿನೊಂದಿಗೆ ಬಲಿಯಾಗುತ್ತದೆ.

ಪದಾರ್ಥದ ಸತ್ಯವನ್ನು ಅರಿತು ಆ ಸತ್ಯ ವಸ್ತುವಿಗೆ ಮೋಹಗೊಳ್ಳದೆ ನಿರ್ಮೋಹದಿಂದ ಅದರ ಸೌಂದರ್ಯ ಹೀರಿ ಸೂರ್ಯನಂತೆ ವಸ್ತುವನ್ನು ಪಡೆಯದೆ ಅದನ್ನು ಬೆಳಗುವ ಆತ್ಮ ಒಂದೇ. ಅದು ಕಣ್ಣಿನಿಂದ ನೋಡಿ ಬೆಳಗುತ್ತದೆ. ಕಿವಿಯಿಂದ ಕೇಳಿ ಬೆಳಗುತ್ತದೆ. ಚರ್ಮದಿಂದ ಮುಟ್ಟಿ ಬೆಳಗುತ್ತದೆ. ನಾಲಿಗೆಯಿಂದ ರುಚಿಸಿ ಬೆಳಗುತ್ತದೆ. ಮೂಗಿನಿಂದ ಮೂಸಿಸಿ ಅದರ ಅರಿವಿನ ಪರಿಮಳ ಹೀರಿ ಬೆಳಗುತ್ತದೆ.

ಕುಂಭದಲ್ಲಿರುವ ಜಲ ಕುಂಭದ ರಂಧ್ರಗಳ ಮೂಲಕ ಒಸರಿದರೇನು ಜಲವೆಲ್ಲ ಜಲವಲ್ಲವೇ? ಕುಂಭದೊಳಗಿರುವ ಜಲ ಒಂದೇ. ಕುಂಭದ ಹೊರಗೆ ರಂದ್ರಗಳ ಮೂಲಕ ಒಸರುವ ಜಲ ಒಂದೇ. ಹಾಗೆ ತನು ಕೂಡಾ.

ಜಲವೇ ಬಚ್ಚಿಟ್ಟುಕೊಂಡು ತನುವಿಗೆ ಕಿಚ್ಚಾಗಿ ಪರಿಣಮಿಸಿದೆ. ತನುವಿನಲ್ಲಿ ತನ್ಮಯವಾದ ಜಲವೇ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವಾಗಿ ತನುವಿಗೆ ಸುಖ ದುಃಖಗಳನ್ನು ನೀಡುತ್ತದೆ.

ತನುವಿನಲ್ಲಿ ತನ್ಮಯವಾದ ಅರಿವು ಒಂದೇ. ತನುವನ್ನು ಆವರಿಸಿದ ಮನ ಒಂದೇ. ತನು ಒಂದೇ.

ಜೀವ ಜಲಬಿಂದು ಗರ್ಭ ಹೊಕ್ಕು ರಕ್ತ ಮೂಳೆ ಮಾಂಸ ಮಜ್ಜಾ ಮೇದಸ್ಸು ಆಗಿದೆ. ಇವು ಯಾವು ಸೋರದಂತೆ ಚರ್ಮದ ಕವಚವಾಗಿ ಜಲ ಜಲವನ್ನೇ ಸುಂದರವಾಗಿ ಬಂಧಿಸಿಕೊಂಡಿದೆ. ಹಾಗೆಯೇ ಜಲಗಟ್ಟಿಯಾಗಿ ಮಣ್ಣಾಗಿದೆ. ಆ ಜಲದ ಸಹಾಯದಿಂದಲೇ ಮಣ್ಣು ಹದವಾಗಿ ಕುಂಭವಾಗಿದೆ. ಜಲದ ಕಿಚ್ಚೇ ಹೊರಬಂದು ಬೆಂದು ಕುಂಭವಾಗಿ ಜಲವನ್ನು ಹಿಡಿದಿಟ್ಟುಕೊಂಡಿದೆ. ಜಲ ಜಲವನ್ನು ಹಿಡಿದಿಟ್ಟುಕೊಂಡು ಆ ಜಲವನ್ನೇ ರಂಧ್ರಗಳ ಮೂಲಕ ಹೊರಚೆಲ್ಲುತ್ತದೆ. ಕುಂಭವೂ ಜಲವೇ ಕುಂಭದೊಳಗಿದ್ದ ಜಲವೂ ಜಲವೇ. ಕುಂಭದ ರಂಧ್ರಗಳ ಮೂಲಕ ಹೊರ ಸೂಸುವ ಜಲವೂ ಜಲವೇ.

ಉದಕದೊಳಗೆ ಬಯಚಿಟ್ಟುಕೊಂಡ ಬಯಕೆಯ ಕಿಚ್ಚೂ ಹೌದು. ಮಹಾ ಜ್ಞಾನವೂ ಹೌದು.

ಉದಕ ಮೊಗ್ಗಿನೊಳಗೆ ಪರಿಮಳವನ್ನು ಬಚ್ಚಿಟ್ಟುಕೊಂಡಿದೆ. ಕಬ್ಬಿನೊಳಗೆ ಸಿಹಿಯನ್ನು ಬಚ್ಚಿಟ್ಟುಕೊಂಡಿದೆ. ತನುವನ್ನೇ ಕನ್ಯೆಯಾಗಿಸಿ, ಕನ್ಯೆಯೊಳಗಣ ಸ್ನೇಹದಂತೆ ಜ್ಞಾನ ಭರಿತವಾಗಿದೆ.

ಇದು ಬಯಲ ಜೀವನ. ಬಯಲು ಬಯಲನೇ ಬಿತ್ತಿ ಹಲವಾದಡೇನು? ಅದೆಲ್ಲ ಬಯಲಿನ ಲೀಲೆಯಲ್ಲವೇ? ಬಯಲೇ ಉದಕವಾಯಿತು ; ಉದಕವೇ ಹಲವಾಯಿತು ! ಈ ಉಭಯ ತಿಳಿದಲ್ಲಿ ಬಯಲೊಂದೆ !

**240**

**ವಿಹಂಗಂಗೆ ಗರಿಯಾಸೆಯೆಂದಡೆ ಸಂಚಾರವಿಲ್ಲದೆ ಚರಿಸಬಹುದೆ ?**
**ಅರಿವಿಂಗೆ ಕುರುಹಿನಾಸೆಯೆಂದಡೆ,**
**ಆ ಅರಿವು ಕುರುಹಿನೊಳಗಾದ ಮತ್ತೆ ,**
**ಬೇರೊಂದು ಕುರುಹೆಂಬ ನಾಮವುಂಟೆ ?**
**ಚಿತ್ರದ ಬೊಂಬೆಗಳಿದ್ದ ಮನೆ ಕಿಚ್ಚೆದ್ದು ಬೇವಲ್ಲಿ**
**ಬೊಂಬೆಯ ಹೊತ್ತಿದ ಕಿಚ್ಚು ಚಿತ್ರವಾಗಿ ಉರಿವುದೆ ?**

**ನಿಶ್ಚಯವನರಿದ ನಿಜಾತ್ಮನು**
**ಮತ್ತೆ ಕತ್ತಲೆಯ ಹೊಗನೆಂದನಂಬಿಗ ಚೌಡಯ್ಯ .**

ಪಕ್ಷಿಗೆ ತನ್ನ ಗರಿಯ ಮೇಲೆ ಬಲು ಆಸೆ. ಹಣ್ಣು ತಿನ್ನುವ ಆಸೆಯಾದಾಗ ಸಂಚರಿಸಲೇ ಬೇಕು. ಗರಿಯ ಮೇಲಿನ ಆಸೆ ಬಿಡಲೇಬೇಕು.

ಅರಿವಿಂಗೆ ತನ್ನ ತನುವಿನಾಸೆ. ತನುವಿನ ಮೇಲೆ ಮನಕ್ಕೆ ಬಲು ಪ್ರೀತಿ. ತನುವಿನಲ್ಲಿಯೇ ತನ್ಮಯವಾದ ಅರಿವಿನಲ್ಲಿ ಮನ ಸಂಗಮವಾದ ಮೇಲೆ ಮತ್ತೆ ಬೇರೊಂದು ತನುವುಂಟೆ ? ಆ ತನುವಿಗೆ ನಾಮ ಉಂಟೆ ? ಮನದ ಭ್ರಮೆ ಕಳಚಿಬಿದ್ದು ಮನ ಘನಮನವಾಗುವುದು.

ಹಲವಾರು ಚಿತ್ರಗಳಿದ್ದ ಮನೆಗೆ ಕಿಚ್ಚು ಬಿದ್ದಾಗ, ಆ ಬೊಂಬೆಗೆ ಹತ್ತಿದ ಕಿಚ್ಚು ಚಿತ್ರವಾಗಿ ಉರಿಯುವುದೆ? ಹಾಗೆಯೇ ತನುವಿನಲ್ಲಿ ಸಂಗ್ರಹವಾದ ಚಿತ್ರಗಳೆಲ್ಲ ಬಯಲಾಗಿ, ತನುವೂ ಬಯಲಿಂಗೆ ಬಯಲಾಗಿ ಬಯಲೇ ತಾನಾಗುವುದು.

ಮನವೆಂಬುದು ಕತ್ತಲು. ಕತ್ತಲೆಂದರೆ ಅದಕ್ಕೆ ಪ್ರೀತಿ. ಬೆಳಕಿನ ರುಚಿ ಕತ್ತಲಿಗೆ ಗೊತ್ತಾದರೆ ಸಾಕು ಬೆಳಕೇ ತಾನಾಗುವುದು. ಮತ್ತೆ ಎಂದೂ ಕತ್ತಲಾಗದು.

**241**

**ವೀರಂಗೆ ರಣಾಗ್ರದ ಕದನ ಘೋರೆಂದು ಕಟ್ಟಿದಲ್ಲಿ**
**ದೂರದಲ್ಲಿರ್ದೆಸೆವನೊಂದಂಬಿನಲ್ಲಿ**
**ಸೇರಿಬಂದರೆ ಹೊಯಿವ ಬಿಲ್ಲಿನಲ್ಲಿ.**
**ಅವು ಮೀರಿ ಬಂದಲಿ ಇರಿವ ಕಠಾರಿಯಲ್ಲಿ.**
**ಅದು ತಪ್ಪಿದಕ್ಕೆ ತೆಕ್ಕೆಯಲ್ಲಿ ಪಿಡಿವ, ಯುದ್ಧದಲ್ಲಿ ಬಿದ್ದಲ್ಲಿ**
**ಕಡಿವ ಬಾಯಲ್ಲಿ.**
**ಇಂತಿ ಅವರ ಪ್ರಾಣಕ್ಕೆ ಬಂದಲ್ಲಿ ಅವ ತನ್ನ ಧೈರ್ಯ , ವ್ರತವರತುದಿಲ್ಲ.**
**ಹೀಂಗಿರಲಿಲ್ಲವೆ ಸದ್ಭಕ್ತನ ಗುಣ ? ಹೊನ್ನು ಹೆಣ್ಣು ಮಣ್ಣುಳ್ಳ**
**ಕಾಲದಲ್ಲಿಯೇ ಪನ್ನಗಧರನ ಶರಣರಿಗೆ ಅನ್ನೋದಕ**
**ವಸ್ತ್ರಂಗಳಿಂದುಪಚಾರವ ಮಾಡುವುದು. ಅದು ಖಂಡಿತವಾದರೆ**
**ನೀಡಿ ಮಾಡುವ ಭಕ್ತರ ಮಠವ ಒಡಗೊಂಡು**
**ಹೋಗಿ ತೋರುವುದು.**
**ಅದಕ್ಕಾಗದಿರ್ದಡೆ ಹರ ಶರಣರ ಕಮಂಡಲ ಕೊಂಡುಹೋಗಿ**
**ಮಡುವಿನಲ್ಲಿ ಅಗ್ಘವಣಿಯ ತಂದು, ಪಾದವ ತೊಳೆವುದು.**
**ಅದಕ್ಕಾಗದಿರ್ದಡೆ ಶಿವಶರಣರ ಕಂಡು,**
**ಇದಿರೆದ್ದು ನಮಸ್ಕರಿಸುವುದು.**
**ಇಷ್ಟರೊಳಗೊಂದು ಗುಣವಿಲ್ಲದಿರ್ದರೆ ಅವ ಭಕ್ತನಲ್ಲ,**
**ಅವ ಹೊಲೆಯನೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಯುದ್ಧದಲ್ಲಿ ಭಾಗಿಯಾದ ವೀರ ತನ್ನ ಪ್ರಾಣ ರಕ್ಷಣೆಗಾಗಿ ಶತ್ರು ಸೈನ್ಯದ ಮೇಲೆ

ದೂರದಿಂದಲೇ ಗುಂಡು ಹಾರಿಸುತ್ತಾನೆ. ಹತ್ತಿರ ಬಂದರೆ ತನ್ನ ಅಸ್ತ್ರಗಳನ್ನು ಬಳಸುತ್ತಾನೆ. ಒದಿಯುತ್ತಾನೆ. ಬಡಿಯುತ್ತಾನೆ. ತೆಕ್ಕೆಯಲ್ಲಿ ಹಿಡಿದು ಅಪ್ಪಳಿಸುತ್ತಾನೆ. ಚೂರುತ್ತಾನೆ ; ಕಚ್ಚುತ್ತಾನೆ ; ತನ್ನ ಪ್ರಾಣ ಉಳಿಸಿಕೊಳ್ಳಲು ನಾನಾ ವರಸೆಗಳನ್ನು ಬಳಕೆ ಮಾಡಿ ಗೆಲ್ಲುತ್ತಾನೆ.

ಕಾಯಕ್ಕೆ ಸಕಲ ಸಂಪತ್ತು ಇರಬಹುದು. ಅದು ಸಂಪತ್ತಲ್ಲ ; ಕಾಯದಲ್ಲಿ ಸಂಗಮವಾದ ಅರಿವಿನ ಸಂಪತ್ತೇ ಸಂಪತ್ತೆಂದು ಕಾಯಕ್ಕೆ ತಿಳಿಯುತ್ತಿಲ್ಲ. ಕಾಯಕ್ಕೆರಗಿದ ಅಘೋಷಿತ ಯುದ್ಧದಲ್ಲಿ ಕಾಯ ಗೆಲ್ಲುತ್ತಿಲ್ಲ.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು, ಅಷ್ಟ ಮದಗಳು, ಸಪ್ತ ವ್ಯಸನಗಳು ಕಾಯದ ವೈರಿಗಳು. ಈ ವೈರಿಗಳನ್ನು ಅರಿವಿನ ಆಯುಧ ಬಳಸಿಯೇ ಗೆಲ್ಲಬೇಕು. ಈ ವೈರಿಗಳು ಕಾಯದಲ್ಲಿಯೇ ಹುಟ್ಟಿ ಕಾಯವನ್ನು ಅಜ್ಞಾನದ ಆಯುಧದಿಂದ ಸೀಳುತ್ತಾರೆ. ಈ ವೈರಿಗಳ ಜೊತೆಗೆ ಯುದ್ಧ ಮಾಡುವುದು ಬಿಟ್ಟು ಕಾಯ ಸಂಗ ಮಾಡುತ್ತದೆ. ಇಂತಹ ಸೂಕ್ಷ್ಮ ಯುದ್ಧವನ್ನು ಹೇಗೆ ಶ್ರೀ ಕೃಷ್ಣ ಭಗವದ್ಗೀತೆಯ ಮೂಲಕ ಅರ್ಜುನನಿಗೆ ವಿವರಿಸಿದ. ಮಹಾಜ್ಞಾನಿ ಶ್ರೀ ಕೃಷ್ಣ ಕಾಯವೆಂಬ ರಥಕ್ಕೆ ಸಾರಥಿಯಾದ. ಆತ ಹೊಡೆಯೆಂದಲ್ಲಿ ಅರ್ಜುನ ಹೊಡೆದ. ಹುಲ್ಲುಕಡ್ಡಿಯೇ ಬ್ರಹ್ಮಾಸ್ತ್ರವಾಯಿತು. ಅಜ್ಞಾನದ ಯುದ್ಧ ಸಮಾಪ್ತಿಯಾಯಿತು. ಅಜ್ಞಾನ ಕಳೆದುಕೊಂಡ ಕಾಯ ವಿರಾಟ ಸ್ವರೂಪಿಯಾಯಿತು. ಅರ್ಜುನನಿಗೆ ಮಾತ್ರ ಸ್ವರೂಪ ಜ್ಞಾನದ ದರ್ಶನವಾಯಿತು.

ಶ್ರೀ ಕೃಷ್ಣ ಬೇರಲ್ಲ ; ಅರ್ಜುನನೂ ಬೇರಲ್ಲ ; ಇವರಿಬ್ಬರೂ ಬಳಕೆ ಮಾಡಿದ ರಥವೂ ಬೇರಲ್ಲ. ಶ್ರೀ ಕೃಷ್ಣ ಜ್ಞಾನವಾದರೆ ಅರ್ಜುನ ಅದನ್ನು ತಿಳಿಯುವ ಶಿಷ್ಯ ! ಶ್ರೀ ಕೃಷ್ಣ ಸಖನಾಗಿ ಭಗವದ್ಗೀತೆಯನ್ನು ಬೋಧಿಸುತ್ತಾನೆ. ಅರ್ಜುನ ಸಖಿಯಾಗಿ ಆಲಿಸುತ್ತಾನೆ. ಇವರಿಬ್ಬರಿಗೂ ಕಾಯ ರಥದ ರೂಪದಲ್ಲಿ ಉಪಕರಣವಾಗಿದೆ.

**ಹೊನ್ನು ಹೆಣ್ಣು ಮಣ್ಣುಳ್ಳ ಕಾಲದಲ್ಲಿಯೇ ಪನ್ನಗದಧರನ ಶರಣರಿಗೆ ಅನ್ನೋದಕ ವಸ್ತ್ರಗಳಿಂದುಪಚಾರವ ಮಾಡುವುದು :**

ಕಾಯದಲ್ಲಿ ಸಂಗಮವಾದ ಮಹಾಜ್ಞಾನಕ್ಕೆ ಶರಣು ಹೋದವನೇ ಶರಣ. ಆತ ಮಹಾ ಜ್ಞಾನಿ. ಅವರ ಮುಖಾಂತರ ಅಜ್ಞಾನದ ಯುದ್ಧ ಗೆಲ್ಲುವ ಕಲೆಯನ್ನು ಕಲಿತುಕೊಂಡು ಜ್ಞಾನಿಯೇ ತಾನಾಗಬೇಕು. ಅದು ಸಾಧ್ಯವಾಗದಿದ್ದರೆ ದಾಸೋಹದ ಮಠಗಳಿಗೆ ಹೋಗಿ ಜ್ಞಾನವನ್ನು ತಿಳಿದುಕೊಳ್ಳಬೇಕು. ಅದು ಸಾಧ್ಯವಾಗದಿದ್ದರೆ ಹರಗುರು ಶರಣರ ಕಮಂಡಲ ತೆಗೆದುಕೊಂಡು ಹೋಗಿ ಶುದ್ಧವಾದ ಜಲ ತಂದು ಅವರ ಪಾದ ತೊಳೆದು ವಿಶ್ವಾಸಿಕನಾಗಿ ಅವರಿಂದ ಜ್ಞಾನಕ್ಕೆ ಹೋಗುವ ಹಾದಿ ತಿಳಿದುಕೊಳ್ಳಬೇಕು. ಅದೂ ಸಾಧ್ಯವಾಗದಿದ್ದರೆ ಶಿವಶರಣರ ಕಂಡು ಭಕ್ತಿಯಿಂದ ನಮಸ್ಕರಿಸಿ ಜ್ಞಾನ ಪಡೆಯುವ ಮಾರ್ಗಕ್ಕೆ ಯಾಚಿಸಬೇಕು. ಇಷ್ಟರೊಳಗೊಂದು ಗುಣವಿಲ್ಲದಿದ್ದರೆ ಅವನು ಭಕ್ತನಲ್ಲ. ಅವನು ಹೊಲೆಯನು. ಸದಾ ಅಜ್ಞಾನದೊಂದಿಗೆ ಸುಖಿಸಿ, ಅಜ್ಞಾನದಲ್ಲಿಯೇ ಸತ್ತು, ಅಜ್ಞಾನದಿಂದ ಮತ್ತೆ ಜನ್ಮ ಧರಿಸುವ ಅಧಮನು ಎಂದು ಅಂಬಿಗರ ಚೌಡಯ್ಯ ಶರಣರು ಮುಲಾಜಿಲ್ಲದೆ ನುಡಿದಿದ್ದಾರೆ. ಇದು ಚೌಡಯ್ಯರ ನುಡಿಯಲ್ಲ ; ಅಂಬಿಗರ ಚೌಡಯ್ಯ ಶರಣರ ಅಕಾಯದ ನುಡಿ ! ಜ್ಞಾನ ಕಾಯದ ನುಡಿ ಎಂದು ಅವರೇ ಸಾರಿದ್ದಾರೆ.

ಕಾಯದಲ್ಲಿ ಶ್ರೀ ಕೃಷ್ಣ-ಅರ್ಜುನ ಇರುವಂತೆ ; ಕಾಯದಲ್ಲಿ ಚೌಡಯ್ಯನೂ ಇದ್ದಾನೆ- ಅಂಬಿಗರ ಚೌಡಯ್ಯನೂ ಇದ್ದಾನೆ. ಚೌಡಯ್ಯ ಆತನನ್ನು ನಮ್ಮ ಅಂಬಿಗರ ಚೌಡಯ್ಯ ಎಂದು

ಕರೆದಿದ್ದಾನೆ !

**242**

**ವೇದಂಗಳೆಲ್ಲ ಬ್ರಹ್ಮನೆಂಜಲು, ಶಾಸ್ತ್ರಂಗಳೆಲ್ಲ ಸರಸ್ವತಿಯ ಎಂಜಲು,**
**ಆಗಮಂಗಳೆಲ್ಲ ರುದ್ರನೆಂಜಲು,**
**ಪುರಾಣಂಗಳೆಲ್ಲ ವಿಷ್ಣುವಿನೆಂಜಲು,**
**ನಾದಬಿಂದು ಕಳೆಗಳೆಂಬುವು ಅಕ್ಷರತ್ರಯದೆಂಜಲು.**
**ಅಕ್ಷರತ್ರಯಂಗಳು ಪ್ರಕೃತಿಯ ಎಂಜಲು.**
**ಇಂತಿವೆಲ್ಲವ ಹೇಳುವರು ಕೇಳುವರು**
**ಪುಣ್ಯಪಾಪಂಗಳೆಂಜಲೆಂದಾತ ನಂಬಿಗರ ಚೌಡಯ್ಯ .**

ವೇದ ಶಾಸ್ತ್ರ ಆಗಮ ಪುರಾಣಗಳು, ನಾದ ಬಿಂದು ಕಳೆ, ಅಕ್ಷರತ್ರಯಗಳು, ಪುಣ್ಯ ಪಾಪಗಳು ಇವೆಲ್ಲ ಹುಟ್ಟಿದ್ದು ತನುವಿನಲ್ಲಿಯೇ.

ಬ್ರಹ್ಮ ವಿಷ್ಣು ಸರಸ್ವತಿ ರುದ್ರರು ಕೂಡಾ ತನುವಿನಲ್ಲಿಯೇ ತನ್ಮಯವಾಗಿದ್ದಾರೆ. ತನು ತನುವಿನ ಜ್ಞಾನ ಪಡೆದುಕೊಳ್ಳುವುದಕ್ಕಾಗಿ ತನುವಿನಿಂದಲೇ ಸೂತ್ರಗಳು ಹುಟ್ಟಿದವು. ತನುವಿನಿಂದ ಹುಟ್ಟಿದ ಸೂತ್ರಗಳೆಲ್ಲ, ತನುವಿನಿಂದ ಹುಟ್ಟಿದ ಪುಸ್ತಕಗಳೆಲ್ಲ, ತನುವಿನಿಂದ ಹುಟ್ಟಿದ ಅಕ್ಷರಗಳೆಲ್ಲ ತನುವಿನಲ್ಲಿಯೇ ತನ್ಮಯವಾದ ಅಕ್ಷರೋತ್ತಮನನ್ನು ಬೆಳಗಬಲ್ಲವೆ ? ಅಥವಾ ಬೆಳಗಲು ಸಾಧ್ಯವೆ ?

ಬ್ರಹ್ಮನ ತನುವಿನಲ್ಲಿ, ರುದ್ರ , ವಿಷ್ಣುವಿನ ತನುವಿನಲ್ಲಿ ಶಕ್ತಿ ಇದೆ ಎಂದ ಮೇಲೆ ಸಕಲ ತನುಗಳಲ್ಲಿಯೂ ಆ ಶಕ್ತಿ ತನ್ಮಯವಾಗಿರಬೇಕಲ್ಲ?

ಭ್ರಮೆ ಕಳೆದುಕೊಂಡ ತನುವೇ ಬ್ರಹ್ಮ ತನು. ತನುವಿನ ಭ್ರಮೆಗಳನ್ನೆಲ್ಲ ಕೊಂದವನೇ ರುದ್ರ . ತನುವನ್ನು ಅರಿವಿನಿಂದ ರಕ್ಷಣೆ ಮಾಡುವವನೇ ವಿಷ್ಣು. ಶಾಸ್ತ್ರ ಪುರಾಣ ವೇದ ಆಗಮಗಳನ್ನು ಕಲಿತುಕೊಂಡ ಮನವೇ ಸರಸ್ವತಿ. ಈ ಎಲ್ಲ ಮಹಾನುಭಾವರು ಅಂಗದಲ್ಲಿ ಸಂಗಮವಾಗಿದ್ದಾರೆ. ಹೀಗೆ ಸತ್ಯ ಕಂಡುಕೊಂಡ ಅಂಗದಿಂದ, ಸಕಲ ಅಂಗಗಳೂ ಆ ಸತ್ಯವನ್ನು ಕಂಡುಕೊಂಡು ಸತ್ಯದ ಸುಖ ಉಣ್ಣಲಿ ಎಂದು ಶಾಸ್ತ್ರ ರಚಿಸಿದರೆ ಆ ಶಾಸ್ತ್ರ ಮತ್ತೊಂದು ಅಂಗಕ್ಕೆ ಎಂಜಲಾಗಲಿಲ್ಲವೆ ?

ಅಂಗದಲ್ಲಿಯೇ ಸಕಲ ಸಂಪತ್ತು ಸಂಗಮವಾಗಿರುವಾಗ ಅಂಗದಿಂದ ಹೊರಬಂದ ಎಂಜಲ ಶಾಸ್ತ್ರ ಅಂಗಕ್ಕೆ ಸಹಕಾರಿಯಾಗದು. ವೇದ ಆಗಮ ಉಪನಿಷತ್ತು ಭಗವದ್ಗೀತೆ ಕುರಾನ್ ಬೈಬಲ್‌ಗಳೆಲ್ಲ ಏಣಿಯಿದ್ದಂತೆ. ಅದನ್ನು ಮೆಟ್ಟಿ ಮೇಲಕ್ಕೆ ಹತ್ತಬೇಕು.

ಏಣಿಯನ್ನು ಯಾರಾದರೂ ನೆತ್ತಿಯ ಮೇಲೆ ಹೊತ್ತುಕೊಂಡು ಹೋಗುವರೆ ? ಹಾಗೆ ಹೊತ್ತುಕೊಂಡು ಹೋಗುವವ ಮೂರ್ಖನೆ ಸರಿ ಎಂದು ಅಂಬಿಗರ ಚೌಡಯ್ಯ ಗಟ್ಟಿಯಾಗಿಯೇ ಹೇಳಿದ್ದಾರೆ.

ವೇದ ಶಾಸ್ತ್ರ ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಕತೆ ಮಾಡಿ ಹೇಳುವವರು ಕೇಳುವವರೆಲ್ಲ ಪುಣ್ಯಪಾಪಗಳ ಎಂಜಲು. ಸಾಯುವವರೆಗೆ ಶಾಸ್ತ್ರಗಳ ಉದಾಹರಣೆಯನ್ನು ನೀಡುತ್ತ

ಅವುಗಳನ್ನೇ ಮೇಲಿಟ್ಟು, ಶಾಸ್ತ್ರಗಳಿಗೆ ಜನ್ಮ ಕೊಟ್ಟ ಅಂಗವನ್ನು ಕೆಳಗಿಟ್ಟು ಮಾತನಾಡುತ್ತಾರೆಯೇ ಹೊರತು,ಅಂಗವೇ ಸರ್ವ ಶ್ರೇಷ್ಠ ಎಂದು ಯಾವ ಶಾಸ್ತ್ರಿ ಪಂಡಿತನೂ ಹೇಳುವುದಿಲ್ಲ.

ವೇದ ಉಪನಿಷತ್ತು ಭಗವದ್ಗೀತೆ ಬೈಬಲ್ ಕುರಾನ್ ಮುಂತಾದ ಪುಸ್ತಕಗಳು ಪಂಡಿತರಿಗೆ ಬಂಗಾರದ ತತ್ತಿ ನೀಡುವ ಕೋಳಿಯಿದ್ದಂತೆ. ಹೀಗಾಗಿ ಅವುಗಳನ್ನು ತಲೆಯ ಮೇಲಿಟ್ಟು ಕೊಂಡಿದ್ದಾರೆ ಪಂಡಿತರು. ಓದುವ ಪುಸ್ತಕಗಳಿಗೆ ಜನ್ಮ ಕೊಟ್ಟ ಅಂಗಗಳನ್ನು ಹೀನಾಯವಾಗಿ ನೋಡುತ್ತಾರೆ. ಪುಣ್ಯ ಪಾಪಗಳನ್ನು ಸೃಷ್ಟಿಮಾಡಿ ಕೇಳುವ ಅಂಗಗಳನ್ನೇ ಯಾಮಾರಿಸಿದ್ದಾರೆ.

**243**

**ವೇದದಲುಳ್ಳಡೆ ಪ್ರಾಣಿವಧೆಯಪ್ಪುದೆ ?**
**ಶಾಸ್ತ್ರದಲುಳ್ಳಡೆ ಸಮಯವಾದವಪ್ಪುದೆ?**
**ಪರ್ವತದಲುಳ್ಳಡೆ ಹೋದವರು ಬಹರೆ ?**
**ನಿರ್ಬುದ್ಧಿ ಮಾನವರನೆಂಬೆ !**
**ಮನ,ವಚನ,ಕಾಯಶುದ್ಧಿಯಾಗಿಪ್ಪಾತನ ಹೃದಯದಲಿ**
**ನಿಮ್ಮ ಕಂಡನೆಂದನಂಬಿಗ ಚೌಡಯ್ಯ .**

ವೇದದಲ್ಲಿ ಅರಿವಿನ ಸಂಪತ್ತಿದ್ದರೆ ಅದು ತನುವಿನ ಅಜ್ಞಾನವನ್ನು ಕೊಲ್ಲಬೇಕಲ್ಲದೆ ಪ್ರಾಣಿಯನ್ನು ಕೊಲ್ಲಬೇಕೆ ? ಕೊಂದು ಅದನ್ನು ತಿಂದರೆ ತನುವನ್ನು ಆವರಿಸಿದ ಅಜ್ಞಾನಕ್ಕೆ ಅರಿವಿನ ಮುಕ್ತಿ ದೊರಕುವುದೆ ?

ಆಕಳು ಕುದುರೆ ಕುರಿ ಮೇಕೆ ಕೋಳಿಗಳನ್ನು ಬಲಿಕೊಡಬೇಕು ಎಂದು ಹೇಳುವ ಪುಸ್ತಕಗಳನ್ನು ಪವಿತ್ರ ಗ್ರಂಥಗಳೆಂದು ಹೇಳಲು ಸಾಧ್ಯವೆ ? ಪ್ರಾಣಿ ವಧೆ ಮಾಡುವುದರಿಂದ ಮನ, ವಚನ, ಕಾಯ ಶುದ್ಧಿಯಾಗಲು ಸಾಧ್ಯವೆ ?

ಹೆಂಡಿರು ಮಕ್ಕಳನ್ನು ಬಿಟ್ಟು ಹಿಮಾಲಯ ಪರ್ವತಕ್ಕೆ ಹೋದವನು ಮರಳಿ ಮತ್ತೆ ಕೆಳಗಿಳಿಯಲಾರನೆ ? ಹೆಂಡತಿ ಮಕ್ಕಳಿಗೆ ತಾನು ಸಂಪಾದಿಸುವ ಜ್ಞಾನ ಬೇಕಿಲ್ಲವೆ ? ತನ್ನದು ತನು. ಅವರದು ತನುವಲ್ಲವೆ ? ತನುವನ್ನು ಗಂಡು ಹೆಣ್ಣೆಂದು ಬೇರ್ಪಡಿಸಲು ಸಾಧ್ಯವೆ ? ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಇವುಗಳನ್ನು ಸುಂದರವಾಗಿ ಪ್ಯಾಕ್ ಮಾಡಿದ ಚರ್ಮ ಹೆಣ್ಣೇ ಗಂಡೇ ? ಹೆಣ್ಣು ಗಂಡೆಂದು ಕರೆಯುವ ನಿರ್ಬುದ್ಧಿ ಮಾನವರನು ಏನೆಂದು ಕರೆಯಬೇಕು.

ವೇದ ಶಾಸ್ತ್ರದಲ್ಲಿ ಜ್ಞಾನವಿಲ್ಲ. ತನುವಿನಲ್ಲಿ ತನ್ಮಯವಾದ ಜ್ಞಾನವನ್ನು, ತನುವನ್ನು ಆವರಿಸಿದ ಮನದ ಸಹಾಯದಿಂದ ಹೇಗೆ ಪಡೆಯಬೇಕೆಂಬ ಸೂತ್ರಗಳಿವೆ. ಆ ಎಲ್ಲ ಸೂತ್ರಗಳು ತನುವಿಗೆ ನಿಚ್ಚಣಿಕೆಯೇ ಹೊರತು ಮತ್ತೇನೂ ಅಲ್ಲ. ಮಾಳಿಗೆಗೆ ಹತ್ತುವ ನಿಚ್ಚಣಿಕೆಯನ್ನು ಯಾರಾದರೂ ಪೂಜಿಸುತ್ತಾರೆಯೆ ? ಹಾಗೆ ಪೂಜಿಸುವವನು ನಿರ್ಬುದ್ಧಿಯುಳ್ಳ ಮಾನವನೇ ಸರಿ.

**244**

**ವೇದವನೋದಿದವರು ವಿಧಿಗೊಳಗಾದರಲ್ಲದೆ**
**ದೇವರಿಹ ಠಾವನರಿದಿಪ್ಪುದಿಲ್ಲ.**

**ಶಾಸ್ತ್ರವ ನೋದಿದವರು ಸಂಶಯಕ್ಕೊಳಗಾದವರಲ್ಲದೆ**
**ಸದ್ಗುರುವನರಿದುದಿಲ್ಲ.**
**ಆಗಮವನೋದಿದವರೆಲ್ಲರು ಆಗು ಚೇಗಿಗೆ ಒಳಗಾದರಲ್ಲದೆ**
**ಆದಿ ಅನಾದಿಯಿಂದತ್ತಣ ಶರಣಲಿಂಗ ಸಂಬಂಧವನರಿದುದಿಲ್ಲ.**
**ಪುರಾಣವನೋದಿದವರೆಲ್ಲರು ಪೂರ್ವದ ಬಟ್ಟೆಗೊಳಗಾದವರಲ್ಲದೆ**
**ಪೂರ್ವದ ಕರ್ಮವಹರಿದು ಪುರಾತನರನರಿದುದಿಲ್ಲ.**
**ಇಂತಿವರೆಲ್ಲರು ಚರಶೇಷವ ಲಿಂಗಕ್ಕರ್ಪಿಸಲರಿಯರಾಗಿ**
**ಇವರಿಗೆ ಲಿಂಗವು ಕಾಣಿಸದೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಕಾಯವೇ ಕೈಲಾಸ. ಆ ಕೈಲಾಸದಲ್ಲಿಯೇ ಶಿವನಿದ್ದಾನೆ. ಕೈಲಾಸವನ್ನು ಶಿವನನ್ನೂ ಮರೆತು, ಕಾಯ ವೇದವನು ಓದಿದರೆ ಅದು ವಿಧಿಗೊಳಗಾಗುತ್ತದೆಯೇ ಹೊರತು ಶಿವನಿರುವ ಠಾವನ್ನು ಅರಿಯದು. ಕಾಯದಿಂದ ಹೊರಬಂದ ವೇದವನ್ನು ಓದಿದರೆ ಕಾಯದಲ್ಲಿಯೇ ಸಂಗಮವಾದ ಶಿವ ಕಾಯಕ್ಕೆ ದರ್ಶನ ನೀಡುವುದಿಲ್ಲ. ಬದಲಾಗಿ ವೇದವನು ಓದಿದ ಕಾಯವನ್ನು ವೇದ ವಿಧಿಯಾಗಿ ಕಾಡುವುದು. ವೇದ ಕೈಲಾಸಕ್ಕೆ ಹೋಗುವ ಸೂತ್ರ . ಅದೇ ದೇವರಲ್ಲ.

ವೇದ  ಶಾಸ್ತ್ರಗಳನ್ನು ಓದಿದ ಕಾಯ ಸಂಶಯಕ್ಕೆ ಒಳಗಾಗುತ್ತದೆ ಹೊರತು ಸದ್ಗುರುವನ್ನು ಅರಿಯಲು ಸಾಧ್ಯವಾಗುವುದಿಲ್ಲ. ಸದ್ಗುರು ವೇದದಲ್ಲಿ ಇಲ್ಲ. ಶಾಸ್ತ್ರದಲ್ಲಿಯೂ ಇಲ್ಲ. ವೇದ ಶಾಸ್ತ್ರಗಳಿಗೆ ಜನ್ಮ ನೀಡಿದ ಅಂಗದಲ್ಲಿ ಸಂಗಮವಾಗಿದ್ದಾನೆ. ವೇದ ಶಾಸ್ತ್ರಗಳನ್ನು ಓದಿ ತಿಳಿಯಬಹುದು. ಅದನ್ನು ಭೋದಿಸಿದ ಗುರುದೇವನನ್ನು ತಿಳಿಬಹುದು. ಆದರೆ ಸದ್ಗುರು ದೇವನನ್ನು  ಅರಿಯುವುದು ಸುಲಭದ ಮಾತಲ್ಲ.

ಆಗಮವನು ಓದಿದವರೆಲ್ಲ ಆಗು ಚೇಗಿಗೆ ಒಳಗಾದರು. ಆದಿ ಅನಾದಿಯಿಂದಲೂ ಅತ್ತತ್ತವಿರುವ ಶರಣ ಲಿಂಗ ಸಂಬಂಧವನು ಅರಿಯಲಿಲ್ಲ. ಆಗಮವನ್ನು ಓದಿ ಶರಣನನ್ನು ಒಲಿಸಿಕೊಳ್ಳಲು ಆಗುವುದಿಲ್ಲ.ಲಿಂಗವನ್ನು ಒಲಿಸಿಕೊಳ್ಳಲು ಆಗವುದಿಲ್ಲ. ಇವೆರಡರ ಸಂಬಂಧವನ್ನು ತಿಳಿಯಲೂ ಆಗುವುದಿಲ್ಲ.ಏಕೆಂದರೆ ಶರಣನೆಂದರೆ ವ್ಯಕ್ತಿಯಲ್ಲ. ಆತ ಅವ್ಯಕ್ತ . ಹಾಗೆಯೇ ಲಿಂಗವೆಂದರೆ ಅದು ಪೂಜಿಸುವ ವಸ್ತುವಲ್ಲ. ಶರಣನ ಹಾಗೆ ಲಿಂಗ ಕೂಡಾ ಅವ್ಯಕ್ತ ! ಅವ್ಯಕ್ತ ಶರಣ ; ಅವ್ಯಕ್ತ ಲಿಂಗ ವ್ಯಕ್ತಿಯಂತೆ ಹುಟ್ಟಿಲ್ಲ. ಅವೆರಡೂ ಆದಿ ಅನಾದಿಯಿಂದಲೂ ಅತ್ತತ್ತ.

ಅಂಗಕ್ಕೆ ಹುಟ್ಟಿದೆ ; ಸಾವಿದೆ. ಅಂಗದಲ್ಲಿಯೇ ಸಂಗಮವಾದ ಲಿಂಗಕ್ಕೆ ಆ ಲಿಂಗವನ್ನು ಅರಿತ ಶರಣನಿಗೆ ಹುಟ್ಟಿಲ್ಲ ; ಸಾವಿಲ್ಲ. ಸಾವಿಲ್ಲದ ಕೇಡಿಲ್ಲದ ಚೆಲುವರಿವರು. ಅವರನ್ನು ಆಗಮವನು ಓದಿ ತಿಳಿಯಲು ಸಾಧ್ಯವಿಲ್ಲ.

ಪುರಾಣವನು ಓದಿದವರೆಲ್ಲ ಪೂರ್ವದ ಅಜ್ಞಾನಕ್ಕೆ ಒಳಗಾದರಲ್ಲದೆ ಪೂರ್ವದ ಕರ್ಮವನು ಹರಿದು ಪುರಾತನರನು ಅರಿಯಲು ಸಾಧ್ಯವಾಗುವುದಿಲ್ಲ. ಪುರಾತನರು ಸಾವಿಲ್ಲದ ಕೇಡಿಲ್ಲದ ಹಾದಿಯನು ಸರ್ವ ಶರಣರಿಗೂ ತೋರಿದವರು. ಮರುಜವಣಿಯ ಫಲ ಮೆದ್ದು ಮರಣವನ್ನು ಕಳೆದುಕೊಂಡವರು. ಅಂತಹ ಪುರಾತನರನ್ನು ಪುರಾಣವನ್ನು ಓದಿ ತಿಳಿಯಲು ಸಾಧ್ಯವಾಗುವುದಿಲ್ಲ. ಶಿವಕಾಯ ಪ್ರವೇಶ ಮಾಡಿ ಶರಣನಾದವನಿಗೆ ಮಾತ್ರ ಪುರಾತನರನ್ನು ತಿಳಿಯಲು ಸಾಧ್ಯ .

ವೇದ ಶಾಸ್ತ್ರ ಆಗಮ ಪುರಾಣವನು ಓದಿದವರೆಲ್ಲ ತಮ್ಮಲ್ಲಿಯೇ ಇರುವ ಶೇಷ

ಅಜ್ಞಾನವನ್ನು ಲಿಂಗವೆಂಬ ಮಹಾಜ್ಞಾನಕ್ಕೆ ಅರ್ಪಿಸಲು ಅರಿಯದಿದ್ದಕ್ಕಾಗಿ ಇವರಿಗೆ ಲಿಂಗ ಕಾಣಲು ಸಾಧ್ಯವಾಗುವುದಿಲ್ಲ ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**245**

**ವೇದವ ಪಠಿಸುವಲ್ಲಿ, ಶಾಸ್ತ್ರವನೋದುವಲ್ಲಿ,**
**ಆಗಮಂಗಳ ತಿಳಿವಲ್ಲಿ, ಶಿವಜ್ಞಾನ ಅನುಭಾವವ ಮಾಡುವಲ್ಲಿ,**
**ಪಗುಡಿ ಪರಿಹಾಸಕರ ಅರ್ತಿಕಾರರ**
**ಹೊತ್ತು ಹೋಕರಿಗಾಗಿ ಸಂಘಟ್ಟುವರ ಕೂಡಲುಂಟೆ ?**
**ಇಂತಿವರಲ್ಲಿ ಚಚ್ಚಗೊಟ್ಟಿಯ ಮಾಡುವ**
**ಮಿಟ್ಟೆಯ ಭಂಡರ ನೊಪ್ಪೆನೆಂದ ನಂಬಿಗ ಚೌಡಯ್ಯ.**

ವೇದ ಶಾಸ್ತ್ರ ಆಗಮಗಳನ್ನು ಪಠಿಸಿ ಓದಿ ತಿಳಿಸುವ, ಶಿವಜ್ಞಾನ ಮಾಡುವವರು ಹೊತ್ತು ಗಳೆಯುವ ಹೊತ್ತು ಹೋಕರು. ಅವರಿಂದ ವೇದ ಶಾಸ್ತ್ರ ಆಗಮಗಳನ್ನು ತಿಳಿಯಬಹುದು. ಶಿವಜ್ಞಾನವನ್ನು ತಿಳಿಯಬಹುದು. ಇವೆಲ್ಲ ಪುಸ್ತಕದಲ್ಲಿವೆ. ಪುಸ್ತಕಕ್ಕೆ ಬಂದದ್ದು ತನುವಿನ ಜ್ಞಾನ. ತನುವಿನಲ್ಲಿ ತನ್ಮಯವಾದದ್ದು ಪುಸ್ತಕಕ್ಕೆ ಬಂದಿದೆ. ಪುಸ್ತಕಕ್ಕೆ ಬಂದದ್ದು ಓದಿದರೆ ಅಥವಾ ಕೇಳಿದರೆ ಅದು ಪುನಃ ತನುವಿನಲ್ಲಿ ಸಂಗ್ರಹವಾಗುತ್ತದೆ.

ತನುವಿನಲ್ಲಿ ಸಂಗ್ರಹವಾಗುವ ಜ್ಞಾನ, ಪುಸ್ತಕಗಳಲ್ಲಿರುವ ಭಗವದ್ಗೀತೆ, ಬೈಬಲ್, ಕುರಾನ್ ಗಳಲ್ಲಿರುವ ಜ್ಞಾನ, ವೇದ ಆಗಮ ಶಾಸ್ತ್ರ ಪುರಾಣಗಳಲ್ಲಿರುವ ಜ್ಞಾನ ಒಂದೇ.

ಪುಸ್ತಕದಲ್ಲಿರುವುದು ಹೇಗೆ ಕೆಲಸಕ್ಕೆ ಬರುವುದಿಲ್ಲವೋ ಹಾಗೆಯೇ ಪುಸ್ತಕದಿಂದ ಓದಿ, ಕೇಳಿದ ಜ್ಞಾನ ಕೂಡಾ ತನುವಿನಲ್ಲಿ ಸಂಗ್ರಹವಾಗಿ ಏನೂ ಕೆಲಸಕ್ಕೆ ಬರುವುದಿಲ್ಲ. ಬದಲಾಗಿ ಶಾಸ್ತ್ರಿ ಪಂಡಿತನಾಗಿ ನಾಲ್ಕು ಕಾಸು ಸಂಪಾದಿಸಿ ವ್ಯವಹಾರಿಕನಾಗಬಹುದು.

ತನು ನೋಡುವಾಗ, ಕೇಳುವಾಗ, ಮುಟ್ಟಿ,ಮೂಸಿಸಿ, ರುಚಿಸುವಾಗ ಆಯಾ ಅಜ್ಞಾನದ ಆಪತ್ಕಾಲಕ್ಕೆ ಒಳಗಾಗುತ್ತದೆ. ಹಾಗೆ ಆಪತ್ಕಾಲಕ್ಕೆ ಒಳಗಾದಾಗ ಅದು ಆಪತ್ಕಾಲವೆಂದು ತನುವಿಗೆ ಅನ್ನಿಸುವುದಿಲ್ಲ. ಬದಲಾಗಿ ನೋಡುತ್ತಾ ಹಾದರಕ್ಕೊಳಗಾಗುತ್ತದೆ. ರುಚಿ-ಅರುಚಿ ಎಂದು ಭೇದಜ್ಞಾನವನ್ನು ತಾಳುತ್ತದೆ. ಮುಟ್ಟಿ ಕಾಮದ ಸುಖಕ್ಕೆ ಜಾರುತ್ತದೆ. ಕೇಳಿ ಸುಖ ದುಃಖಗಳಿಗೆ ಒಳಗಾಗುತ್ತದೆ. ಮೂಸಿಸಿ ಮೂಗಿನ ಅಜ್ಞಾನವನ್ನು ಪ್ರದರ್ಶಿಸುತ್ತದೆ. ಪಂಚ ಜ್ಞಾನೇಂದ್ರಿಯಗಳು ಅಜ್ಞಾನದ ಸುಖಕ್ಕೆ ವಾಲುತ್ತವೆ. ಆಗ ಮನ ಅಜ್ಞಾನ ಸುಖವನ್ನು ತನುವಿನೊಂದಿಗೆ ಅನು ಭವಿಸುತ್ತದೆ. ಮನಕ್ಕೆ ತಾನು ತನುವಿನೊಂದಿಗೆ ಸುಖಿಸುವುದು ಹಾದರವೆಂದು ಅನ್ನಿಸುವುದೇ ಇಲ್ಲ.

ತನು ಆಪತ್ಕಾಲಕ್ಕೆ ಒಳಗಾಗುತ್ತದೆ. ಕೇಳಿದ ಶಾಸ್ತ್ರ ಪುರಾಣ, ವೇದ ಆಗಮ ಉಪ ನಿಷತ್ತು ಗಳು, ಭಗವದ್ಗೀತೆ ಬೈಬಲ್ ಕುರಾನ್‌ಗಳು ಸಹಾಯಕ್ಕೆ ಬರುವುದಿಲ್ಲ.

ಮನಸ್ಸಿಗೆ ತನುವಿನೊಂದಿಗೆ ಅಜ್ಞಾನದ ಸುಖ ಆನುಭವಿಸುವುದೂ ಇಷ್ಟ. ಹಾಗೆಯೇ ಭಗವದ್ಗೀತೆ, ಬೈಬಲ್, ಕುರಾನ್‌ಗಳನ್ನು , ವೇದ ಆಗಮ ಉಪನಿಷತ್‌ಗಳನ್ನು ಓದುವುದೂ ಇಷ್ಟ ; ಕೇಳುವುದೂ ಇಷ್ಟ.

ತನುವಿನ ಆಯುಷ್ಯದ ಸಮಯ ವ್ಯರ್ಥ ಹಾಳಾಗುತ್ತದೆ ಎಂದು ಮನಕ್ಕೆ ಹೊಳೆಯುವುದಿಲ್ಲ. ಕೇಳುವುದರಲ್ಲಿ, ಓದುವುದರಲ್ಲಿ ಹಾಗೆಯೇ ಹಾದರದ ಸುಖ ಅನುಭವಿಸುವುದರಲ್ಲಿ ಭಾಗವಹಿಸುವುದನ್ನು ಭಂಡ ಮನ ಬಿಡುವುದೇ ಇಲ್ಲ.

ವೇದವ ಪಠಿಸುವ, ಶಾಸ್ತ್ರವ ಓದುವ, ಆಗಮಗಳನ್ನು ತಿಳಿದು, ಶಿವಜ್ಞಾನದ ಅನುಭಾವ ಮಾಡುವ ಹೋಕರ ಜೊತೆಗೆ ಕೂಡಲುಂಟೆ ? ಇಂತಿವರ ಚರ್ಚಾಗೋಷ್ಠಿಯಲ್ಲಿ ಭಾಗವಹಿಸುವ ಭಂಡ ಮನವನ್ನು ಒಪ್ಪನೆಂದನಂಬಿಗ ಚೌಡಯ್ಯ.

ತನುವನ್ನು ಮನ ಆವರಿಸಿದೆ. ತನುವಿನಲ್ಲಿ ಅರಿವು ತನ್ಮಯವಾಗಿದೆ. ತನ್ಮಯವಾದ ಅರಿವಿಗೆ ಅಂಬಿಗ ಚೌಡಯ್ಯನೆಂದು ನಾಮಕರಣ ಮಾಡಿದ್ದಾನೆ ಚೌಡಯ್ಯ !

ಮನವುಳ್ಳ ತನುವೇ ಚೌಡಯ್ಯ ! ಅರಿವುಳ್ಳ ತನುವೇ ಅಂಬಿಗರ ಚೌಡಯ್ಯ !

ತನುವಿಗೆ ಶಾಸ್ತ್ರ ಕೇಳುವ ಆಸೆಯೂ ಆಗಿದೆ. ಹಾಗೆಯೇ ಹಾದರದ ಸುಖವನ್ನು ಅನುಭವಿಸುವ ಆಸೆಯೂ ಆಗಿದೆ. ಹಾದರವೂ ಬಿಡುತ್ತಿಲ್ಲ ; ಶಾಸ್ತ್ರದ ಸವಿಯೂ ಬಿಡುತ್ತಿಲ್ಲ. ಶಾಸ್ತ್ರವನ್ನು ಕೇಳುತ್ತಾನೆ ; ಹಾದರವನ್ನು ಮಾಡುತ್ತಾನೆ. ಕೇಳುವವನೂ ಅವನೇ ; ಅಜ್ಞಾನದ ಹಾದರದ ಸುಖ ಅನುಭವಿಸುವವನೂ ಅವನೇ. ಇದು ಸರ್ವತನುಗಳನ್ನು ಆವರಿಸಿದ ಮನದ ಗುಣ. ಹೀಗಿದ್ದಾಗ ತನುವಿಗೆ ಯಾರು ನ್ಯಾಯ ಹೇಳಬೇಕು. ನ್ಯಾಯ ಹೇಳುವವನೇ ಮೋಸಕ್ಕೊಳ ಗಾಗಿದ್ದಾನೆ. ಕ್ಷಣ ಕ್ಷಣಕ್ಕೂ ಮೋಸಕ್ಕೆ ಒಳಗಾಗುತ್ತಾನೆ. ತನಗೆ ತಾನೇ ಸುಧಾರಿಸಿಕೊಳ್ಳಬೇಕು.

ತನುವಿನಲ್ಲಿ ಅರಿವು ಸಂಗಮವಾಗಿದೆ. ತನುವನ್ನು ಮನ ಆವರಿಸಿದೆ. ಮನ ಅರಿವಿನೊಂದಿಗೆ ಮಾತನಾಡಬೇಕು. ಅರಿವು ಮನಕ್ಕೆ ಬೋಧಿಸುವುದನ್ನು ಮನವೇ ಆಲಿಸಬೇಕು. ಅರಿವಿನಲ್ಲಿ ಮನ ಸಂಗಮವಾಗಬೇಕು. ಆ ಅರಿವೇ ತಾನಾಗಬೇಕು. ಆಗ ಕೇಳುವುದು ನಿಲ್ಲುತ್ತದೆ ; ಹೇಳುವುದು ನಿಲ್ಲುತ್ತದೆ. ಓದುವುದು ನಿಲ್ಲುತ್ತದೆ. ಜಪತಪ ನಿಲ್ಲುತ್ತದೆ. ಪ್ರಾರ್ಥಿಸುವ ಪ್ರಾರ್ಥನೆ ನಿಲ್ಲುತ್ತದೆ. ಮಸೀದೆ ಮಂದಿರ ಚರ್ಚ್‌ಗಳು ಮಠ ಆಶ್ರಮಗಳು ತನಗೆ ತಾನೇ ಬೋಧಿಸಿಕೊಳ್ಳುವ ಅರಿವಿನ ಕೇಂದ್ರಗಳಾಗಿ ಮಾರ್ಪಡುತ್ತವೆ. ಇದು ಸಕಲ ಶರಣರ ದಾಸವರೇಣ್ಯರ ಆಶಯ. ಕ್ರಿಸ್ತ ಕೃಷ್ಣ ಬುದ್ಧ ಪೈಗಂಬರರ ಆಶಯ.

**246**

**ವೇದವೇದಾಂತರ, ಶಾಸ್ತ್ರಸಂಪದರ,ಆಗಮಕ್ಕತೀತರ,**
**ಪರಬ್ರಹ್ಮಸ್ವರೂಪರ, ಪರಮ ವಿರಕ್ತರ ಕೂಡಿಕೊಂಡು ತಾನರಿವಲ್ಲಿ,**
**ಅರಿವ ಕೇಳುವಲ್ಲಿ ಎಡೆದೆರಪಿಲ್ಲದೆ,**
**ಪದಪದಾರ್ಥಂಗಳಿಂದ, ಕ್ರೀಕ್ರಿಯಾರ್ಥದಿಂದ**
**ತತ್ವ ತತ್ವಾರ್ಥಂಗಳಲ್ಲಿ ಪದಚ್ಛೇದವ ಮಾಡುವ**
**ಪರಮಾರ್ಥಿಕರ ಪಾದವೆ ಪದವೆಂದನಂಬಿಗ ಚೌಡಯ್ಯ.**

ವೇದಗಳನ್ನು ಓದಿದ ಪಂಡಿತರು ಸಿಗುತ್ತಾರೆ. ಶಾಸ್ತ್ರಗಳನ್ನು ಓದಿದ ಶಾಸ್ತ್ರಿಗಳೂ ಸಿಗುತ್ತಾರೆ. ಆಗಮವನ್ನು ಓದಿದ ತಾರ್ಕಿಕರೂ ಸಿಗುತ್ತಾರೆ. ಬ್ರಹ್ಮನಿಷ್ಠರು, ವಿರಕ್ತರು ಸಿಗುತ್ತಾರೆ. ಇವರನ್ನು

ಹೊರತುಪಡಿಸಿ ವೇದ ವೇದಾಂತರು,ಶಾಸ್ತ್ರ ಸಂಪದರು,ಆಗಮಕ್ಕೆ ಅತೀತರಾದವರು, ಪರ ಬ್ರಹ್ಮಸ್ವರೂಪಿಗಳು, ಪರಮ ವಿರಕ್ತರನ್ನು ಕೂಡಿಕೊಂಡು ತನ್ನನ್ನು ತಾನು ಅರಿಯಬೇಕು. ಎಡೆಬಿಡದೆ ಆ ಅರಿವನ್ನು ಕೇಳಬೇಕು.

ಪದಪದಾರ್ಥಗಳಿಂದ, ಕ್ರೀಕ್ರಿಯಾರ್ಥದಿಂದ,ತತ್ವ ತತ್ವಾರ್ಥಂಗಳಲ್ಲಿ ಪದಚ್ಛೇದವ ಮಾಡುವ ಪಾರಮಾರ್ಥಿಕರ ಪಾದವೇ ಪದವೆಂದು ನಂಬಬೇಕು. ಆ ಪದವೇ ಪರಮಪದ ವೆಂದು ನಂಬಿ ಅದೇ ತನಗೆ ಗತಿಯೆಂದು ಸದ್ಗತಿಯೆಂದು ಬಲವಾಗಿ ತಿಳಿಯಬೇಕು.

ಪದಾರ್ಥವೆಂದರೆ ಅಂಗ. ಪದವೆಂದರೆ ಲಿಂಗ. ಪದಾರ್ಥದಿಂದ ಬಂದ ಸಕಲ ಪದಗಳು ಪದಾರ್ಥಕ್ಕೆ ಪ್ರಸಾದವಾಗಬೇಕು. ಪದಾರ್ಥ ಒಂದೇ ; ಅದರಿಂದ ಹೊರಬಂದ ಪದವೊಂದೇ ! ಆದರೂ ಪದಾರ್ಥದಿಂದ ಹೊರಬಂದ ಪದಗಳನ್ನು ಪದಾರ್ಥವೇ ತಿಳಿಯದಾಗಿದೆ. ಪದಗಳನ್ನು ಹೊರಹಾಕಿದ್ದು ಪದಾರ್ಥವೇ. ಪದಗಳನ್ನು ಟಂಕಿಸಿ ರಚನೆ ಮಾಡಿದ್ದು ಕೂಡಾ ಪದಾರ್ಥವೆ ಆಗಿದೆ. ಆದರೂ ಪದಾರ್ಥದಿಂದ ಹೊರಬಂದ ಪದಗಳನ್ನು ಪದಾರ್ಥವೇ ತಿಳಿಯದಾಗಿದೆ.

ಪದಗಳನ್ನು ಪದಾರ್ಥದಿಂದ ಹೊರಚೆಲ್ಲಿ ಹೊರಬಂದ ಆ ಪದಗಳಿಂದಲೇ ಪದಾರ್ಥ ಘಾಸಿಗೊಂಡಿದೆ.

ಕೈಕೇಯಿಯ ಪದಾರ್ಥದಿಂದ ಬಂದ ಪದಗಳು ರಾಮನ ಪದಾರ್ಥವನ್ನು ಕಾಡಿಗೆ ಕಳುಹಿ ಸಿತು. ದ್ರೌಪದಿಯ ಪದಾರ್ಥದಿಂದ ಹೊರಬಂದ ಪದಗಳು ದುರ್ಯೋಧನನ ಪದಾರ್ಥಕ್ಕೆ ಅಗ್ನಿಸ್ಪರ್ಶವಾಯಿತು. ದುರ್ಯೋಧನ ರಾಕ್ಷಸನಾದ. ದ್ರೌಪದಿಯ ಸೀರೆ ಸೆಳೆದು ದಾಸಿಯನ್ನಾಗಿಸಿಕೊಂಡರೂ ಪದಗಳಿಂದ ಬಡಿದ ಕಿಚ್ಚು ಪದಾರ್ಥವನ್ನು ನಂದಿಸಲಿಲ್ಲ. ಮಹಾಭಾರತ ಯುದ್ಧಕ್ಕೆ ನಾಂದಿ ಹಾಡಿತು. ಪದಗಳಿಂದ ಹೊರಬಂದ ಅಗ್ನಿ ಜ್ವಾಲೆ ಹದಿನೆಂಟು ಅಕ್ಷೋಹಿಣಿ ಪದಾರ್ಥಗಳನ್ನು ಬಲಿ ತೆಗೆದುಕೊಂಡಿತು.

ಪದಾರ್ಥದಿಂದ ಬಂದ ಪದಪದಾರ್ಥಕ್ಕೆ ಪ್ರಸಾದವಾಗಲಿಲ್ಲ. ರಕ್ತ ಮಾಂಸ ಮೂಳೆ ಮಜ್ಜಾ ಮೇದಸ್ಸುಗಳು ಹೊರಚೆಲ್ಲದಂತೆ ಬಂಧಿಸಲ್ಪಟ್ಟ ಸುಂದರವಾದ ಚರ್ಮದ ಪದಾರ್ಥದಿಂದ ಹೊರಬಂದ ಒಂದು ಪದ ಪದಾರ್ಥವನ್ನೇ ಸೀಳಿ ಹಾಕುವ ದುಃಶಕ್ತಿಯನ್ನು ಪಡೆದಿದೆಯೆ ? ಎಂದು ಪದಾರ್ಥವೇ ಆಲೋಚಿಸಬೇಕು.

ಪದಾರ್ಥದಿಂದ ಹೊರಬಂದ ಸಕಲ ಪದಗಳು ಪದಾರ್ಥಗಳಿಗೆ ಅಮೃತವಾಗಬೇಕು. ಪದದಲ್ಲಿ ಅರಿವಿನ ಅಮೃತವಿದೆ. 'ಶಬ್ದಂ ಬ್ರಹ್ಮ '. 'ನಿಶ್ಯಬ್ದಂ ಬ್ರಹ್ಮ ಮುಚ್ಚತೇ ' ಎನ್ನುವ ಅಮೃತ ಸಮಾನವಾದ ಪದಗಳು ಪದಾರ್ಥದಿಂದಲೇ ಬಂದದ್ದು. ಪ್ರತಿ ಪದದಲ್ಲಿ ಬ್ರಹ್ಮನಿದ್ದಾನೆ. ಪ್ರತಿ ಪದದಲ್ಲಿ ಅರಿವಿದೆ. ಹೊರಚೆಲ್ಲಿದ ಪದಾರ್ಥಕ್ಕೆ ಪದದ ಅರಿವು ಕೂಡಲೇ ಆಗುತ್ತಿಲ್ಲ. ಏಕೆಂದರೆ ಪ್ರತಿ ಪದದ ಅರಿವು ಪದಾರ್ಥದಲ್ಲಿ ಸಂಗಮವಾಗಿದೆ. ಪದಾರ್ಥವನ್ನು ಪದ ಸ್ವೀಕರಿಸುವ ಅಜ್ಞಾನ ಆವರಿಸಿಕೊಂಡಿದೆ. ತನ್ನಿಚ್ಛೆಗನುಗುಣವಾಗಿ ಪದವನ್ನು ಸ್ವೀಕರಿಸಿದ ಅಜ್ಞಾನ ಆ ಪದವನ್ನೇ ಆಯುಧ ಮಾಡಿಕೊಂಡು ಆ ಆಯುಧದಿಂದಲೇ ಪದಾರ್ಥವನ್ನು ಸೀಳುತ್ತದೆ. ಪದಚ್ಛೇದ ಮಾಡಿ ಸ್ವೀಕರಿಸುವ ಶಕ್ತಿ ಕಳೆದುಕೊಂಡ ಅಜ್ಞಾನ ಆ ಪದದಿಂದಲೇ ಪದಾರ್ಥದ ಶಿರಚ್ಛೇದ ಮಾಡುತ್ತದೆ.

ಪದವೆಂದರೇನು ? ಪದಾರ್ಥವೆಂದರೇನೆಂದು ಅರಿದರಿದು ನೋಡುವ ಪಾರಮಾರ್ಥಿಕ ಪಾದವನು ನಂಬಿದಾಗ ಪದ ಪದಾರ್ಥಕ್ಕೆ ಪ್ರಸಾದವಾಗುವುದು.

247

**ಶರಣ ಸತಿ, ಲಿಂಗ ಪತಿ ಎಂಬರು.**
**ಶರಣ ಹೆಣ್ಣಾದ ಪರಿಯಿನ್ನೆಂತು? ಲಿಂಗ ಗಂಡಾದ ಪರಿಯಿನ್ನೆಂತು?**
**ನೀರು ನೀರು ಕೂಡಿ ಬೆರೆದಲ್ಲಿ, ಭೇದಿಸಿ ಬೇರೆ ಮಾಡಬಹುದೆ?**
**ಗಂಡು ಹೆಣ್ಣು ಯೋಗವಾದಲ್ಲಿ ಆತುರ ಹಿಂಗೆ ಘಟ ಬೇರಾಯಿತು.**
**ಇದು ಕಾರಣ**
**ಶರಣ ಸತಿ, ಲಿಂಗಪತಿ ಎಂಬ ಮಾತು ಮೊದಲಿಂಗೆ**
**ಮೋಸ , ಲಾಭಕ್ಕಧೀನವುಂಟೆ? ಎಂದನಂಬಿಗ ಚೌಡಯ್ಯ .**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗವೇ ಪತಿ, ಲಿಂಗವನ್ನು ಆವರಿಸಿದ ಭವಿ ಮನ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಕ್ಕೆ ಭಕ್ತಿ ಮಾಡುವುದೇ ಭಕ್ತ. ಆ ಭಕ್ತನು ಅರಿವೆಂಬ ಲಿಂಗಕ್ಕೆ ಶರಣು ಹೋಗಿ ಶರಣಾಗುವವನೇ ಶರಣ. ಈ ಶರಣನೇ ಲಿಂಗವೆಂಬ ಪತಿಗೆ ಸತಿಯಾಗಿ ಪತಿಯೊಂದಿಗೆ ಕೂಡುವನು.

ಅಂಗವೆಂಬುವುದು ಹೆಣ್ಣು ಅಲ್ಲ ; ಗಂಡು ಕೂಡಾ ಅಲ್ಲ. ಅಂಗವನ್ನು ಆವರಿಸಿದ ಮನವೇ ಹೆಣ್ಣು. ಅಂಗದೊಳಗೆ ಸಂಗಮವಾದ ಅರಿವೆಂಬ ಲಿಂಗವೇ ಗಂಡು. ಅಂಗ, ಶರಣ ಸತಿಗೆ ಲಿಂಗಪತಿಗೆ ಉಪಕರಣ. ಅಂದರೆ ಅಂಗವೆಂಬ ಮನೆಯಲ್ಲಿ ಶರಣಸತಿ ಲಿಂಗಪತಿ ವಾಸವಾಗಿದ್ದಾರೆ. ಮನೆ ಜಡ ; ಇವರಿಬ್ಬರೂ ಚೇತನ.

ಅಂಗದಲ್ಲಿ ಗಂಡು ಹೆಣ್ಣುಗಳೆರಡೂ ಸಂಗಮವಾಗಿವೆ. ಇದನ್ನು ಕಂಡುಕೊಂಡ ಅಂಗವೇ ಲಿಂಗಾಂಗ ಸಾಮರಸ್ಯವನ್ನು ಕಂಡುಕೊಂಡು ಅಂಗವೆಂದು ಅರಿವಿನ ಅಂಗವೆಂದು, ಅರ್ಧನಾರೀಶ್ವರನ ಕಂಡುಕೊಂಡ ಹೆಸರು ಪಡೆಯುತ್ತದೆ.

ಗಂಡು ಹೆಣ್ಣುಗಳೆರಡು ಅಂಗದಲ್ಲಿಯೇ ಕೂಡಿ ಬೇರ್ಪಡಿಸದಂತೆ ಯೋಗವಾಗಿವೆ. ನೀರಲ್ಲಿ ನೀರು ಬೆರಸಿ ಬೇರ್ಪಡಿಸಲು ಬಾರದಂತೆ ಯೋಗವಾಗಿವೆ.

ಸತಿ-ಪತಿಗಳು ಒಂದಾಗಿ ಬೆರೆತು ಆತುರ ಹಿಂಗಿದಲ್ಲಿ ಒಂದಾದ ಯೋಗದ ಆನಂದದಿಂದಾಗಿ ಅಂಗ ಬೇರಾಗುತ್ತವೆ.

ಶರಣ ಸತಿ ಲಿಂಗ ಪತಿ ಎಂಬ ಮಾತು ಮೊದಲಿಗೆ ಮೋಸವಾಗಿ ಕಾಣುತ್ತದೆ. ಲಿಂಗದಲ್ಲಿಯೇ ಲಿಂಗಾಂಗ ಸಮರಸ ಉಂಟಾದಾಗ ಲಾಭಕ್ಕೆ ಅಧೀನವುಂಟೇ? ಸಂತೋಷಕ್ಕೆ ಪಾರವುಂಟೆ? ಪ್ರತಿ ಅಂಗವೂ ಅರಿವಿನ ಲಿಂಗ ; ಸುಖವನ್ನು ಅನುಭವಿಸಿಯೇ ತೀರಬೇಕು.

248

**ಶಿಖಿಯನೆ ಕಟ್ಟಿ, ಮಹೇಶ್ವರಿಕೆಯನೇ ತೊಡುವರೆ,**
**ಆತನ ವೃತ್ತಿಗಳ ತಿಳಿಯಬೇಕಯ್ಯ .**
**ಜಾತಿಸೂತಕವ ನೇತಿಗಳೆದಾತಂಗೆ ದೀಕ್ಷೆಯ ಕೊಟ್ಟಡೆ,**
**ಸುಸರ ನೋಡಾ.**
**ಈ ಸುವನತಿಗಳೆಯದೆ ಉಪದೇಶವ ಮಾಡಿದ ಆಚಾರ್ಯಂಗೆ**

**ಮಾರಿಯೆಂದಾತ ನಂಬಿಗ ಚೌಡಯ್ಯ.**

ದೀಕ್ಷೆ ಪಡೆದೆನೆಂದು ಶಿಖೆಯನು ಕಟ್ಟಿ, ಮಹೇಶ್ವರಿಯ ಉಡುಗೆಯ ತೊಟ್ಟು ವೇಷ ಹಾಕುವವನು ವ್ಯವಹಾರಿ. ಹೊಟ್ಟೆ ಹೊರೆಯುವುದಕ್ಕಾಗಿ ದೀಕ್ಷೆ ಪಡೆದ. ದೀಕ್ಷೆ ಆಯಿತೆಂದು ವೇಷ ಹಾಕಿ ದೀಕ್ಷೆ ಕೊಡಲು ಮುಂದಾದ. ಜಗತ್ತಿನಾದ್ಯಂತ ವ್ಯವಹಾರಿಗಳೇ ತುಂಬಿದ್ದಾರೆ.

ಅಂಗದಲ್ಲಿ ಮಹೇಶ್ವರ ಮಹೇಶ್ವರಿಯರಿಬ್ಬರೂ ಸಂಗಮವಾಗಿದ್ದಾರೆ. ಅವರಿಬ್ಬರ ವೃತ್ತಿ ಗಳನ್ನು ಸಾಕ್ಷಿಯಾಗಿ ತಿಳಿಯಬೇಕು ಎಂದು ಹತ್ತಿರ ಕುಳ್ಳಿರಿಸಿಕೊಂಡು ಉಪದೇಶವ ಮಾಡುವವನೇ ಆಚಾರ್ಯ .

ಆಚಾರ್ಯನಾದವನು ಅಂಗವನ್ನು ಹತ್ತಿರ ಕೂರಿಸಿಕೊಂಡು ಅವರಿಬ್ಬರ ದರ್ಶನ ಮಾಡಿಸುತ್ತಾನೆ. ಪುನಃ ತಾನೇ ದರ್ಶನ ಮಾಡಿಕೊಂಡು ಅಂಗದಲ್ಲಿಯೇ ಸಂಗಮವಾದ ಸಂಗಮನಾಥನ ಮಾರ್ಗದರ್ಶನವನ್ನು ಮಾಡುತ್ತಾನೆ.

ಹೀಗೆ ಪ್ರಾಥಮಿಕ ಜ್ಞಾನದ ಬಯಕೆಯೇ ಆಗದ ಅಂಗಕ್ಕೆ ಪ್ರಾಥಮಿಕ ಜ್ಞಾನ ಮಾಡಿಸುವ ಶಕ್ತಿಯೇ ಇಲ್ಲದ ಆಚಾರ್ಯನು ಆಚಾರ್ಯನಲ್ಲ. ಇಂತಹ ಆಚಾರ್ಯನಿಗೆ ಮಾರಿ ತಪ್ಪಿದ್ದಲ್ಲವೆಂದು ಸ್ಪಷ್ಟವಾಗಿ ನುಡಿದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**249**

**ಶಿವಭಕ್ತನಾದಬಳಿಕ ಅನ್ಯ ಭಜನೆಯ ಮಾಡದಿರಬೇಕು.**
**ಶಿವಭಕ್ತನಾದಬಳಿಕ ಪರಸತಿ,**
**ಪರನಿಂದೆ, ಪರಧನವ ಹಿಡಿಯದಿರಬೇಕು.**
**ಶಿವಭಕ್ತನಾದಬಳಿಕ ಲಿಂಗಕ್ಕೆ ತೋರದೆ ಪ್ರಸಾದವ ಮುಟ್ಟದಿರಬೇಕು.**
**ಅಂಗಲಿಂಗವು ಸಮರಸವಾಗಿರಬೇಕು.**
**ದಾರಿದ್ರ್ಯವು ಬಂದರೆ ಅಂಗವೇ ನಿನ್ನದೆಂದರಿಯಬೇಕು.**
**ಸಂಪತ್ತು ಬಂದರೆ ನಿನ್ನದೆಂದು ಭಾವಿಸಬೇಕು.**
**ಲಿಂಗ ಬಾಹ್ಯರಿಗೆ ನರಕ ತಪ್ಪದು.**
**ಇಷ್ಟಲಿಂಗಮ ವಿಶ್ವಸ್ಯ ಅನ್ಯಲಿಂಗಮುಪಾಸತೇ ।**
**ಶ್ವಾನಯೋನಿ ಶತಂ ಗತ್ವಾ ಚಂಡಾಲಗೃಹಮಾಚರೇತ್ ॥**
**ಇದು ಕಾರಣ, ಪ್ರಾಣ ಲಿಂಗದ ಭಕ್ತಿಯ ಮರೆದು**
**ಯಮ ಪಟ್ಟಣಕ್ಕೆ ಹೋಹೆಂದಾತ**
**ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.**

ಜ್ಞಾನಿಯಾದ ಮೇಲೆ ಅಜ್ಞಾನದ ಸುಖದೊಂದಿಗೆ ಬೆರೆಯದಿರಬೇಕು. ಶಿವಭಕ್ತನೆಂದರೆ ಜ್ಞಾನಿ. ಶಿವ ಎಂದರೆ ಜ್ಞಾನ ;ಅರಿವು. ಅರಿವೇ ಗುರು. ಗುರುದೇವನೇ ಮಹಾದೇವ. ಗುರು ದೇವನೇ ಸದಾಶಿವ ! ಸದಾ ಶಿವನನ್ನು ಮನದ ಮೂಲಕ ಭಜಿಸುವುದೇ ಭಕ್ತಿ . ಅಂದರೆ ಮನದ ಮೂಲಕ ಜ್ಞಾನಕ್ಕೆ ಭಕ್ತಿ ಮಾಡುವವನೇ ಶಿವಭಕ್ತ .

ಮನ ಸತಿಯಾದರೆ ಅರಿವು ಪತಿ. ಮನ ತನುವನ್ನು ಆವರಿಸಿಕೊಂಡಿದೆ ; ಅರಿವು ತನುವಿನಲ್ಲಿ ತನ್ಮಯವಾಗಿದೆ. ಸತಿ-ಪತಿಗಳಿಬ್ಬರೂ ಒಂದಾದ ಮೇಲೆ ಮತ್ತೆ ಸತಿ ಪರಸತಿಯನ್ನು ಹಿಡಿಯಲು ಸಾಧ್ಯವೆ ? ಸತಿ ಸತಿ ಕೂಡಿದಂತಾಗುವುದಿಲ್ಲವೆ ? ಹೆಣ್ಣು ಹೆಣ್ಣಿನೊಂದಿಗೆ ಕೂಡುವ ಬಯಕೆಯಾಗುವುದು ಹೆಣ್ಣಿಗೆ ಸಾಧ್ಯವೆ ? ಹೆಣ್ಣು ಹೆಣ್ಣು ಕೂಡುವ ಕೂಟವನ್ನು ಹೆಣ್ಣು ಮಾನ್ಯ ಮಾಡುವುದಿಲ್ಲ. ಸಮಾಜವೂ ಮಾನ್ಯ ಮಾಡುವುದಿಲ್ಲ. ಹೀಗಾಗಿ ಶಿವಭಕ್ತನಾದ ಮೇಲೆ ಅಂದರೆ ಶಿವನಿಗೆ ಸತಿಯಾದ ಮೇಲೆ ; ಆ ಸತಿ ಪರಸತಿಯನ್ನು ಬಯಸುವುದಿಲ್ಲ.

ಪರನಿಂದೆ ಪರಧನವ ಹಿಡಿಯದಿರಬೇಕು :

ತನ್ನ ತನುವಿನಲ್ಲಿ ಶಿವನೆಂಬ ಅರಿವು ತನ್ಮಯವಾಗಿದ್ದಾಗ ಪರ ತನುವಿನಲ್ಲಿಯೂ ಶಿವ ತನ್ಮಯವಾಗಿದ್ದಾನೆ. ತನ್ನ ತನುವಿನ ಸಂಪತ್ತು ಶಿವನೇ ಇರುವಾಗ ಪರ ತನುವಿನ ಸಂಪತ್ತು ಕೂಡಾ ಶಿವಮಯವೇ ಆಗಿದೆ.

ತನು ತನ್ನದೇ. ತನುವನ್ನು ಆವರಿಸಿದ ಮನ ತನ್ನದೇ. ತನುವಿನಲ್ಲಿ ಸಂಗಮವಾಗಿರುವ ಜ್ಞಾನವೆಂಬ ಧನವೂ ತನ್ನದೇ. ಅಂದರೆ ತನುಮನ ಧನ ತನ್ನದೇ. ಹಾಗೆಯೇ ಸಕಲ ತನುಗಳಲ್ಲಿಯೂ ಈ ಸಂಪತ್ತು ಇದೆ. ಅಂದ ಮೇಲೆ ಪರ ತನುವಿನ ನಿಂದೆಯೆಂದರೆ ಶಿವನಿಂದೆ ಮಾಡಿದಂತೆ. ಶಿವನಿಂದೆಯನ್ನು ಯಾರೂ ಮಾಡುವುದಿಲ್ಲ. ಹಾಗೆಯೇ ತನುವಿನಲ್ಲಿ ಜ್ಞಾನವೆಂಬ ಧನ ಸಂಗಮವಾಗಿರುವಾಗ ಪರಧನದ ಚಿಂತೆಯಾಗಲಿ, ಪರಧನವನ್ನು ಕಬಳಿಸಬೇಕೆಂಬ ಆಸೆಯಾಗಲಿ ಮಾಡುವುದಿಲ್ಲ.

ಶಿವಭಕ್ತನಾದ ಬಳಿಕ ಲಿಂಗಕ್ಕೆ ತೋರದೆ ಪ್ರಸಾದವ ಮುಟ್ಟದಿರಬೇಕು : ಅಂಗಲಿಂಗವು ಸಮರಸವಾಗಿರಬೇಕು :

ನೋಡುವ ಕಣ್ಣಿನಲ್ಲಿ ಮನವೆಂಬ ಭಕ್ತನೂ ಇದ್ದಾನೆ ; ಜ್ಞಾನವೆಂಬ ಶಿವನೂ ಇದ್ದಾನೆ. ಕಣ್ಣು ಇವರಿಬ್ಬರಿಗೂ ಉಪಕರಣವಾಗಿದೆ. ಭಕ್ತ ಹೆಣ್ಣಾದರೆ ಜ್ಞಾನ ಗಂಡು. ಶರಣ ಸತಿಯಾದರೆ ಲಿಂಗ ಪತಿ. ಮನ ಸಖಿಯಾದರೆ ಜ್ಞಾನ ಸಖ. ಇವರಿಬ್ಬರಿಗೂ ಕಣ್ಣು ಉಪಕರಣವಾಗಿ ಆಶ್ರಯ ನೀಡಿದೆ.

ಮನಕ್ಕೆ ಜ್ಞಾನದ ತರಬೇತಿ ಇಲ್ಲದಿದ್ದರೆ ಅಥವಾ ಶಿಕ್ಷಣ ಇಲ್ಲದಿದ್ದರೆ ಮನ ಹೆಣ್ಣಾಗಿ ಗಂಡನ್ನು ನೋಡಿ, ಕಾಮದ ಆಸಕ್ತಿಯನ್ನು ಕೆರಳಿಸಿಕೊಳ್ಳುತ್ತದೆ. ಮನವೇ ಗಂಡಾಗಿ ಹೆಣ್ಣನ್ನು ನೋಡಿ ಕಾಮದ ಬಯಕೆಯನ್ನು ಕೆರಳಿಸಿಕೊಳ್ಳುತ್ತದೆ. ದೇಹ ದೇಹದೊಂದಿಗೆ ಸಂಪರ್ಕಕ್ಕೆ ಹೋಗಿ ರತಿಕ್ರೀಡೆಯಲ್ಲಿ ಭಾಗಿಯಾಗುತ್ತದೆ. ಇದು ಮನದ ಅಜ್ಞಾನದ ಕೆಲಸವೆಂದು ಮನಕ್ಕೆ ಗೊತ್ತಾಗುವುದಿಲ್ಲ; ತನುವಿಗೂ ಗೊತ್ತಾಗುವುದಿಲ್ಲ. ಆದರೆ ತನುವಿನಲ್ಲಿಯೇ ತನ್ಮಯವಾಗಿರುವ ಅಥವಾ ನೋಡುವ ಕಣ್ಣಿನಲ್ಲಿಯೇ ಸಂಗಮವಾಗಿರುವ ಅರಿವೆಂಬ ಲಿಂಗಕ್ಕೆ ಗೊತ್ತಾಗದೇ ಇರುವುದಿಲ್ಲ.

ನೋಟದಲ್ಲಿಯೇ ಬೆರೆತ ಅಜ್ಞಾನ ನೋಟದಲ್ಲಿಯೇ ಸಂಗಮವಾದ ಜ್ಞಾನಕ್ಕೆ ಪ್ರಸಾದವಾದಾಗ ಅಂಗ ಲಿಂಗ ಸಮರಸವಾಗುತ್ತದೆ. ಅಂಗದಲ್ಲಿ ಉತ್ಪತ್ತಿಯಾದ ಅಜ್ಞಾನ ಅಂಗದಲ್ಲಿಯೇ ಸಂಗಮವಾದ ಲಿಂಗದಲ್ಲಿ ಬೆರೆತು ಅಂಗ ಲಿಂಗಾಂಗವಾಗುತ್ತದೆ.

ಸಂಪತ್ತು ಬಂದರೆ ಅದು ಅರಿವಿನ ಲಿಂಗದ ಸಂಪತ್ತು ಎಂದು ಭಾವಿಸುತ್ತದೆ.

ಅಂಗದಲ್ಲಿಯೇ ಸಂಗಮವಾದ ಜ್ಞಾನ ಶಿಕ್ಷಣವನ್ನು ಅರಿತು ಜ್ಞಾನಿಯಾಗದ ಮನಕ್ಕೆ

ಕ್ಷಣಕ್ಷಣಕ್ಕೂ ನರಕ. ರುಚಿಸಿದರೂ ನರಕ.

ತನುವನ್ನು ಆವರಿಸಿದ ಮನ ; ತನುವಿನಲ್ಲಿಯೇ ತನ್ಮಯವಾದ ಜ್ಞಾನ ಶಿಕ್ಷಣವನ್ನು ಅರಿತು ಜ್ಞಾನಿ ತಾನಾಗದಿದ್ದರೆ ಯಮ ಪಟ್ಟಣಕ್ಕೆ ಹೋಗುವುದು ತಪ್ಪದು ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು. ಜ್ಞಾನ ಶಿಕ್ಷಣವನ್ನು ಅರಿತು ಜ್ಞಾನಿಯಾದಾತನೇ ನಿಜ ಶರಣ !

**250**

**ಶಿವಭಕ್ತನ ಮನೆಗೆ ಹೋಗಿ ಒರಳಕ್ಕಿಯನಾಯ್ದು ತಂದು,**
**ಲಿಂಗಕ್ಕೆ ಬೋನವ ಮಾಡಿ, ಜಂಗಮಕ್ಕೆ ನೀಡಿ,**
**ಒಕ್ಕುದ ಕೊಂಡವ ಪೋಪನೈ ಕೈಲಾಸಕ್ಕೆ.**
**ಅವರಿಗೆ ಮುಕ್ಕಣ್ಣನಲ್ಲದೆ ಉಳಿದ ಭುವನತ್ರಯದವರು**
**ಸರಿಯಲ್ಲೆಂದಾತನಂಬಿಗ ಚೌಡಯ್ಯ .**

ಮಹಾಜ್ಞಾನಿಗಳ ಮನೆಗೆ ಹೋಗಿ ಅವರ ಒರಳಲ್ಲಿ ಉಳಿದ ಅಕ್ಕಿಯನು ಆಯ್ದು ತಂದು, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಕ್ಕೆ ಬೋನವ ಮಾಡಿ, ಅಂಗದಲ್ಲಿಯೇ ಸಂಗಮ ವಾದ ಅಜ್ಞಾನವನ್ನು ಕೊಂದು, ಜ್ಞಾನವನ್ನು ಬಳಕೆ ಮಾಡುವ ಜಂಗಮಕ್ಕೆ ಬೋನವ ನೀಡಿ, ಅವರಿಬ್ಬರಿಗೂ ಉಣ್ಣಿಸುತ್ತ ಉಳಿದುದನು ತಾನೂ ಉಣ್ಣುವವನೆ ಕಾಯವೆಂಬ ಕೈಲಾಸ ಸುಖಕ್ಕೆ ಅರ್ಹನು.

ಅಂತಹ ಮಹಾಜ್ಞಾನಿಗಳ ಸರಿಸಮವಾಗಿ ನಿಲ್ಲುವವ ಮುಕ್ಕಣ್ಣನಲ್ಲದೆ ಅನ್ಯರು ಸಮ ವಾಗಲಾರರು. ಏಕೆಂದರೆ ಮುಕ್ಕಣ್ಣ ಬೇರಲ್ಲ ; ತನ್ನನ್ನು ತಾನು ಅರಿತಾತನೂ ಬೇರಲ್ಲ.

ಸ್ಥೂಲಕಾಯ, ಸೂಕ್ಷ್ಮಕಾಯ, ಕಾರಣ ಕಾಯವೆಂದು ಮೂರು ಕಾಯಗಳಿವೆ. ಸ್ಥೂಲ ಕಾಯವೆಂದರೆ ಸಕಲರಿಗೂ ಕಾಣುವ ಕಾಯ. ಕಾರಣ ಕಾಯವೆಂದರೆ ಮಹಾಜ್ಞಾನದ ಕಾಯ. ಇದು ಕಾಣುವುದಿಲ್ಲ. ಜ್ಞಾನಿಗೆ ಕಾಣದೇ ಇರುವುದಿಲ್ಲ. ಮತ್ತೊಂದು ಸೂಕ್ಷ್ಮಕಾಯ. ಈ ಕಾಯ ಸ್ಥೂಲ ಕಾಯವನ್ನು ಆವರಿಸಿದೆ. ಈ ಕಾಯ ಕೂಡಾ ಕಾಣುವುದಿಲ್ಲ.

ಸ್ಥೂಲಕಾಯವೆಂಬ ರಥವನ್ನು ಸೂಕ್ಷ್ಮಕಾಯ ಓಡಿಸುತ್ತಲಿದೆ. ಹೀಗಾಗಿ ಕಾಯದಲ್ಲಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು, ಪಾಪ ಪುಣ್ಯಗಳು, ಸಪ್ತ ವ್ಯಸನಗಳು, ಅಷ್ಟ ಮದಗಳು ಹುಟ್ಟಿವೆ. ಭಾವ ದುರ್ಭಾವಗಳು ಹುಟ್ಟಿವೆ. ಸುಖ ದುಃಖಗಳು ಹುಟ್ಟಿವೆ. ಹೆಣ್ಣು ಗಂಡುಗಳನ್ನು ಸ್ಥೂಲ ಕಾಯದಿಂದ ಸೂಕ್ಷ್ಮಕಾಯ ಗುರುತಿಸುತ್ತದೆ. ಈ ಸುಳ್ಳು ಅಪವಾದಕ್ಕೆ ತಾನೂ ಗುರಿಯಾಗುತ್ತದೆ. ಇದೆಲ್ಲ ಅಜ್ಞಾನವೆಂದು ಸೂಕ್ಷ್ಮ ಕಾಯಕ್ಕೆ ತಿಳಿಯುವುದಿಲ್ಲ. ಹುಟ್ಟಿದಂದಿನಿಂದ ಸಾಯುವವರೆಗೆ ಸ್ಥೂಲ ಕಾಯವನ್ನು ಸೂಕ್ಷ್ಮಕಾಯ ಸುಖ ದುಃಖಗಳ ಮೂಲಕ ಹಂತಹಂತವಾಗಿ ಕೊಲ್ಲುತ್ತದೆ. ಹೀಗೆ ಮಾಡುವುದು ಸೂಕ್ಷ್ಮ ಕಾಯಕ್ಕೆ ಬಲು ಸಂಭ್ರಮ.

ಸೂಕ್ಷ್ಮಕಾಯ ತನ್ನನ್ನು ತಾನು ತಿಳಿಯುವ ಮೂಲಕ ತನ್ನ ದುರ್ಗತಿಗೆ ತಾನೇ ಮರುಗಿ ಸ್ಥೂಲ ಕಾಯದಲ್ಲಿ ಸಂಗಮವಾದ ಮಹಾಜ್ಞಾನ ಕಾಯಕ್ಕೆ ಭಕ್ತಿ ಮಾಡಬೇಕು. ಆಗ ಸೂಕ್ಷ್ಮ ಕಾಯವೇ ಶಿವಭಕ್ತನಾಗಿ ಪರಿವರ್ತನೆಯಾಗುತ್ತದೆ.

ಶಿವಭಕ್ತ ಸದಾ ಶಿವನೆಂಬ ಮಹಾ ಜ್ಞಾನದ ಧ್ಯಾನದಲ್ಲಿಯೇ ತನ್ಮಯನಾಗಿರುತ್ತಾನೆ.

ಜ್ಞಾನ ದಿಂದ ನೋಡುತ್ತಾನೆ. ಜ್ಞಾನದಿಂದ ಕೇಳುತ್ತಾನೆ. ಜ್ಞಾನದಿಂದ ಸ್ಪರ್ಶಿಸಿ, ರುಚಿಸಿ,ಮೂಸಿಸಿ ಆನಂದ ಪಡುತ್ತಾನೆ.

ಜ್ಞಾನಾಸಕ್ತ ಮನ ಸಕಲರೊಂದಿಗೆ ಬೆರೆಯದೆ ಜ್ಞಾನಾಸಕ್ತರೊಂದಿಗೆ ಬೆರೆತು ಅವರ ಸೇವೆಯಲ್ಲಿ ನಿರತವಾದಾಗ ತನಗೂ ಜ್ಞಾನದ ಕೆಲಸ ಸುಗಮವಾಗುತ್ತದೆ. ಇದನ್ನು ಮಾತ್ರ ಶರಣರು ಕಾಯಕವೆಂದು ಕರೆದರು. ಸೂಕ್ಷ್ಮಕಾಯ ಜ್ಞಾನ ಕಾಯದಲ್ಲಿ ಲೀನವಾಗುವ ಕಾಯಕ. ಸಹಜ ಕಾಯವೇ ತಾನಾಗುವ ಮಹಾ ಕಾಯಕ. ಇದು ಒಂದು ಜ್ಞಾನಯಜ್ಞ !

ಜ್ಞಾನಯಜ್ಞದಲ್ಲಿ ನಿಪುಣವಾದ ಕಾಯವೇ ಕೈಲಾಸ. ಆ ಕಾಯದಲ್ಲಿ ಜ್ಞಾನದ ಮೂರನೇ ಕಣ್ಣುಳ್ಳ ಮುಕ್ಕಣ್ಣ ವಾಸವಾಗಿದ್ದಾನೆ. ಆತನಿಗೆ ಭುವನ ತ್ರಯದ -ಮನುಜರು ಸರಿಸಾಟಿಯಾಗಲಾರರು. ದೇವಾನುದೇವತೆಗಳು ರಾಜ ಮಹಾರಾಜರು ಚಕ್ರವರ್ತಿಗಳು ಸಾಮ್ರಾಟರು ಸರಿಸಾಟಿ ಯಾಗಲಾರರು. ಆತ ಮಹಾವೀರ. ಬುದ್ಧ. ವಿರಾಟಸ್ವರೂಪಿ.

ಜ್ಞಾನದ ಕಾಯಕದಲ್ಲಿ ತೊಡಗುವ ಕಾಯವುಳ್ಳ ಯಾರಾದರೂ ಈ ಸ್ಥಾನವನ್ನು ಅಲಂಕರಿ ಸಬಹುದಾಗಿದೆ.

**251**

**ಶಿವಭಕ್ತಿ ಶಿವಾಚಾರ ಬೇಕಾದ ಭಕ್ತನು ತನ್ನ ಮಠಕ್ಕೆ ಬಂದ ಲಿಂಗ ಜಂಗಮದ**
**ಸಮಯಾಚಾರ ಸಮಯ ಭಕ್ತಿಯ ನಡೆಸಬೇಕಯ್ಯ . ಬಂದ ಲಿಂಗ ಜಂಗಮದ**
**ಸಮಯ ಭಕ್ತಿಯ ತಪ್ಪಿಸಿ ಮುಂದೆ ಶಿವಪೂಜೆಯ ಮಾಡಿ ಫಲಪದವ ಪಡೆವೆನೆಂಬ**
**ಹಂದಿಗಳೆತ್ತ ಬಲ್ಲರಯ್ಯಾ ಸತ್ಯದ ನೆಲೆಯ.**
**ಮುಂದಿರ್ದ ನಿಧಾನವ ಕಾಣಲರಿಯದೆ**
**ಸಂದಿಗೊಂದಿಯ ಹೊಕ್ಕು ಅರಸಿ ಬಳಲುವ ಅಂಧಕನಂತೆ,**
**ಎಂದಾದರೂ ತನ್ನ ವ್ಯಸನವೆತ್ತಿದಾಗ**
**ಒಂದೊಂದು ಪರಿಯಲ್ಲಿ ಸಿದ್ಧಾನ್ನಂಗಳಂ ಮಾಡಿ**
**ಚೆಂದ ಚೆಂದದಲಿ ಬೋನ ಪದಾರ್ಥಂಗಳಂ ಮಾಡಿ**
**ತಮ್ಮ ಹಿಂದಣ ಮುಂದಣ ಹರಕೆಯನೊಡಗೂಡಿ**
**ಬಂಧು ಬಳಗವ, ಮುಯ್ಯೂಟವ ಕೂಡಿ**
**ಆ ದಿನದಲ್ಲಿ ಚಂದ್ರಶೇಖರನ ಭಕ್ತರಿಗೆ ದಣಿಯೆ ಉಣಲಿಕ್ಕಿದೆನೆಂಬ**
**ಅಂಧಕ ಮೂಳ ಹೊಲೆಯರಿಗೆ**
**ಎಂದೆಂದಿಗೂ ಮುಕ್ತಿಯಿಲ್ಲವೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಶಿವಭಕ್ತ ಶಿವಾಚಾರ ಬೇಕಾದ ಭಕ್ತನು ತನ್ನ ಮಠಕ್ಕೆ ಬಂದ ಲಿಂಗ ಜಂಗಮದ ಸಮಯಾಚಾರ ಸಮಯ ಭಕ್ತಿಯ ನಡೆಸಬೇಕಯ್ಯಾ :

ಶಿವ ಅಂದರೆ ಅಗೋಚರ ಶಕ್ತಿ . ಶಿವಾಚಾರವೆಂದರೆ ಅಗೋಚರ ಆಚಾರ. ಆದರೆ ಶಿವಭಕ್ತನಾದವನು ಶಿವಪೂಜೆಯನು ಮಾಡುತ್ತಾನೆ. ಇಷ್ಟಲಿಂಗದ ಪೂಜೆಯನು ಮಾಡುತ್ತಾನೆ. ಮಠಕೆ ಬಂದ ಭಕ್ತರನ್ನು ಹಾಗೆ ಶಿವಪೂಜೆಯನ್ನು ಮಾಡಲು ಪ್ರೇರೇಪಿಸುತ್ತಾನೆ. ಕೈಯಲ್ಲಿ ಲಿಂಗ

ಹಿಡಿದು ಜಲದಿಂದ ಶುದ್ಧಿ ಮಾಡಿ, ಪತ್ರಿ ಪುಷ್ಪಗಳಿಂದ ಪೂಜಿಸುವ ಪೂಜೆ ಸಕಲರಿಗೂ ಕಾಣುತ್ತದೆ. ಈ ಪೂಜೆಯಿಂದ ಫಲಪದ ಸಿಗುತ್ತದೆ. ಆದರೆ ತನುವಿನಲ್ಲಿ ಉಂಟಾಗುವ ಸಂಕಟಗಳು ತೊಲಗುವುದಿಲ್ಲ.

ತನುವೇ ಅರಿವಿನ ಇಷ್ಟಲಿಂಗ ; ಅಲ್ಲಿ ಐದು ಲಿಂಗಗಳು ಸ್ಥಾಪಿಸಲ್ಪಟ್ಟಿವೆ.

ಕಣ್ಣು,ಕಿವಿ,ಮೂಗು, ನಾಲಿಗೆ, ಚರ್ಮ ಇವು ತನುವಿನಲ್ಲಿ ಸಂಗಮವಾದ ಐದು ಅರಿವಿನ ಲಿಂಗಗಳು. ಈ ಲಿಂಗಗಳಿಗೆ ಸ್ನಾನ ಮಾಡಿಸಬೇಕಿಲ್ಲ. ಧೂಪ ದೀಪಾರತಿ ಬೆಳಗಬೇಕಿಲ್ಲ. ವಿಭೂತಿ ಕುಂಕುಮ ಗಂಧ ಧರಿಸಬೇಕಿಲ್ಲ. ಪತ್ರಿ ಪುಷ್ಪಾರ್ಚನೆ ಮಾಡಿ ಪ್ರಾರ್ಥಿಸಬೇಕಿಲ್ಲ. ಹೀಗೆ ಮಾಡುವುದು ಗೋಚರದ ಆಚಾರ. ಈ ಆಚಾರ ಅರಿವಿನ ಲಿಂಗಯ್ಯನಿಗೆ ಬೇಕಿಲ್ಲ.

ನೋಡಿದರೆ ತನ್ನನ್ನು ತಾನೇ ನೋಡಿದಂತಿರಬೇಕು. ನೋಡುವ ನೋಟದಲ್ಲಿ ಹಾದರ ಆಸೆ ಆಮಿಷಂಗಳು ಮೂಡದಿರಬೇಕು. ಸೂರ್ಯನ ಕಿರಣಗಳು ಜಗವನ್ನು ಬೆಳಗಬೇಕು. ಜಗವನ್ನು ಬೆಳಗುವ ಸೂರ್ಯನನ್ನು ಬೆಳಗಬೇಕು. ಏಕೆಂದರೆ ಸೂರ್ಯನ ಬೆಳಕಿಗೆ ಅರಿವಿಲ್ಲ. ಕಣ್ಣಿನಿಂದ ಬೆಳಗುವ ಬೆಳಕಿಗೆ ಅರಿವಿದೆ. ಆನಂದವಿದೆ. ಅದರಲ್ಲಿ ಶಿವಭರಿತವಾಗಿದ್ದಾನೆ. ಹೀಗಾಗಿ ಕಣ್ಣನ್ನು ಮುಕ್ಕಣ್ಣನ ಕಣ್ಣು ಎಂದು ಕರೆದಿದ್ದಾರೆ. ಕಣ್ಣು ಮುಕ್ಕಣ್ಣನ ಕಣ್ಣಿನ ಮೂಲಕ ಜಗತ್ತನ್ನು ನೋಡುವ ಆಚಾರವೇ ಶಿವಾಚಾರ. ಈ ಆಚಾರ ಗೋಚರದ ಆಚಾರವಲ್ಲ. ಅಜ್ಞಾನ ಕಳೆದುಕೊಂಡು ನೋಡುವ ಅಗೋಚರದ ಆಚಾರ. ಇದು ಶಿವಭಕ್ತನ ಆಚಾರ. ಲಿಂಗಜಂಗಮದ ಸಮಯಾಚಾರ. ಇದನ್ನು ಸಮರ್ಥ ಭಕ್ತನು ಮಾತ್ರ ನಡೆಸಬಲ್ಲ.

ಈ ಆಚಾರದಿಂದ ಕಣ್ಣಲ್ಲಿರುವ ಸಂಪತ್ತನ್ನು ಕಣ್ಣೇ ಪಡೆದುಕೊಳ್ಳುತ್ತದೆ. ಈ ಸಂಪತ್ತು ಪಡೆದುಕೊಳ್ಳದವನು ಅಂಧಕನಂತೆ. ಕಣ್ಣಿದ್ದೂ ಕುರುಡ.

ಮೃಷ್ಟಾನ್ನಗಳನ್ನು ಸಿದ್ಧಪಡಿಸಿ, ಜಂಗಮರನ್ನು ಕರೆಯಿಸಿ, ಭಕ್ತರಿಗೆ ಪೂಜಾದಿ ಪರಿಕರಗಳನ್ನು ಏರ್ಪಡಿಸಿ, ಲಿಂಗಪೂಜೆಯನ್ನು ಮಾಡಿ, ಊಟ ಮಾಡಿಸುವುದು ಮುಯ್ಯೂಟವನು ತೀರಿಸಿದಂತೆ. ಭಕ್ತರಿಗೆ ದಣಿಯೆ ಉಣಲಿಕ್ಕಿದೆನೆಂಬ ಅಹಂಕಾರವನ್ನು ಹೆಗಲಿಗೆ ಹಾಕಿಕೊಂಡಂತೆ. ಗೋಚರದ ಆಚಾರದ ಪೂಜೆಗೆ ಎಂದೆಂದಿಗೂ ಮುಕ್ತಿಯಿಲ್ಲ ಎಂದು ಅಂಬಿಗರ ಚೌಡಯ್ಯ ನುಡಿದಿದ್ದಾರೆ.

**252**

**ಶೀಲವಂತನೆಂಬವ ಶಿವದ್ರೋಹಿ,**
**ಭಾಷೆವಂತನೆಂಬವ ಬ್ರಹ್ಮೇತಿಕಾರ,**
**ನೇಮಸ್ತನೆಂಬವ ನೇಮಕ್ಕೆ ಗುರಿಯಾದ,**
**ಅಚ್ಚ ಪ್ರಸಾದಿ ನಿಚ್ಚಕುನ್ನಿ.**
**ಇವರು ನಾಲ್ವರು ಹೋದಲ್ಲಿ ಹೊಗಲಾಗದು, ಬಂದಲ್ಲಿ ಬರಲಾಗದು,**
**ನಿಂತಲ್ಲಿ ನಿಲಲಾಗದು, ಕುಳಿತಲ್ಲಿ ಕುಳ್ಳಿರಲಾಗದು,**
**ಈ ನಾಲ್ವರಿಗೂ ಲಿಂಗವಿಲ್ಲ, ಗುರುವಿಲ್ಲ, ಜಂಗಮವಿಲ್ಲ,**
**ಪಾದೋದಕ ಪ್ರಸಾದವಿಲ್ಲ, ನಾ ಮೊದಲೇ ಇಲ್ಲ.**
**ಅದೇನು ಕಾರಣವೆಂದಡೆ,**

**ನಿರಂತರ ಜಂಗಮು ಕೈ ಕಡವಶವಾಗಿ ಬರುತ್ತಿರಲು**
**ಅವರ ಕಪ್ಪರ ಬಟ್ಟಲು ನಮ್ಮ ಭಾಜನ ಭಾಂಡವ ಮುಟ್ಟಬಾರದು ಎಂಬ**
**ಮನದ ಹೊಲೆಯರಿಗೆಲ್ಲಿಯ ಶೀಲವೋ ಅಂಬಿಗರ ಚೌಡಯ್ಯ !**

ತ್ರಿಕಾಲದಲ್ಲಿ ಶಿವನನ್ನು ಆರಾಧಿಸುವ ಶೀಲವಂತನಿಗೆ ಶಿವನಾರು ಎನ್ನುವುದೇ ಗೊತ್ತಿಲ್ಲ. ಹೀಗಾಗಿ ಶೀಲವಂತ ಶಿವದ್ರೋಹಿ ಎಂದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಭಾಷೆಯ ಮೂಲಕ ನಿರರ್ಗಳವಾಗಿ ಬ್ರಹ್ಮನ ಬಗ್ಗೆ ಮಾತನಾಡಿ ಹೌದೌದೆಂದು ಬೆನ್ನು ತಟ್ಟಿಸಿಕೊಳ್ಳುವ ಬ್ರಹ್ಮೇತಿಕಾರ. ಅವನೆಂದೂ ಸ್ವಯಂಬ್ರಹ್ಮನಾಗಲಾರ. ಭ್ರಮೆಯನ್ನು ಕಳೆದು ಕೊಂಡು ಬ್ರಹ್ಮನಾಗುವ ಕಲೆ ಅವನಿಗೆ ಸಿದ್ಧಿಯಾಗಲಾರದು.

ಹಾಲು ಪಾಯಸ ಹೋಳಿಗೆ ಕರಿಗಡಬು ನೈವೇದ್ಯ ಮಾಡಿ ನೇಮಸ್ಥನಾದನೆ ಹೊರತು, ನೇಮಕ್ಕೆ ಗುರಿಯಾದನೆ ಹೊರತು ನಿತ್ಯ ನಿತ್ಯ ತನ್ನನ್ನು ತಾನು ತಿಳಿದು ತನ್ನ ಅಜ್ಞಾನವನ್ನು ತನ್ನದೇ ಆದ ಜ್ಞಾನಕ್ಕೆ ಎಡೆ ಮಾಡಲಿಲ್ಲ. ತನ್ನ ಅಜ್ಞಾನ ತನ್ನ ಜ್ಞಾನಕ್ಕೆ ಪ್ರಸಾದವಾಗಲಿಲ್ಲ. ಹೀಗಾಗಿ ಈ ನಾಲ್ವರೂ ಹೋದಲ್ಲಿ ಜ್ಞಾನಿ ಹೋಗಲಾರ. ಈ ನಾಲ್ವರು ಬಂದಲ್ಲಿ ಜ್ಞಾನಿ ಬರಲಾರ. ಇವರು ನಿಂತಲ್ಲಿ ನಿಲ್ಲಲಾರ, ಕುಳಿತಲ್ಲಿ ಕುಳ್ಳಿರಲಾರ.

ಈ ನಾಲ್ವರಿಗೂ ಲಿಂಗವಿಲ್ಲ, ಗುರುವಿಲ್ಲ, ಜಂಗಮನಿಲ್ಲ, ಪ್ರಸಾದವಿಲ್ಲ. ನಾನು ಯಾರು ಎಂಬುದನ್ನು ಮೊದಲೇ ತಿಳಿದಿಲ್ಲ. ಏಕೆಂದರೆ ತಾನು ಸ್ವತಹ ಜಂಗಮನಾಗಿದ್ದು, ಗುರುವು ಕೂಡಾ ತಾನೇ ಆಗಿದ್ದು, ಲಿಂಗವೂ ತಾನೇ ಆಗಿದ್ದು, ಪಾದೋದಕ, ಪ್ರಸಾದಿಯೂ ತಾನೇ ಆಗಿದ್ದು, ಶೀಲವಂತನೆಂಬ ಅಜ್ಞಾನದ ವೇಷ ಧರಿಸಿ ಶಿವನನ್ನು ಹೊರಗೆ ಆರಾಧಿಸುತ್ತಿದ್ದಾನೆ. ಬ್ರಹ್ಮನು ತಾನೇ ಇದ್ದು ಭಾಷೆಯಿಂದ ಹೊರಗೆ ಆರಾಧಿಸುತ್ತಿದ್ದಾನೆ. ಅನಿಯಮನು ತಾನೇ ಇದ್ದು ನಿಯಮಗಳಿಗೆ ಗುರಿಯಾಗಿದ್ದಾನೆ. ಸಕಲ ಅಜ್ಞಾನವನ್ನು ತನ್ನ ಜ್ಞಾನದಿಂದಲೇ ಸ್ವೀಕರಿಸುವ ಪ್ರಸಾದಿ ತಾನೆ ಇದ್ದು ಅಚ್ಚ ಪ್ರಸಾದಿಕನ ನಿಯಮವನ್ನು ಆಚರಿಸುತ್ತಿದ್ದಾನೆ. ಈ ಎಲ್ಲ ಆಚರಣೆಗಳನ್ನು ಕೈಕಡವಾಗಿ ಪಡೆದು ಆಚರಿಸುವ ಜಂಗಮ ಜಂಗಮನಲ್ಲ. ಜಂಗಮ ಬೇಡುವವನಲ್ಲ. ಜಂಗಮನಿಗೆ ಕೈಕಡದ ಅವಶ್ಯಕತೆಯೂ ಇಲ್ಲ. ಅವನು ಮಹಾಜ್ಞಾನಿ. ಸರ್ವ ಅಜ್ಞಾನವನ್ನು ಕೊಂದು ಪ್ರಸಾದ ಮಾಡಿಕೊಂಡು ಬುಂಜಿಸುವವನು.

ವೇಷಧಾರಿ, ಅಜ್ಞಾನಿ ಜಂಗಮನ ಕಪ್ಪರ ಬಟ್ಟಲುಗಳನ್ನು ಜ್ಞಾನಿ ತನುವಿನಿಂದ ಮುಟ್ಟಬಾರದು. ಆದರೆ ನೇಮಸ್ಥ ಜ್ಞಾನಿಯನ್ನು ಗುರುತಿಸಲಾರ. ಆತನಿಗೆ ಕೈಕಡವೆಂಬುದೇ ಗೊತ್ತಿಲ್ಲ. ಗುರು ಲಿಂಗ ಜಂಗಮನೂ ಆತನೇ. ಆತನಿಗೆ ಯಾವ ನಿಯಮಗಳೂ ಇಲ್ಲ. ಅನಿಯಮದ ಬೆಡಗು ಆತ. ವೇಷವೇ ಧರಿಸದ ನಿಜ ಜಂಗಮನ ಭಾಂಡ ಭಾಜನ ಮುಟ್ಟಬಾರದು ಎಂಬ ಹೊಲೆ ಮನಕ್ಕೆ ಎಲ್ಲಿಯ ಶೀಲವೊ ಎಂದು ಪ್ರಶ್ನಿಸಿದ್ದಾರೆ ಅಂಬಿಗರ ಚೌಡಯ್ಯ .

**253**

**ಶೀಲವಂತರು ಶೀಲವಂತರು ಎಂದು ಶೀಲದಲ್ಲಿ ಆಚರಿಸುವ ಅಣ್ಣಗಳೇ**
**ನಿಮ್ಮ ಶೀಲವಾವುದು ಹೇಳಿರೋ,**
**ಅರಿಯದಿದ್ದರೆ ಕೇಳಿರೋ :**
**ಶಿರಸ್ಸಿನಲ್ಲಿ ಶಿವನಿಪ್ಪ, ಕಟಿಯಲ್ಲಿ ವಿಷ್ಣುವಿಪ್ಪ, ಆಧಾರದಲ್ಲಿ ಬ್ರಹ್ಮನಿಪ್ಪ,**

**ಲಲಾಟದಲ್ಲಿ ವಿಭೂತಿ ರುದ್ರಾಕ್ಷಿ , ಜಿಹ್ವೆಯಲ್ಲಿ ಪಂಚಾಕ್ಷರಿಯು.**
**ಇಂತಪ್ಪ ಅಷ್ಟಾವರಣದಲ್ಲಿ ಸವೆಯದೆ, ಸಂಸಾರವೆಂಬ ಶರಧಿಯಲ್ಲಿ**
**ಮುಳುಗೇಳುವವರು ಶೀಲವಂತರಲ್ಲ.**
**ಬರಿದೆ ನಾವು ಶೀಲವಂತರೆಂಬುವ ಮನುಜ ಕೇಳು :**
**ಕಣ್ಣೇ ಕಂಚುಗಾರ, ಕರ್ಣವೇ ಬಣಜಿಗ, ಮೂಗೇ ಈಳಿಗ,**
**ಕೊರಳೇ ಕುಂಬಾರ, ತುಟಿಯೇ ಹೆಂಡಗಾರ, ಹಲ್ಲೇ ಕಲ್ಲುಕುಟಿಗ,**
**ತಲೆಯೇ ಮೋಪುಗಾರ, ಬೆನ್ನೇ ಜೇಡ, ಅಂಗೈಯೇ ಅಕ್ಕಸಾಲಿಗ,**
**ಮುಂಗೈಯೇ ಬಡಿಗ, ಕರವೇ ಕೋಮಟಿಗ,**
**ಕಣಕಾಲೇ ಕಾಳಿಂಗ, ಕುಂಡಿಯೇ ಕುಡುವಕ್ಕಲಿಗ,**
**ಒಳದೊಡೆಯೇ ಸಮಗಾರ, ಹೊರದೊಡೆಯೇ ಮಚ್ಚಿಗ,**
**ಮೇಗಾಡಿ ಹೊಲೆಯ, ಬುದ್ಧಿಯೇ ಬಯಲಗಂಬಾರ.**
**ಇಂತಪ್ಪ ಕುಲ ಹದಿನೆಂಟು ಜಾತಿ ಎಲುಮಾಂಸವನು ತುಂಬಿಟ್ಟುಕೊಂಡು**
**ನನ್ನ ಕುಲ ಹೆಚ್ಚು, ನಿನ್ನ ಕುಲ ಕಡಿಮೆ ಎಂದು ಹೊಡೆದಾಡುವಂತಹ**
**ಅಣ್ಣಗಳನ್ನು ಹಿಡಿತಂದು ಮೂಗನೆ ಸವರಿ ಮೆಣಸಿನಹಿಟ್ಟು ತುಪ್ಪವ ತುಂಬಿ**
**ನಮ್ಮ ಪಡಿಹಾರಿ ಉತ್ತಣ್ಣನ ವಾಮ ಪಾದುಕೆಯಿಂದ ಪಡಪಡನೆ ಹೊಡಿ ಎಂದಾತ,**
**ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.**

ಶೀಲ ಮಾಡಲು ಕಾರಣವಾದ ಮನವೇ ವೇಶ್ಯೆ ವಿಟನಾಗಿ ಹಾದರ ಮಾಡುತ್ತದೆ. ಹಾಗೆಯೇ ಮೂರುಬಾರಿ ಸ್ನಾನ ಮಾಡುತ್ತ , ಮಡಿ ಮೈಲಿಗೆಗಳನ್ನು ಎಣಿಸುತ್ತಾ , ಸಂಧ್ಯಾವಂದನೆಗಳನ್ನು ಮಾಡುತ್ತ ಶೀಲ ಮಾಡುತ್ತದೆ.

ಸಕಲರೂ ತನ್ನನ್ನು ನೋಡಲಿ ಎಂದು ಜಪತಪಗಳನ್ನು ಮಾಡುತ್ತ ಧ್ಯಾನ ಪೂಜಾದಿಗಳನ್ನು ಮಾಡುತ್ತ ವೇಷ ಭೂಷಣಗಳನ್ನು ಧರಿಸಿ ಸಕಲರೂ ಕೇಳಲಿ ಎಂದು ಗಟ್ಟಿಯಾಗಿ ಮಂತ್ರೋಚ್ಚಾರಣೆ ಮಾಡುತ್ತದೆ. ಶೀಲ ಮಾಡುವುದು ಮನವೇ. ಹಾದರ ಮಾಡುವುದು ಕೂಡಾ ಮನವೇ ಆಗಿದೆ.

ಶೀಲ ಮಾಡುವಾಗ ಮನ ವೇಷ ಭೂಷಣಗಳನ್ನು ಧರಿಸಿಕೊಂಡು ಸಕಲರಿಗೂ ಕಾಣುವಂತೆ ಶೀಲ ಮಾಡುತ್ತದೆ. ಆದರೆ ಮನ ತನ್ನ ಸುಖಕ್ಕಾಗಿ ಶೀಲದ ವೇಷ ಧರಿಸಿದ ತನುವಿನ ಮೂಲಕ ಮನದಿಂದ ಹಾದರವನ್ನು ಮಾಡುತ್ತದೆ. ಇವೆರಡೂ ಕೆಲಸವನ್ನು ಮನ ತನುವಿನ ಮೂಲಕ ಏಕ ಕಾಲದಲ್ಲಿಯೇ ಮಾಡುತ್ತದೆ.

ಬಹಿರಂಗವಾಗಿ ಸಕಲರಿಗೂ ಕಾಣುವಂತೆ ಹಾದರ ಮಾಡುವ ಮನ ಶೀಲ ಮಾಡುವುದಿಲ್ಲ. ಆದರೆ ಜ್ಞಾನ ಸಂಗಮವಾದ ತನುವಿಗೆ ಹಾದರದ ಪಟ್ಟ ಕಟ್ಟುತ್ತದೆ.

ಶೀಲ ಮಾಡುವ ತನುವೂ ಶೀಲವಂತನದಲ್ಲ ; ಹಾದರ ಮಾಡುವ ತನುವೂ ಹಾದರವಂತನದ್ದಲ್ಲ. ಮನಕ್ಕೆ ಶೀಲವೆಂದರೂ ಸುಖ ; ಹಾದರವೆಂದರೂ ಸುಖ. ತನುವನ್ನು ಮನ ಬಳಸಿಕೊಂಡು ಇವೆರಡೂ ಕೆಲಸಗಳನ್ನು ಮಾಡುತ್ತದೆ.ಆದರೆ ತನುವಿನಲ್ಲಿ ಸಂಗಮವಾದ ಜ್ಞಾನ ಮನವನ್ನು ಎಚ್ಚರಿಸುತ್ತಲೇ ಇರುತ್ತದೆ. ಮನ ಮಾತ್ರ ಶೀಲ ಮತ್ತು ಹಾದರಗಳನ್ನು ಕಳೆದುಕೊಂಡು ಜ್ಞಾನದ ಹತ್ತಿರ ಹೋಗುವುದೇ ಇಲ್ಲ.

ಅಂಬಿಗರ ಚೌಡಯ್ಯ ಶರಣರು ತನುವನ್ನು ಬಹಳ ಸುಂದರವಾಗಿ ಬಣ್ಣಿಸಿದ್ದಾರೆ :

ಶಿರದಲ್ಲಿ ಅರಿವೆಂಬ ಶಿವನಿದ್ದಾನೆ. ಸೊಂಟದಲ್ಲಿ ತನುವನ್ನು ರಕ್ಷಣೆ ಮಾಡುವ ವಿಷ್ಣುವಿದ್ದಾನೆ. ತನುವಿನ ತಳದಲ್ಲಿ ಬ್ರಹ್ಮನಿದ್ದಾನೆ. ಹಣೆಯಲ್ಲಿ ವಿಭೂತಿ ರುದ್ರಾಕ್ಷಿಯಿದೆ. ನಾಲಗೆಯಲ್ಲಿ ನಮಃ ಶಿವಾಯವೆಂಬ ಪಂಚಾಕ್ಷರಿಗಳು ನಾಟ್ಯ ಮಾಡುತ್ತಲಿವೆ.

ತನುವಿನಲ್ಲಿ ಸಂಗಮವಾದ ಇಂತಹ ಜ್ಞಾನಾಮೃತದಲ್ಲಿ ಮನ ಸವೆಯದೆ ಶೀಲ ಮತ್ತು ಹಾದರದ ಸುಖದಲ್ಲಿ ಅಜ್ಞಾನದಿಂದ ಆಯುಷ್ಯ ಕಳೆಯುತ್ತಲಿದೆ.

ಕಂಚುಗಾರ ಬಣಜಿಗ ಈಳಿಗ ಕುಂಬಾರ ಹೆಂಡಗಾರ ಕಲ್ಲುಕುಟಿಗ ಮೋಪುಗಾರ ಜೇಡ ಅಕ್ಕಸಾಲಿಗ ಬಡಿಗ ಕೋಮಟಿಗ ಕಾಳಿಂಗ ಕುಡುವಕ್ಕಲಿಗ ಸಮಗಾರ ಮಚ್ಚಿಗ ಹೊಲೆಯ ಬಯಲಗಂಬಾರ ಎಂದು ಹೆಸರಿಸುವ ನಾನಾ ಜಾತಿಗಳನ್ನು ದೇಹದಿಂದಲೇ ಗುರುತಿಸುತ್ತಾರೆ. ಹಾಗೆಯೇ ಹೆಣ್ಣು ಗಂಡು ಎಂಬುದನ್ನು ಕೂಡಾ ದೇಹದಿಂದಲೇ ಗುರುತಿಸುತ್ತಾರೆ.

ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮದಲ್ಲಿ ಸಂಗಮವಾದ ಜ್ಞಾನ ಒಂದೇ. ಅವುಗಳಲ್ಲಿ ಹರಿಯುವ ರಕ್ತ ಒಂದೇ. ಮಾಂಸ ಮಜ್ಜೆ ಮೇದಸ್ಸು ಒಂದೇ. ರೋಮ ಒಂದೇ. ದೇಹಕ್ಕೆ ಸಂಬಂಧಪಟ್ಟ ಇವು ಯಾವೂ ಹೆಣ್ಣೂ ಅಲ್ಲ ಗಂಡೂ ಅಲ್ಲ. ಇವುಗಳಿಗೆ ಜಾತಿ ಮತ ಪಂಥ ಧರ್ಮ ದೇಶಗಳಿಲ್ಲ. ದೇಹವನ್ನು ಆವರಿಸಿದ ಅಜ್ಞಾನವನ್ನು ದೇಹದಲ್ಲಿ ಸಂಗಮವಾದ ಜ್ಞಾನದಿಂದಲೇ ಕಳೆದುಕೊಳ್ಳಬೇಕು.

**254**

**ಶುಕ್ಲ ಶೋಣಿತ ಪಿಂಡೈಕ್ಯನ ಚಿತ್ತವಾಯು ಆರು ದಳದ ಪದ್ಮದಲ್ಲಿಹುದು**
**ಮೊಲೆ ಮುಡಿ ಬಂದರೆ ಆ ಪಿಂಡವನು ಹೆಣ್ಣೆಂಬರು.**
**ಗಡ್ಡ ಮೀಸೆ ಬಂದರೆ ಆ ಪಿಂಡವನ್ನು ಗಂಡೆಂಬರು,**
**ಆ ಇಬ್ಬರ ನಡುವೆ ಸುಳಿದ ಆತ್ಮನು**
**ಹೆಣ್ಣು ಅಲ್ಲ, ಗಂಡು ಅಲ್ಲ ನೋಡಾ**
**ಇದರಂತುವ ತಿಳಿದು ನೋಡಿಹೆನೆಂದರೆ**
**ಶ್ರುತಿಗಳಿಗಗೋಚರೆಂದ ನಮ್ಮ ಅಂಬಿಗರ ಚೌಡಯ್ಯ .**

ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಇವುಗಳು ಸೋರದಂತೆ ಹೆಣೆದುಕೊಂಡಿರುವ ಚರ್ಮದಲ್ಲಿ ಅರಿವು ಸಂಗಮವಾಗಿದೆ. ಅಲ್ಲಿಯೇ ಐಕ್ಯವಾಗಿದೆ. ಈ ಆರುದಳದ ಪದ್ಮದಲ್ಲಿಯೇ ಮಹಾಜ್ಞಾನವೆಂಬ ಜ್ಞಾನೇಶ್ವರನು ಅಡಗಿದ್ದಾನೆ. ಅ ಜ್ಞಾನೇಶ್ವರ ಹೊತ್ತ ಪಿಂಡವನ್ನು ಹೆಣ್ಣು ಎನ್ನುತ್ತಾರೆ, ಗಂಡು ಎನ್ನುತ್ತಾರೆ.

ಅಂಗದಲ್ಲಿ ಸಂಗಮವಾದ ಜ್ಞಾನ ಹೆಣ್ಣು ಅಲ್ಲ. ಗಂಡೂ ಅಲ್ಲ, ಹೆಣ್ಣು ಗಂಡೆಂಬ ದೇಹದಲ್ಲಿ ಸುಳಿದ ಜ್ಞಾನೇಶ್ವರನು ಹೆಣ್ಣು ಅಲ್ಲ, ಗಂಡೂ ಅಲ್ಲ. ಈಶ್ವರನನ್ನು ತಿಳಿಯುವ ಮನವೇ ನಾರಿ. ತಿಳಿದರೆ ಈಕೆ ಕೂಡಾ ಅರ್ಧನಾರೀಶ್ವರಿ.

ಜ್ಞಾನೇಶ್ವರ ಶ್ರುತಿಗಳಿಗೆ ಅಗೋಚರ . ವೇದ, ಆಗಮ, ಉಪ ನಿಷತ್ತು, ಭಗವದ್ಗೀತೆ, ಬೈಬಲ್, ಕುರಾನ್‌ಗಳಿಂದ ಈತನನ್ನು ತಿಳಿಯಲು ಸಾಧ್ಯವಿಲ್ಲ. ಏಕೆಂದರೆ ಸಕಲ ಗ್ರಂಥಗಳೂ

ದೇಹದಿಂದಲೇ ಜನ್ಮ ತಳೆದಿವೆ. ದೇಹದಲ್ಲಿ ಸಂಗಮುವಾದ ಜ್ಞಾನೇಶ್ವರನನ್ನು ಗ್ರಂಥಗಳು ತಿಳಿಯಲು ಅರಿಯವು. ಅವುಗಳ ಮೂಲಕ ಕೂಡಾ ಈಶ್ವರನನ್ನು ತಿಳಿಯಲು ಆಗುವುದಿಲ್ಲ.

ದೇಹವನ್ನು ಆವರಿಸಿದ ಮನದಿಂದಲೇ ದೇಹದಲ್ಲಿ ಸಂಗಮುವಾದ ದೇವರನ್ನು ತಿಳಿಯಬೇಕು. ಆತ ಅರಿವಿನ ದೇವರು ಅರಿವು ಹೆಣ್ಣು ಅಲ್ಲ, ಗಂಡೂ ಅಲ್ಲ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೆಂದು ಸಿದ್ದರಾಮ ಶಿವಯೋಗಿ ಹೇಳಿದ್ದಾರೆ.

ರೂಹಿಲ್ಲದ ಕೇಡಿಲ್ಲದ ಸಾವೇ ಇಲ್ಲದ ಚೆಲುವನೆಂದು ಅಕ್ಕಮಹಾದೇವಿ ಹೇಳಿದ್ದಾಳೆ. ಈ ಚೆಲುವನನ್ನು ಬಳಿಸಿಕೊಂಡ ಅಕ್ಕಮಹಾದೇವಿ ಕೂಡಾ ಸಾವಿಲ್ಲದ ರೂಹಿಲ್ಲದ ಕೇಡಿಲ್ಲದ ಚೆಲುವೆಯಾಗಿ ಅಮರಳಾಗಿದ್ದಾಳೆ.

ದೇಹ ಆರು ದಳಗಳುಳ್ಳ ಕಮಲ. ಈ ಕಮಲದಲ್ಲಿ ಬ್ರಹ್ಮ ಹುಟ್ಟಿದ್ದಾನೆ. ಸರಸ್ವತಿ ನೆಲೆಸಿದ್ದಾಳೆ. ವಿಷ್ಣುವಿನ ಹೊಕ್ಕಳ ಬಳ್ಳಿಯೇ ಕಮಲಕ್ಕೆ ಜನ್ಮ ನೀಡಿತು.

ವಿಷ್ಣು ಬ್ರಹ್ಮ ರುದ್ರರು ದೇಹದಲ್ಲಿಯೇ ಜನ್ಮ ತಳೆದರು. ಶಿವನಿಂದ ದೇಹ ಜನ್ಮ ತಳೆಯಿತು. ಶಿವನೆಂದರೆ ಬಯಲು. ಆ ಬಯಲು ಜಲಜನಕವನ್ನು ಆಮ್ಲಜನಕವನ್ನು ಸಂಗಮಗೊಳಿಸಿ ಜಲವನ್ನಾಗಿ ಮಾಡಿತು. ಆ ಬಯಲು ಗರ್ಭದಲ್ಲಿ ಜಲಬಿಂದುವಿನೊಂದಿಗೆ ಪ್ರವೇಶ ಮಾಡಿ ಶುಕ್ಲ ಶೋಣಿತಗಳುಳ್ಳ ಪಿಂಡವಾಯಿತು. ಆರು ದಳದ ಪದ್ಮವಾಗಿ, ದೇಹವಾಗಿ ಹೊರ ಬಂದು ಹೆಣ್ಣು, ಗಂಡೆಂದು ಹೆಸರು ಪಡೆಯಿತು. ಆದರೆ ದೇಹದಲ್ಲಿ ಸಂಗಮವಾದ ಜ್ಞಾನ ಅವೆರಡೂ ಅಲ್ಲ ಎಂದು ಅರಿವಾದ ದೇಹವೇ ಗುರುವಿನ ದೇಹ. ಅದು ಅಂಬಿಗರ ಚೌಡಯ್ಯನ ದೇಹ .

255

**ಶ್ರೀ ಗುರು ಲಿಂಗ ಜಂಗಮದ ಲೀಲೆಯ ಧರಿಸಿ,**
**ಪರಸ್ತ್ರೀಯಳೆಂಬ ಹಡಿಕೆಯ ಯೋನಿದ್ವಾರದಲ್ಲಿ ತೊಳಲುವ.**
**ಜಡಜೀವಿ ಡಂಬಕನಲ್ಲಿ ಸಮಯಾಚಾರವ ಮಾಡುವಾತಂಗೆ**
**ಭವಿಜನ್ಮ ತಪ್ಪದು ನೋಡಾ !**
**ತಾನಿದ್ದಲ್ಲಿಗೆ ಪ್ರಸಾದಪುಷ್ಪ ತೀರ್ಥದೆಡೆ ಪ್ರಸಾದವ ತರಿಸಿಕೊಂಡಾತಂಗೆ**
**ಶುನಿ ಸೂಕರ ಜನ್ಮ ತಪ್ಪದು ನೋಡಾ !**
**ಸಮಪಂಕ್ತಿಯಲ್ಲಿ ವಾಮನವಾದ ಉಕ್ಕಳವ ಕೊಟ್ಟು ಕೊಂಡಾತಂ**
**ದೀಕ್ಷಾಹೀನ, ಆಚಾರಭ್ರಷ್ಟ !**
**ತನ್ನ ಪವಿತ್ರ ಕರ್ತುವಾದ ಗುರುವಿನಾಜ್ಞೆಯ ಮೀರಿ**
**ಗುರು ನಿಂದ್ಯವ ಮಾಡುವ ಗುರುದ್ರೋಹಿ,ಪರದೈವ-ಪರದ್ರವ್ಯಾಪಹಾರಕನ ಕೂಡೆ**
**ಪಾದೋದಕ-ಪ್ರಸಾದವ ಏಕಭಾಜನವ ಮಾಡಿದಾತಂಗೆ**
**ಶತಸಹಸ್ರ ಜನ್ಮಾಂತರದಲ್ಲಿ ಕ್ರಿಮಿಕೀಟಕ ಜನ್ಮ ತಪ್ಪದು ನೋಡ !**
**ಸತ್ಯ ಸದಾಚಾರದ ವರ್ಮಾವರ್ಮವ ಭೇದಿಸಿ,**
**ಹರಗುರು ವಚನೋಕ್ತಿಯಿಂದ ಪ್ರಮಾಣಿಸಿ, ಬುದ್ಧಿಯ ಹೇಳುವಾತನೆ**
**ಮಹಾಪ್ರಭುವೆಂದು ಭಾವಿಸುವಾತನೆ ಸದಾಚಾರಿ ಸನ್ಮಾರ್ಗಿ ನೋಡಾ !**

**ಇದ ಮೀರಿ ಆಜ್ಞೋಪದೇಶವ ಕೇಳದೆ ತನ್ನ ಮನಬಂದಂತೆ ಚರಿಸುವ**
**ಭ್ರಷ್ಟನ ಮೋರೆಯ ಮೇಲೆ ಶರಣಗಣಂಗಳ ರಕ್ಷೆಯಿಂದ ಹೊಡೆದು,**
**ಆ ಮೇಲೆ ಗಾರ್ದಭ ಜನ್ಮದಲ್ಲಿ ಜನಿಸೆಂದಾತ ನಂಬಿಗರ ಚೌಡಯ್ಯನು**
**ನೋಡಾ ಸಂಗನ ಬಸವೇಶ್ವರ.**

ಗುರು ಲಿಂಗ ಜಂಗಮದ ವೇಷವ ಧರಿಸಿ ಪರಸ್ತ್ರೀಯಳಲ್ಲಿ ತೊಳಲುವ ಡಂಬಕನು ಜ್ಞಾನಿಯಲ್ಲ. ಅವನೊಂದಿಗೆ ಸಂಗ ಮಾಡುವಾತಂಗೆ ಭವಿಜನ್ಮ ತಪ್ಪದು. ಅರಿವಿನ ಜನ್ಮ ಬಹುದೂರವಾಗುವುದು.

ತಾನಿದ್ದಲ್ಲಿಗೆ ಪ್ರಸಾದ ಪುಷ್ಪ ತೀರ್ಥ ತರಿಸಿಕೊಂಡು ಸ್ವೀಕಾರ ಮಾಡುವವನಿಗೆ ಶುನಿ ಸೂಕರ ಜನ್ಮ ತಪ್ಪದು.

ಸಮಪಂಕ್ತಿಯಲ್ಲಿ ದೀಕ್ಷೆ ಪಡೆದವನು ದೀಕ್ಷಾಹೀನ ಆಚಾರಭ್ರಷ್ಟ.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಆಜ್ಞೆಯನ್ನು ಮೀರಿ, ಗುರುನಿಂದ್ಯವ ಮಾಡುವವ ಗುರುದ್ರೋಹಿ. ಪರದ್ರವ್ಯ ಪರದೈವ ಅಪಹರಣ ಮಾಡುವವನೊಂದಿಗೆ ಕೂಡಿ ಪಾದೋದಕ ಪ್ರಸಾದವ ಸ್ವೀಕರಿಸುವವನು ಶತ ಸಹಸ್ರ ಜನ್ಮದಲ್ಲಿ ಕ್ರಿಮಿ ಕೀಟಕ ಜನ್ಮ ತಪ್ಪದು.

ಸತ್ಯ ಸದಾಚಾರದ ವರ್ಮಾವರ್ಮವ ಭೇದಿಸಿ, ಹರಗುರುಗಳು ಪ್ರಮಾಣಿಸಿದ ಸೂತ್ರಗಳ ಮೂಲಕ ಬುದ್ಧಿ ಹೇಳುವಾತನನ್ನು ಮಹಾಪ್ರಭುವೆಂದು ಭಾವಿಸುವಾತನೆ ಸದಾಚಾರಿ ಸನ್ಮಾರ್ಗಿ !

ಈ ಐದೂ ಸೂತ್ರಗಳನ್ನು ಕೇಳಿಯೂ ಇದನ್ನು ಮೀರಿ ತನ್ನ ಮನ ಬಂದಂತೆ ವರ್ತಿಸುವ ಭ್ರಷ್ಟ ಮನದ ಮೋರೆಯ ಮೇಲೆ ಶರಣಗಣಂಗಳ ಪಾದರಕ್ಷೆಯಿಂದ ಹೊಡೆದು ಕತ್ತೆಯ ಜನ್ಮದಲ್ಲಿ ಜನಿಸೆಂದು ಹೇಳುವಾತನು ಬೇರೆ ಯಾರೂ ಅಲ್ಲ ; ತನ್ನಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಾದ ಅಂಬಿಗರ ಚೌಡಯ್ಯನು.

**256**

**ಸಂದೇಹ ಮಾಡುವಲ್ಲಿ ಮಾತೇ ಸೂತಕವಾಗಿ**
**ಅದೇತರಿಂದೊದಗಿದ ಶಿಲೆಯ ಪ್ರತಿಷ್ಠೆಯ ಮಾಡಿ,**
**ತನ್ನ ಒಲವರ ವಿಶ್ವಾಸದಿಂದ ಕುರುಹ ಅರಿವುದು**
**ಶಿಲೆಯೊ? ಮನವೋ? ಎಂದನಂಬಿಗ ಚೌಡಯ್ಯ .**

ಮಾತು ಕೇಳಿದ ಕೂಡಲೇ ದೇಹಕ್ಕೆ ಅರಿವಾಗಬೇಕಿತ್ತು . ಆದರೆ ಮಾತು ದೇಹದಲ್ಲಿ ಸಂದೇಹ ಸೃಷ್ಟಿ ಮಾಡುತ್ತದೆ. ಸಂಭ್ರಮ ಸೃಷ್ಟಿ ಮಾಡುತ್ತದೆ. ದುಃಖ ಸೃಷ್ಟಿ ಮಾಡುತ್ತದೆ. ಮಾತೇ ಸೂತಕವಾಗಿ ಸೃಷ್ಟಿ ಮಾಡಿದ ತನುವನ್ನೇ ಕುಕ್ಕಿ ಕುಕ್ಕಿ ತಿನ್ನುತ್ತದೆ. ತನುವಿನಿಂದ ಹೊರ ಬಂದ ಮಾತು ತನುವನ್ನೇ ದಿಕ್ಕು ತಪ್ಪಿಸುತ್ತದೆ. ತನುವಿಗೆ ಶಕ್ತಿಯಿದೆಯೊ? ತನುವನ್ನು ಆವರಿಸಿದ ಮನಕ್ಕೆ ಶಕ್ತಿಯಿದೆಯೊ? ತನುವಿನಲ್ಲಿಯೇ ತನ್ಮಯವಾದ ಜ್ಞಾನಕ್ಕೆ ಶಕ್ತಿಯಿದೆಯೊ? ತನುವಿನಲ್ಲಿ ಸೃಷ್ಟಿಯಾದ ಭಾವ ದುರ್ಭಾವಗಳಿಗೆ ಶಕ್ತಿಯಿದೆಯೊ? ಎಂದು ಆಲೋಚಿಸುವ ಶಕ್ತಿ ಕೂಡಾ ತನುವಿನಲ್ಲಿ ಇದೆ. ಆದರೆ ಆಲೋಚಿಸುವುದನ್ನು ಬಿಟ್ಟು ಮನ ನೇರವಾಗಿ ಮಾತು ಸ್ವೀಕರಿಸುವುದರಿಂದ ಸಂದೇಹವಾದರೂ

ಮಾಡುತ್ತದೆ. ಸಂಭ್ರಮವಾದರೂ ಪಡುತ್ತದೆ. ಕೇಳಿದ ಆ ಮಾತನ್ನೇ ಮನ ಖಡ್ಗದಂತೆ ಹಿಡಿದುಕೊಂಡು ತನುವಿಗೆ ಗಾಯವೇ ಇಲ್ಲದ ಎಂದೂ ಮಾಯದ ಗಾಯವನ್ನು ಮಾಡುತ್ತದೆ.

ಮಾತೇ ಸೂತಕವಾಗಿ ತನುವನ್ನು ಹಗಲಿರುಳು ಎನ್ನದೆ ಸಾಯುವವರೆಗೆ ಕಾಡುತ್ತದೆ. ತನುವಿನಲ್ಲಿ ಸೃಷ್ಟಿಯಾದ ಮಾತನ್ನು ಮನ ಈ ಪರಿಯಾಗಿ ಕೇಳಬೇಕೆ?

''ಶಬ್ದ ಸಂಭ್ರಮದಲ್ಲಿ ಹಿಂದುಗಾಣರು ಮುಂದುಗಾಣರು, ತಮ್ಮ ತಾವರಿಯರು. ಇದು ಕಾರಣ ಮೂರು ಲೋಕವೆಲ್ಲವೂ, ಬರುಸೂರೆವೋಯಿತ್ತು ಗುಹೇಶ್ವರಾ''

ಸಾತ್ವಿಕ ಲೋಕ, ರಾಜಸಲೋಕ, ತಾಮಸಲೋಕದವರಿಗೆ ಮಾತು ಸಂಭ್ರಮ ಶೌರ್ಯ ಸುಖ ದುಃಖಗಳಿಗೆ ಬಳಕೆಯಾಗುತ್ತದೆ. ಮಾತನಾಡಿದ ತನುವನ್ನು ಮಾತು ಕೇಳಿದ ತನುವನ್ನು ಸೂತಕವಾಗಿ ಕಾಡುತ್ತದೆ. ಈ ಮೂರೂ ಲೋಕದ ಕಾಯಗಳು ಮಾತು ತಿಳಿಯದೆ ಶಬ್ದ ಸಂಭ್ರಮದಲ್ಲಿ ಸತ್ತವು. ಕಾಯಕ್ಕೆ ಶಬ್ದವೇ ಸಂಭ್ರಮವಾಯಿತು. ಶಬ್ದವೇ ದುಃಖವಾಯಿತು. ಶಬ್ದವೇ ಸಂಸಾರವಾಯಿತು. ಕಾಯದಿಂದ ಹೊರಬಂದ ಶಬ್ದ ಕಾಯವನ್ನು ಘಾಸಿಗೊಳಿಸಿತು. ಕಾಯವನ್ನೇ ಸಂಭ್ರಮದಲ್ಲಿ ಇಟ್ಟಿತು. ಆದರೆ ಶಬ್ದವನ್ನು ಕಾಯ ತಿಳಿಯಲಿಲ್ಲ. ತಿಳಿದು ಸಹಜವಾಗಿ ಕೇಳಲಿಲ್ಲ. ಸಹಜವಾಗಿ ನುಡಿಯಲಿಲ್ಲ.

ಮಾತನ್ನು ಮನದಿಂದ ಕೇಳಿದರೆ ಕಾಯಕ್ಕೆ ಸಂಭ್ರಮವಾಗುತ್ತದೆ, ದುಃಖವಾಗುತ್ತದೆ; ಕಾಯಕ್ಕೆ ಗಾಯವೂ ಆಗುತ್ತದೆ. ಅರಿವಿನಿಂದ ಕೇಳಿದರೆ ಮಾತು ಕಾಯದಲ್ಲಿ ಮಾಯವಾಗುತ್ತದೆ. ಕಾಯವನ್ನು ಮಾತು ಗಾಯಗೊಳಿಸುವುದಿಲ್ಲ, ಸಂಭ್ರಮಿಸುವುದಕ್ಕೆ ಆಸ್ಪದ ಕೊಡುವುದಿಲ್ಲ. ಮಾತು ಕಾಯದಲ್ಲಿ ಸೂತಕ ಉಂಟು ಮಾಡುವುದಿಲ್ಲ.

ಶಿಲೆಯಲ್ಲಿ ಶಿವನನ್ನು ಕೆತ್ತಿದಾಗ ಕೆತ್ತಿದವನನ್ನೇ ಮಣಿಯುವಂತೆ ಮಾಡುತ್ತದೆ. ಆರಾಧಿಸುವಂತೆ, ಪೂಜಿಸುವಂತೆ ಮಾಡುತ್ತದೆ.

ರಾಮನನ್ನು ಆರಾಧಿಸುವ ಕಾಯ ಶಿವನಿಗೆ ಅಪಚಾರವೆಸಗಿದಾಗ ಆ ಕಾಯವನ್ನು ಕಾಯವೇ ಕೊಲ್ಲುವಂತೆ ಪ್ರೇರೇಪಿಸುತ್ತದೆ. ಪೂಜಿಸಲು, ಸಂಭ್ರಮಿಸಲು, ಕೊಲ್ಲಲು ಕಾರಣವಾದುದ್ದು ಮೂರ್ತಿಯೊ? ಶಿಲೆಯೊ? ಮನವೊ? ಕಾಯವೊ?

ಮಸೀದೆ, ಚರ್ಚ್, ಆಲಯಗಳೆಂದು ಕಾಯದಲ್ಲಿ ಭಾವ ದುರ್ಭಾವಗಳನ್ನು ಸೃಷ್ಟಿಸಿದ್ದು ಮನವೊ? ಶಿಲೆಯೊ? ಕಾಯವೊ?

ಅರಿವಿನಿಂದ ನೋಡಿದರೆ ಶಿವ, ರಾಮ, ಮಸೀದೆ, ಚರ್ಚ್, ಆಲಯಗಳಿಗೆ ಬಳಸಿದ ಶಿಲೆ ಒಂದೇ. ಕಾಯ ಒಂದೇ. ಕಾಯದಲ್ಲಿ ಸಂಗಮವಾದ ಅರಿವು ಒಂದೇ. ಕಾಯವನ್ನು ಆವರಿಸಿದ ಮನ ಒಂದೇ. ಕಾಯಕ್ಕೆ ಮನವೆಂಬ ಮಾಯೆ ಮೆತ್ತಿಕೊಂಡಾಗ ಅದು ಹಿಂದು ಮುಸಲ್ಮಾನ ಕ್ರೈಸ್ತನಾಗಿ ಸಂಭ್ರಮಿಸುತ್ತದೆ; ಸಂಕಟಪಡುತ್ತದೆ. ಕಾಯವನ್ನು ಕಾಯಕ್ಕೆ ಅಂಟಿದ ಮಾಯೆ ಹಿಂದು ಮುಸಲ್ಮಾನ ಕ್ರೈಸ್ತನನ್ನಾಗಿಸಿ ಕಾಯಕ್ಕೆ ತಿಳಿಯದಂತೆ ಹಂತ ಹಂತವಾಗಿ ಕೊಲ್ಲುತ್ತದೆ.

ಕಾಯದಲ್ಲಿ ಸಂಗಮವಾದ ಕಾಯದ ಅರಿವಿನಿಂದ ಕಾಯವನ್ನು ನೋಡಿದಾಗ ಕಾಯಕ್ಕೆ ಅಂಟಿದ ಮಾಯೆ ಮಾಯವಾಗುತ್ತದೆ. ಕಾಯದಲ್ಲಿ ಹರಿಯುವ ರಕ್ತ ಒಂದೇ. ಕಾಯದೊಳಗಿದ್ದ ಮಾಂಸ ಒಂದೇ. ಮೂಳೆ, ಮಜ್ಜಾ, ಮೇದಸ್ಸು ಒಂದೇ. ಇವು ಸೋರದಂತೆ ಸುಂದರವಾಗಿ ಪ್ಯಾಕ್ ಮಾಡಿದ ಚರ್ಮ ಒಂದೇ. ಕಣ್ಣು ಕಿವಿ ಮೂಗು ನಾಲಿಗೆ ಒಂದೇ. ಇವು ಹಿಂದೂ ಅಲ್ಲ, ಮುಸಲ್ಮಾನನೂ ಅಲ್ಲ; ಕ್ರೈಸ್ತನೂ ಅಲ್ಲ.

ಕಾಯದ ಧರ್ಮ ಒಂದೇ. ಅದು ಅರಿವಿನ ಧರ್ಮ! ಮರೆವು ಆದುದರಿಂದ ಕಾಯದಲ್ಲಿ ಸಂಗಮವಾದ ಅರಿವು ಕಾಯಕ್ಕೆ ಬಳಕೆ ಆಗುತ್ತಿಲ್ಲ ಅಷ್ಟೇ.

ಕಾಯ, ಕಾಯದ ಅರಿವಿಗಾಗಿ ಹಪಹಪಿಸಬೇಕು. ಕಾಯದ ಅರಿವು ಕಾಯವೇ ಬಳಿಸಿಕೊಂಡು ಕಾಯಕ್ಕೆ ಅಂಟಿದ ಮಾಯಾಮೃಗವನ್ನು ಕಾಯವೇ ಜಾಡಿಸಿಕೊಳ್ಳಬೇಕು. ಕಾಯದ ಅರಿವಿನ ಶಿಕ್ಷಣ ಕಾಯಕ್ಕೆ ದೊರಕಬೇಕು. ಅದನ್ನು ಕಾಯ ಕಾಯದಲ್ಲಿಯೇ ಹುಡುಕಬೇಕು.

257

**ಸಕಲ ಭೋಗ ವಿಲಾಸಿತ ಲಿಂಗಕ್ಕೆಂದಲ್ಲಿ ತನ್ನಂಗಕ್ಕೆ ಶೃಂಗಾರವುಂಟೆ ?**
**ಶ್ರೀ ರುದ್ರಾಕ್ಷಿ ವಿಭೂತಿಯ ಸ್ವಸ್ಥಾನದಲ್ಲಿ**
**ತನ್ನಂಗಕ್ಕೆ ಶೃಂಗಾರವೆಂದು ಮಾಡಿದಡೆ,**
**ಆ ನಿಜಪದಂಗವೊಂದು ಇಲ್ಲ ಎಂದನಂಬಿಗ ಚೌಡಯ್ಯ.**

ಬ್ರಹ್ಮಜ್ಞಾನವನ್ನು ತಿಳಿದವರು ಪದಗಳಿಂದ ಬಣ್ಣಿಸುತ್ತಾರೆ. ಆಗ ಅಂಗವೇ ಬೇರೆ ಅಂಗದಲ್ಲಿ ಸಂಗಮವಾದ ಲಿಂಗವೇ ಬೇರೆಯಾಗಿರುತ್ತದೆ. ಅಂಗದ ಮೂಲಕ ಮಾಡುವ ಪ್ರಸಾದವೆಲ್ಲ ಲಿಂಗಾರ್ಪಿತವೆಂದು ಹೇಳುತ್ತಾರೆ.

ಲಿಂಗ ಉಣ್ಣುವುದಿಲ್ಲ ಉಡುವುದಿಲ್ಲ. ಅಂದಮೇಲೆ ತನ್ನ ಅಂಗಕ್ಕೆ ಮಾಡಿಕೊಳ್ಳುವ ಶೃಂಗಾರ, ಸಕಲಭೋಗ ವಿಲಾಸಗಳು ಲಿಂಗಯ್ಯನಿಗೆ ಸಲ್ಲುವುದಿಲ್ಲ.

ರುದ್ರಾಕ್ಷಿ ವಿಭೂತಿಯಿಂದ ಅಂಗಕ್ಕೆ ಶೃಂಗಾರ ಮಾಡಿದಡೆ, ರುದ್ರಾಕ್ಷಿ ಮತ್ತು ವಿಭೂತಿ ಒಂದೂ ನಿಜವಲ್ಲ. ಹಾಗೆಂದು ಹೇಳುವ ಪದವಿಲ್ಲ. ಅಂಗವೂ ಇಲ್ಲ ಲಿಂಗಯ್ಯನಿಗೆ. ಏಕೆಂದರೆ ಆತ ಅಕಾಯ !

ಸೆಗಣಿ ಸುಟ್ಟ ಮೇಲೆ ಅದು ತನ್ನ ಗುಣ ಕಳೆದುಕೊಂಡು, ರೂಪ ಕಳೆದುಕೊಂಡು, ವಾಸನೆ ಕಳೆದುಕೊಂಡು ವಿಭೂತಿಯಾಗುತ್ತದೆ. ಲಿಂಗಯ್ಯನ ಕಾಯವೂ ವಿಭೂತಿ ಕಾಯ. ಅಂದ ಮೇಲೆ ವಿಭೂತಿ ಕಾಯಕ್ಕೆ ವಿಭೂತಿ ಬಳಿಯುವ ಅವಶ್ಯಕತೆಯೂ ಇಲ್ಲ.

ವಿಭೂತಿ ಕಾಯದ ತುಂಬಾ ಕಣ್ಣುಗಳೇ ತುಂಬಿವೆ. ಅಂದಮೇಲೆ ಆ ಕಾಯಕ್ಕೆ ರುದ್ರಾಕ್ಷಿ ಧರಿಸಲು ಬರುವುದಿಲ್ಲ. ಕಾಯವೇ ರುದ್ರಾಕ್ಷಿ ಕಾಯವಾದ ಮೇಲೆ ಆ ಕಾಯಕ್ಕೆ ರುದ್ರಾಕ್ಷಿ ಧರಿಸುವುದು ಕೂಡ ಉಚಿತವಲ್ಲ.

ಕಾಯವೇ ಇಲ್ಲವೆಂದ ಮೇಲೆ ಕಾಯಕ್ಕೆ ಪದ ಉಂಟೆ ? ಕಾಯಕ್ಕೆ ಅಂಗವುಂಟೆ ? ಪದ ಇಲ್ಲ; ಪದಾರ್ಥವಿಲ್ಲ. ಏಕೆಂದರೆ ಪದ ಜಂಗಮವಾಗಿದೆ. ಪದಾರ್ಥ ಲಿಂಗವಾಗಿದೆ.

258

**ಸತ್ತಡೆ ಸಂಗಡ ಹೂಳಿಸಿಕೊಂಬ ಲಿಂಗವು**
**ತನ್ನ ಕೊರಳಲ್ಲಿ ಹತ್ತೆಯಾಗಿ ಕಟ್ಟಿರಲು,**
**ನಾನು ಸತ್ಯ ಶುದ್ಧ ಶಿವಭಕ್ತನೆಂದರಿಯದೆ**

**ಮತ್ತೆ ಅನ್ಯದೈವಕ್ಕೆರಗುವ  ಕತ್ತೆ ಮೂಳರು ನೀವು ಕೇಳಿರೋ**
**ಗಂಡನ ಕೂಡೆ ಸಮಾಧಿಯ ಕೊಂಬ ಹೆಂಡತಿ ಅಪೂರ್ವ ।**
**ಹೆಂಡಿರ ಕೂಡೆ ಸಮಾಧಿಯ ಕೊಂಬ ಗಂಡರುಂಟೆ ಲೋಕದೊಳು?**
**ಛೀ ಛೀ ಹಂದಿಮೂಳರಿರಾ ! ಈ ದೃಷ್ಟವ ಕಂಡಾದಡೂ ನಾಚಲಿಲ್ಲವೆ?**
**ಭವ ಬಂಧನಂಗಳನಳಿಯಬೇಕೆಂದು ಬಹುದೈವಕ್ಕೆರಗಿದಡೆ,**
**ಅವು ನಿಮ್ಮ ಸಂಗಡ ಒಂದಾದಡೂ ಹೂಳಿಸಿಕೊಂಬವೆ?**
**ನೀವು ಗಳಿಸಿದ ಅರ್ಥವನುಂಡುಂಡು, ನಿಮ್ಮ ಭವದೊಳಗೆ ನೂಂಕಿದ**
**ಪಿಶಾಚಿಗಳ ನೋಡಿಕೊಂಡು ಪ್ರಮಾಣಿಸಿ,**
**ಮರಳಿ ಲಿಂಗಭಕ್ತಿಯನರಿಯದೆ,**
**ಬರಿದೆ ಶಿವಭಕ್ತರೆಂದು ಬೊಗಳುವ ಕುನ್ನಿಗಳು**
**ಪರಿಭವಕ್ಕೆ ಒಳಗಾಗುವರೆಂದಾತನಂಬಿಗರ ಚೌಡಯ್ಯನು.**

ಸತ್ತರೆ  ಸಂಗಡ ಹೂಳಿಸಿಕೊಳ್ಳುವ ಲಿಂಗ ಕೊರಳಲ್ಲಿ ಕಟ್ಟಿಕೊಂಡಿದ್ದರೂ ಮತ್ತೆ ಅನ್ಯ ದೈವವನ್ನು ಆರಾಧಿಸುವ ಅಂಗವನ್ನು ಏನೆನ್ನಬೇಕು? ಅಂಗದಲ್ಲಿ ಸಂಗಮವಾದ ಲಿಂಗಯ್ಯನನ್ನು ತಿಳಿಯದಿದ್ದರೇನಾಯಿತು? ಕೊರಳಲ್ಲಿ ತಾನೇ ಕಟ್ಟಿಕೊಂಡ ಲಿಂಗವನ್ನಾದರೂ  ತಿಳಿಯಬೇಡವೆ? ಸ್ವದೈವ ಉಳ್ಳ  ಸತ್ಯ ಶುದ್ಧ ಭಕ್ತನು ತಾನೆಂದು ತನಗೆ ತಾನೇ ತಿಳಿಯುವುದು ಬೇಡವೆ?

ಅನ್ಯದೈವವೊಂದಾದರೂ ತಾನು ಸತ್ತಾಗ ತನ್ನ ಸಂಗಡ ಹೂಳಿಸಿಕೊಳ್ಳುವುದೇ? ಇದನ್ನು ಅರಿಯದೆ ಅನ್ಯದೈವಕ್ಕೆರಗುವ ಅಂಗಗಳನ್ನು ಅಂಬಿಗರ ಚೌಡಯ್ಯ ಶರಣರು ಕತ್ತೆ ಮೂಳ ಎಂದು ಬೈದಿದ್ದಾರೆ.

**ಗಂಡನ ಕೂಡೆ ಸಮಾಧಿಯ ಕೊಂಬ ಹೆಂಡತಿ ಅಪೂರ್ವ ! ಹೆಂಡಿರ ಕೂಡೆ ಸಮಾಧಿ ಯಕೊಂಬ ಗಂಡರುಂಟೆ ಲೋಕದೊಳು?:**

ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗಯ್ಯನೇ ಗಂಡ. ಅಂಗವನ್ನು ಆವರಿಸಿದ ಮನವೇ ಹೆಂಡತಿ. ಹೆಂಡತಿಯೇ ಬಯಕೆ ಮಾಡಿ, ಆಕೆಯಲ್ಲಿ ರತಿ ಹುಟ್ಟಿ ಲಿಂಗಯ್ಯನೆಂಬ ಗಂಡನೊಂದಿಗೆ ಸಮಾಧಿ ಸ್ಥಳಾಗಬೇಕು. ಇದೊಂದು ಅಪೂರ್ವ ಸನ್ನಿವೇಶ. ಇದೊಂದು ಅಪೂರ್ವ ಸಮಾಗಮ. ಯಾವುದೋ ಒಂದು ಅಂಗಕ್ಕೆ ಬರುವ ಭಾಗ್ಯ . ಲಿಂಗಾಂಗ ಸಾಮರಸ್ಯದ ಅಪೂರ್ವ ಭಾಗ್ಯ .

**ಹೆಂಡಿರ ಕೂಡೆ ಸಮಾಧಿಯ ಕೊಂಬ ಗಂಡರುಂಟೆ ಲೋಕದೊಳು?:**

ಅರಿವೆಂಬ ಲಿಂಗಯ್ಯ ತನ್ನೊಂದಿಗೆ ಕೂಡುವುದಕ್ಕೆ ಹೆಂಡತಿಯನ್ನು ಸಿದ್ದ ಮಾಡಬಲ್ಲ; ಬೆಳಕಿನಲ್ಲಿ ಕತ್ತಲು ಕೂಡಿ ಬೆಳಕೇ ಆಗಲು ಕತ್ತಲನ್ನು ಕೈ ಮಾಡಿ ಕರೆಯಬಲ್ಲ. ಆದರೆ ಹೆಂಡತಿಯೊಂದಿಗೆ ಸಮಾಧಿಸ್ತನಾಗಲು  ಸ್ವತಃ ತಾನೇ ಹೋಗಲಾರ. ದೇವರಿದ್ದಲ್ಲಿಗೆ ಭಕ್ತ ಬರಬೇಕೇ ಹೊರತು ಭಕ್ತನಿದ್ದಲ್ಲಿಗೆ ದೇವರು ಹೋಗಲಾರ. ಏಕೆಂದರೆ ಭಕ್ತನಿಗೆ ದೇವರ ಬಯಕೆಯಾಗಬೇಕು. ಹೆಂಡತಿಗೆ  ಗಂಡನೊಂದಿಗೆ ಕೂಡುವ ಬಯಕೆಯಾಗಬೇಕು. ಹೆಂಡತಿಯೇ ಗಂಡನೊಂದಿಗೆ ಬೆರೆತು ಅರ್ಧನಾರೀಶ್ವರಳೇ ತಾನಾಗಬೇಕು.

ಜ್ಞಾನದ ಹಂಬಲ ಮನಕ್ಕೆ ಹುಟ್ಟಬೇಕೆ ಹೊರತು ಹರಿದಾಡುವ ಮನವನ್ನು ಹಿಡಿದು ಜ್ಞಾನ ತನ್ನೊಂದಿಗೆ ಬೆರೆಯುವಂತೆ ಪ್ರೇರೇಪಿಸುವುದಿಲ್ಲ. ಇದು ತನುಮನ ಘನದ ತ್ರಿಕೂಟ ಸಂಗಮದ

ಜ್ಞಾನ ರಹಸ್ಯ .

ಸಾಮಾನ್ಯವಾಗಿ ತಿಳಿಯಲು ಹೋದರೆ ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಅಂಗದೊಂದಿಗೆ ಹೂಳಿಸಿಕೊಳ್ಳುತ್ತದೆ. ಅನ್ಯದೈವಗಳನ್ನು ಅಂಗ ಪೂಜಿಸಿದರೂ ಕೂಡ ಆ ದೈವಗಳು ಅಂಗದೊಂದಿಗೆ ಹೂಳಿಸಿಕೊಳ್ಳುವುದಿಲ್ಲ. ಅಂಗದಲ್ಲಿ ಲಿಂಗವನ್ನೇ ಇಟ್ಟುಕೊಂಡು ಆ ಲಿಂಗಕ್ಕೆ ಪೂಜಿಸವೆ, ಫಲಪದಗಳ ಆಸೆಗಾಗಿ ಅನ್ಯ ದೈವಂಗಳನ್ನು ಪೂಜಿಸುವ ಅಂಗಗಳನ್ನು ಚೌಡಯ್ಯ ಶರಣರು ಛೀ ಛೀ ಹಂದಿಮೂಳರಿರಾ ಎಂದು ಬಯ್ಯುತ್ತಾರೆ.

ನೀವು ಗಳಿಸಿದ ಅರ್ಥವನು ಉಂಡುಂಡು ನಿಮ್ಮನ್ನು ಮತ್ತೆ ಜನನ ಮರಣಕ್ಕೆ ಗುರಿ ಮಾಡಿದ ದೇವರುಗಳು ದೇವರಲ್ಲ. ಅವು ಪಿಶಾಚಿಗಳು. ಒಮ್ಮೆ ನಿಮ್ಮನ್ನು ನೀವೇ ಪ್ರಮಾಣಿಸಿ ನೋಡಿಕೊಳ್ಳಿ. ಲಿಂಗ ಕಟ್ಟಿಕೊಂಡು ಶಿವಭಕ್ತಿಯನ್ನು ಅರಿಯದೆ ಬರಿದೆ ಶಿವಭಕ್ತರೆಂದು ಬೊಗಳುವ ಕುನ್ನಿಗಳೆ ಒಮ್ಮೆ ನಿಮ್ಮನ್ನು ನೀವು ನೋಡಿಕೊಳ್ಳಿ ಎಂದು ಕಳಕಳಿಯಿಂದ ಹೇಳುತ್ತಾ ಅಂಗದ ಅಜ್ಞಾನವನ್ನು ಕಳೆಯುವ ಸೂತ್ರವನ್ನು ಕರುಣಿಸಿದ್ದಾರೆ.

**259**

**ಸತ್ತರೆ ಸಂಗಾತ ಹೂಳಿಸಿಕೊಂಬ ಇಷ್ಟಲಿಂಗವ ಸಟೆಮಾಡಿ,**
**ಮತ್ತೆ ಅನ್ಯದೈವಕ್ಕೆರಗುವ ಕತ್ತೆ ಹೊಲೆಯರು ನೀವು ಕೇಳಿರೊ,**
**ತನ್ನ ಪುರುಷನಿರಲು ಅನ್ಯಪುರುಷನ ಕೂಡಿಹ ಸ್ತ್ರೀಗೆ ನರಕವಲ್ಲವೆ ?**
**ಮೋಕ್ಷಾರ್ಥ ಎಂದು ಗುರುವು ಕೊಟ್ಟ ಇಷ್ಟ ಲಿಂಗವು**
**ಅಂಗಕ್ಕೆ ಸಂಬಂಧಿಸಿದ ಬಳಿಕ**
**ಹಲವು ದೇವರೆಂದು ಭಾವಿಸಿ ಪೂಜೆಯ ಮಾಡುವ ಭ್ರಷ್ಟರು ನೀವು ಕೇಳಿರೋ.**
**ನೀವು ಮಾಡಿದ ಪೂಜೆಯು ಹಾದರಿಯ ಸ್ತ್ರೀಯಳಂತೆ ಕಾಣಿರೊ.**
**ಕಡೆಗೆ ಅದೇ ಲಿಂಗವೇ ಮಾರಿಯಾಗಿ**
**ಮೋಕ್ಷಕ್ಕೆ ದೂರ ಮಾಡುವುದೆಂದಾತ**
**ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.**

ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಅಂಗದಲ್ಲಿ ಸಂಗಮವಾದ ದೇವರನ್ನು ಸದಾ ಸೂಚಿಸುವ ಸಂಕೇತ. ಲಿಂಗವನ್ನು ಪೂಜಿಸಿದರೆ ಸಾಕ್ಷಾತ್ ಲಿಂಗಯ್ಯನನ್ನು ಪೂಜಿಸಿದಂತೆ. ತನ್ನ ಅಂಗವನ್ನು ತಾನೇ ಪೂಜಿಸಿಕೊಂಡಂತೆ.

ಅಂಗವನ್ನು ಮೊದಲು ಪೂಜಿಸಿಕೊಂಡು, ಅಂಗ ಕೂಡುವ ಆಸನವನ್ನು ಶುದ್ಧಿ ಮಾಡಿದ ನಂತರ ಅಂಗದ ಮೇಲೆ ಕಟ್ಟಿಕೊಂಡ ಲಿಂಗಯ್ಯನನ್ನು ಪೂಜಿಸುವುದು ಸಂಪ್ರದಾಯ. ಅಂದ ಮೇಲೆ ಸ್ವದೈವನನ್ನು ಪೂಜಿಸಿದಂತಲ್ಲವೆ ? ಸ್ವದೈವವಾದ ಲಿಂಗಯ್ಯನನ್ನೇ ಅಂಗದಲ್ಲಿ ಸಂಗಮ ಮಾಡಿಕೊಂಡ ಅಂಗ,ಅಂಗದೊಂದಿಗೆ ಅನ್ಯ ದೈವವನ್ನು ಪೂಜಿಸಿದ ಅಂಗವನ್ನು, ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯ ಕತ್ತೆ ಹೊಲೆಯ ಎಂದು ಬೈಯ್ಯದೆ ಇರಲಾರ. ನಿಃಶಬ್ದದಿಂದ ಬರುವ ಆ ಶಬ್ದವನ್ನು ಪ್ರತಿ ಅಂಗವೂ ತನಗೆ ತಾನೇ ಕೇಳಲೇಬೇಕು.

ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗಯ್ಯನು ಅಂಗವನ್ನು ಆವರಿಸಿದ ಮನವೆಂಬ

ಸತಿಗೆ ಪತಿದೇವನಾಗುತ್ತಾನೆ. ಮನಕ್ಕೆ ಪರಮ ಪುರುಷನಾಗುತ್ತಾನೆ. ಸತಿಗೆ ಪತಿಯಾಗುತ್ತಾನೆ.

ಸತಿ ಎಂದರೆ ಹೆಣ್ಣಲ್ಲದ ಹೆಣ್ಣು. ಪತಿಯೆಂದರೆ ಗಂಡಲ್ಲದ ಗಂಡು. ಸಕಲ ಗಂಡರಿಗೂ ಗಂಡು. ಅಂಗದಲ್ಲಿಯೇ ಇವರಿಬ್ಬರೂ ಸಂಗಮವಾಗಿ ಸಂಸಾರ ಹೂಡಿದ ಹೆಣ್ಣು ಗಂಡು. ಸತಿ-ಪತಿಯರು ! ಹೀಗಿದ್ದೂ ಅಂದರೆ ಸತಿಗೆ ಪತಿದೇವನು ಮನೆಯಲ್ಲಿಯೇ ಇರಲಾಗಿ, ಸತಿ ಅನ್ಯ ಪುರುಷನನ್ನು ಕೂಡುವುದು ನರಕವಲ್ಲವೆ ? ಅನ್ಯ ಪುರುಷರೊಂದಿಗೆ ಮಾನಸಿಕ ಹಾದರ ಮಾಡುವುದು ನರಕವಲ್ಲವೆ ?

ಗಂಡನೇ ದೇವರೆಂದ ಬಳಿಕ ಆ ದೇವರನ್ನು ನಿತ್ಯ ನಿತ್ಯ ಪೂಜಿಸಿದ ಬಳಿಕ ಪುನಃ ಅನ್ಯ ದೈವವನ್ನು ಪೂಜಿಸುವುದು ನರಕವಲ್ಲವೆ ? ಹಾಗೆ ಮಾಡುವ ಪೂಜೆಯು ಹಾದರದ ಸ್ತ್ರೀಯ ಳಂತೆ ಕಾಣಿರೊ ಎಂದು ನುಡಿದಿದ್ದಾರೆ ಅಂಬಿಗರ ಚೌಡಯ್ಯ ಶರಣರು.

ಅಂಗ ಸತ್ತರೆ ಲಿಂಗದ ಮೇಲೆ ಕಟ್ಟಿಕೊಂಡ ಲಿಂಗವು ಅಂಗದೊಂದಿಗೆ ಹೂಳಿಸಿಕೊಳ್ಳುತ್ತದೆ. ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನೂ ಅಂಗ ಇರುವವರೆಗೆ ಅಂಗದೊಂದಿಗೆ ಸಂಗ ಮಾಡುತ್ತಾನೆ. ಇದನ್ನು ಮನವೆಂಬ ಸತಿ ಅರಿತರಿತು ಪರಮ ಪುರುಷನನ್ನು ಬೆರೆಯಬೇಕು. ಮೋಕ್ಷಕ್ಕೆ ಹತ್ತಿರವಾಗಬೇಕು. ಸತಿ ಪತಿಗಳೊಂದಾಗಬೇಕು.

ಸತಿ ಪತಿಯನ್ನು ಬೆರೆಯದೆ ಹಾದರ ಮಾಡಿದರೆ ಮಾಡುವ ಪೂಜೆಯು ಹಾದರಿಯ ಸ್ತ್ರೀಯಳಂತೆ.

ಸ್ತ್ರೀ ಎಂದರೆ ಮನ ! ಪುರುಷನೆಂದರೆ ಅರಿವು ! ಸಕಲ ದೇಹಗಳಲ್ಲಿಯೂ ಅರಿವಿದೆ. ಅರಿವಿಲ್ಲದ ದೇಹವೇ ಇಲ್ಲ. ಹಾಗೆಯೇ ಆ ಅರಿವೆಂಬ ದೇವರನ್ನು ತಿಳಿಯುವ ಮನವೂ ದೇಹದಲ್ಲಿಯೇ ಇದೆ. ದೇವರಿದ್ದೂ ಅನ್ಯ ದೈವಕ್ಕೆರಗುವ ಮನ ಹಾದರ ಮಾಡಿದಂತಾಗಲಿಲ್ಲವೆ ? ಮನ ಮನದೊಂದಿಗೆ ಬೆರೆತಂತಾಗಲಿಲ್ಲವೆ ? ಹೆಣ್ಣು ಹೆಣ್ಣಿನೊಂದಿಗೆ ಬೆರೆತಂತಾಗಲಿಲ್ಲವೆ ? ದೇಹ ದೇಹದೊಂದಿಗೆ ಕೂಡುವ ಕೂಟ ಹೆಣ್ಣು ಹೆಣ್ಣು ಕೂಡುವ ಕೂಟ ! ದೇಹದಲ್ಲಿಯೇ ಸಂಗಮ ವಾದ ಅರಿವೆಂಬ ಲಿಂಗಯ್ಯನನ್ನು ದೇಹವನ್ನು ಆವರಿಸಿದ ಮನವೆಂಬ ಸತಿ ಕೂಡುವ ಕೂಟ ಸತಿ ಪತಿಗಳೊಂದಾದ ಕೂಟ !

**260**

**ಸಪ್ತ ಸಾಗರಗಳ ನಿಲ್ಲೆಂದು ನಿಲ್ಲಿಸಿ**
**ಭೂಮಿಗೆ ಕೆಸರುಗಲ್ಲನಿಕ್ಕುವ ದೆವಸ,**
**ಏಳು ಭೂಮಂಡಲವ ಜೋಳಿಗೆಗೊಳಿಸಿ**
**ಗಾಳಿಯ ನಾಹಾರಗೊಂಬ ದೆವಸ,**
**ಒಂಭತ್ತು ದ್ವೀಪಕ್ಕೆ ನೂಲ ಹಿಡಿದಂದು,**
**ಅಂಬಿಗರ ಚೌಡಯ್ಯನ ಕೆಳೆಗೊಂಡನುಮೇಶ್ವರ.**

ಸಪ್ತ ಸಾಗರಗಳು ಬಿಂದುವಿನಿಂದ ಕೂಡಿವೆ. ಬಿಂದುವಿನಲ್ಲಿ ಸಪ್ತಸಾಗರಗಳು ಅಡಗಿವೆ. ಬಿಂದುವಿನಲ್ಲಿ ಜೀವವಿದೆ. ಜೀವಜಲ ಬಿಂದುವೇ ಗರ್ಭ ಸೇರಿ ರಕ್ತ ಮೂಳೆ ಮಾಂಸ ಮಜ್ಜಾ ಮೇದಸ್ಸು ಆಗಿ,ಅವು ಸೋರದಂತೆ ಸುಂದರವಾದ ಚರ್ಮದಿಂದ ಪ್ಯಾಕ್ ಮಾಡಿ, ಅಂಗ ವೆಂದು

ಹೆಸರಿಟ್ಟುಕೊಂಡಿದೆ.

ಎರಡು ಸಾಗರಗಳುಳ್ಳ ಎರಡು ಕಣ್ಣುಗಳು. ಎರಡು ಸಾಗರಗಳುಳ್ಳ ಎರಡು ಕಿವಿಗಳು. ಮತ್ತೆರಡು ಸಾಗರಗಳುಳ್ಳ ಎರಡು ಮೂಗಿನ ಹೊರಳೆಗಳು. ಒಂದು ಸಾಗರ ಉಳ್ಳ ಬಾಯಿ ಯಿಂದ ಪರಿಪೂರ್ಣ ಅಂಗವೆನ್ನಿಸಿಕೊಂಡಿದೆ. ಇವು ಏಳು ಸಾಗರಗಳೂ ಹೌದು. ಇವು ಏಳು ಭೂಮಂಡಲಗಳೂ ಹೌದು.

ಸಪ್ತ ಸಾಗರಗಳಲ್ಲಿಯ ಅಲೆಗಳನ್ನು ನಿಲ್ಲಿಸುವುದು ಬಲುಕಷ್ಟ. ಹಾಗೆಯೇ ಈ ಸಪ್ತ ಸಾಗರಗಳನ್ನು ಹೊತ್ತುಕೊಂಡ ಕಾಯವೆಂಬ ಭೂಮಂಡಲದ ಕಾಯಕವೂ ಬಲುಕಷ್ಟ!

ಭೋರ್ಗರೆದು ಅಪ್ಪಳಿಸುವ ಅಲೆಗಳನ್ನು ತಡೆಯುವ ಸಮರ್ಥನು ಯಾರು ? ಅದಕ್ಕೆ ಕೆಸರುಗಲ್ಲನಿಕ್ಕಿ ಅಲೆಗಳು ಅಪ್ಪಳಿಸದಂತೆ ನಿಲ್ಲೆಂದು ನಿಲ್ಲಿಸುವ ಸಮರ್ಥನು ಯಾರು ?

ಸಾಗರದ ಅಲೆಗಳನ್ನು ತಡೆಯಬಹುದು ಕಣ್ಣಿನ ಚಂಚಲದ ಅಲೆಗಳನ್ನು ತಡೆಯಲು ಸಾಧ್ಯವೆ ? ರಾವಣ ತನ್ನ ಕಣ್ಣಿನ ಚಂಚಲದ ಅಲೆಗಳಿಂದ ಸೀತೆಯನ್ನು ನೋಡಿ ಕೆಟ್ಟ.

ದ್ರೌಪದಿಯ ಬಾಯಿಯಿಂದ ಹೊರಬಂದ ಶಬ್ದದ ಅಲೆಗಳಿಂದ ದುರ್ಯೋಧನನ ಎರಡು ಕಿವಿಗಳ ದಡ ಒಡೆದು ಅಗ್ನಿ ಸಮುದ್ರ ಜ್ವಾಲೆಯಾಗಿ ಉಕ್ಕಿ ಹರಿಯಿತು.

ಕಣ್ಣಿನ ಕೋಡಿಗಳೆರಡು ಕಾಮದ ಆಸೆಯಿಂದ ಒಡೆದು, ಮೂಗಿನ ಹೊರಳೆಗಳೆರಡು ದುರ್ನಾತದಿಂದ ಬಿರಿದು ಶಾಂತನನು ಮನಸೋತ. ಮಹಾಭಾರತವೇ ನಿರ್ಮಾಣವಾಯಿತು. ಶ್ರೀಕೃಷ್ಣನಿಂದಲೂ ಭೂಮಿಗೆ ಕೆಸರುಗಲ್ಲ ನಿಕ್ಕಲು ಸಾಧ್ಯವಾಗಲೇ ಇಲ್ಲ.

ಏಳು ಭೂಮಂಡಲಗಳನ್ನು ಸಪ್ತ ಸಾಗರಗಳನ್ನು ನಿಲ್ಲೆಂದು ನಿಲ್ಲಿಸಿ ಭೂಮಿಗೆ ಕೆಸರುಗಲ್ಲನು ಇಕ್ಕಿ ತನ್ನ ಜೋಳಿಗೆಗೆ ಹಾಕಿಕೊಂಡವನು ಅಂಬಿಗ ಚೌಡಯ್ಯನು ಮಾತ್ರ. ಇದನ್ನು ನೋಡಿ ಸಂತೋಷಗೊಂಡನು ಉಮೇಶ್ವರ.

ಉಮೆ ಮತ್ತು ಆತನ ಪತಿಯಿಂದಲೇ ನಿರ್ಮಾಣವಾದ ಸಪ್ತ ಸಾಗರಗಳು ; ಅವರಿಬ್ಬರಿಂದ ಮಾತ್ರ ನಿಲ್ಲಿಸಲು ಸಾಧ್ಯ. ಅವರಿಬ್ಬರೂ ಅರ್ಧನಾರೀಶ್ವರರಾದಾಗ, ಗಂಗೆಯನ್ನು ಧರಿಸಿದ ಗಂಗಾಧರನೇ ತಾನೆಂದು ಅಂಗಕ್ಕೆ ಅರಿವಾದಾಗ ಸಪ್ತ ಸಾಗರಗಳನ್ನು ನಿಲ್ಲೆಂದು ಹೇಳಿ ನಿಲ್ಲಿಸಲು ಸಾಧ್ಯವಾಗುತ್ತದೆ. ಭೂಮಿಗೆ ಕೆಸರಗಲ್ಲ ನಿಕ್ಕಿ, ಏಳು ಭೂಮಂಡಲಗಳನ್ನು ಜೋಳಿಗೆಗೊಳಿಸಲು ಸಾಧ್ಯವಾಗುತ್ತದೆ. ಗಾಳಿಯನೇ ಆಹಾರವಾಗಿ ಸ್ವೀಕರಿಸಲು ಸಾಧ್ಯವಾಗುತ್ತದೆ. ಬೇರಿಲ್ಲದ ಮರವಾಗಿ ಓಡಾಡುತ್ತ ಅರಿವಿನ ಸಿಹಿಫಲಗಳನ್ನು ಉದುರಿಸಲು ಸಾಧ್ಯವಾಗುತ್ತದೆ. ಒಂಭತ್ತು ದ್ವೀಪಗಳನ್ನು ನೂಲ ಹಿಡಿದು ಬಂಧಿಸಲು ಸಾಧ್ಯವಾಗುತ್ತದೆ. ಇದು ಬೆಡಗಿನ ಉಮಾ ಮಹೇಶ್ವರನ ಲೀಲೆ. ಅಂಬಿಗರ ಚೌಡಯ್ಯನು ಹಾಕಿದ ಅರಿವಿನ ಅಮೃತದಿಂದ ಕೂಡಿದ ಬೆಡಗಿನ ಮುಂಡಿಗೆ.

**261**

**ಸಮಯವ ಮಾಡಿ, ಹಣವ ತೆಗೆಯಲೇತಕ್ಕೆ ?**
**ಆಚಾರಕ್ಕೂ ಹಣದಾಸೆಗೂ ಸರಿಯೆ ? ಎಂದನಂಬಿಗ ಚೌಡಯ್ಯ.**

ಪ್ರಾಣಿ ಪಶು ಪಕ್ಷಿ ಗಿಡ ಮರ ಬಳ್ಳಿ ಉರುಗ ಜಲಚರ ಕ್ರಿಮಿ ಕೀಟಗಳೆಲ್ಲ ಸಹಜವಾಗಿ

ಬದುಕುತ್ತವೆ. ಸಂತೋಷದಿಂದ ಬದುಕುತ್ತವೆ. ಸಾವು ಬಂದರೆ ಸಾಯುತ್ತವೆ. ಬೇನೆ ಬಂದರೆ ನರಳುತ್ತವೆ. ಅರಿವಿಲ್ಲದಿದ್ದರೂ ಸಹಜವಾಗಿ ಅರೆಗಳಿಗೆಯಾದರೂ ಆನಂದದಿಂದ ಬದುಕುವ ಶಕ್ತಿ ಇವುಗಳಿಗೆ ಇದೆ.

ಮನುಷ್ಯನಿಗೆ ಅರಿವಿದ್ದರೂ ಅದನ್ನು ಬಳಕೆ ಮಾಡಿ ಆನಂದದಿಂದ ಸಹಜವಾಗಿ ಬದು ಕುವುದನ್ನು ಸಂಪೂರ್ಣವಾಗಿ ಮರೆತು ಹೋಗಿದ್ದಾನೆ. ಬದುಕುವುದಕ್ಕೆ ಮನುಷ್ಯನಿಗೆ ಹಣ ಬೇಕು. ಹಣವಿಲ್ಲದೆ ಬದುಕಲಾರ. ಇದ್ದ ಸಮಯವನ್ನು ಹಣಕ್ಕಾಗಿ ವ್ಯಯ ಮಾಡುತ್ತಾನೆ. ಹಣ ಮಾಡುವ ಕಾಯಕಕ್ಕಾಗಿ ವ್ಯಯ ಮಾಡುತ್ತಾನೆ. ಹಣ ಮಾಡುವ ಓದು ಬರಹಕ್ಕಾಗಿ ವ್ಯಯ ಮಾಡುತ್ತಾನೆ. ಹಣ ಮಾಡುವ ಉಪನ್ಯಾಸಗಳಿಗಾಗಿ ವ್ಯಯ ಮಾಡುತ್ತಾನೆ. ತನ್ನರಿವು ತಾನೇ ಪಡೆಯಲು ತನಗೆ ಸಮಯವೇ ಇಲ್ಲ. ಹೀಗಾಗಿ ಅರಿವು ಕಾಯದಲ್ಲಿಯೇ ಉಳಿದಿದೆ ; ಕಾಯ ಹಣದ ವ್ಯವಹಾರಕ್ಕಾಗಿ ಬಳಕೆಯಾಗಿದೆ.

ಎರಡು ಸಾವಿರದ ಹದಿನಾರರಲ್ಲಿ ಇದ್ದ ಹಣ ಈಗ ಕಾಗದ. ಈಗ ಚಲಾವಣೆಯಲ್ಲಿ ಇದ್ದ ಕಾಗದಗಳು ಇದೀಗ ಹಣ. ಹಣಕ್ಕಾಗಿ ಯುದ್ಧ. ಹಣಕ್ಕಾಗಿ ವಿದ್ಯೆ. ಹಣಕ್ಕಾಗಿ ರಾಜಕೀಯ. ಹಣಕ್ಕಾಗಿ ನ್ಯಾಯ. ಹಣಕ್ಕಾಗಿ ಶುಶ್ರೂಷೆ. ಹಣಕ್ಕಾಗಿ ಮದುವೆ. ಹಣಕ್ಕಾಗಿ ಮಕ್ಕಳು. ಹಣಕ್ಕಾಗಿ ಸಂಬಂಧ. ಹಣವಿಲ್ಲದ ಕಾಯಕವೇ ಇಲ್ಲ.

ಹಣಕ್ಕಾಗಿ ಮಾಡುವ ಕಾಯಕ ಕಾಯವನ್ನು ಕೈಲಾಸವಾಗಿಸಲು ಸಾಧ್ಯವೆ ? ಕಾಯವೇ ಕೈಲಾಸ ! ಕಾಯದ ಕೈಲಾಸ ಕಾಯದಲ್ಲಿಯೇ ಉಳಿದು ಕಾಯದಿಂದಲೇ ಕೈಲಾಸ ರಚನೆಗೊಂಡಿದೆ. ದೇಹದಿಂದಲೇ ದೇವಾಲಯಗಳು ನಿರ್ಮಾಣಗೊಂಡಿವೆ. ಅಲ್ಲಿ ಬರೀ ಹಣದ ವ್ಯವಹಾರ.

ಆರತಿ ಕುಂಕುಮಾರ್ಚನೆ ಬಿಲ್ವಾರ್ಚನೆ ರುದ್ರಾಭಿಷೇಕ ಕ್ಷೀರಾಭಿಷೇಕ ಕಲ್ಯಾಣೋತ್ಸವ ಈ ಎಲ್ಲದಕ್ಕೂ ಹಣ. ಇದಕ್ಕೆ ಸರಕಾರದ ದೇಕಿರೇಖಿ ! ತಪ್ಪಿ ನಡೆದರೆ ದಂಡ. ಶಿಕ್ಷೆ. ಜೇಲುವಾಸ. ದೇವರ ವ್ಯವಹಾರದಲ್ಲಿ ಸರಕಾರವೂ ಭಾಗಿ ! ಅರಿವಿನ ಆಚಾರವೇ ಇಲ್ಲದ ಸರಕಾರ.

ಮನುಷ್ಯ ನಿರ್ಮಿಸಿದ ದೇವರಿಗೆ ಮನುಷ್ಯನೇ ಮಣಿಯಬೇಕು. ಕಾಯದಲ್ಲಿ ಅರಿವು ಮರೆಯಾಯಿತು. ಕಾಯ ನಿರ್ಮಿಸಿದ ಕಲ್ಲನ್ನೇ ಪದ್ಮಾವತಿಯೆಂದು ಪೂಜಿಸಿದ. ಮೇಲೆ ಹತ್ತಿ ದಣಿದು ಕೈಲಾಸವೆಂದು ಸಂಭ್ರಮಿಸಿದ. ಅದೇ ಕಲ್ಲನ್ನೇ ವೆಂಕಟೇಶನೆಂದು ನಮಿಸಿ ಹುಂಡಿಗೆ ಹಣ ಸುರಿದ. ಪದ್ಮಾವತಿಗೆ ವೆಂಕಟೇಶನಿಗೆ ಕಲ್ಯಾಣೋತ್ಸವ ಮಾಡಿದ. ಚತ್ರಿ ಛಾಮರಗಳನ್ನು ಬೀಸಿ ಶೋಬಾನೆ ಹಾಡಿದ. ಅವರಿಬ್ಬರನ್ನೂ ಶಯನ ಗೃಹಕ್ಕೆ ಕಳುಹಿಸಿ ಧನ್ಯತೆಯನ್ನು ಮೆರೆದ. ಹಣದಾಸೆಗಾಗಿ ಅಜ್ಞಾನದ ಪೂಜೆ.

ಕಲ್ಲೇ ವೆಂಕಟರಮಣ, ಕಲ್ಲೇ ಪದ್ಮಾವತಿ. ಕಲ್ಲೇ ಮಲ್ಲಿಕಾರ್ಜುನ, ಕಲ್ಲೇ ಭ್ರಮರಾಂಬ. ಕಲ್ಲು ಕಲ್ಲಿಗೆ ಪೂಜೆ, ಕಲ್ಲು ಕಲ್ಲಿಗೆ ಹಣ. ಇದೆಲ್ಲವನ್ನೂ ಮಾಡಲು ಕಾಯಕ್ಕೆ ಸಮಯ ಉಂಟು. ಹಣವೂ ಉಂಟು, ಕಾಯದಲ್ಲಿ ಸಂಗಮವಾದ ಅರಿವಿನ ಆಚಾರ ಮಾಡಲು ಕಾಯಕ್ಕೆ ಸಮಯವಿಲ್ಲ. ಅದಕ್ಕೆ ಹಣದ ಅವಶ್ಯಕತೆಯೂ ಇಲ್ಲ.

ಮರ ಹಣ ಪಡೆದು ಹಣ್ಣು ನೀಡುವುದಿಲ್ಲ. ಜಲ ಗಾಳಿ ಬೆಂಕಿ ಭೂಮಿ ಆಕಾಶಗಳಿಗೆ ಹಣದ ಅವಶ್ಯಕತೆಯಿಲ್ಲ. ಗಿಡ ಮರ ಬಳ್ಳಿ ಜಲಚರ ಪಶು ಪಕ್ಷಿ ಪ್ರಾಣಿ ಹಣ ಪಡೆದು ತಮ್ಮ ಆಹಾರವನ್ನು ಮನುಷ್ಯನಿಗೆ ನೀಡುವುದಿಲ್ಲ. ಅವು ಸಹಜ ಅರಿವಿನ ಆಚಾರದಲ್ಲಿ ನಿರತವಾಗಿವೆ.

ಮನುಷ್ಯ ಮರೆವಿನ ಅಜ್ಞಾನದ ಆಚಾರದಲ್ಲಿ ನಿರತನಾಗಿದ್ದಾನೆ. ಆಚಾರಕ್ಕೂ ಹಣದ ಆಸೆಗೂ ಸರಿಯೆ? ಎಂದು ಪ್ರಶ್ನಿಸಿದ್ದಾರೆ ಅಂಬಿಗರ ಚೌಡಯ್ಯ. ಇದು ಶರಣರ ಅರಿವಿನ ಆಚಾರದ ಸೂತ್ರ. ಅಗೋಚರದ ಆಚಾರದ ಸೂತ್ರ.

262

**ಸರ್ವಾಂಗ ಲಿಂಗವಾದ ಶರಣನ ಕಾಯ**
**ಆವ ದೇಶದಲ್ಲಿ ಅಳಿದಡೇನು ?**
**ಎಲ್ಲಿ ಅಳಿದಡೇನು ? ಉಳಿದಡೇನು ?**
**ಕಾಯ ಉಳಿಯದೆ ಬಯಲಾದಡೇನು ?**
**ಅದೇತರಲ್ಲಿ ಹೋದಡು, ಲಿಂಗೈಕ್ಯ ಪದಕ್ಕೆ**
**ಕುತ್ತ ಕೊಡಲಿಲ್ಲವೆಂದನಂಬಿಗ ಚೌಡಯ್ಯ.**

ಅಂಗ ಎಂದರೆ 'ಪದಾರ್ಥ'. ಲಿಂಗ ಎಂದರೆ 'ಪದ'. ಪದಾರ್ಥದಲ್ಲಿ ಪದ ಸಂಗಮವಾಗಿದೆ. ಪದ ಪದಾರ್ಥಗಳಿಂದ ಸಂಗಮವಾದ ಸಂಪತ್ತನ್ನು 'ಕಾಯ' ವೆಂದು ಕರೆದಿದ್ದಾರೆ ಶರಣರು. ಈ ಕಾಯವನ್ನೇ ಕೈಲಾಸ ಮಾಡಿಕೊಂಡು ಕಾಯವಿರುವಾಗಲೇ ಬಯಲು ಸೇರಿ ಬಯಲಲ್ಲಿ ಬಯಲಾದವರೇ ಶರಣರು.

ಕಾಯ ಯಾವ ದೇಶದಲ್ಲಿದ್ದಡೇನು ? ಯಾವ ಭಾಷೆಯನ್ನು ನುಡಿದರೇನು ? ಎಲ್ಲಿ ಅಳಿದಡೇನು ? ಕಾಯ ಕಾಯವಲ್ಲವೆ? ಕ್ರಿಸ್ತ, ಕ್ರಿಷ್ಣ, ಪೈಗಂಬರ, ಬುದ್ಧ, ಮಹಾವೀರ, ಕನಕ, ಪುರಂದರ, ಬಸವಾದಿ ಶರಣರು ಕಾಯವನ್ನೇ ಕೈಲಾಸ ಮಾಡಿಕೊಂಡವರು.

ಅಂಗ ಪದಾರ್ಥವಾದರೆ 'ಲಿಂಗ'ಪದ. ಸರ್ವಾಂಗವೂ ಪದ ಪದಾರ್ಥದಿಂದ ಭರಿತವಾಗಿದೆ. ಅಂಗವನ್ನು ಆವರಿಸಿದ ಮನ ಲಿಂಗವೆಂಬ ಪದದಲ್ಲಿ ಸಂಗಮವಾದರೆ ಸಾಕು ಸರ್ವಾಂಗದಲ್ಲಿ ಲಿಂಗವೇ ಆಗುತ್ತದೆ. ಆ ಲಿಂಗ ಅರಿವಿನ ಲಿಂಗಾಂಗವೇ ಆಗುತ್ತದೆ. ಅಂತಹ ಅಂಗ ಯಾವ ದೇಶದಲ್ಲಿ ಇದ್ದಡೂ ಯಾವ ಭಾಷೆಯನು ನುಡಿಯುತ್ತಿದ್ದರೂ ಆ ಅಂಗಕ್ಕೆ ಕುತ್ತವೇ ಇಲ್ಲ. ಸರ್ವಾಂಗಗಳನ್ನು ಲಿಂಗವನ್ನಾಗಿಸುವ ಸುಳುಹು ಕೊಡುತ್ತಾ ಬಯಲಲ್ಲಿ ಬಯಲಾಗಿ ತೇಲಾಡುತ್ತಾ ಆನಂದದಿಂದ ವಿಹರಿಸುತ್ತದೆ.

263

**ಸಸಿಗೆ ನೀರೆರೆದಡೆ ಹಸುರಾದಂತೆ,**
**ಬೇರಿನ ಬಾಯಿ ತುಂಬಿ, ಸಸಿಯ ಒಡಲು ತುಂಬಿ,**
**ಆ ಎಸಕದ ತೆರದಂತೆ**
**ಇಷ್ಟ ಪ್ರಾಣಯೋಗವೆಂದನಂಬಿಗ ಚೌಡಯ್ಯ.**

ನೀರನು ಉಂಡ ಸಸಿ ಹಸುರಾಗಿ ನಳನಳಿಸುತ್ತದೆ. ಅದರ ಬೇರು ಬಾಯಿ ಒಡಲು ತುಂಬಿ ಕಾಂತಿಯಿಂದ ಮಿರಮಿರನೆ ಮಿಂಚುತ್ತದೆ.

ಸಸಿ ಬೇರಿನ ಬಲದಿಂದಾಗಿ ಅರಳಿ ನಳನಳಿಸಿ ಹೂಗಳಿಂದ ಕಂಗೊಳಿಸುತ್ತದೆ. ಸಸಿ

ಹೂವಾಗಿ ಅರಳಲು, ಹಸಿರಿನಿಂದ ಕಂಗೊಳಿಸಲು ಸಸಿಗೆ ಮತ್ತೊಂದು ಸಸಿ ಸಹಾಯ ಮಾಡುವುದಿಲ್ಲ. ಸಸಿ ತನ್ನನ್ನು ನಂಬುತ್ತದೆ. ತನ್ನ ಬೇರನ್ನು ನಂಬುತ್ತದೆ. ಬೇರನ್ನು ಹಿಡಿದ ಭೂಮಿಗೆ ತಾನೇ ನೀರೆರಚಿ, ಒದ್ದೆ ಮಾಡಿ ಗಟ್ಟಿಯಾಗಿ ನಿಂತು ಮೊಗ್ಗು ಬಿಟ್ಟು ಅರಳುತ್ತದೆ. ಹಾಗೆ ಅರಳುವ ಉದ್ದೇಶ ಹೊಂದಿದ ಅಂಗವೂ ಅರಿವಿನ ಅಂಗವಾಗಿ ಅರಳುತ್ತದೆ. ಬುದ್ಧನಂತೆ ಮಹಾವೀರನಂತೆ ಬಸವನಂತೆ ಅಂಬಿಗರ ಚೌಡಯ್ಯನಂತೆ ಅರಳುತ್ತದೆ.

ಅಂಗ ಅರಳಲು ಮತ್ತೊಂದು ಅಂಗವನ್ನು ಯಾಚಿಸುವುದರಿಂದ ಅಂಗಕ್ಕೆ ಅರಳಲು ತಡವಾಗುತ್ತದೆ. ಅರಳುವಿಕೆ ಎನ್ನುವುದು ಬುದ್ಧ ಮಹಾವೀರರಿಗೆ ಮಾತ್ರ ಮೀಸಲಲ್ಲ. ಸಕಲ ಅಂಗಗಳಲ್ಲಿ ಸಸಿಯಂದದಿ ಅರಳುವಂತಹ ಅರಳುವಿಕೆಯನ್ನು ಅಂಗದಲ್ಲಿಯೇ ಬಚ್ಚಿಟ್ಟುಕೊಂಡಿದೆ.

ಸಸಿಯಲ್ಲಿ ಅರಳಿದ ಹೂ ಸಸಿಯ ಬೇರಿನಲ್ಲಿತ್ತು , ಸಸಿಯ ರೆಂಬೆಗಳಲ್ಲಿತ್ತು . ಎಲೆ ಚಿಗುರುಗಳಲ್ಲಿತ್ತು , ಕಾಂಡದಲ್ಲಿತ್ತು . ಸಸಿಗೆ ಪ್ರೌಢತ್ವ ಬಂದಾಗ ಸಸಿಯಲ್ಲಿ ಸಂಗಮವಾದ ಹೂ ಮೊಗ್ಗಾಗಿ ಹೂವಾಗಿ ಅರಳಿ ಮಕರಂದ ಬೀರಿತು. ಸಸಿ ಹೂವಾಗಿ ಅರಳಲು ಅದಕ್ಕೆ ವಿಶ್ವ ವಿದ್ಯಾಲಯಗಳ ಸಹಾಯ ಬೇಡ, ಉಪನ್ಯಾಸಕರ ಸಹಾಯವೂ ಬೇಡ, ಸಂತರ ಸಹಾಯವೂ ಬೇಡ. ಸಸಿಯಲ್ಲೇ ಮೊಗ್ಗು ಹೂ ಮಕರಂದ ಸಂಗಮವಾಗಿದೆ. ಅದಕ್ಕಾಗಿಯೇ ಅದು ಸೊಗಸಾಗಿ ಬೆಳೆಯುತ್ತದೆ.

ಬೇರಿನ ಬಾಯಿ ತುಂಬಿದರೆ ಸಾಕು, ಸಸಿಯ ಒಡಲು ತುಂಬಿದರೆ ಸಾಕು. ಮೊಗ್ಗು ಸಸಿಯ ಗರ್ಭದಿಂದ ಹೊರಬಂದು ಹೂವಾಗಿ ಅರಳಿ ಅದರ ಮಕರಂದವನ್ನು ತುಂಬಿ ಇದ್ದಲ್ಲಿಗೆ ಕಳಿಸಿ ಕರೆತಂದು ಹೂ ತನ್ನೊಂದಿಗೆ ಸಂಗ ಮಾಡಿಕೊಳ್ಳುತ್ತದೆ.

ಇದನ್ನೇ ಇಷ್ಟ ಪ್ರಾಣ ಯೋಗವೆಂದು ಕರೆದಿದ್ದಾರೆ ಅಂಬಿಗರ ಚೌಡಯ್ಯ ಶರಣರು. ಯೋಗವೆಂದರೆ ಕೂಡುವಿಕೆ. ಒಡಲು ಆವರಿಸಿದ ಮನ ಒಡಲಲ್ಲಿಯೇ ಸಂಗಮವಾದ ಒಡ ಲೊಡೆಯನನ್ನು ಸಂತಸದಿಂದ ಕೂಡಿದರೆ ಸಾಕು ಸರ್ವಾಂಗದಲ್ಲಿ ಜ್ಞಾನದ ಹೂವು ಅರಳುತ್ತದೆ. ಅಂಗ ಲಿಂಗಾಂಗವಾಗಿ ಬೆಳಗುತ್ತದೆ.

**264**

**ಸಹಜವಯ್ಯ ಶಿವಗಣಂಗಳ ನುಡಿ ಸತ್ಯವು.**
**ಪಾಷಂಡಿ ಪ್ರಪಂಚಿಗಳ, ದಾಸಿ ವೇಶಿಯರ,**
**ಕಾಸಿಗಾಸೆ ಮಾಡುವ ಮೂಷಕರ,**
**ಪಶು ಭಕ್ಷಕರನೆಂತು ಮಹಂತಿನ ದೇವರೆನಬಹುದಯ್ಯ ?**
**ವೇಶಿಯಂತೆ ವೇಷವ ಹಲ್ಲಣಿಸಿಕೊಂಡು,**
**ಸರ್ವರಿಗೆ ಸುಮತ ಸುವಚನವ ನುಡಿದು,**
**ಶಿವಭಕ್ತರನುಣ್ಣಿಸಿ ಬಣ್ಣಿಸಿ,**
**ಕಾಸು ವೀಸಗಳನಿಸಿದುಕೊಂಡು ಪಾಶಬದ್ಧರಾಗಿ**
**ಹೇಸಿಕೆಯ ಕಿಸುಕುಳದ ಮೂತ್ರದ ಕುಳಿಯಲ್ಲಿ ಹೊರಳುವ**
**ಧೂರ್ತ ಲಾಂಛನಿಗಳು**
**ಯಮಪುರದಲ್ಲಿ ಲೋಲರಾಗಿಪ್ಪರೆಂದಾತನಂಬಿಗ ಚೌಡಯ್ಯ .**

ಪಾಷಂಡಿ ಪ್ರಪಂಚಿಗಳನು, ದಾಸಿ ವೇಶಿಯರನು, ಕಾಸಿಗೆ ಆಸೆಯನು ಮಾಡುವ ಮೂಷಕರನು, ಪಶುಭಕ್ಷಕರನು ಮಹಂತಿನ ದೇವರೆಂದು ಹೇಗೆ ಹೇಳಲಿ. ಅವರು ವೇಶಿಯಂತೆ ವೇಷವನು ಹಾಕಿಕೊಂಡವರು. ಸರ್ವರಿಗೂ ಸಮ್ಮತವಾದ ನುಡಿಯನು ನುಡಿಯುವವರು. ಶಿವಭಕ್ತರನು ಬಣ್ಣಿಸುತ್ತ ಅವರಿಗೆ ಮನಸಾರೆ ಉಣ್ಣಿಸಿ ಕಾಸು ಕಸಿದುಕೊಳ್ಳುವ ಹಗಲುಗಳ್ಳರನ್ನು ಮಹಂತಿನ ದೇವರೆಂದು ಹೇಗೆ ಹೇಳಲಿ ?

ಹೇಸಿಕೆಯ ಕಿಸುಕುಳದ ಮೂತ್ರದ ಕುಣಿಯಲ್ಲಿ ಹೊರಳುವ ಧೂರ್ತ ಲಾಂಛನಿಗಳವರು. ಅವರು ಹಾಕಿಕೊಂಡ ವೇಷಕ್ಕೆ ಶರಣೆನ್ನುವಂತಿಲ್ಲ. ಅಂಗದಲ್ಲಿ ಸಂಗಮವಾದ ಶಿವನನ್ನು ಅರಿಯದೆ ಶಿವ ಲಾಂಛನವನ್ನು ಧರಿಸಿಕೊಂಡ ಧೂರ್ತರನ್ನು ಸಹಜ ಶಿವಗಣಂಗಳು ಒಪ್ಪುವುದಿಲ್ಲ. ಅವರ ನುಡಿಸತ್ಯ , ಅವರ ಇರುವಿಕೆ ಸಹಜ. ಅವರಿಗೆ ವೇಷದ ಅಗತ್ಯವೂ ಇಲ್ಲ. ಸಾಕ್ಷಾತ್ ಬ್ರಹ್ಮಪೀಠದ ಮೇಲೆ ಕುಳಿತು ಭ್ರಮೆಯನ್ನು ಕಳೆದುಕೊಂಡವರವರು.

**265**

**ಸೃಷ್ಟಿಯ ಕಲ್ಪಿಸುವ ಕರ್ತ ಬ್ರಹ್ಮಂಗೆ ಶತಾಯುಗನೆಂಬ ಗಣಿತವಿದೇನು ?**
**ಸಕಲ ಜೀವಿಗಳ ರಕ್ಷಿಸುವ ವಿಷ್ಣುವಿಂಗೆ ದಶಾವತಾರವೆಂಬ ಗಣಿತವಿದೇನು ?**
**ಕೋಪಾಗ್ನಿ ರುದ್ರನೆಂಬ ಜಮದಗ್ನಿಯ ತಲೆಯನರಿದವರಾರು ?**
**ಮೂವತ್ತುಮೂರು ಕೋಟಿ ದೇವರ್ಕಳನಾಳಿದ ರಾವಣಂಗೆ ಅಳಿವೆಂಬುದೇನು ?**
**ಹರಸಿ ಲಕ್ಷ ವಿಪ್ರರು ನಿಚ್ಚ ಮಂತ್ರಾಕ್ಷತೆಯನಿಡುತ್ತಿರಲು**
**ದುರ್ಯೋಧನಂಗೆ ಸಾವೆಂಬುದೇನು ?**
**ಹರನೆ ನೀಹರಿಸಿ ಪಟ್ಟವ ಕಟ್ಟಿ ಕೊಟ್ಟಂತಲ್ಲದೆ ಇಲ್ಲ.**
**ಎಲ್ಲರಿಗೆಯೂ ಮೂರು ಲೋಕದೊಳಗೆ**
**ನೀನೊಬ್ಬನೆ ಒಡೆಯನೆಂದಾತನಂಬಿಗ ಚೌಡಯ್ಯ .**

ಬ್ರಹ್ಮ ವಿಷ್ಣು ರುದ್ರರು ಆಯುಷ್ಯವನ್ನು ಬರೆದುಕೊಂಡವರಲ್ಲ. ಮೂವತ್ತುಮೂರು ಕೋಟಿ ದೇವರನ್ನು ಆಳಿದ ರಾವಣನ ಆಯುಷ್ಯ ಕೂಡ ಅರೆ ಆಯುಷ್ಯವಾಯಿತ್ತು .

ಲಕ್ಷ ಬ್ರಾಹ್ಮಣರು ನಿತ್ಯ ಮಂತ್ರಾಕ್ಷತೆಯನಿಟ್ಟು ಹರಸಿದರು ಕೂಡಾ ದುರ್ಯೋಧನನು ತೊಡೆ ಮುರಿಸಿಕೊಂಡು ಸತ್ತು ಹೋದ.

ಅಂಗದಲ್ಲಿಯೇ ಸಂಗಮವಾದ ಹರನೇ ನೀನು ಹರಸಿ ಪಟ್ಟವ ಕಟ್ಟಿದವನು ಈ ದೇಹದ ಸಾಮ್ರಾಜ್ಯವನ್ನು ಎಷ್ಟು ವರುಷವಾದರೂ ಆಳಿಯಾನು.

ಮೂರು ಲೋಕದ ಸಕಲ ದೇಹಧಾರಿಗಳಿಗೂ ನೀನೊಬ್ಬನೆ ಒಡೆಯ ಅಂಬಿಗ ಚೌಡಯ್ಯನು.

ಜಗತ್ತು ಎನ್ನುವುದು ಒಂದೇ. ಮೂರು ಲೋಕಗಳು ಎನ್ನುವವು ಇಲ್ಲವೇ ಇಲ್ಲ. ಮೂರು ಲೋಕವೆಂಬುದು ಬೆಡಗಿನ ಮಾತು. ಇರುವುದು ಒಂದೇ ಲೋಕ.

ರಾಜಸ, ತಾಮಸ, ಸಾತ್ವಿಕ ಎನ್ನುವ ಮೂರು ಲೋಕಗಳು ಉಂಟು. ಈ ಮೂರೂ ಲೋಕಗಳಿಗೂ ಒಡೆಯ ಒಬ್ಬನೇ ಉಂಟು. ಅವನೇ ಹರ. ಅವನು ಹರಸಿದರೆ ಸಾಕು ಮೂರು

ಲೋಕಗಳು ಕೂಡಲೇ ಕಳಚಿ ಬೀಳುವವು. ಬುದ್ಧ ಲೋಕ, ಮಹಾವೀರನ ಲೋಕ, ಮಹಾ ಜ್ಞಾನಿ ಬಸವಾದಿ ಶರಣರ ಲೋಕವೊಂದೇ ಉಳಿಯುವುದು.

ದೇಹವೆಂಬುದು ಮಹಾಜ್ಞಾನಿಯ ಲೋಕ. ಆ ಲೋಕವನ್ನು ರಾಜಸ ಗುಣದವನೊಬ್ಬನು ತನ್ನ ಸಾಮ್ರಾಜ್ಯ ಕಟ್ಟುವುದಕ್ಕಾಗಿ ಮುತ್ತಿಗೆ ಹಾಕಿದ್ದಾನೆ. ತಾಮಸ ಗುಣದವನು ಕೂಡಾ ಮುತ್ತಿಗೆ ಹಾಕಿದ್ದಾನೆ. ಹಾಗೆಯೇ ಸಾತ್ವಿಕ ಗುಣದವನೊಬ್ಬ ತನ್ನ ಸಾಮ್ರಾಜ್ಯ ಕಟ್ಟಲು ಈ ದೇಹವನ್ನು ಮುತ್ತಿಗೆ ಹಾಕಿದ್ದಾನೆ. ಈ ಮೂವರು ಮಹಾ ಬಲಿಷ್ಠರು.

ಬ್ರಹ್ಮ ವಿಷ್ಣು ರುದ್ರರೇ ಇವರಿಗೆ ನಾಯಕರು. ಸಾತ್ವಿಕ ಲೋಕವನ್ನು ಬ್ರಹ್ಮ ಆಳಿದರೆ ರಾಜಸ ಲೋಕವನ್ನು ವಿಷ್ಣು ಆಳುತ್ತಾನೆ. ತಾಮಸ ಲೋಕವನ್ನು ರುದ್ರ ಆಳುತ್ತಾನೆ. ಇವರೆಲ್ಲರ ಆಳ್ವಿಕೆಯನ್ನು ಸಹಜವಾಗಿ ನೋಡುತ್ತಾ ಹರ ದೇಹದಲ್ಲಿಯೇ ಸಂಗಮವಾಗಿದ್ದಾನೆ.

ಸಾತ್ವಿಕನಿಗೆ ರಾಜಸಿಗನಾಗಬೇಕೆಂಬ ಬಯಕೆ, ರಾಜಸಿಗನಿಗೆ ತಾಮಸಿಗನಾಗಬೇಕೆಂಬ ಬಯಕೆ; ತಾಮಸಿಗನಿಗೆ ರಾಜನಾಗಬೇಕೆಂಬ ಬಯಕೆ. ಹೀಗೆ ಒಬ್ಬನಿಗೆ ಮತ್ತೊಬ್ಬನಾಗಬೇಕೆಂಬ ಬಯಕೆಯಿಂದಾಗಿ ದೇಹದ ಆಯುಷ್ಯ ಕಳೆದೇ ಹೋಗುತ್ತದೆ.

ಈ ಮೂವರೂ ತಮ್ಮ ತಮ್ಮ ಬಯಕೆ ಕಳೆದುಕೊಂಡು ದೇಹದಲ್ಲಿಯೇ ಸಂಗಮವಾದ ದೇಹದ ಒಡೆಯನಾದ ಸಂಗಮನಾಥನನ್ನು ಕೂಡಿದರೆ ಸಾಕು ಮೂವರ ಬಯಕೆಗಳೂ ಉದುರಿ ಬೀಳುತ್ತವೆ. ಸಾತ್ವಿಕ ರಾಜಸ ತಾಮಸ ಗುಣಗಳನ್ನು ಕಳೆದುಕೊಂಡು ಗುಣಾತೀತನಾಗುತ್ತಾನೆ. ನಿರ್ಗುಣನಾಗುತ್ತಾನೆ. ನಿತ್ಯ ನಿರಂಜನ ತಾನೇ ಆಗುತ್ತಾನೆ.

**266**

**ಸೋಮವಾರ, ಹುಣ್ಣಿಮೆ, ಅಮವಾಸ್ಯೆ ಎಂದು ಉಪವಾಸವಿರ್ದು**
**ಶಿವನಿಗೆ ಅರ್ಪಿತ ಎಂದು ನುಡಿವರು.**
**ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವನಳಿಯರು.**
**ಶಿವನ ನೆಲೆಯನರಿಯದೆ, ಎನಗೆ ಗತಿ ಕೊಡುವ ಲಿಂಗವಿದೇ ಎಂದು ತಿಳಿಯದೆ,**
**ಗ್ರಾಮದ ಹೊರತಾಯದಲ್ಲಿರುವ ದೇವರುಗಳು ಅಧಿಕವೆಂದು ಪೂಜಿಸಿ**
**ಅವಕಿಕ್ಕಿದ ಕೂಳ ತಾ ತಿಂಬುವನು.**
**ಇನ್ನು ಸೋಮಧರಗರ್ಪಿತವೆಂದು ಭುಂಜಿಸುವವರ ತೆರನಂತೆ-**
**ದೊಡ್ಡ ಗ್ರಾಮದ ಸೂಕರನು ಗಂಗೆಯಲ್ಲಿ ಮಿಂದು ಬಂದು**
**ಅಮೇಧ್ಯವ ಭುಂಜಿಸಿದ ತೆರನಾಯಿತೆಂದಾತ**
**ನಮ್ಮ ಅಂಬಿಗರ ಚೌಡಯ್ಯ ನಿಜಶರಣನು .**

ಸೋಮವಾರ ಹುಣ್ಣಿಮೆ ಅಮವಾಸ್ಯೆಯ ದಿನದಂದು ಉಪವಾಸ ಇದ್ದು, ಉಪವಾಸ ಶಿವನಿಗೆ ಅರ್ಪಿತವೆಂದು ನುಡಿದರೆ ಅದು ಬಾಹ್ಯ ಆಚಾರ ; ತೋರಿಕೆಯ ಆಚಾರವಾಯಿತು. ಇದರಿಂದ ಶಿವ ಯಾರು ಎಂದು ತಿಳಿಯಲಿಲ್ಲ.

ತನುವಿನಲ್ಲಿ ಉತ್ಪತ್ತಿಯಾದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ತಾನು ಮಾಡುವ ಪೂಜೆಯಿಂದ ತಿಳಿಯಲು ಸಾಧ್ಯವಾಗಲಿಲ್ಲ. ಇದರಿಂದ ತನುವಿನಲ್ಲಿ ಸಂಗಮವಾದ

ಶಿವ ತನುವಿಗೆ ದೂರವಾದನೇ ಹೊರತು ತನುವಿಗೆ ಯಾವ ಲಾಭವೂ ಆಗಲಿಲ್ಲ.

ತನುವಿಗೆ ಗತಿ ಸದ್ಗತಿಯನ್ನು ಕೊಡುವ ಲಿಂಗ (ಅರಿ)ವನ್ನು ತಿಳಿಯದೇ ಗ್ರಾಮದ ಹೊರಗಿರುವ ಮಾರಿ ದೇವತೆಯನ್ನೇ ಅಧಿಕವೆಂದು ಪೂಜಿಸಿ ಅವಕಿಕ್ಕಿದ ಕೂಳು ತಾನು ತಿಂದು ಇದು ಸೋಮಧರನಿಗೆ ಅರ್ಪಿತವೆಂದು ನುಡಿದಂತೆ.

ಗ್ರಾಮದ ಒಡೆಯ ಗಂಗೆಯಲ್ಲಿ ಮುಳುಗಿ ಅಮೇಧ್ಯ ತಿಂದಂತೆ ಎಂದು ಹೇಳುತ್ತಾ ಅಂಬಿಗರ ಚೌಡಯ್ಯ ಸುಮ್ಮನಾಗುವನು.

**267**

**ಸ್ಥಲಂಗಳ ನೋಡಿ ಕಂಡಿಹೆನೆಂದಡೆ ಅಡಕಿದ ಮಡಕೆಯಲ್ಲ.**
**ಆಚಾರದಲ್ಲಿ ನೋಡಿ ಕಂಡಿಹೆನೆಂದಡೆ, ಸಂಕಲ್ಪ ದೇಹಿಯಲ್ಲ.**
**ಸಕಲ ಆಗಮಂಗಳಲ್ಲಿ ನೋಡಿ ಕಂಡೆಹೆನೆಂದಡೆ, ಮಾತಿನ ಮಾಲೆಯವನಲ್ಲ.**
**ತನುವ ದಂಡಿಸಿ ಕಂಡಿಹೆನೆಂದಡೆ ಬಂಧನದವನಲ್ಲ.**
**ಏತರಲ್ಲಿಯೂ ತೊಡಕಿಲ್ಲದ**
**ಸರ್ವವ ನೇತಿಗಳೆಯದೆ ಅಜಾತನಾಗಿ ನಿಂದವಂಗೆ**
**ಆತನೇತರಲ್ಲಿಯೂ ಸುಖಿಯೆಂದನಂಬಿಗ ಚೌಡಯ್ಯ.**

ಸ್ಥಲಂಗಳನ್ನು ನೋಡಿ ದೇಹದ ಮೂಲಕ ಆಚಾರ ಮಾಡುತ್ತ ಮುಕ್ತಿ ಪಡೆಯುತ್ತೇನೆ ಎಂದು ನಿರ್ಧರಿಸಿದರೆ ದೇಹವೆನ್ನುವುದು ಮಾಂಸದ ಮಡಕೆಯಲ್ಲ.

ಮೂರು ವೇಳೆ ಪೂಜಿಸುತ್ತಾ ಪೂಜಿಸುವ ಆಚಾರ ನೋಡಿ ಶಿವನನ್ನು ಕಾಣುವೆನೆಂದು ಸಂಕಲ್ಪ ಮಾಡಿದರೆ ದೇಹದಲ್ಲಿ ಸಂಕಲ್ಪಕ್ಕೆ ಆಸ್ಪದವೇ ಇಲ್ಲ.

ಸಕಲ ಆಗಮಂಗಳನ್ನು ಓದಿ ಶಿವಜ್ಞಾನ ಪಡೆಯುವೆನೆಂದು ನಿರ್ಧರಿಸಿದರೆ ಮಾತಿನ ಮಾಲೆಯವನಲ್ಲ. ಮಾತು ಮೌನಂಗಳಿಂದಲೂ ಅತ್ತತ್ತಲಿರುವ ಶಿವ. ಸಕಲ ಆಗಮಂಗಳನ್ನು ದೇಹದಿಂದಲೇ ಹೊರತಂದ ದೇಹಕ್ಕೆ ಆಗಮಗಳಿಂದ ಮುಕ್ತಿ ಹೊರೆಯುವುದಾದರೂ ಹೇಗೆ?

ಜಪ ತಪಗಳನ್ನು ಮಾಡುತ್ತಾ ಒಂಟಿಗಾಲಿನಲ್ಲಿ ನಿಂತು ದೇಹ ದಂಡಿಸಿ ಕಂಡಿಹೆನೆಂದಡೆ ಶಿವ ಬಂಧನದವನಲ್ಲ.

ಏತರಲ್ಲಿಯೂ ತೊಡಕಿಲ್ಲದವನು. ಸರ್ವದ ನೇತಿಗಳೆಯದೆ ಅಜಾತನಾಗಿ ನಿಂದವನು ಆತ. ತನುವಿನಲ್ಲಿಯೇ ತನ್ಮಯನಾದವನು ಆತ. ತನುವಿನಲ್ಲಿ ತನ್ಮಯವೆಂದು ತಿಳಿದರೆ ಸಾಕು. ಸಕಲವನ್ನು ಅಲ್ಲಗಳೆದು ಸದಾ ಸುಖಿಯಾಗುವನು.

**268**

**ಸ್ವಲ್ಪ ಅಮೃತಾನ್ನವನೊಯ್ದು ಹುತ್ತವೆಂದು ಬಿಲದ್ವಾರದಲ್ಲಿ ಹೊಯ್ವ**
**ತೊತ್ತಿಂಗೆಲ್ಲಿಯದೊ ಶಿವಾಚಾರ ! ಅದೆಂತೆಂದಡೆ :**
**ಕಲ್ಲನಾಗರ ಕಂಡಡೆ ಹಾಲ ಹೊಯ್ಯೆಂಬಳು,**
**ಬದುಕಿದ ನಾಗರ ಕಂಡಡೆ ಕೊಲ್ಲು ಕೊಲ್ಲೆಂಬಳು.**

**ಉಂಬ ದೇವರು ಬಂದಡೆ ಇಲ್ಲವೆಂದಟ್ಟುವಳು,**
**ಉಣ್ಣದ ಕಲ್ಲುಪ್ರತಿಮೆಯ ಮುಂದಿಟ್ಟು ಉಣ್ಣೆಂಬಳು.**
**ಇಂತಹ ವೇಷದ ಡಂಬ ತೊತ್ತಿಂಗೆ**
**ವಿಚಾರಿಸದೆ ಲಿಂಗವ ಕೊಡಲಾಗದೆಂದಾತನಂಬಿಗ ಚೌಡಯ್ಯ .**

ಹುತ್ತಕ್ಕೆ ಅಮೃತಾನ್ನವವನ್ನು ಹೊಯ್ಯುವುದು, ಕಲ್ಲನಾಗಕ್ಕೆ ಹಾಲನು ಎರೆಯುವುದು, ಉಣ್ಣದ ಲಿಂಗಕ್ಕೆ ಬೋನವನ್ನು ಇಡುವುದು ಗೋಚರದ ಆಚಾರ. ಇಂತಹ ಆಚಾರವುಳ್ಳ ಮನಕ್ಕೆ ಲಿಂಗವನು ಕೊಡಲಾಗದು.

ತನುವಿಗೆ ಆಚಾರದ ವೇಷ ಧರಿಸುವ ಸುಳ್ಳು, ಮನದ ಕೆಲಸವೆಂದು ತನುವಿಗೆ ಗೊತ್ತಾಗುವುದೇ ಇಲ್ಲ. ತನುವಿನಲ್ಲಿ ಅರಿವೆಂಬ ಗುರುದೇವನು ತನ್ಮಯವಾಗಿದ್ದಾನೆ. ತನುವನ್ನು ಹುಸಿ ಮನ ಆವರಿಸಿಕೊಂಡಿದೆ. ಹುತ್ತ ಸುಳ್ಳು, ಕಲ್ಲು ನಾಗರ ಸುಳ್ಳು, ಉಣ್ಣದ ಲಿಂಗವೂ ಸುಳ್ಳು ಎಂದು ಅಂಗದಲ್ಲಿಯೇ ಸಂಗಮವಾದ ಗುರುದೇವ ಹೇಳಿದರೂ ಮನ ಕೇಳುವುದಿಲ್ಲ. ಏಕೆಂದರೆ ಲೋಕ ಗೋಚರಕ್ಕೆ ಬರುವ ಆಚರಣೆಯಲ್ಲಿ ತನ್ಮಯವಾಗಿದೆ. ಅರಿವಿನ ಆಚರಣೆ ಯಿಂದ ದೂರವಾಗಿದೆ.

ಗುರುದೇವನ ಮಾತು ಕೇಳಿದರೆ ಹುತ್ತಕ್ಕೆ ಅನ್ನವನಿಕ್ಕುವುದು ಬಿಡಬೇಕು. ಕಲ್ಲನಾಗಕ್ಕೆ ಹಾಲನೆರೆಯುವುದು ಬಿಡಬೇಕು. ಉಣ್ಣದ ಲಿಂಗಕ್ಕೆ ನೈವೇದ್ಯ ಮಾಡುವುದನ್ನು ಬಿಡಬೇಕು.

ಗೋಚರದ ಆಚಾರವನ್ನು ಬಿಟ್ಟು ಅಗೋಚರದ ಆಚಾರವನ್ನು ಹಿಡಿಯಬೇಕು. ಇದೇ ಶಿವಾಚಾರ. ಇಂತಹ ಶಿವಾಚಾರವನ್ನು ಗುರುದೇವ ಹುಸಿ ಮನಕ್ಕೆ ಬೋಧಿಸುವುದಿಲ್ಲ. ಬೋಧಿಸಿದರೂ ಬೋಧಿಸಿದ ಶಿವಾಚಾರವನ್ನೇ ಹುಸಿ ಮಾಡುತ್ತದೆ ಹುಸಿ ಮನ.

**269**

**ಹರಿಗೆ ಚಕ್ರ ಡಾಣೆ, ಬ್ರಹ್ಮಂಗೆ ವೇದ ಪಾಷ,**
**ಹಿರಿಯ ರುದ್ರಂಗೆ ಜಡೆ ಜಪಮಣಿ ನೋಡಾ.**
**ಧರೆಯವರೆಲ್ಲಾ ನೆರೆದು ಇವರ ದೇವರೆಂಬರು.**
**ಪರದೈವ ಬೇರೆಂದಾತನಂಬಿಗ ಚೌಡಯ್ಯ .**

ದೇಹವೇ ದೇವಾಲಯ. ದೇಹದಲ್ಲಿ ಅರಿವೆಂಬ ದೇವರಿದ್ದಾನೆ. ಆ ದೇವರು ದೇಹವನ್ನೇ ದೇವಾಲಯ ಮಾಡಿಕೊಂಡು ವಾಸಿಸುತ್ತಿದ್ದಾನೆ. ಅವನೇ ಪರದೈವ. ಮನವೆಂಬ ಪರದೈವದ ಆರಾಧಕಳೇ ಪರಸತಿ. ಇವರಿಬ್ಬರ ಹೊರತಾಗಿ ಯಾವ ದೇವರೂ ಇಲ್ಲ.

ಹರಿಯೆಂಬುವವನು ಇಲ್ಲ. ಬ್ರಹ್ಮನೆಂಬುವವನೂ ಇಲ್ಲ. ರುದ್ರನೆನ್ನುವವನೂ ಇಲ್ಲ. ದೇಹವೇ ದೇವಾಲಯ. ಅದರೊಳಗೆ ದೇವರಿದ್ದಾನೆ ಎಂದು ತಿಳಿಯಲು ದೇಹವನ್ನು ಆವರಿಸಿದ ಮನಕ್ಕೆ ಹೇಳುವ ಕತೆಯಿದು.

ಎಲೆ ಮನವೇ ದೇಹದಲ್ಲಿ ಸಂಗಮವಾದ ಅರಿವೇ ದೇವರು. ಆ ಅರಿವೇ ಗುರುದೇವನು . ಆ ಅರಿವೇ ಬ್ರಹ್ಮನು. ಆ ಅರಿವೇ ವಿಷ್ಣುವು. ಆ ಅರಿವೇ ಮಹಾದೇವನು, ಮಹೇಶ್ವರನೆಂದು, ಪರದೈವವೇ ತಾನಾದ ಗುರುದೇವನು ಲೋಕಕ್ಕೆ ತಿಳಿಯುವಂತೆ ಸಾರಿದರೂ ಕೂಡಾ ಲೋಕದ ಜನ ಬ್ರಹ್ಮ ವಿಷ್ಣು ರುದ್ರರನ್ನೇ ದೇವರೆಂದು ನಂಬಿದರು.

ಗುರುದೇವನಾದರೂ ಏನು ಮಾಡಿಯಾನು ? ಪರದೈವವಾದರೂ ಏನು ಮಾಡೀತು ? ಅಂಗವನ್ನೇ ಆಲಯ ಮಾಡಿಕೊಂಡು, ಸರ್ವಾಂಗವನ್ನೇ ಲಿಂಗವನ್ನಾಗಿ ಮಾಡಿಕೊಂಡು, ಅಂಗವನ್ನು ಆವರಿಸಿದ ಮನಕ್ಕೆ ಸದಾ ಸತ್ಯವನ್ನು ಬೋಧಿಸುತ್ತಲೇ ಇದ್ದಾನೆ.

ಅರಿವೆಂಬ ಗುರುವಿನ ಬೋಧೆಯನ್ನು ಆಲಿಸಿದವನು ಬುದ್ಧನಾದ, ಮಹಾವೀರನಾದ, ಕ್ರಿಷ್ಣನಾದ, ಕ್ರಿಸ್ತನಾದ. ಪೈಗಂಬರ ತಾನಾದ. ಇವರೆಲ್ಲರೂ ಗುರುವಿನಂತೆಯೇ ಬೋಧಿಸಿದರು. ಸಕಲರನ್ನೂ ಗುರುವಾಗಿಸಲು ಬೋಧಿಸಿದರು. ಬೋಧೆ ಕೇಳಿದ ಲೋಕದ ಜನ ಅವರನ್ನು ಪೂಜಿಸಿದರು. ಆರಾಧಿಸಿದರು. ಅವರಿಗಾಗಿ ಭವ್ಯವಾದ ಆಲಯಗಳನ್ನು ಕಟ್ಟಿ ಕುಣಿದು ಕುಪ್ಪಳಿಸಿದರು. ಬೌದ್ಧರಾದರು, ಜೈನರಾದರು, ಹಿಂದು, ಮುಸಲ್ಮಾನರಾದರು ; ಆದರೆ ಅವರಂತೆ ಜ್ಞಾನಿಗಳಾಗಲಿಲ್ಲ.

**270**

**ಹಸಿಯ ಸೊಪ್ಪು ಮುರಿದು ತರುವಾಗ**
**ನೀವೇನು ಆಡಿನ ಮಕ್ಕಳೆ?**
**ಹಸಿಯ ಸೊಪ್ಪು ತಂದು ಬಿಸಿ ಮಾಡಿ**
**ಶಶಿಧರನೆಂಬ ಜಂಗಮಕ್ಕೆ ನೀಡಲು,**
**ಆ ಲಿಂಗದ ಹಸಿವು ಹೋಯಿತ್ತೆಂದಾತ**
**ನಮ್ಮಂಬಿಗ ಚೌಡಯ್ಯ.**

ರಾಶಿಗಟ್ಟಲೆ ಬಿಲ್ವ ತಂದು ಲಿಂಗಯ್ಯನನ್ನು ಪೂಜಿಸುವುದಕ್ಕೆ ಆತನೇನು ಆಡಿನ ಮಗನೇ? ಆಡಿನ ಹಸಿವು ತೀರಿಸುವ ತೊಪ್ಪಲು ತಂದು ಆಡಿಗೆ ದಾಯಾದಿಗಳಾದಿರೆ ಹೊರತು ಮತ್ತೇನನ್ನೂ ಸಾಧಿಸಿದಂತಾಗಲಿಲ್ಲ.

ಹಸಿಯ ಸೊಪ್ಪು ತಂದು ಬಿಸಿ ಮಾಡಿ ಶಶಿಧರನೆಂದು ಜಂಗಮಕ್ಕೆ ನೀಡಲು ಲಿಂಗದ ಹಸಿವು ಹೋಗುತ್ತದೆ.

ಅಂಗದಲ್ಲಿಯೇ ಸಂಗಮವಾದ ಅಂಬಿಗ ಚೌಡಯ್ಯ, ಅಂಬಿಗರ ಚೌಡಯ್ಯನನ್ನೇ ಎಚ್ಚರಿಸಿ ನುಡಿಯುತ್ತಾನೆ.

ಅಂಗಕ್ಕೆ ಇಟ್ಟ ಹೆಸರು ಅಂಗವನ್ನು ಯಾಮಾರಿಸುತ್ತದೆ. ಲೋಕದಂತೆ ನಡೆಯಲು ಅಂಗಕ್ಕೆ ಆದೇಶ ನೀಡುತ್ತದೆ. ಅದು ಅಜ್ಞಾನವೆಂದು ಅಂಗದಲ್ಲಿಯೇ ಸಂಗಮವಾದ ಲಿಂಗವೆಂಬ ಅರಿವು ನುಡಿದು ಹೇಳುತ್ತದೆ.

ಅಂಗ ಅಜ್ಞಾನದ ಆಚರಣೆಯಲ್ಲಿ ತೊಡಗಿದಾಗ ಅಂಗಕ್ಕೆ ಅದು ಆಪತ್ಕಾಲ. ಆದರೆ ಮನಕ್ಕೆ ಬಲು ಆನಂದ. ತೊಪ್ಪಲು ತಂದು ಮೂರು ವೇಳೆ ಪೂಜಿಸುವುದು ಮನಕ್ಕೆ ಬಲು ಇಷ್ಟ. ಅದು ಅಜ್ಞಾನವೆಂದು ತಿಳಿಯುವ ಶಕ್ತಿ ಮನಕ್ಕಿಲ್ಲ. ಹಾಗೆ ಮಾಡಿದರೆ ಸಂತೋಷ. ಆದರೆ ಮನ ಮಾಡುವ ಅಜ್ಞಾನದ ಕೆಲಸವನ್ನು ಜ್ಞಾನ ಒಪ್ಪುವುದಿಲ್ಲ. ಅದು ಖಂಡಿಸುತ್ತದೆ.

ಪೂಜಿಸುವುದು ಬಿಟ್ಟರೆ ಲೋಕದ ನಿಂದೆಗೆ ಗುರಿಯಾಗುತ್ತಾನೆ. ಪೂಜಿಸಿದರೆ ಜ್ಞಾನದ ನಿಂದೆಗೆ ಗುರಿಯಾಗುತ್ತಾನೆ. ಅಂಗಕ್ಕೆ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನೇ

ಒಡೆಯ. ಒಡೆಯನ ಮಾತು ಒಡಲು ಕೇಳುವುದೇ ಆಚಾರದ ನಿಯಮ.

ಪೂಜಿಸುವುದು ಆಚಾರ. ಆ ಆಚಾರ ಲೋಕಕ್ಕೆ ಗೋಚರವಾಗುವ ಆಚಾರ. ಅರಿವಿನ ಮಾತು ಕೇಳಿ ಪೂಜಿಸದೆ ಇರುವುದು ಅಗೋಚರದ ಆಚಾರ. ಈ ಆಚಾರದಿಂದ ಲಿಂಗಯ್ಯ ತೃಪ್ತನಾಗುತ್ತಾನೆ. ಆದರೆ ಅಂಗ ಲೋಕದ ನಿಂದೆಗೆ ಗುರಿಯಾಗುತ್ತದೆ. ಪೂಜಿಸದ ಅಂಗವನ್ನು ಅನಾಚಾರಿ ಎಂದು ಕರೆಯುತ್ತದೆ. ಅಂಗದ ಹೆಸರಿಟ್ಟು ಕರೆದು ನಿಂದೆ ಮಾಡುತ್ತದೆ ಲೋಕ.

ನಿಂದೆಗೆ ಒಳಗಾದ ಆ ಹೆಸರನ್ನೇ ಅಂಗದಲ್ಲಿ ಸಂಗಮವಾದ ಅರಿವಿನ ಸಂಗಯ್ಯನಿಗೆ ನಾಮಕರಣ ಮಾಡಿ ಧನ್ಯತೆಯನ್ನು ಮೆರೆದಿದ್ದಾರೆ ಅಂಬಿಗರ ಚೌಡಯ್ಯ !

ಹಸಿಯ ಸೊಪ್ಪು ತಂದು ಬಿಸಿ ಮಾಡಿ ಶಶಿಧರನೆಂದು ಜಂಗಮಕ್ಕೆ ನೀಡಲು, ಆ ಲಿಂಗದ ಹಸಿವು ಹೋಯಿತೆಂದಾತ ನಮ್ಮಂಬಿಗ ಚೌಡಯ್ಯ ! ಇದು ಓದುಗನ ಜಾಣತನವನ್ನು ಪರೀಕ್ಷಿಸುವ ಮಾತು.. ಓದುಗನನ್ನು ತನ್ನ ಅರಿವಿನ ತೆಕ್ಕೆಗೆ ತೆಗೆದುಕೊಳ್ಳುವ ಮಾತು. ಅಂಬಿಗರ ಚೌಡಯ್ಯಗಳ ಅರಿವಿನ ದರ್ಶನ.

**271**

**ಹಾಡಿ ಮಾಡುವ ಹರಕೆಯ ಕೇಡು,**
**ಕೂಡಿ ಮಾಡುವ ಕೂಡಿಕೆಯ ಕೇಡು,**
**ಹಾಡಿ ಮಾಡಿ, ಕೂಡಿ ಮಾಡಿ ಬದುಕಿಗೆ ಕೇಡು ತಂದುಕೊಳ್ಳಲೇತಕೊ ?**
**ತನ್ನ ಬೇಡಲಿಕ್ಕೆ ಬಂದ ಜಂಗಮದ ಇರವನರಿತು**
**ನೀಡ ಕಲಿತರೆ ರೂಢಿಯೊಳಗೆ ಆತನೆ ಜಾಣನೆಂದಾತ ನಮ್ಮ ಅಂಬಿಗರ ಚೌಡಯ್ಯ .**

ಮರ,ಭಕ್ತಿಯಿಂದ ಹಾಡಿ ದೇವರನ್ನು ಒಲಿಸಿಕೊಂಡು ಹೂ ಬಿಡುವುದಿಲ್ಲ. ಹರಕೆಯನು ಹೊತ್ತುಕೊಂಡು ಕಾಯಿಗಟ್ಟುವುದಿಲ್ಲ. ಮರ ಮತ್ತೊಂದು ಮರದೊಂದಿಗೆ ಕೂಡಿ ಫಲ ಬಿಡುವ ಬಗೆಯನ್ನು ಕೇಳಿಕೊಂಡು ಫಲ ಬಿಡುವುದಿಲ್ಲ. ತನಗೆ ತಾನೇ ಫಲಬಿಟ್ಟು ಕೈಮಾಡಿ ಕರೆಯುತ್ತದೆ.

ಮನುಷ್ಯ ಮಾತ್ರ ಹಾಡಿ ಹರಕೆಯ ಹೊತ್ತು ಕೇಡು ತಂದು ಕೊಳ್ಳುತ್ತಾನೆ. ತನ್ನಂತೆ ಇರುವ ಮತ್ತೊಂದು ಕಾಯದೊಂದಿಗೆ ಕೂಡಿ ಗುರುವನ್ನಾಗಿಸಿಕೊಂಡು ತಾನು ಶಿಷ್ಯನಾಗಿ ಕೇಡು ತಂದುಕೊಳ್ಳುತ್ತಾನೆ.

''ತನ್ನಾಶ್ರಯದ ರತಿಸುಖವ ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಿಂದ ಮಾಡಿಸಬಹುದೆ ಅಯ್ಯಾ ?'' ಎಂದು ಎಚ್ಚರಿಸುವ ಬಸವಣ್ಣನವರ ಮಾತು ಅಂಗಕ್ಕೆ ಸೂತ್ರವಾಗುವುದೇ ಇಲ್ಲ. ಜಗತ್ತು ಗುರು ಶಿಷ್ಯರಿಂದ ಕೂಡಿ ಕೆಟ್ಟಿದೆ. ಹಾಡಿ ಕೆಟ್ಟಿದೆ. ಒಬ್ಬರನ್ನೊಬ್ಬರು ಬೇಡಿ ಕೆಟ್ಟಿದೆ. ಹಾಡಿದರೆ ಬೇಡಿದರೆ ಕೂಡಿದರೆ ಕೇಡು ತಪ್ಪಿದ್ದಲ್ಲ. ಅಂಗದ ಆಯುಷ್ಯ ವ್ಯರ್ಥ ಕಳೆದು ಹೋಗುತ್ತದೆ.

''ಗೀತವ ಹಾಡಿದಡೇನು, ಶಾಸ್ತ್ರ ಪುರಾಣವ ಕೇಳಿದಡೇನು'',''ಆಡಿದಡೇನು, ಹಾಡಿದಡೇನು,ಓದಿದಡೇನು ತ್ರಿವಿಧ ದಾಸೋಹವಿಲ್ಲದನ್ನಕ್ಕ ? ಆಡದೆ ನವಿಲು ? ಹಾಡದೆ ತಂತಿ ? ಓದದೇ ಗಿಳಿ ? ''ಕೂಡಲ ಸಂಗನ ಶರಣರ ಕಂಡು ಆಡಿ ಹಾಡಿ ಬದುಕು ಮನವೆ .

ಮನ ಲೌಕಿಕರ ಕಂಡು ಹಾಡುತ್ತದೆ ; ಆಡುತ್ತದೆ. ತಾರ್ಕಿಕರ ಕಂಡು ಹಾಡುತ್ತದೆ ; ಆಡುತ್ತದೆ.

ಅಂಗದಲ್ಲಿಯೇ ಸಂಗಮವಾದ ಸಂಗಯ್ಯನಿಗಾಗಿ ಹಾಡುವುದಿಲ್ಲ ; ಆಡುವುದೂ ಇಲ್ಲ. ಅವನೊಂದಿಗೆ ಕೂಡಿ ಕೂಡದಗಲದ ಕೂಟದ ಸುಖವನು ಸವಿಯುವುದೂ ಇಲ್ಲ.

ಹಾಡಿದರೆ ಒಡಲೊಡೆಯನಿಗಾಗಿ ಹಾಡು. ಬೇಡಿದರೆ ಒಡಲೊಡೆಯನನ್ನೇ ಬೇಡು. ಕೂಡಿದರೆ ಒಡಲೊಡೆಯನನ್ನೇ ಕೂಡು. ಆತನನ್ನೇ ಬೇಡಿ, ಆತನಿಗೆ ನೀಡಲು ಕಲಿತರೆ ರೂಢಿಯೊಳಗೆ ಆತನೇ ಜಾಣನೆಂದಾತ ಅಂಬಿಗರ ಚೌಡಯ್ಯ .

272

**ಹಿಂದಣ ಜನ್ಮದಲ್ಲಿ ಹಲು ಸುಕೃತಂಗಳಂ ಮಾಡಿಕೊಂಡ ದೆಸೆಯಿಂದ ನೀವು ಹುಟ್ಟಿದಿರಯ್ಯ.**
**ನೀವು ಮುಂದಕ್ಕೆ ಶಿವಭಕ್ತಿ ದೊಡ್ಡಿತ್ತೆಂದು ನಂಬಲರಿಯದೆ ಭ್ರಮಿತರಾಗಿ**
**ಘನತರ ಸುಖವಂ ನೀಗಿ ಭಕ್ತಿ ಪಾಶ ದೆಸೆಯೊಳು ಇರಲೊಲ್ಲದೆ**
**ಹಿಂದಣ ಅರಿಕೆಯಿಂ ಮರೆದು ಮುಂದಣ ಅರಿಕೆಯಿಂತೊರೆದು**
**ಕಂಡ ಕಂಡ ಹಂದಿಯೊಳಾಡಿ ನರಕವ ತಿಂಬಂತೆ**
**ಬೆಂದ ಸಂಸಾರವೆಂಬ ಹೃದಯ ಕೂಪದೊಳು**
**ಮುಳುಗಾಡುವ ಲೋಕದ ಮಂದಿಯಂತೆ**
**ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂಬ ಭಿನ್ನ ಭಾವದೊಳು ಮನಸಂದು,**
**ಹೆಂಡರಿಗಾಗಬೇಕು ಮಕ್ಕಳಿಗಾಗಬೇಕೆಂಬ**
**ಭಂಡ ಮೂಕೊರೆಯ ಮೂಳರಿರಾ, ನೀವು ಕೇಳಿರೋ.**
**ನೀವು ಶಿವಭಕ್ತರ ಬಸುರಲ್ಲಿ ಹುಟ್ಟಿ ಫಲವೇನು?**
**ಮಾತಿಂಗೆ ಲಿಂಗವ ಕಟ್ಟಿದಿರಿ, ವರ್ತನೆಗೊಬ್ಬ ಗುರುವೆಂಬಿರಿ.**
**ಆ ಗುರು ತೋರಿದ ಚರಲಿಂಗಕ್ಕೆ ಬೋನವಿಲ್ಲ, ಆಚಾರವಿಲ್ಲ.**
**ಕೀಳು ದೈವದ ಬೆನ್ನೊಳು ಹರಿದಾಡುವ ನರಕಿಯ**
**ಯಮನವರು ಕೊಂಡೊಯ್ದು ನಡುವಿಂಗೆ ಗಿರಿಕಿಯನಿಕ್ಕಿ ಮೆಟ್ಟಿ ಮೆಟ್ಟಿ ಬಿಗುವಾಗ**
**ಹಲುಗಿರಿಕೊಂಡು ಹೋಗುವ ಮಾನವರು**
**ಜಗದರಿಕೆಯಲ್ಲಿ, ನರಕದಲ್ಲಿ ಬೀಳುವುದ ಕಂಡು**
**ನಗುತಿರ್ದ ಎನ್ನೊಡೆಯ ಅಂಬಿಗರ ಚೌಡಯ್ಯನು.**

ಹಿಂದಿನ ಜನ್ಮದಲ್ಲಿ ಹಲವಾರು ಸುಕೃತಗಳನ್ನು ಮಾಡಿದುದಕ್ಕಾಗಿ ಮಾನವ ಜನ್ಮ ಬಂದಿದೆ. ಆದರೆ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಶಿವ ಭಕ್ತಿಯೇ ದೊಡ್ಡದೆಂದು ನಂಬಲಿಲ್ಲ. ಭ್ರಮೆಗೆ ಈಡಾದಿರಿ.

ಘನಕ್ಕೆ ಘನವಾದ ಘನತರ ಸುಖವನ್ನು ಅನುಭವಿಸದೆ, ಅರಿವಿನ ಸುಖದಲ್ಲಿ ಇರಲೊಲ್ಲದೆ ; ಹಿಂದಿನ ಸುಕೃತವನ್ನು ಮರೆತು, ಮುಂದಿನ ಅರಿವಿನ ಸುಖವನ್ನು ತೊರೆದು, ಕಂಡ ಕಂಡ ಹಂದಿಗಳೊಂದಿಗೆ ಒಡನಾಡಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಅಜ್ಞಾನದ ನರಕವನ್ನು ತಿಂದಿರಿ.

ಅಜ್ಞಾನದಿಂದ ಬೇಯುವ ಸಂಸಾರವೆಂಬ ಹೃದಯ ಕೂಪದಲ್ಲಿ ಲೋಕದ ಮಂದಿಯಂತೆ

ಮುಳುಗಾಡುವಿರಿ. ಹೊನ್ನು ನನ್ನದು, ಮಣ್ಣು ನನ್ನದು, ಹೆಣ್ಣು ನನ್ನದು ಎಂಬ ಭಿನ್ನ ಭಾವದೊಳು ಮುಳುಗಿದಿರಿ. ನನ್ನದು ಎಂಬ ಜ್ಞಾನ ಶ್ರೀಮಂತಿಕೆಯನ್ನೇ ಮರೆತಿರಿ.

ಹೆಂಡರಿಗಾಗಬೇಕು ಮಕ್ಕಳಿಗಾಗಬೇಕು ಎಂಬ ಭಂಡ ಅಜ್ಞಾನಿ ಮನವೆಂಬ ಮೂಳ ಹೊಲೆಯರಿರಾ, ನೀವು ಕೇಳಿರೋ. ನೀವು ಶಿವಭಕ್ತರ ಬಸುರಲ್ಲಿ ಹುಟ್ಟಿ ಫಲವೇನು? ಲಿಂಗ ನೀವೇ ಎಂಬುದನ್ನು ಮರೆತು ಮಾತಿಗಾಗಿ ಲಿಂಗ ಕಟ್ಟಿದಿರಿ, ವರ್ತನೆಗಾಗಿ ಗುರುವೆಂದಿರಿ. ಗುರುವೆಂದರೆ ವ್ಯಕ್ತಿ ಅಲ್ಲ ಎಂಬುದನ್ನೇ ಮರೆತಿರಿ. ಶಿಷ್ಯ ಎಂದರೆ ವ್ಯಕ್ತಿ ಅಲ್ಲ ಎಂಬುದನ್ನೂ ಮರೆತಿರಿ.

ಗುರು ತೋರಿದ ಚರಲಿಂಗಕ್ಕೆ ಆಚಾರವಿಲ್ಲ. ಬೋನವಿಲ್ಲ. ಕೀಳು ದೈವದ ಬೆನ್ನೊಳು ಹರಿದಾಡುವ ನರಕಿಯನು ಯಮಕೊಂಡೊಯ್ದು ನಡುವಿಗೆ ಗಿರಕಿಯನು ಕಟ್ಟಿ ಮೆಟ್ಟಿ ಮೆಟ್ಟಿ ಹೊಡೆಯುವಾಗ ಹಲುಗಿರಿದು ಹೋಗುವ ಮಾನವರು ನೀವು. ಮಾನವರ ಬೆನ್ನು ಬಿದ್ದ ಬೇತಾಳ ನೀವು.

ಎಲೆ ಮನವೇ ನೀ ನಿರ್ಮಿಸಿದ ನರಕದ ಕೂಪದಲ್ಲಿ ನೀನೇ ಬೀಳುವಾಗ, ಬೀಳುವ ನಿನ್ನನ್ನು ಕಂಡು, ನಿನ್ನ ಸೃಷ್ಟಿಸಿದ ಒಡಲೊಡೆಯ ಒಡಲಲ್ಲೇ ಇದ್ದು ನಗುತಿರ್ದನು.

**273**

**ಹಿಡಿ ಪುಣ್ಯವ, ಬಿಡು ಪಾಪವ,**
**ಸತ್ವ ರಜ ತಮ, ಒಡಲೈದು ಇಂದ್ರಿಯವ, ಏಳನೆಯ ಧಾತುವ,**
**ಒಡಲಷ್ಟ ತನುವನು ಕೆಡೆಮೆಟ್ಟಿ ಶಿಖರದ ತುದಿಯ ಮೇಲೇರಿಸು,**
**ಮತ್ತೆರಡಿಲ್ಲದೆ ನಡೆ,**
**ಅಲ್ಲಿಂದ ಹಿಡಿದು ಲಂಘನೆ ಮಾಡೆ**
**ಹಡೆವೆ ಮೋಕ್ಷವನೆಂದನಂಬಿಗ ಚೌಡಯ್ಯ .**

ಪುಣ್ಯ ಪಾಪ ಎನ್ನುವುದು ಹೊರಗಿಲ್ಲ. ಪುಣ್ಯವೆಂದರೆ ಜ್ಞಾನ. ಅದನ್ನು ಹಿಡಿ. ಪಾಪವೆಂದರೆ ಅಜ್ಞಾನ. ಅದನ್ನು ಬಿಡು. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ಬಿಡು. ಸಪ್ತ ವ್ಯಸನಗಳನ್ನು ಬಿಡು. ಒಡಲಲ್ಲಿರುವ ಐದು ಇಂದ್ರಿಯಗಳಿಗೆ ಆವರಿಸಿದ ಅಜ್ಞಾನವನ್ನು ಬಿಡು.

ಸಾತ್ವಿಕ ರಾಜಸ ತಾಮಸ ಇವು ಮೂರು ಒಡಲಿಗಂಟಿದ ಗುಣಗಳು. ಈ ಮೂರೂ ಗುಣಗಳನ್ನು ಬಿಡು. ಇವು ಗುಣಗಳು ಹೌದು ದುರ್ಗುಣಗಳು ಹೌದು. ಇವುಗಳನ್ನು ಬಿಟ್ಟರೆ ನಿನಗೆ ನೀನೇ ನಿರ್ಗುಣಿಯಾಗುವೆ. ಅದು ಅಂಗದ ಸಹಜ ಗುಣ.

ಸಹಜ ಗುಣ ಸಕಲ ಪ್ರಾಣಿ ಪಕ್ಷಿ ಗಿಡ ಮರಗಳಲ್ಲಿ ಇದೆ. ಮನುಷ್ಯನಂತೆ ಮರ ಏನನ್ನೂ ಕಲಿಯುವುದಿಲ್ಲ. ಅದು ಕಾಲ ಕಾಲಕ್ಕೆ ಪುಷ್ಪ ಫಲಗಳನ್ನು ಬಿಟ್ಟು ಪ್ರಾಣಿ ಕೀಟ ಪಶು ಪಕ್ಷಿಗಳನ್ನು ಕೈ ಮಾಡಿ ಕರೆಯುತ್ತದೆ. ಮರ ತನ್ನ ಫಲ ಬಿಡಲು ಯಾರ ಸಹಾಯ ಸಹಕಾರವನ್ನು ಪಡೆ ಯುವುದಿಲ್ಲ.

ಮನುಷ್ಯನಿಗೆ ಬುದ್ಧಿ ಇದೆ. ಅದರ ಸಹಾಯದಿಂದ ಜ್ಞಾನ ಸಂಗ್ರಹ ಮಾಡಿಕೊಳ್ಳುತ್ತಾನೆ. ಅದು ತನಗೆ ನುಡಿಯಲು ಸಹಾಯ ಮಾಡುತ್ತದೆ. ನುಡಿದಂತೆ ನಡೆಯಲು ಸಹಕರಿಸುವುದಿಲ್ಲ. ಸಂಗ್ರಹ ಜ್ಞಾನ ಅಳಿಯುವವರೆಗೂ ಸಹಜ ಜ್ಞಾನ ಬಳಕೆಗೆ ಬರುವುದೇ ಇಲ್ಲ.

ಸಂಗ್ರಹ ಮಾಡಿಕೊಂಡ ಜ್ಞಾನ ಸಹಜ ಜ್ಞಾನವನ್ನು ಹಿಮ್ಮೆಟ್ಟಿ ತನುವಿನೊಂದಿಗೆ ಸುಖಿಸು ತ್ತದೆ ಅಥವಾ ದುಃಖಿಸುತ್ತದೆ. ಸಹಜ ಜ್ಞಾನಕ್ಕೆ ಸುಖವಿಲ್ಲ ; ದುಃಖವೂ ಇಲ್ಲ. ಅದು ಸಹಜ.

ಸೂರ್ಯನ ಬೆಳಕಿನಂತೆ ಬೆಳಗುತ್ತದೆ. ಸೂರ್ಯನ ಬೆಳಕಿಗೆ ಜ್ಞಾನವಿಲ್ಲ. ತನುವಿನ ಬೆಳಕಿಗೆ ಜ್ಞಾನವಿದೆ. ಅರಿವಿದೆ. ಹೀಗಾಗಿ ಕೋಟಿಸೂರ್ಯಂ ಸಮಪ್ರಭ ಎನ್ನುತ್ತಾರೆ.

ಸಹಜ ಜ್ಞಾನದ ತನುವನ್ನು ಬುದ್ಧ ಬೋಧೀವೃಕ್ಷ ಎಂದು ಕರೆದ. ವೃಕ್ಷದಲ್ಲಿ ಫಲಗಳನ್ನು ವೃಕ್ಷ ತಿನ್ನುವುದಿಲ್ಲ. ಅದು ಗಾಳಿ ಜಲ ಭೂಮಿಯನ್ನೇ ಆಹಾರ ಮಾಡಿಕೊಳ್ಳುತ್ತದೆ. ಹಾಗೆಯೇ ತನು ಕೂಡಾ ! ಭೂಮಿಯನ್ನು ಆಧಾರ ಮಾಡಿಕೊಂಡು ನಡೆದಾಡುವ ಮರ ! ಜ್ಞಾನದ ಮರ. ಅರಿವಿನ ಸಿಹಿ ಫಲಗಳನ್ನು ತಾನು ಉಣ್ಣದೆ ಸೂತ್ರರೂಪದಲ್ಲಿ ಹಂಚುವ ಜ್ಞಾನದ ಮರ. ಬೋಧೆ ಮಾಡುತ್ತ ನಡೆದಾಡುವ ಅರಿವಿನ ಮರ.

ಸಿದ್ಧಾರ್ಥ ಮರವನ್ನು ನೋಡಿದ. ಅದರ ಸಹಜ ಗುಣಗಳನ್ನು ನೋಡಿದ. ಅದರ ಇರುವಿಕೆಯನ್ನು ನೋಡಿದ. ಫಲಾಪೇಕ್ಷೆಯೇ ಇಲ್ಲದ ವೃಕ್ಷದ ನಿರ್ಗುಣಕ್ಕೆ ಸಿದ್ಧಾರ್ಥ ಬಲಿಯಾದ. ಬುದ್ಧ ತನ್ನಿಂದ ತಾನೇ ಹೊರಬಂದ. ಫಲಾಪೇಕ್ಷೆಯೇ ಇಲ್ಲದೆ ಬೋಧೀವೃಕ್ಷವಾದ. ನಡೆದದ್ದೇ ಹಾದಿಯಾಯಿತು. ಉಂಡದ್ದೇ ಆಹಾರವಾಯಿತು. ವೃಕ್ಷದ ತುಂಬಾ ಜ್ಞಾನ ಕಮಲಗಳು ಅರಳಿದವು. ಅರಿವಿನ ಪರಿಮಳ ನಾಡಿನೆಲ್ಲೆಡೆ ಪಸರಿಸಿತು. ಜನ ಸಮೂಹ ದುಂಬಿಯಂತೆ ಪರಿಮಳ ಹೀರಿತು. ಸಿದ್ಧಾರ್ಥ ಬುದ್ಧನಾದಂತೆ ಜನ ಜನಾರ್ಧನನಾಗಲೇ ಇಲ್ಲ.

**274**

**ಹಿತ್ತಿಲ ಸೊಪ್ಪಿಂಗೆ ನೀರ ಹೊಯಿದು,**
**ಮತ್ತೆ ಪುನರಪಿಯಾಗಿ ಕೊಯಿವವನಂತೆ,**
**ಭಕ್ತರಿಗೆ ಬೋಧೆಯ ಹೇಳಿ ಚಿತ್ತವೃತ್ತಿಯನರಿದು ಬೇಡುವಂಗೆ**
**ಇನ್ನೆತ್ತಣ ಮುಕ್ತಿಯೆಂದನಂಬಿಗ ಚೌಡಯ್ಯ .**

ಗುರುದೇವನು ಸರ್ವಾಂಗದಲ್ಲಿ ಸಂಗಮವಾಗಿದ್ದಾನೆ. ಆತ ವಿರಾಟ ಸ್ವರೂಪಿ. ಜಗದಗಲ ಮುಗಿಲಗಲಕ್ಕೂ ಆತನ ವಿಸ್ತಾರ. ಅಗೋಚರ ಅಗಮ್ಯ ಅಪ್ರಮಾಣನೂ ಆಗಿದ್ದಾನೆ. ಆತನ ಶ್ರೀಪಾದ ಪಾತಾಳದಿಂದಲೂ ಅತ್ತತ್ತ .ಆತನ ಶ್ರೀಮುಕುಟ ಬ್ರಹ್ಮಾಂಡದಿಂದಲೂ ಅತ್ತತ್ತ . ಅಷ್ಟೇ ಏಕೆ ? ಆತ ಸರ್ವಾಂಗದಲ್ಲಿ ಸಂಗಮವಾಗಿ ಸಾಕ್ಷಾತ್ ಅರಿವೆಂಬ ಲಿಂಗವೇ ಆಗಿದ್ದಾನೆ. ಅಂಗವನ್ನು ವಿರಾಟ ಸ್ವರೂಪಿಯಾದ ಲಿಂಗವನ್ನಾಗಿಸಿದ್ದಾನೆ.

ಗುರುದೇವನ ಕರುಣೆ ಅನಂತ ! ಅಂಗವನ್ನು ಆವರಿಸಿದ ಅಜ್ಞಾನಿ ಮನಕ್ಕೆ ಗುರುದೇವನನ್ನು ನೋಡಲು ಸಾಧ್ಯವಾಗುತ್ತಿಲ್ಲ. ಆತ ನೀಡುವ ಅಮೃತಾನ್ನವನ್ನು ಉಣ್ಣಲು ಸಾಧ್ಯವಾಗುತ್ತಿಲ್ಲ. ಅಜ್ಞಾನಿ ಮನ ಗುರುದೇವನನ್ನು ಹೊರಗೆ ಹುಡುಕುತ್ತಿದೆ. ಹುಡುಕುವ ಅಂಗವನ್ನೇ ಲಿಂಗವನ್ನಾಗಿ ಮಾಡುವ ಗುರುದೇವನಾದರೂ ಅಂಗಕ್ಕೆ ದೊರಕಬೇಕಲ್ಲ. ವೇಷ ಹಾಕಿಕೊಂಡ ಗುರುಗಳೇ ಎಲ್ಲೆಡೆ ದೊರಕುತ್ತಾರೆ. ಗುರುವನ್ನಾಗಿಸುವ ಛಲ ಉಳ್ಳ ಸದ್ಗುರು ವಿದ್ಯಾನಂದರಂತಹ ಮಹಾತ್ಮರು ಸಿಕ್ಕಬೇಕಲ್ಲ !

ಶ್ರೀ ಕ್ರಿಷ್ಣ ಶಿಷ್ಯ ಅರ್ಜುನನಿಗೆ ತನ್ನ ವಿರಾಟ ಸ್ವರೂಪವನ್ನು ತೋರಿದ. ಸದ್ಗುರು ವಿದ್ಯಾನಂದ ಶಿಷ್ಯನನ್ನೇ ವಿರಾಟ ಸ್ವರೂಪಿಯನ್ನಾಗಿಸಿದ. ಪ್ರತಿ ಅಂಗದಲ್ಲಿಯೂ ಲಿಂಗ ಶಕ್ತಿ ಇದೆಯೆಂದು ಅಂಗಕ್ಕೆ ಅಂಗವನ್ನು ಆವರಿಸಿದ ಮನಕ್ಕೆ ದಿವ್ಯ ದರ್ಶನವನ್ನು ಮಾಡಿಸಿದ.

ಮುಚಳಂಬದ ನಾಗಭೂಷಣರು, ನಿಜಗುಣ ಶಿವಯೋಗಿಗಳು,ಸಿದ್ಧಾರೂಢರು, ದಾಸರು, ಬಸವಾದಿ ಶರಣರು, ಕ್ರಿಸ್ತ, ಕ್ರಿಷ್ಣ, ಪೈಗಂಬರರು, ಮಹಾವೀರ, ಬುದ್ಧಾದಿ ಸಂತರು ಮಾತ್ರ ಗುರುವಾದರು. ಸಕಲರನ್ನೂ ಗುರುಗಳನ್ನಾಗಿಸುವ ಗುರುವಾದರು.

ಹಿತ್ತಲ ಸೊಪ್ಪಿಗೆ ನೀರು ಹೊಯ್ದು ಕೊಯ್ದು ತಿನ್ನುವ ವೇಷದ ಗುರುಗಳಿಂದ ಸಕಲರನ್ನೂ ಗುರುವಾಗಿಸುವ ಕೆಲಸ ಸಾಧ್ಯವಾಗುವುದಿಲ್ಲ. ವೇಷದ ಗುರುಗಳು ಸಕಲರನ್ನು ಶಿಷ್ಯರನ್ನಾಗಿ ಮಾಡಿಕೊಳ್ಳುತ್ತಾರೆ. ಗುರುಗಳು ಸದಾ ಗುರುಗಳಾಗಿಯೇ ಇರುತ್ತಾರೆ. ಶಿಷ್ಯರು ಸದಾ ಶಿಷ್ಯರಾಗಿಯೇ ಇರುತ್ತಾರೆ. ಶಿಷ್ಯರಿಗೆ ಬೋಧೆ ಮಾಡುತ್ತಾರೆ ; ಶಿಷ್ಯರು ದೀಕ್ಷೆ ಕೊಡುತ್ತಾರೆ. ಶಿಷ್ಯರ ಚಿತ್ತವೃತ್ತಿಯನ್ನು ಅರಿತು ಕೈ ಒಡ್ಡಿ ಶಿಷ್ಯರನ್ನು ಬೇಡುತ್ತಾರೆ.

ಬೇಡುವವನಿಗೆ ನೀಡಲು ಸಾಧ್ಯವೆ ? ಬೋಧಿಸಲು ಬಂದ ಗುರುದೇವನಿಗೆ ಬೋಧೆಗೆ ಒಳಗಾದ ಶಿಷ್ಯನು ನೀಡಲು ಸಾಧ್ಯವೆ ? ಬೇಡುವವನು ನೀಡಿಯಾನೆ ? ನೀಡುವವನಿಗೆ ಬೇಡಲು ಬರುವುದೆ ? ಬೇಡುವವನಿಗೂ ನೀಡುವವನಿಗೂ ಮುಕ್ತಿಯಿಲ್ಲ. ಇವರಿಬ್ಬರೂ ವ್ಯವಹಾರಿಗಳು ಎಂದು ಅಂಬಿಗರ ಚೌಡಯ್ಯ ಶರಣರು ಸ್ಪಷ್ಟವಾಗಿ ನುಡಿದಿದ್ದಾರೆ.

**275**

**ಹೂವ ಕೊಯ್ವ ಕುಕ್ಕೆ ಹರಿದು, ನೀರ ಹೊಯಿವ ಕುಡಿಕೆ ಒಡೆದು,**
**ನೋಡುವ ಕಣ್ಣು ತೆರೆಗಟ್ಟಿ, ರಜತಾಗಿ ಸೈವೆರಗಾಗಿ**
**ಲಿಂಗವನಾರೂ ಕಂಡುದಿಲ್ಲ ಎಂದ ನಂಬಿಗ ಚೌಡಯ್ಯ .**

ಸಕಲರ ಹೃದಯದಲ್ಲಿ ಅರಳಿ ನಿಂತು ಅದರ ಮಕರಂಧವನ್ನು ಹೀರಲು ಕೈಮಾಡಿ ಕರೆಯುತ್ತಿರುವ ಸದ್ಗುರುವಿಗೆ ಮತ್ತೆ ಹೂ ಬೇಕೆ ? ಆತನನ್ನು ಕಾಣಲು, ಆತನೊಂದಿಗೆ ಮಾತನಾಡಲು, ಆತನೊಂದಿಗೆ ಒಂದಾಗಿ ಬೆರೆಯಲು ಮಡಿಬೇಕೆ ? ಆತನನ್ನು ಪೂಜಿಸಲು ನೀರು ಹೊಯ್ದು ನಾನಾ ವಿಧದ ಹೂ ಬೆಳೆಯುವ ಅವಶ್ಯಕತೆಯಾದರೂ ಇದೆಯಾ ?

ಅರಿವೇ ಗುರು. ಆ ಗುರುದೇವನು ಯಾವ ಅಂಗದಲ್ಲಿ ಇಲ್ಲ. ಪ್ರತಿ ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನೇ ಮಹಾದೇವನಾಗಿದ್ದಾನೆ. ವಿಷ್ಣುವಾಗಿದ್ದಾನೆ. ಬ್ರಹ್ಮನಾಗಿದ್ದಾನೆ. ಅಜ್ಞಾನವನ್ನು ಅಳಿಯುವ ರುದ್ರನಾಗಿದ್ದಾನೆ. ಈ ಸಕಲರನ್ನೂ ಪೂಜಿಸಲು ಹೂ ಬೇಕಾಗಿಲ್ಲ. ಹೂವಿನಂತೆ ಅರಳಿ ನಿಂತು ಕೈ ಮಾಡಿ ಕರೆಯುವವರಿಗೆ ಹೂ ಬೇಡವೇ ಬೇಡ.

ಹೂವಿನಂತೆ ಅರಳಿ ನಿಂತವರನ್ನು ನೋಡಲು ಕಣ್ಣು ಬೇಕು. ಅವರ ಮಾತನ್ನು ಕೇಳಲು ಕಿವಿ ಬೇಕು. ಆ ಅರಿವಿನ ಪರಿಮಳವನ್ನು ಹೀರುವ ಮೂಗು ಬೇಕು. ಅರಿವಿನ ಮಕರಂದವನ್ನು ರುಚಿಸುವ ನಾಲಿಗೆ ಬೇಕು. ಆ ಗುರುದೇವನನ್ನು ಸ್ಪರ್ಶಿಸಿ ಪರಮಾನಂದವನು ಹೊಂದುವ ಚರ್ಮ ಬೇಕು.

ಈ ಐದು ಕರ್ಮೇಂದ್ರಿಯಗಳು ಹೂ ಕೊಯ್ದು ಗುರುದೇವನನ್ನು ಪೂಜಿಸುವ ಹಂಬಲವನ್ನು ಹೊಂದಿವೆ. ಏಕೆಂದರೆ ಪೂಜಿಸುವ ಶಿಷ್ಯ ಅಲ್ಲಿಯೇ ಇದ್ದಾನೆ. ಪೂಜೆಗೆ ಒಳಗಾಗುವ ಗುರುದೇವನೂ ಅಲ್ಲಿಯೇ ಇದ್ದಾನೆ. ಹೀಗಾಗಿ ಅರಿವಿನ ಲಿಂಗವನ್ನು ಕಾಣಲು ಸಕಲರಿಗೂ ಸಾಧ್ಯವಾಗುತ್ತಿಲ್ಲ. ನಿಜ ಗುರುದರ್ಶನವನ್ನು ಮಾಡಿಸುವ ಗುರುದೇವನು ಸಕಲರಿಗೂ

ಬೇಕಾಗಿದ್ದಾನೆ. ನಿಜದರ್ಶನ ಬೇಡುವ ಹಂಬಲ ಶಿಷ್ಯನಲ್ಲಿ ಉಂಟಾದಾಗ ಹುಡುಕಾಟ ಶುರುವಾಗುತ್ತದೆ. ಹೂ ಕೊಯ್ದು ಪೂಜಿಸುವ ಪೂಜೆ ತಂತಾನೇ ಬಿದ್ದು ಹೋಗುತ್ತದೆ.

**276**

**ಹೇಳುವ ಕೇಳುವ ಮಾತ ಕೇಳಿ,**
**ನಾನಯ್ಯ ನಾದೆನೆಂದು ಬೇಳುಗರಿಯಲೇತಕ್ಕೆ ?**
**ವೇಣು ಚಂದನದ ಯೋಗದಲ್ಲಿದ್ದಡೆ**
**ಗಂಧ ತಾನಾಗಬಲ್ಲುದೆ ? ಎಂದ ನಂಬಿಗ ಚೌಡಯ್ಯ .**

ಹೇಳುವ ಕೇಳುವ ಮಾತಿನಿಂದ ಅಯ್ಯನಾಗಲು ಸಾಧ್ಯವಿಲ್ಲ. ಅಯ್ಯನಾಗುವುದು ಎಂದರೆ ಕೇಳುಗ ಹೇಳುಗನು ಒಂದಾಗುವುದು. ಹೇಳುಗನೆಂಬ ಅಹಂಕಾರವಿಲ್ಲದೆ ಹೇಳುಗನೇ ಕೇಳುಗನಾಗಿ ಕೇಳುವುದು. ಹೇಳುವುದನ್ನು ತನಗೆ ತಾನೇ ಕೇಳಿಕೊಳ್ಳುವುದು.

ಚಂದನಕ್ಕೆ ಹೊಂದಿಕೊಂಡು ಬೊಂಬು ಬೆಳೆದರೇನು ? ಬೊಂಬು ಚಂದನ ತಾನಾಗಬಲ್ಲುದೆ ? ಶ್ರೀಗಂಧದಂತೆ ತೇದರೆ ಸುಗಂಧ ಬೀರಬಲ್ಲುದೆ ? ಸುಗಂಧ ಚಂದನದಲ್ಲಿ ಸಂಗಮವಾಗಿದೆ.ಹೇಳುವುದಕ್ಕಾಗಿ ಕೇಳುವುದು ವ್ಯವಹಾರ. ಆಗ ಹೇಳುವವನೇ ಬೇರೆ ; ಕೇಳುವವನೇ ಬೇರೆ. ಹೇಳುವವನು ಶಾಸ್ತ್ರಿ ; ಕೇಳುವವನು ಶ್ರೋತೃ . ಹಣಕೊಟ್ಟು ಕೇಳಿದ ; ಹಣ ಪಡೆದು ಹೇಳಿದ.

ಸಂಗ್ರಹವಾದ ಮಾತು ಕೇಳುಗನಲ್ಲಿ ಸಂಗ್ರಹವಾಗಬಹುದು ; ಸಂಗಮವಾಗಲಾರದು. ಸಂಗ್ರಹವಾದ ಮಾತಿಗೆ ನಿಘಂಟಿನ ಅರ್ಥವುಂಟು. ಅದರ ಆನಂದ ಕ್ಷಣಿಕ. ಹೇಳುಗನಲ್ಲಿಯೂ ಕ್ಷಣಿಕ ; ಕೇಳುಗನಲ್ಲಿಯೂ ಕ್ಷಣಿಕ. ಕೆಂಡದ ಮೇಲೆ ಲೋಬಾನ ಚೆಲ್ಲಿದಂತೆ, ಕೆಂಡ ಲೋಬಾನ ಇರುವವರೆಗೆ ವಾಸನೆ.

ಅನುಭವದ ಮಾತು ಹಾಗಲ್ಲ. ಚಂದನದಂತೆ ನಿರಂತರ ಪರಿಮಳ. ಹೇಳುಗ ಕೇಳುಗನೇ ಆಗುತ್ತಾನೆ. ಕೇಳುಗ ಹೇಳುಗನಾಗಿ ಕೇಳುತ್ತಾನೆ. ಇಬ್ಬರೂ ಒಬ್ಬರಲ್ಲಿ ಒಬ್ಬರು ಸಂಗಮವಾಗಿದ್ದಾರೆ. ಇಬ್ಬರೂ ತಮ್ಮನ್ನು ತಾವು ಮರೆತಿರುತ್ತಾರೆ. ಹೇಳುಗ ಗುರುವಾಗದೆ ಹೇಳುತ್ತಾನೆ. ಕೇಳುಗ ಶಿಷ್ಯನಾಗದೆ ಕೇಳುತ್ತಾನೆ. ಅಯ್ಯನಾಗಿ ಹೇಳುವುದಿಲ್ಲ ; ಶ್ರೋತೃವಾಗಿ ಕೇಳುವುದಿಲ್ಲ. ಚಂದನ ಒಳ ಹೊರಗೆನ್ನದೆ ಭರಿತವಾದಂತೆ.

**277**

**ಹೊಡವಂಟು ದೇವರ ತಲೆಯ ತಾಟಿಸಿಕೊಂಬರು.**
**ನೆಲಕೆಯೂ ತಲೆಗೆಯೂ ನಂಟೊಳವೆ ?**
**ಕೊಲಬೇಡ ಪ್ರಾಣಿಯ, ಗೆಲಬೇಡ ನಂಬಿದರ,**
**ಛಲವ ಸಾಧಿಸಬೇಡ ಗೋತ್ರದಲ್ಲಿ.**
**ಕೊಲುವವ ಗೆಲುವವ ಛಲವ ಸಾಧಿಸುವವ**
**ಹೊಲೆಯರು ಮಾದಿಗರೆಂದ ನಂಬಿಗ ಚೌಡಯ್ಯ.**

ಮನವೆಂಬುದೇ ಮಾದಿಗ. ಅದು ತನುವಿನಲ್ಲಿ ತಲೆಯನ್ನು ಪಾದವನ್ನು ಸೃಷ್ಟಿ ಮಾಡಿದೆ. ತಲೆ ಮತ್ತು ಪಾದ ತನುವಿನ ಹೊರತಾಗಿ ಇಲ್ಲ. ತಲೆಯಲ್ಲಿ ವಿಚಾರ ಅವಿಚಾರಗಳೆರಡೂ ಹುಟ್ಟುತ್ತವೆ. ಅವೆರಡೂ ಸೂತಕಗಳಾಗಿ ತನು ಇರುವವರೆಗೆ ತನುವನ್ನೇ ಕಾಡುತ್ತವೆ. ನೆತ್ತಿಯಲ್ಲಿ ಹುಟ್ಟಿದ ಅಹಂಕಾರ ಇಡೀ ತನುವನ್ನೇ ಕುಕ್ಕಿ ಕುಕ್ಕಿ ಕೊಲ್ಲುತ್ತದೆ.

ನೆತ್ತಿಗೂ ಪಾದಕ್ಕೂ ಭೇದವೇ ಇಲ್ಲ. ಹಾಗೆಂದು ಪದದಂತೆ ನೆತ್ತಿ ತಿಳಿದುಕೊಂಡಿಲ್ಲ. ಪಾದ ತುಳಿಯದ ನೆಲವೇ ಇಲ್ಲ. ಅದು ಓಡಾಡದ ಜಾಗವೇ ಇಲ್ಲ. ಅದಕ್ಕೆ ಅಸಹ್ಯವೆನ್ನು ವುದೇ ಇಲ್ಲ. ಮಲ ಮಣ್ಣು ಸೆಗಣಿ ಕೆಸರು ಕಲ್ಲು ಜಲವೆಲ್ಲ ಒಂದೇ ಪಾದಕ್ಕೆ. ಮಣ್ಣಾದರೇನು ಮಲವಾದರೇನು ? ಎರಡೂ ಒಂದೇ ಪಾದಕ್ಕೆ. ಕಲ್ಲಾದರೇನು, ದೇವರಾ ದರೇನು ಎರಡೂ ಒಂದೇ ಪಾದಕ್ಕೆ.

ನೆತ್ತಿಗೆ ಅಹಂಕಾರದ ಕಣ್ಣಿದೆ. ಅರಿವಿನ ಕಣ್ಣು ಅಹಂಕಾರದ ಕಣ್ಣಲ್ಲಿ ಮರೆಯಾಗಿದೆ. ಹೀಗಾಗಿ ಕೆತ್ತಲ್ಪಟ್ಟ ದೇವರು ಕಲ್ಲಾದರೂ ಕಲ್ಲನ್ನು ಕಲ್ಲೆಂದು ನೋಡಲು ಸಾಧ್ಯವಾಗುತ್ತಿಲ್ಲ. ಕಲ್ಲನ್ನೇ ದೇವರು ಎಂದು ನೋಡುವ ನೆತ್ತಿ ದೇವರಿಗೂ ಒಂದು ತಲೆಯನ್ನು ಸೃಷ್ಟಿ ಮಾಡಿದೆ. ಅದರ ಪಾದಕ್ಕೆ ನೆತ್ತಿ ತಾಗಿಸಿ ಧನ್ಯನಾದೆನೆಂದು ಮೆರೆಯುತ್ತದೆ.

ಪಾದಕ್ಕೆ ನೆತ್ತಿಯಾದರೇನು, ಪಾದವಾದರೇನು ? ಎರಡೂ ಒಂದೇ. ದೇವರ ಪಾದದಲ್ಲಿ ಶ್ರೀಪಾದವಿದೆ. ನೆತ್ತಿ ಮಾತ್ರ ಪಾದಕ್ಕೆ ಬಾಗಿದೆ.

ಅಹಂಕಾರದ ನೆತ್ತಿ ನಂಬಿದ ಅರಿವನ್ನೇ ಹಂತಹಂತವಾಗಿ ಕೊಂದು ತಿನ್ನುತ್ತದೆ. ಮನ ಅಹಂಕಾರಿಯಾಗಿ ನೆತ್ತಿಯಲ್ಲಿ ಬೆರೆತು ನೆತ್ತಿಯನ್ನು ಪಾದವನ್ನು ಬೇರೆ ಬೇರೆಯಾಗಿಸಿದೆ.

ಅರಿವಿಗೆ ನಷ್ಟವಿಲ್ಲ. ಅಹಂಕಾರಕ್ಕೆ ಅಜ್ಞಾನಕ್ಕೆ ಗೆಲುವೇ ಇಲ್ಲ. ಕಲ್ಲು ಕಲ್ಲೇ ಹೊರತು ಅದು ದೇವರಲ್ಲ. ಕಲ್ಲಿಗೆ ತಲೆಯಿಲ್ಲ. ಕಾಲೂ ಇಲ್ಲ. ತಲೆಯಿಲ್ಲದ ಕಾಲೂ ಇಲ್ಲದ ಕಲ್ಲಿಗೆ ಛಲದಿಂದ ಗೋತ್ರ ಹೇಳಿ ತಲೆಯ ತಾಗಿಸಿ ಗೆಲುವ ಸಾಧಿಸಿದೆನೆಂದು ಬೀಗುವ ಹೊಲೆಯ ನೀನು !

ತಲೆಯಿದ್ದೂ ಬಳಸುವ ಕಲೆಯನ್ನೇ ಅರಿಯದ ಅಹಂಕಾರಿ ಅಜ್ಞಾನಿ ಮನವನ್ನು ಅಂಬಿಗರ ಚೌಡಯ್ಯ ಹೊಲೆ ಮಾದಿಗನೆಂದು ಕರೆದಿದ್ದಾರೆ.

**278**

**ಹೊಡವಡಲೇಕೆ, ಹಿಡಿದು ಪೂಜಿಸಲೇಕೆ,**
**ಎಡೆಯಾಡಲೇಕೆ ದೇಗುಲಕ್ಕಯ್ಯಾ ?**
**ಬಡವರಂಧಕರಿಗೆ ಒಡಲಿಗನವನಿಕ್ಕಿದಡೆ,**
**ಹೊಡವಂಟನಾತ ಮೂರು ಲೋಕಕ್ಕೆಯಿದೆ,**
**ಬಡವರಂಧಕರಿಗೆ ಒಡಲಿಗನ್ನವನಿಕ್ಕದಿದ್ದರೆ**
**ಹೊಡೆವಡಲಿಕೆ ಹುರುಳಿಲ್ಲವೆಂದನಂಬಿಗ ಚೌಡಯ್ಯ .**

ದೇವಾಲಯಗಳಿಲ್ಲದ ದೇಶವೇ ಇಲ್ಲ. ಜನತೆಯಿಂದ ನಿರ್ಮಾಣವಾದ ದೇವಾಲಯ, ಪ್ರಾರ್ಥನಾ ಮಂದಿರಗಳು ಜನತೆಯನ್ನೇ ಮರಳು ಮಾಡಿವೆ. ಯಾಮಾರಿಸಿವೆ. ಜನತೆ ಅವುಗಳಿಗೆ ಮರುಳಾಗಿದ್ದಾರೆ. ಪ್ರಾರ್ಥಿಸುತ್ತಾರೆ ; ಕೈ ಮುಗಿಯುತ್ತಾರೆ. ದೂರದೂರಿಗೆ ಪ್ರಯಾಣಿಸಿ ಪುಣ್ಯಕ್ಷೇತ್ರದ ದರುಶನ ಭಾಗ್ಯ ತನಗೆ ಲಭಿಸಿತೆಂದು ಧನ್ಯತಾ ಭಾವ ಮೆರೆಯುತ್ತಾರೆ. ತಾನು

ನಿರ್ಮಾಣ ಮಾಡಿದ ಮಸೀದೆ ಮಂದಿರ ಚರ್ಚ್‌ಗಳು ತನ್ನನ್ನೇ ಬಾಗುವಂತೆ ಮಾಡಿವೆ.

ದಾನ ಧರ್ಮ ಪರೋಪಕಾರದ ಸೋಗು ಸೃಷ್ಟಿಯಾಗಿದೆ. ಯಾರು ಯಾರಿಗೆ ದಾನ ಮಾಡಬೇಕು ? ಬಡವನಾರು, ಶ್ರೀಮಂತನಾರು ? ಇವರಿಬ್ಬರೂ ಮನುಷ್ಯರಲ್ಲವೆ ? ಬಡವನಾಗಿ ದಾನ ಬೇಡುತ್ತಾನೆ, ಶ್ರೀಮಂತನಾಗಿ ದಾನ ಮಾಡುತ್ತಾನೆ. ಕೊಟ್ಟೆನೆಂಬುದು, ನೀಡಿದೆನೆಂಬುದು ಅಜ್ಞಾನ. ಈ ಅಜ್ಞಾನ ಅಂಗದಲ್ಲಿ ಸಂಗ್ರಹವಾಗಿ ಅಂಗವನ್ನೇ ಯಾಮಾರಿಸಿದೆ.

ಏನು ಕೊಟ್ಟು ದಾನಿಯಾದ, ಏನು ಪಡೆದು ಭಿಕ್ಷುಕನಾದ ? ಕೊಟ್ಟದ್ದು ತನ್ನ ವಸ್ತುವಲ್ಲ. ಅದು ತಾನು ತಯಾರಿಸಿದ್ದಲ್ಲ. ಪಡೆದದ್ದೂ ಆತನದಲ್ಲ. ಆತ ತಯಾರಿಸಿದ್ದೂ ಅಲ್ಲ. ಭೂಮಿ ಬೆಳೆಯುತ್ತದೆ, ಜಲ ಹರಿಯುತ್ತದೆ. ಆಕಳು ತನ್ನ ಕರುವಿಗಾಗಿ ಹಾಲು ಕರೆಯುತ್ತದೆ. ಭೂಮಿ ತನ್ನದೊ ಭೂಮಿ ಬೆಳೆದ ಬೆಳೆ ತನ್ನದೊ? ಆಕಳು ಕರೆದ ಹಾಲು ತನ್ನದೊ? ಆಕಳಿನಂತೆ, ಭೂಮಿಯಂತೆ, ಗಿಡ ಮರ ಸಸ್ಯಗಳಂತೆ ಜಲದಂತೆ ವಾಯುವಿನಂತೆ ಅಗ್ನಿಯಂತೆ ಆಕಾಶದಂತೆ ತನ್ನದೇ ಆದ ಯಾವುದಾದರೂ ವಸ್ತುಗಳಿವೆಯೆ? ಕೊಡುವುದಕ್ಕೆ ತನ್ನದು ಎನ್ನುವ ಯಾವ ವಸ್ತುವಿದೆ ?

ತನ್ನಂತೆಯೇ ಇರುವ ಅರಿವಿನ ತನುವಿಗೆ ತಾನು ಏನು ಕೊಡಬಲ್ಲ ? ಅರಿವು ಮರೆಯಾದುದಕ್ಕಾಗಿ ಆ ಮರೆವೇ ಶ್ರೀಮಂತ ಬಡವನ ಪಾತ್ರ ಧರಿಸಿದೆ.

'' ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ.ಇವು ಜಗಕ್ಕೆ ಇಕ್ಕಿದ ವಿಧಿ . ನಿನ್ನದೆಂಬುದು ಜ್ಞಾನರತ್ನ ಕಾಣಾ.ಎಲೆ ಮನವೇ ಅದನ್ನು ಅಲಂಕರಿಸಿದೆಯಾದಡೆ ನಿನ್ನಂತಹ ಸಿರಿವಂತರು ಯಾರೂ ಇಲ್ಲ '' ಎನ್ನುವ ಶ್ರೀಮಂತಿಕೆಯ ಸೂತ್ರವನ್ನು ಅಲ್ಲಮಪ್ರಭುಗಳು ದಯಪಾಲಿಸಿದ್ದಾರೆ.

ತಾನು ಮಾಡಿದ ದೇವರನ್ನು ತಾನು ಪೂಜಿಸಬಹುದೆ ? ತಾನು ಮಾಡಿದ ದೇವರನ್ನು ತಾನೇ ಹಿಡಿಯಬಹುದೆ ? ತಾನೇ ಹೊಡೆ ಹೊಡೆಯಲೇಕೆ ? ಬಡವರಿಗೆ ಅಂಧಕರಿಗೆ ಅನ್ನವನು ಇಕ್ಕಿದರೆ ಸಾಕು ಹೊಡವಂಟನಾತ. ಮೂರು ಲೋಕಕ್ಕೆ ಅಧಿಕನೆನ್ನಿಸಿಕೊಂಡನಾತ. ಬಡವರಿಗೆ ಅಂಧಕರಿಗೆ ಅನ್ನವನ್ನು ಇಕ್ಕದಿದ್ದರೆ ಹೊಡೆವಡಲಿಕ್ಕೆ ಹುರುಳಿಲ್ಲ. ಆತನನ್ನು ಮೂರು ಲೋಕ ಕೊಂಡಾಡುವುದಿಲ್ಲ. ಬಯ್ಯೂವುದೂ ಇಲ್ಲ.

ಸಾತ್ವಿಕ,ರಾಜಸ,ತಾಮಸ ಗುಣಗಳು ತನುವನ್ನು ಆವರಿಸಿಕೊಂಡಿವೆ. ಇವು ಮೂರೂ ಪಾತ್ರಗಳು. ಇವು ಮೂರೂ ದುರ್ಗುಣಗಳು. ಸಾತ್ವಿಕನಾಗಿ ದೇವಸ್ಥಾನವನ್ನು ಕಟ್ಟಿ ಬಡವರಿಗೆ ಅಂಧಕರಿಗೆ ಅನ್ನ ಹಾಕುತ್ತಾನೆ. ರಾಜಸಿಗನಾಗಿ ಅಧಿಕೃತವಾಗಿ ಅಧಿಕಾರ ಮೆರೆದು ಬಡ ಬಗ್ಗರನ್ನೇ ಕದಿಯುತ್ತಾನೆ. ತಾಮಸಿಗನಾಗಿ ಕುಡಿದು ಅನಾಗರಿಕನಾಗಿ ಸುಖಿಸುತ್ತಾನೆ.

ಮನ, ತನುವಿಗೆ ಹಾಕಿದ ಈ ಮೂರೂ ಪಾತ್ರಗಳು ಕಳಚಿದಾಗಲೇ ನಿರ್ಗುಣಿಯಾಗುತ್ತದೆ. ಹುರುಳಿಲ್ಲದ ಆಡಂಬರ ತಂತಾನೆ ನಿಲ್ಲುತ್ತದೆ.

**279**

**ಹೊಲೆಯ ಹೊಲೆಯ ಎಂದಡೆ ಹೊಲೆಯರೆಂತಪ್ಪರಯ್ಯಾ ?**
**ಹೊಲೆಯ ಹೊರಕೇರಿಯಲ್ಲಿರುವನು ,**
**ಊರೊಳಗಿಲ್ಲವೆ ಅಯ್ಯಾ , ಹೊಲೆಯರು ?**
**ತಾಯಿಗೆ ಬೈದವನೇ ಹೊಲೆಯ,**

ತಂದೆಗೆ ಉತ್ತರ ಕೊಟ್ಟವನೇ ಹೊಲೆಯ,
ತಂದೆಗೆ ಬೈದವನೇ ಹೊಲೆಯ,
ಕೊಡುವ ದಾನಕ್ಕೆ ಅಡ್ಡ ಬಂದವನೇ ಹೊಲೆಯ,
ನಡೆವ ದಾರಿಗೆ ಮುಳ್ಳ ಹಚ್ಚಿದವನೇ ಹೊಲೆಯ,
ಬ್ರಾಹ್ಮಣನ ಕುತ್ತಿಗೆಯ ಕೊಯ್ದವನೇ ಹೊಲೆಯ,
ಹತ್ತು ಆಡಿದರೆ ಒಂದು ನಿಜವಿಲ್ಲದವನೇ ಹೊಲೆಯ,
ಚಿತ್ತದಲ್ಲಿ ಪರಸತಿಯ ಬಯಸಿದವನೇ ಹೊಲೆಯ,
ಲಿಂಗಮುದ್ರೆಯ ಕಿತ್ತಿದವನೇ ಹೊಲೆಯ,
ಲಿಂಗವ ಬಿಟ್ಟು ತಿರುಗುವವನೇ ಹೊಲೆಯ,
ಧರ್ಮವ ಮಾಡದವನೇ ಹೊಲೆಯ,
ಬಸವನ ಕೊಂದವನೇ ಹೊಲೆಯ,
ಬಸವನ ಇರಿದವನೇ ಹೊಲೆಯ,
ಲಿಂಗಪೂಜೆಯ ಮಾಡದವನೇ ಹೊಲೆಯ,
ಇಂತಪ್ಪ ಹೊಲೆಯರು ಊರ ತುಂಬಾ ಇರಲಾಗಿ
ಹೊರಕೇರಿಯವರಿಗೆ ಹೊಲೆಯರೆನಬಹುದೆ ?
ಹೊಲೆ ಹುಟ್ಟಿದ ಮೂರುದಿನಕ್ಕೆ ಪಿಂಡಕ್ಕೆ ನೆಲೆಯಾಯಿತ್ತು ,
ಹಿಪ್ಪೆಯ ನುಂಡ ತೊಗಲು ಹರಿಗೋಲಾಯಿತು.
ಗುರುಗಳಿಗೆ ಚಮ್ಮಾವುಗೆಯಾಯಿತ್ತು , ಹೂಡಲಿಕ್ಕೆ ಮಿಣಿಯಾಯಿತ್ತು .
ಹೊಡೆಯಲಿಕ್ಕೆ ಬಾರುಕೋಲಾಯಿತ್ತು , ಬಂಡಿಗೆ ಮಿಣಿಯಾಯಿತ್ತು .
ಅರಸರಿಗೆ ಮೃದಂಗವಾಯಿತ್ತು . ತೊಲು ನಗಾರಿಯಾಯಿತ್ತು .
ತುಪ್ಪ ತುಂಬಲಿಕ್ಕೆ ಸಿದ್ದಲಿಕೆ,ಎಣ್ಣೆ ತುಂಬಲಿಕ್ಕೆ ಬುದ್ದಲಿಕೆಯಾಯಿತ್ತು .
ಸಿದ್ದಲಿಕೇನ ತುಪ್ಪ , ಬುದ್ದಲಿಕೇನ ಎಣ್ಣೆ ಕಲ್ಲಿಶೆಟ್ಟ ಮಲ್ಲಿಶೆಟ್ಟಿಗಳು ಕೂಡಿ
ನಾ ಶೀಲವಂತ ತಾ ಶೀಲವಂತ ಎಂದು ಶುದ್ದೈಸಿಕೊಂಡು ತಿಂದು ಬಂದು ;
ಜಗಳ ಬಂದಾಗ ನನ್ನ ಕುಲ ಹೆಚ್ಚು , ನಿನ್ನ ಕುಲ ಹೆಚ್ಚು ಕಡಿಮೆ
ಎಂದು ಬಡಿದಾಡುವ ಕುನ್ನಿ ನಾಯಿಗಳ ಮೋರೆ ಮೋರೆಯ ಮೇಲೆ
ನಮ್ಮ ಪಡಿಹಾರಿ ಉತ್ತಣ್ಣಗಳ ವಾಮ ಪಾದುಕೆಯ ಕೊಂಡು
ಅವರ ಅಂಗುಳ ಮೆಟ್ಟಿ ಘಡಘಡನೆ ಹೊಡಿ ಎಂದಾತ
ನಮ್ಮ ದಿಟ್ಟ ಅಂಬಿಗರ ಚೌಡಯ್ಯ ನಿಜ ಶರಣನು.

ಜ್ಞಾನಿ ನುಡಿದರೆ ಅಲೌಕಿಕ. ಕೇಳಿದರೂ ಅಲೌಕಿಕ. ನೋಡಿದರೂ ಅಲೌಕಿಕ. ಮುಟ್ಟಿ ರುಚಿಸಿದರೂ ಅಲೌಕಿಕ. ಮೂಸಿಸಿದರೂ ಅಲೌಕಿಕ. ಏಕೆಂದರೆ ಆತ ಸಹಜ. ಲೋಕ ಅಸಹಜ.

ಲೋಕದ ಮಾತನ್ನು ಜ್ಞಾನಿ ಅಲೌಕಿಕವಾಗಿ ಕೇಳುತ್ತಾನೆ. ಲೋಕದ ಮಾತನ್ನೇ ಜ್ಞಾನಿ ಅಲೌಕಿಕವಾಗಿ ನುಡಿಯುತ್ತಾನೆ. 'ಹೊಲೆಯ ' ಎನ್ನುವ ಶಬ್ದವನ್ನು ಜ್ಞಾನಿ ಜ್ಞಾನದಿಂದ ಕೇಳುತ್ತಾನೆ. ಅರಿವಿನಿಂದ ಕೇಳುತ್ತಾನೆ. ಅನುಭವಕ್ಕೆ ತಂದುಕೊಂಡು ಆಚಾರದಲ್ಲಿ ತೊಡಗುತ್ತಾನೆ.

ಲೋಕ 'ಹೊಲೆಯ ' ಎನ್ನುವ ಶಬ್ದವನ್ನು ಹೊರಕೇರಿಯಲ್ಲಿ ವಾಸ ಮಾಡುವವರಿಗೆ ಇಟ್ಟಿದೆ. ಅವರನ್ನು ಹಾಗೆಂದು ಕರೆಯುತ್ತದೆ. ಲೋಕದ ಆಚಾರ ಗೋಚರದ ಆಚಾರ. ಜ್ಞಾನಿಯ

ಆಚಾರ ಅಗೋಚರದ ಆಚಾರ. ಜ್ಞಾನಿಯ ಸಹಜ ನೋಟಕ್ಕೆ ಊರೊಳಗಿನ ಅಜ್ಞಾನಿಗಳೆಲ್ಲ ಹೊಲೆಯರಾಗಿ ಕಾಣುತ್ತಾರೆ. ಊರ ಹೊರಗಿದ್ದವರೆಲ್ಲ ಸಹಜ ಮಾನವರಾಗಿ ಕಾಣುತ್ತಾರೆ. ಹೀಗಾಗಿ ಅಂಬಿಗರ ಚೌಡಯ್ಯ ಊರೊಳಗಿದ್ದವರನ್ನೇ ಹೊಲೆಯರೆಂದು ಕರೆದಿದ್ದಾರೆ.

ಹೊಲೆಯ ಅಂದರೆ ವ್ಯಕ್ತಿಯಲ್ಲ ; ವ್ಯಕ್ತಿಯನ್ನು ಆವರಿಸಿದ ಅಜ್ಞಾನ. ಈ ಅಜ್ಞಾನ ವ್ಯಕ್ತಿಯಲ್ಲಿ ಸಂಗಮವಾದ ಅವ್ಯಕ್ತ ಜ್ಞಾನವನ್ನು ಬಳಕೆ ಮಾಡದಂತೆ ಮಾಡುತ್ತದೆ.

ತಂದೆ ತಾಯಿಗೆ ಬೈದವನೇ ಹೊಲೆಯ. ಕೊಡುವ ದಾನಕ್ಕೆ ಅಡ್ಡ ಬಂದವನು, ನಡೆವ ದಾರಿಗೆ ಮುಳ್ಳು ಹಚ್ಚಿದವನು, ಬ್ರಾಹ್ಮಣನ ಕುತ್ತಿಗೆ ಕೊಯ್ದವನು, ಹತ್ತು ಆಡಿದರೆ ಒಂದು ನಿಜವಿಲ್ಲದವನು, ಪರಸತಿಯ ಬಯಸಿದವನು, ಅರಿವು ಎಂಬ ಲಿಂಗ ಮುದ್ರೆಯನ್ನು ಕಿತ್ತಿದವನು, ಲಿಂಗವ ಬಿಟ್ಟು ತಿರುಗುವವನು ಮಾತ್ರ ಹೊಲೆಯನು.

'ಹೊಲೆಯ' ಎನ್ನುವ ಶಬ್ದ ಜ್ಞಾನಿಯ ದೃಷ್ಟಿಯಲ್ಲಿ ವ್ಯಕ್ತಿಯಲ್ಲ. ವ್ಯಕ್ತಿಯನ್ನು ಆವರಿಸಿದ ಮನವೆಂಬ ಅಜ್ಞಾನ. ವ್ಯಕ್ತಿಯಲ್ಲಿ ಜ್ಞಾನ ಸಂಗಮವಾಗಿದೆ ; ಅಜ್ಞಾನ ಆವರಿಸಿಕೊಂಡಿದೆ. ವ್ಯಕ್ತಿ ಮತ್ತೊಬ್ಬ ವ್ಯಕ್ತಿಗೆ 'ಹೊಲೆಯ' ಎಂದು ಹೇಳುವುದೇ ಅಜ್ಞಾನ. ಹಾಗೆ ಕೇಳುವುದೂ ಅಜ್ಞಾನ ! ನುಡಿಯುವವನೂ ಹೊಲೆಯನಲ್ಲ; ಕೇಳುವವನೂ ಹೊಲೆಯನಲ್ಲ. 'ಹೊಲೆಯ' ಎನ್ನುವ ಶಬ್ದ ಇಬ್ಬರಲ್ಲಿಯೂ ಸೂತಕವಾಗಿ ಕಾಡುತ್ತದೆ.

ಶಬ್ದ ಸೃಷ್ಟಿ ಮಾಡಿದ ತಾಯಿಯನ್ನು ತಂದೆಯನ್ನು ಕೊಲ್ಲುತ್ತದೆ. ಶಬ್ದ ದಾನ ಮಾಡಿದವನ ದಾರಿಗೆ ಮುಳ್ಳು ಬೇಲಿಯನ್ನು ಹಾಕುತ್ತದೆ. ಶಬ್ದ ಟಂಕಿಸಿದ ಬ್ರಹ್ಮನ ಕುತ್ತಿಗೆಯನ್ನು ಕೊಯ್ಯುತ್ತದೆ. ಸತಿ ಪರಸತಿಯನ್ನು ಬಯಸುತ್ತದೆ. ಅರಿವಿನ ಮುದ್ರೆಯನ್ನು ಕಿತ್ತಿ ಹಾಕಿ ಅಜ್ಞಾನದ ಮುದ್ರೆಯಂತೆ ಜಗಳ ಕಾಯುತ್ತದೆ. ಅರಿವು ಅರಿವಿನ ಆಚಾರ ಬಿಟ್ಟು ಅಲೆದಾಡುತ್ತದೆ. ಅರಿವಿನ ಧರ್ಮವನ್ನು ಪಾಲಿಸದೇ ಅರಿವನ್ನೇ ಕೊಲ್ಲುತ್ತದೆ. ಅರಿವು ಅರಿಯಲು ಹೇಳಿದ ಬಸವನನ್ನು ಕೊಲ್ಲುತ್ತದೆ ; ಅಜ್ಞಾನದಿಂದ ಹಿರಿಯುತ್ತದೆ. ಅರಿವಿದ್ದೂ ಅದನ್ನು ಪೂಜಿಸದೆ ಅದನ್ನು ಬಳಸದೆ ಅರಿವೆಂದರೇನೆಂದು ತಿಳಿಯದೇ ತನುವಿನೊಂದಿಗೆ ಅಲೆಯುವ ಮನವೇ ಹೊಲೆಯ. ಈ ಹೊಲೆಯ ಎಲ್ಲಿಲ್ಲ ? ಎಲ್ಲೆಲ್ಲೂ ಇದ್ದಾನೆ. ದೇಶದಲ್ಲಿದ್ದಾನೆ ; ವಿದೇಶದಲ್ಲಿಯೂ ಇದ್ದಾನೆ. ಇವನಿಲ್ಲದ ದೇಹವೇ ಇಲ್ಲ. ಇವನಿಲ್ಲದ ದೇಶವೇ ಇಲ್ಲ. ಹಾಗೆಯೇ ಜ್ಞಾನಿ ಕೂಡಾ ಸಂಗಮವಾಗಿದ್ದಾನೆ. ಇದನ್ನು ಅರಿಯದೇ ಹೊರಕೇರಿಯಲ್ಲಿದ್ದವರನ್ನು ಮಾತ್ರ ಹೊಲೆಯರೆನ್ನಬಹುದೆ ?

ಅರಿವಿನ ಬಿಂದು ಗರ್ಭಕ್ಕೆ ಹರಿದ ಮೂರು ದಿನಕ್ಕೆ ಪಿಂಡಕ್ಕೆ ನೆಲೆಯಾಯಿತು. ಹಿಪ್ಪೆಯನು ಉಂಡ ತೊಗಲು ಹರಿಗೋಲಾಯಿತು, ಚಮ್ಮಾವುಗೆಯಾಯಿತು. ಮಿಣಿಯಾಯಿತು, ಬಾರು ಕೋಲಾಯಿತು. ಮೃದಂಗ ನಗಾರಿಯಾಯಿತು. ತುಪ್ಪ ಎಣ್ಣೆ ತುಂಬಲಿಕೆ ಸಿದ್ದಲಿಕೆಯಾಯಿತು, ಬುದ್ದಲಿಕೆಯಾಯಿತು. ಕಲ್ಲಿಶೆಟ್ಟಿ ಮಲ್ಲಿಶೆಟ್ಟಿ ಕೂಡಿ ತುಪ್ಪ-ಎಣ್ಣೆ ತಿಂದು ಶೀಲವಂತರೆಂದು ತಿಳಿದು, ಜಗಳ ಬಂದಾಗ ಕುಲಹೆಚ್ಚು ಕಡಿಮೆ ಎಂದರೆ ನಾಯಿಕುನ್ನಿಗಳಂತಾಗಲಿಲ್ಲವೆ ? ಅದಕ್ಕೆ ಕಾರಣ ವ್ಯಕ್ತಿಯನ್ನು ಆವರಿಸಿದ ಮನ. ಆ ಮನಕ್ಕೆ ಅರಿವಿನ ಪಾದುಕೆಯಿಂದ ಹೊಡೆದು ಎಚ್ಚರಿಸಲು ಹೇಳಿದ್ದಾರೆ ಅಂಬಿಗರ ಚೌಡಯ್ಯ ಶರಣರು.

**ಮಂಗಳಂ.**

## ವಿಷಯಾನುಕ್ರಮಣಿಕೆ

## ಲೇಖಕರ ಕೃತಿಗಳು

| | | |
|---|---|---|
| ಬೆಳಕಿನ ಬಳ್ಳಿ | - | 2011 |
| ಬಯಲ ಬೀಜಗಳು | - | 2012 |
| ರೂಹಿಲ್ಲದ ಚೆಲುವೆ | - | 2012 |
| ಜ್ಞಾನಭಂಡಾರಿ ಬಸವಣ್ಣ ಸಮಗ್ರ | - | 2018 |
| ಅಂಬಿಗರ ಚೌಡಯ್ಯಗಳ ವಚನಾನುಭಾವ | - | 2019 |
| ಹಡಪದ ಅಪ್ಪಣ್ಣಗಳ ವಚನಾನುಭಾವ | - | 2019 |

**ಸಂಪಾದಿಕ ಕೃತಿಗಳು**

ಗಗನ ಸಿದ್ಧಾಂತ - 2006 ಶ್ರೀ ವಿದ್ಯಾನಂದ ಶರಣರು ಡಬ್ಬೇರುಮಡುವು

ತೆರೆಹಿಲ್ಲದಭವ ನುಡಿಗೆಡೆಗೊಡನು - 2011

ಗುರುಕನ್ಯೆ - 2017

**ಇ-ಕೃತಿಗಳು**

ಮಾದಾರ ಚೆನ್ನಯ್ಯಗಳ ವಚನಾನುಭಾವ

**ಸಂಪಾದಿತ ಇ-ಕೃತಿಗಳು**

| | | |
|---|---|---|
| ಅಕಾಯ ಭಕ್ತ | - | ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು |
| ಅಂತರಾತ್ಮ ಬೋಧೆ | - | ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು |
| ಗುರು ಕಾರುಣ್ಯ | - | ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು |
| ಉಪದೇಶಾಮೃತ | - | ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು |
| ನಿಶ್ಯಬ್ದ ವೇದಿ | - | ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು |

**ಸಂಪಾದಿತ ಇ-ಕೃತಿ ಹಾಗೂ ಲೇಖಕರ ಇತರೆ ಪುಸ್ತಕಗಳನ್ನು ಓದಲು**
**www.suddimoola.com ಗೆ ಭೇಟಿ ನೀಡಿ**
**Book Store ನಲ್ಲಿ ಲಾಗ್ ಆನ್ ಮಾಡಿ**

ಬೆಳಿಗ್ಗೆ ಗುರು ಲಿಂಗ ಜಂಗಮವನ್ನು ಪೂಜಿಸಿ ಪಾದೋದಕ ಸ್ವೀಕರಿಸಿದ ಅಂಗ ಗೋಚರದ ಆಚಾರ ಮಾಡಿ, ಭಕ್ತ ಎಂದು ಕರೆಯಿಸಿಕೊಳ್ಳಲು ಮಾತ್ರ ಸಾಧ್ಯವಾಯಿತು. ತನಗೆ ತಾನೇ ನಿಜ ಭಕ್ತನಾಗಲು ಸಾಧ್ಯವಾಗಲಿಲ್ಲ. ನೋಡುವ ಕಣ್ಣು, ಕೇಳುವ ಕಿವಿ, ಸ್ಪರ್ಶಿಸುವ ಚರ್ಮ, ಮೂಸಿಸುವ ಮೂಗು, ರುಚಿಸುವ ನಾಲಿಗೆ ಭೋಗದ ಹಾದರಕ್ಕೆ ಜಾರಿದವು. ಬೆಳಗಿನ ಪೂಜೆಯ'ಲ ಅಂಗಕ್ಕೆ ಸಿಕ್ಕಲಿಲ್ಲ. ಅದು ಶೈವದೈವದಾರ್ಚನೆ ಮಾಡಿತೇ ಹೊರತು ಸ್ವತಹ ವೀರನಾಗಲಿಲ್ಲ ; ವೀರ ಶೈವನಾಗಲಿಲ್ಲ. ಹೊರಗೆ ಗುರುವೆಂದು ಪೂಜಿಸಿದರೆ ಆತ ಗುರುವಲ್ಲ. ಹೊರಗಿನ ಲಿಂಗ ಲಿಂಗವಲ್ಲ. ಹೊರಗಿನ ಜಂಗಮವೂ ಜಂಗಮವಲ್ಲ. ಇವೆಲ್ಲ ಗೋಚರಕ್ಕೆ ಬರುವ ಪೂಜೆಗಳು. ನೋಡಿ ಮುಟ್ಟಿ ಮೂಸಿಸಿ ರುಚಿಸಿ ಕೇಳಿಯೂ ಹಾದರಕ್ಕೊಳಗಾಗದೆ ಪೂಜಿಸುವ ಪೂಜೆಯೇ ಅಗೋಚರದ ಪೂಜೆ. ಇದು ನಿಜ ಪೂಜೆ ; ಲಿಂಗಾಚಾರದ ಪೂಜೆ ; ಪಂಚಾಚಾರದ ಪೂಜೆ. ಇಂತಹ ಪೂಜೆ ಮಾಡುವಾತನೇ ಶಿವಶಕ್ತಿ, ಶಿವಭಕ್ತ, ಶಿವ ಜಂಗಮ ! ಅಗೋಚರದ ಆಚಾರದ ಭಕ್ತ ಸದ್ಗುರು ಮುಖದಿಂದ ತಿಳಿದು ಪಂಚಾಚಾರವನ್ನು ಆಚರಣೆಗೆ ತರುತ್ತಾನೆ. ಸಪ್ತವ್ಯಸನಗಳನ್ನು ಅಷ್ಟಮದಗಳನ್ನು, ಅರಿಷಡ್ವರ್ಗಗಳನ್ನು ದೂರೀಕರಿಸಿಕೊಳ್ಳುತ್ತಾನೆ. ಈತನ ಪೂಜೆಯೇ ಬೇರೆ. ಅನಾದಿ ಗುರು ಲಿಂಗ ಜಂಗಮರನ್ನು ಪೂಜಿಸುತ್ತಾನೆ. ಪಂಚೇಂದ್ರಿಯಗಳಲ್ಲಿ ಸಂಗಮವಾದ ಜ್ಞಾನಿಯೇ ಗುರು. ಅಲ್ಲಿಯೇ ಲಿಂಗವಿದೆ ; ಜಂಗಮನೂ ಇದ್ದಾನೆ. ಈ ಗುರು ಲಿಂಗ ಜಂಗಮರು ತೋರುವವರಲ್ಲ ; ನಿಜಕಣ್ಣಿನಿಂದ ನೋಡುವ ಭಕ್ತನಿಗೆ ತೋರದೆ ಇರುವವರೂ ಅಲ್ಲ. ನೋಡುವ ಕಣ್ಣಿನಲ್ಲಿ ಇರುವ ಗುರು ಲಿಂಗ ಜಂಗಮರನ್ನು ಅರ್ಚಿಸಿ ಪೂಜಿಸುವ ಬಗೆಯನ್ನು ಸದ್ಗುರು ಮುಖದಿಂದಲೇ ತಿಳಿಯಬೇಕು. ನೋಡುವ ಕಣ್ಣಿನಲ್ಲಿ ಅರಿವಿನ ಜ್ಞಾನದ ಬೆಳಕಿದೆ. ಅಜ್ಞಾನದ ಕಷ್ಮಲ ಕತ್ತಲೂ ಇದೆ. ಇವೆರಡನ್ನೂ ಸಾಕ್ಷಿಯಾಗಿ ಬಳಕೆ ಮಾಡುವ ಕಣ್ಣು ಕೂಡಾ ಕಣ್ಣಿನಲ್ಲಿಯೇ ಇದೆ. ಈ ಕಣ್ಣೇ ಭಕ್ತ. ಭಕ್ತ ಯಾವ ಕಣ್ಣನ್ನು ಬಳಕೆ ಮಾಡುತ್ತಾನೋ ಅವನು ಹಾಗೆ ಇರುತ್ತಾನೆ. ಗೋಚರದ ಭಕ್ತನಾಗಬೇಕೋ ಅಗೋಚರದ ಭಕ್ತನಾಗಬೇಕೋ ? ಆಯ್ಕೆ ಮಾತ್ರ ಭಕ್ತನದ್ದೇ ಆಗಿದೆ. ಏಕೆಂದರೆ ಕಣ್ಣೂ ತನ್ನದೇ ನೋಡುವವನೂ ತಾನೇ ಆಗಿದ್ದಾನೆ.

